# ಪ್ರಭುಲಿಂಗ ಲೀಲಾ ಪ್ರವಚನ





ಲೇಖಕರು
ಷ.ಬ್ರ.ಶ್ರೀ ಬಸವಲಿಂಗ ಪಟ್ಟಾಧ್ಯಕ್ಷರು, ಹಿರೇಮಠ ತೆಲಸಂಗ
(ಜಿಲ್ಲಾ-ಬೆಳಗಾವಿ)

ಭುವನೇಶ್ವರಿ ಪ್ರಕಾಶನ, ವಿಜಾಪೂರ-3

ಓಂ

# ಪ್ರಭುಲಿಂಗಲೀಲಾ ಪ್ರವಚನ

ಲೇಖಕರು :

**ಷ. ಬ್ರ. ಶ್ರೀ ಬಸವಲಿಂಗ ಪಟ್ಟಾಧ್ಯಕ್ಷರು**

ಹಿರೇಮಠ ತೆಲಸಂಗ. ಜಿ-ಬೆಳಗಾವಿ

ಪ್ರಕಾಶಕರು :

**ಭುವನೇಶ್ವರಿ ಪ್ರಕಾಶನ. ವಿಜಾಪುರ - ೩**

**PRABHULINGALEELA PRAVACHANA.**

**Written by-** **H H. Basavaling Pattadyaksharu**
**Hiremath Telsang. Dist. Belgaum.**

**Published by- Bhuvaneshwari Prkashan, BIJAPUR–586 103**



ಮೊದಲ ಮುದ್ರಣ : ೧೯೯೬

ಪುಟಗಳು ; XIV + ೪೧೬

ಹಕ್ಕುಗಳು ; ಹಕ್ಕುಗಳು ಲೇಖಕರ ಸ್ವಾಧೀನ

ಬೆಲೆ : 150 ೧೫೦/- ರೂ. ಗಳು ( ಒಂದುನೂರಾ ಐವತ್ತು ರೂ. ಗಳು )



ಪುಸ್ತಕ ದೊರೆಯುವ ಸ್ಥಳ :

ಷ. ಬ್ರ. ಶ್ರೀ ಬಸವಲಿಂಗ ಪಟ್ಟಾಧ್ಯಕ್ಷರು ಹಿರೇಮಠ ತೆಲಸಂಗ [ ಜಿ-ಬೆಳಗಾವಿ ]

ಜಗದ್ಗುರು ಶ್ರೀ ಫಕೀರ ಸಿದ್ಧರಾಮಶಿವಯೋಗಿಗಳು, ಜಗದ್ಗುರು ಫಕೀರೇಶ್ವರ ಸಂಸ್ಥಾನಮಠ ಶಿರಹಟ್ಟಿ [ ಜಿ - ಧಾರವಾಡ]

ಡಾ ।। ಎಂ. ಎನ್. ವಾಲಿ. M A. Ph.D. ಭುವನೇಶ್ವರಿ ಪ್ರಕಾಶನ, ವಿದ್ಯಾನಗರ ಬಿ.ಎಲ್.ಡಿ.ಇ. ಆಸ್ಪತ್ರೆ ಎದುರು ರಸ್ತೆ, ವಿಜಾಪುರ-೫೮೬ ೧೦೩

ಮುದ್ರಕರು ; ಶ್ರೀ ವಾಯ್. ಎಲ್. ಭಂಟನೂರ
ನಂದನ ಪ್ರಿಂಟಿಂಗ್ ಪ್ರೆಸ್
ಆಜಾದ ರೋಡ, ವಿಜಾಪುರ

## ಶ್ರೀ ಮನ್ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳವರು ಸಂಸ್ಥಾನಮಠ, ಡಂಬಳ-ಗದಗ ಅವರ ಮುನ್ನುಡಿ

ಪೂಜ್ಯ ಶ್ರೀ ಷ. ಬ್ರ. ಬಸವಲಿಂಗ ಪಟ್ಟಾಧ್ಯಕ್ಷರು, ಹಿರೇಮಠ-ತೆಲಸಂಗ ಇವರು ರಚಿಸಿದ ''ಪ್ರಭುಲಿಂಗಲೀಲಾಪ್ರವಚನ'' ಎಂಬೀ ಪ್ರವಚನಗ್ರಂಥವು ಸಾಹಿತ್ಯದಲ್ಲೊಂದು ಮೈಲಿಗಲ್ಲು.ಬಹುಶ್ರುತರಾದವರು ಸಾಹಿತ್ಯ ಕೃತಿಯೊಂದನ್ನು ಪ್ರವಚಿಸಿದಾಗ ಮೂಲ ಕೃತಿಯೂ ಹೇಗೆ ಉಜ್ವಲಗೊಳ್ಳುತ್ತದೆ ಎನ್ನುವದಕ್ಕೆ "ಪ್ರಭುಲಿಂಗಲೀಲಾ ಪ್ರವಚನ'' ಸಾಕ್ಷಿ.

ಪದ್ಯಗಂಧಿ ವಚನಗಳನ್ನಾಧರಿಸಿ ಗದ್ಯದ ಕೊಂಡಿಯನ್ನು ಜೋಡಿಸಿಕೊಂಡು ಸಂವಾದ ರೂಪದಲ್ಲಿ ರಚಿತವಾದದ್ದು ಶೂನ್ಯಸಂಪಾದನೆ. ಶೂನ್ಯ ಸಂಪಾದನೆಯನ್ನು ಆಕರವನ್ನಾಗಿಟ್ಟುಕೊಂಡು ಮಹಾಕಾವ್ಯವಾಗಿ ರೂಪುಗೊಂಡಿದ್ದು ಚಾಮರಸಕವಿಯ ಪ್ರಭುಲಿಂಗ ಲೀಲೆ. ಪ್ರಭುಲಿಂಗಲೀಲೆಯನ್ನು ಗದ್ಯಾತ್ಮಕವಾಗಿ ಪ್ರವಚಿಸಿರುವುದೇ ಪ್ರಭುಲಿಂಗಲೀಲಾ ಪ್ರವಚನ. ವಚನಗಳು ಬೇರೆ ಬೇರೆ ಕಾಲ-ಘಟ್ಟಗಳಲ್ಲಿ ಗದ್ಯ-ಪದ್ಯಗಳ ನಡುವೆ ತೂಗುಯ್ಯಾಲೆಯಾಡುವ ಈ ಪರಿ ಅಧ್ಯಯನ ಯೋಗ್ಯ.

ಕನ್ನಡ ಸಾಹಿತ್ಯದಲ್ಲಿ ''ಚಾಮರಸನ ಪ್ರಭುಲಿಂಗಲೀಲೆ'' ಒಂದು ವಿಶಿಷ್ಟ ಕೃತಿ. ಕಾವ್ಯದ ಪ್ರಾರಂಭದಲ್ಲಿ ಪ್ರಭು, ಮಾಯಾಕೋಲಾಹಲನಾಗಿ, ಇಂದ್ರಿಯಗಳನ್ನು ಗೆದ್ದ ಲೌಕಿಕಬದುಕಿನ ನಾಯಕನಾಗಿ ಚಿತ್ರಿತನಾದರೆ, ಕಾವ್ಯ ಬೆಳೆದಂತೆ ಬಸವಾದಿ ಪ್ರಮಥರ ಪ್ರವೇಶದೊಂದಿಗೆ ಅಲ್ಲಮಪ್ರಭು,ಪ್ರಭುಲಿಂಗನಾಗಿ ಪಾರಮಾರ್ಥಿಕ ಬದುಕಿನ ನಾಯಕನಾಗಿ ಶೂನ್ಯ ಸಿಂಹಾಸನದ ಜೊತೆಗೆ ಶರಣರ ಹೃದಯ ಸಿಂಹಾಸನದಲ್ಲಿ ವಿರಾಜಮಾನನಾಗುತ್ತಾನೆ. ಕಾವ್ಯದುದ್ದಕ್ಕೂ ಅಲ್ಲಮಪ್ರಭುವಿನ ಅನುಭಾವದ ನಿಲುವನ್ನು ಚಾಮರಸಕವಿ ಅತ್ಯಂತ ಸಶಕ್ತನಾಗಿ ಚಿತ್ರಿಸಿದ್ದಾನೆ.

ಕವಿ ಚಾಮರಸನ ಪ್ರತಿಭೆಯ ಔನ್ನತ್ಯವನ್ನು, ಅಲ್ಲಮಪ್ರಭುವಿನ ಅನುಭಾವದ ಎತ್ತರ ಬಿತ್ತರಗಳನ್ನು ಶ್ರೀ ಷ. ಬ್ರ. ಬಸವಲಿಂಗ ಪಟ್ಟಾಧ್ಯಕ್ಷರು ಸಂಪೂರ್ಣವಾಗಿ ಅರಗಿಸಿಕೊಂಡಿರುವದರಿಂದಲೇ ಪ್ರಭುಲಿಂಗಲೀಲೆಯನ್ನು ಲೀಲಾಜಾಲವಾಗಿ ವ್ಯಾಖ್ಯಾನಿಸುತ್ತಾರೆ. ಉದಾಹರಣೆಗಾಗಿ''ಪ್ರಭುಲಿಂಗಲೀಲೆ''ಶೀರ್ಷಿಕೆಬಗ್ಗೆ ಅವರು ನೀಡಿದ ವ್ಯಾಖ್ಯಾನ ಹೀಗಿದೆ:

''ಚಾಮರಸನು ತಾನು ಬರೆದ ಮಹಾಕಾವ್ಯಕ್ಕೆ ಪ್ರಭುಲಿಂಗಚರಿತ್ರೆ, ಪ್ರಭುಲಿಂಗ ವಿಲಾಸ, ಪ್ರಭುಲಿಂಗ ಪುರಾಣ ಎಂದು ಹೇಳದೆ ಪ್ರಭುಲಿಂಗಲೀಲೆ ಎಂದು ಹೇಳಿರುವನು. ಚರಿತ್ರೆಗಳು, ಪುರಾಣಗಳು, ರಗಳೆಗಳು ಅಚ್ಚರಿಯನ್ನುಂಟು ಮಾಡುವ ಪವಾಡಗಳ ಸಂತೆಯಾಗಿ ಬುದ್ಧಿಜೀವಿಗಳ ವೈಚಾರಿಕತೆಗೆ, ತಾತ್ವಿಕ ಜಿಜ್ಞಾಸೆಗೆ, ವೈಜ್ಞಾನಿಕ ದೃಷ್ಟಿಕೋನಕ್ಕೆ ಅವಕಾಶವೀಯದೆ ಭಾವುಕರ ಮನವನ್ನು ಮಾತ್ರ ತಣಿಸುವವು.

''ಪುರುಷಸಿಂಹ'' ಎಂಬ ಪದವನ್ನು ಉಚ್ಚರಿಸಿದಾಕ್ಷಣ ಸಿಂಹದಂತೆ ಪರಾಕ್ರಮಿಯಾದ ಪುರುಷನು ಎಂದು ಹೇಗೆ ತಿಳಿದುಬರುವದೋ ಹಾಗೆ ಪ್ರಭುಲಿಂಗ ಎಂದೊಡನೆ ಲಿಂಗದ ಮಂಗಲ ಗುಣಗಳನ್ನು ಅಂಗದಲ್ಲಿ ಸಂಗವಿಸಿಕೊಂಡ ಮಂಗಲಜಂಗಮಪುಂಗವ ಎಂದು ತಿಳಿದುಬರುವದು. ''ಶಿವಲಿಂಗ ಎಂಬ ಪದದಲ್ಲಿ ಶಿವನೇ ಲಿಂಗ, ಲಿಂಗವೇ ಶಿವ ಎಂಬ ಉಭಯ ಪದಗಳಿಗೆ ಹೇಗೆ ಅಭೇದವಿರುವದೋ ಹಾಗೆ ಪ್ರಭುಲಿಂಗ ಎಂಬ ಪದದಲ್ಲಿಯೂ

ಪ್ರಭುವೇ ಲಿಂಗ; ಲಿಂಗವೇ ಪ್ರಭು ಎಂದು ಅಭೇದವಿರುವದು.''

ಮೇಲಿನ ವ್ಯಾಖ್ಯಾನ, ಬಸವಲಿಂಗ ಪಟ್ಟಾಧ್ಯಕ್ಷರ ಪ್ರವಚನ ಪ್ರತಿಭೆಯ ಒಂದು ಪುಟ್ಟ ಮಾದರಿಮಾತ್ರ. ಗ್ರಂಥದುದ್ದಕ್ಕೂ ಪಟ್ಟಾಧ್ಯಕ್ಷರ ವಿಶಿಷ್ಟಪ್ರತಿಭೆ ಚೆಲ್ಲುವರಿದಿದೆ.

ಪ್ರಭುಲಿಂಗಲೀಲೆಯಲ್ಲಿ ಮಾಯೆ ಮತ್ತು ಆಕೆಯಸಖಿ ವಿಮಳೆಯ ಜತೆಗಿರುವ ಪ್ರಭುವಿನಸಂವಾದ ಹಾಗೂ ಅಕ್ಕಮಹಾದೇವಿಯೊಡನೆ ಪ್ರಭುವಿನ ಸಂವಾದ ಈ ಎರಡೂ ಶಿಖರ ಸ್ಥಾನಗಳು. ಮಾಯೆ, ಬಯಲುದೇಹಿಯಾದ ಅಲ್ಲಮನನ್ನು ಮಾತು ಮೃಮನಗಳಲ್ಲಿ ಕಟ್ಟುವ ವಿಫಲ ಪ್ರಯತ್ನ ಮಾಡಿ ತೇಜೋಭಂಗವನ್ನನುಭವಿಸಿದರೆ, ಅಕ್ಕ ಮಹಾದೇವಿ ಪ್ರಭುವಿನ ಮೊನಚು ಪ್ರಶ್ನೆಗಳಿಗುತ್ತರಿಸುತ್ತಲೇ ದಿವ್ಯತೇಜೋಮೂರ್ತಿಯಾಗಿ ತೋಳಗಿ ಬೆಳಗುತ್ತಾಳೆ. ಈ ಎರಡೂ ಪ್ರಸಂಗಗಳನ್ನು ವ್ಯಾಖ್ಯಾನಿಸುವಲ್ಲಿ ಪಟ್ಟಾಧ್ಯಕ್ಷರು ನೀಡುವ ಉದಾಹರಣೆಗಳು, ವ್ಯವಹಾರಿಕ ದೃಷ್ಟಾಂತಗಳು ಅವರ ಅಪಾರವಾದ ವಿದ್ವತ್ತಿಗೆ,ಸಮರ್ಥ ಅಭಿವ್ಯಕ್ತಿಗೆ,ವಿಶಾಲವಾದ ಲೋಕಾನುಭವಕ್ಕೆ ನಿದರ್ಶನವೀಯುತ್ತವೆ.

ಮಾಯಾ ಕೋಲಾಹಲ ಪ್ರಸಂಗದಲ್ಲಿ ಪ್ರಭು ಹಾಗೂ ಮಾಯೆಯ ಗೆಳತಿ ವಿಮಳೆಯ ನಡುವೆ ನಡೆವ ಮಾತಿನಚಕಮಕಿ ಬುದ್ಧಿಗೆ ಸಾಣೆಹಿಡಿಯುವಂತಹದು. ಮಾಯೆಯ ಮೋಹಮಾಯೆಗೆ ಅಲ್ಲಮ ನಿಲುಕದೇ ಹೋದಾಗ ಮಾಯೆಯ ಗೆಳತಿ ವಿಮಳೆ ಅಲ್ಲಮನನ್ನು ಒಪ್ಪಿಸಲು ಅಹುದಹುದೆನ್ನುವ ವಾದವೊಂದನ್ನು ಮುಂದಿಡುತ್ತಾಳೆ. ''ಮಾಯೆಯೆ ಬಯಕೆ ಕೀಳೆಂದೇ ಒಪ್ಪಿಕೊಳ್ಳೋಣ. ಆದರೆ ನಿನ್ನನ್ನು ಕೂಡಿದ ಮೇಲೆ ಆ ಕೀಳುತನ ಉಳಿಯುವದಾದರೂ ಹೇಗೆ ? ಕೀಳು ಲೋಹವಾದ ಕಬ್ಬಿಣವನ್ನು ಸ್ಪರ್ಶಮಣಿಯ ಮುತ್ತಳಿ ಕಾಲಿನಿಂದೊದೆದರೂಸರಿ, ತೋಳಲಪ್ಪಿದರೂಸರಿ ಅದು ಸುವರ್ಣವಾಗುವ ದಿಲ್ಲವೇ ?'' ಎನ್ನುತ್ತಾಳೆ.

ಈ ತರ್ಕವನ್ನು ಅಲ್ಲಮ "ವನಿತೆ ನಿನ್ನಯ ಮಾತಹುದು'' ಎಂದು ಒಪ್ಪಿಕೊಂಡಾಗ ಒಂದು ಕ್ಷಣ ತಬ್ಬಿಬ್ಬು ಆಗುತ್ತೇವೆ, ಅಲ್ಲಮ ಮಾತಿನ ಮಾಯೆಗೆ ವಶವಾದನೇ ? ಎಂದು ಕೊಳ್ಳುತ್ತಿರುವಂತೆಯೇ ಅಲ್ಲಮನ ಮುಂದಿನ ಮಾತು ವಿಮಳೆಯ ವಾದವನ್ನು ಬುಡ ಸಮೇತ ಕಿತ್ತು ಬಿಸುಡುತ್ತದೆ. ಆತ ಹೇಳುತ್ತಾನೆ, ''ಕಬ್ಬಿಣವಾದೊಡೆ ಪರುಷ ಮುಟ್ಟಲ್ಕೆ ಕನಕವಹುದಲ್ಲದೆ ವೃಥಾ ಹಳೆಹಂಚು ಹೊನ್ನಹುದೇ ?'' ಎಂದುತ್ತರಿಸಿ ಮಾಯೆ ಈಗಿರುವ ರೂಪದಲ್ಲಿದ್ದಂತೆ ತುಂಬಾ ಹಳಬಳೆಂದೂ,ಈ ಸ್ಥಿತಿಯಲ್ಲಿ ಅವಳ ಉದ್ಧಾರ ಅಸಾಧ್ಯವೆಂಬುದನ್ನು ''ಹಳೆಹಂಚು'' ಎಂಬ ಒಂದೇ ಮಾತಿನಲ್ಲಿ ಸೂಚಿಸುತ್ತಾನೆ,ಅಷ್ಟಕ್ಕೆ ಸುಮ್ಮನಾಗದ ವಿಮಳೆ ''ತಪ್ಪಿ ನಡೆಯುತ್ತಿರುವ ಅವಳ ಮೇಲೆ ನಿಮ್ಮ ಕೃಪಾಕಟಾಕ್ಷ ಬಿದ್ದರೆ ನಿಶ್ಚಿತವಾಗಿ ಅವಳು ಪಾವನಳಾಗುತ್ತಾಳೆ, ದಯವಿಟ್ಟು ಕೃಪೆದೋರಿ'' ಎನ್ನುತ್ತಾಳೆ. ಆಗ ಅಲ್ಲಮ ''ಮಾಯೆ ಉದ್ಧಾರಕ್ಕಾಗಿ ಬಂದವಳಲ್ಲ ಕಾಮವಾಂಛಿತಳಾಗಿ ಬಂದವಳು'' ಎಂದು ಹೇಳಿ ಒಂದು ಬೀಜವ ಬಿತ್ತಿ ಮೇಲೆ ಮತ್ತೊಂದು ಫಲವನು ಬಯಸಿ ಬಾತೊಡೆ ಬಂದುದಹುದೇ ?'' ಎಂದು ಪ್ರಶ್ನಿಸಿ, ''ಕಾಮವೆತ್ತ ಪರಮತತ್ವದ ಸೀಮೆಯೆತ್ತ'' ಎಂದು ವಿಮಳೆಯ ವಾದವನಲ್ಲಗಳೆದ ಅಲ್ಲಮ ಮಾಯೆಗೆ ಸಿಲುಕದೆ ಹೋಗುತ್ತಾನೆ.

ಈ ಪ್ರಸಂಗದ ವಿವರಣೆಯನ್ನು ನೀಡುವಾಗ ಪ್ರವಚನಕಾರರು ಕಠೋಪನಿಷತ್ತಿನ ಯಮ–ನಚಿಕೇತರ ಸಂವಾದ, ಬೃಹದಾರಣ್ಯಕೋಪನಿಷತ್ತಿನ ಯಾಜ್ಞವಲ್ಕ-ಮೈತ್ರೇಯೀ

ಸಂವಾದ, ವಚನ ಸಾಹಿತ್ಯದಲ್ಲಿಯ ಪ್ರಭು–ಮುಕ್ತಾಯಕ್ಕರ ಸಂವಾದ, ಬಡೋದೆಯಲ್ಲಿ ಸ್ವಾಮಿವಿವೇಕಾನಂದ ಹಾಗೂ ವೇಶ್ಯಾಸ್ತ್ರೀಗೆ ನಡೆದ ಸಂವಾದಗಳನ್ನು ವಿವರಿಸುತ್ತಾರೆ. ಜತೆಯಲ್ಲಿ ಭಗವದ್ಗೀತೆ, ಸರ್ವಜ್ಞನ ವಚನ, ನಿಜಗುಣ ಶಿವಯೋಗಿಗಳ ತಾತ್ವಿಕಚಿಂತನ, ಮಹಾಭಾರತ, ಉಪನಿಷತ್ತು, ವಚನಸಾಹಿತ್ಯ, ರಾಮಕೃಷ್ಣರ ದೃಷ್ಟಾಂತ ಕಥೆಗಳನ್ನು ಪುಂಖಾನುಪುಂಖವಾಗಿ ಹೇಳುತ್ತಾರೆ. ಜತೆಗೆ ಬದುಕಿನಿಂದ ನೇರವಾಗಿ ಎತ್ತಿಕೊಂಡ ಜೀವಂತ ಉದಾಹರಣೆಗಳಿಂದಾಗಿ ಕಬ್ಬಿಣದ ಕಡಲೆಯಾಗಬಹುದಾಗಿದ್ದ ಪರತತ್ವ ಚಿಂತನ ಸುಲಿದ ಬಾಳೆಯಹಣ್ಣಿನಂತಾಗುತ್ತದೆ; ಆರಿದ ಉಷ್ಣದ ಹಾಲಿನಂತಾಗುತ್ತದೆ; ಕಳೆದ ಸಿಗುರಿನ ಕಬ್ಬಿನಂತಾಗುತ್ತದೆ.

ಇಂಥದೇ ಇನ್ನೊಂದು ಪ್ರಸಂಗ ಅದು ಅಕ್ಕ–ಅಲ್ಲಮರ ನಡುವೆ ನಡೆದ ಸಂವಾದ. ಮಾಯೆಯ ಸಂದರ್ಭದಲ್ಲಿ ವಿಷಳೆ ಒಡ್ಡುವ ವಾದಕ್ಕೆ ಪ್ರಭು ಉತ್ತರಿಸಿದರೆ, ಅಕ್ಕನ ಸಂದರ್ಭದಲ್ಲಿ ಪ್ರಭು ಒಡ್ಡುವವಾದಕ್ಕೆ ಅಕ್ಕಉತ್ತರಿಸುತ್ತಾಳೆ. ಇಷ್ಟಾಗಿಯೂ ಪ್ರಭು ಕೇಳಿದ ಪ್ರಶ್ನೆಗಳು ಪ್ರಭುವಿನವಲ್ಲ. ಶೂನ್ಯ ಪೀಠಾಧಿಪತಿಯಾದ ಆತ ಅಕ್ಕನ ಬಗೆಗೆ ಎತ್ತಬಹುದಾಗಿದ್ದ ಪ್ರಶ್ನೆಗಳನ್ನೆಲ್ಲ ತಾನೇ ಎತ್ತಿ ಅವಳಿಂದ ಉತ್ತರಹೊರಡಿಸುತ್ತಾನೆ. ಪ್ರಶ್ನೆಗಳ ಒರೆಗೆ ಹಚ್ಚಿದಷ್ಟು ಅಕ್ಕನ ವ್ಯಕ್ತಿತ್ವ ಚೊಕ್ಕಚಿನ್ನದಂತೆ ಉಜ್ವಲವಾಗಿ ಪ್ರಕಾಶಿಸುತ್ತದೆ. ವಿಶ್ವದ ಯಾವದೇ ಶ್ರೇಷ್ಠ ತಾತ್ವಿಕ ಬಗೆಗಿಂತಲೂ ಈಸಂವಾದ ಕಡಿಮೆ ಮಟ್ಟದ್ದೇನಲ್ಲ ಎಂಬುದು ಮೇಲ್ನೋಟಕ್ಕೇ ಎದ್ದು ಕಾಣುತ್ತದೆ. ಅದನ್ನು ಓದಿಯೇ ಅನುಭವಿಸಬೇಕು !

ಬಯಲುದೇಹಿಯಾದ ಅಲ್ಲಮನೆದುರಿಗೆ ಬಯಲನ್ನೇ ಉಟ್ಟುಕೊಂಡು ಅಕ್ಕ ನಿಂತಿದ್ದಾಳೆ. ಅಲ್ಲಮನ ಮೊದಲ ಪ್ರಶ್ನೆಯೇ ಲೌಕಿಕದ ಗಂಡನನ್ನು ಧಿಕ್ಕರಿಸಿದ ನಿಲುವನ್ನು ಪ್ರಶ್ನಿಸುವಂತಹದು. ''ಉದಮದ ಯೌವನವನೊಳಕೊಂಡ ಸತಿ ನೀನು ಇತ್ತಲೇಕೆ ಬಂದೆಯವ್ವಾ ! ಸತಿಯೆಂದರೆ ಮುನಿವರು ನಿಮ್ಮ ಶರಣರು, ನಿನ್ನ ಪತಿಯ ಕುರುಹು ಹೇಳಿದರೆ ಬಂದು ಕುಳ್ಳಿರು ಅಲ್ಲದಿದ್ದರೆ ತೊಲಗು'' ಎಂದು ನಿರ್ದಾಕ್ಷಿಣ್ಯವಾಗಿ ನುಡಿಯುತ್ತಾರೆ. ಅದಕ್ಕೆ ಅಕ್ಕ ಕೊಡುವ ಉತ್ತರ ಮಾರ್ಮಿಕವಾದುದು ''ಗುರುವೇ ತೆತ್ತಿಗನಾದ, ಲಿಂಗವೇ ಮದುವಳಿಗನಾದ, ನಾನು ಮದುವಳಿಗೆಯಾದೆನು'' ಎಂದು ಹೇಳುತ್ತಾ 'ಚನ್ನಮಲ್ಲಿಕಾರ್ಜುನ ಗಂಡನೆನಗೆ, ಮಿಕ್ಕಿನ ಲೋಕದ ಗಂಡರೆನಗೆ ಸಂಬಂಧವಿಲ್ಲವಯ್ಯಾ'' ಎನ್ನುತ್ತಾಳೆ. "ಬತ್ತಲೆಯ ಬಗೆಗೊಂಡು ಹೊಗೂಸಿತ್ತಲೇಕೆ ಬಂದೆ, ಕಾಮದ ಕತ್ತಲೆಯ ಕಳೆಯದೆ ವ್ಯಥಾ ವೈರಾಗ್ಯವೇಷದಲಿ'' ಎಂದು ಪ್ರಭು ಕೆಣಕಿದರೆ ಅಕ್ಕ ''ಜಗಭರಿತಗೊಲಿದವಳಿಗುಡಿಗೆಯ ತೊಗಲದೇತಕೆ ?'' ಎಂದು ಮರು ಪ್ರಶ್ನಿಸುತ್ತಾಳೆ. ಅದಕ್ಕೆ ಅಲ್ಲಮ ''ಭಾವಶುದ್ಧವಾದಲ್ಲಿ ಸೀರೆಯನಳಿದು ಕೂದಲ ಮರೆಸಲೇತಕ್ಕೆ'' ಎಂದು ಕಟಕಿಯಾಡುತ್ತಾನೆ. ಆಗ ಅಕ್ಕ "ಕಾಮನ ಮುದ್ರೆಯ ಕಂಡು ನಿಮಗೆ ನೋವಾದೀತೆಂದು ಆಭಾವದಿಂದ ಮುಚ್ಚಿದೆ ಇದಕ್ಕೆ ನೋವೇಕೆ ? ಕಾಡದಿರಣ್ಣಾ ಚನ್ನಮಲ್ಲಿಕಾರ್ಜುನನ ಒಳಗಾದವಳ'' ಎಂದುತ್ತರಿಸುತ್ತಾಳೆ. ಎತ್ತರದ ನಿಲುವಿನ ಅಲ್ಲಮನೂ ತತ್ತರಿಸುವಂತಹ ಉತ್ತರ. ಹೀಗೆ ಪ್ರಭುವಿನ ಎಲ್ಲ ಪ್ರಶ್ನೆಗಳಿಗೂ ಉತ್ತರಿಸಿದ ಅಕ್ಕ ಒಂದು ಸಂದರ್ಭದಲ್ಲಿ ಪ್ರಭುವನ್ನು ಕೇಳುತ್ತಾಳೆ. "ಎನ್ನಂಗವನು ಶ್ರೀಗುರು ಮಂತ್ರವಮಾಡಿ ತೋರಿದನಾಗಿ ಸಾವಯ, ನಿರ

ವಂಚುಕ್ಕೆ ಭಿನ್ನವಿಲ್ಲವಯ್ಯ ಚನ್ನಮಲ್ಲಿಕಾರ್ಜುನ ದೇವರ ಬೆರೆಸಿ ಮತಿಗೆಟ್ಟವಳ ಏತಕ್ಕೆ ನುಡಿ ಸುವಿರಯ್ಯ, ಪ್ರಭುವೇ" ಎಂದು. ಆಗ ಪ್ರಭು ಒಡ್ಡುವ ಪ್ರಶ್ನೆ ಅಕ್ಕನ ಬಾಯಿ ಕಟ್ಟಿಸು ವಂತಹದು. ಅಹಂಕಾರವಳಿದಿದೆ ಎಂದು ಹೇಳುವುದೇ ಅಹಂಕಾರವಾಗುವುದಿಲ್ಲವೇ? ಜ್ಞಾನಿ ಯಾದವನು ತಾನು ಜ್ಞಾನಿ ಎಂದು ಕೊಚ್ಚಿಕೊಳ್ಳುವನೇ ? ಎಂಬರ್ಥದಲ್ಲಿ ಅಲ್ಲಮಪ್ರಭು-

ನಾ ಸತ್ತೆನೆಂದು ಹೆಣ ಕೂಗಿದುದುಂಟೆ ?
ಬೈಚಿಟ್ಟ ಬಯಕೆ ಕರೆದುದುಂಟೆ ?
ಹೆಪ್ಪಿಟ್ಟ ಹಾಲು ಸಿಹಿಯಪ್ಪುದೆ ?''

ಎಂದು ಕೇಳಿ "ಈ ಮಾತು ಒಪ್ಪವಲ್ಲ ಗುಹೇಶ್ವರಲಿಂಗಕ್ಕೆ'' ಎನ್ನುತ್ತಾನೆ. ಅಕ್ಕ ದಿಕ್ಕೆಡು ವುದಿಲ್ಲ; ಅತ್ಯಂತ ಖಚಿತ ಧ್ವನಿಯಲ್ಲಿ ಉತ್ತರವೀಯುತ್ತಾಳೆ:

''ಮರೆದೊರಗಿ ಕನಸು ಕಂಡು ಹೇಳುವಲ್ಲಿ
ಸತ್ತ ಹೆಣ ಎದ್ದಿತ್ತು,
ತನ್ನ ಖಣ ನಿಧಾನ ಎದ್ದು ಕರೆಯಿತ್ತು,
ಹೆಪ್ಪಿಟ್ಟ ಹಾಲು ಗಟ್ಟಿದುಪ್ಪವಾಗಿ ಸಿಹಿಯಾಗಿತ್ತು,
ಇದಕ್ಕೆ ತಪ್ಪ ಸಾಧಿಸಲೇತಕ್ಕೆ ? ಚನ್ನಮಲ್ಲಿಕಾರ್ಜುನ
ದೇವರ ದೇವನಣ್ಣಗಳಿರಾ ?

ಎಂದು ಅಕ್ಕಮಹಾದೇವಿ ನೀಡಿದ ಉತ್ತರದಿಂದ ಆಕೆ ಏರಿದ ಎತ್ತರ ವೇದ್ಯವಾಗುತ್ತದೆ.

ಈ ಪ್ರಸಂಗದಲ್ಲಿಯೂ ಅಷ್ಟೆ, ಪ್ರವಚನಕಾರರು ಪ್ರಭುಲಿಂಗಲೀಲೆ, ಶೂನ್ಯ ಸಂಪಾದನೆ ಈ ಎರಡನ್ನೂ ಸಂದರ್ಭೋಚಿತವಾಗಿ ಬಳಸಿಕೊಂಡು ಓದುಗರನ್ನು ಸಂದರ್ಭದ ಔನ್ನತ್ಯಕ್ಕೇರಿಸುವಲ್ಲಿ ಸಫಲರಾಗಿದ್ದಾರೆ. ಇದೇ ಸಾಫಲ್ಯವನ್ನು ನಾವು ಕೃತಿ ಯುದ್ದಕ್ಕೂ ಕಾಣುತ್ತೇವೆ.

ಲೇಖಕರ ವಿಸ್ತಾರವಾದ ಓದು,ಈ ಇಲ್ಲಿಯ ವ್ಯಾಖ್ಯಾನವನ್ನು ಅತ್ಯಂತ ಶ್ರೀಮಂತಗೊಳಿ ಸಿದೆ.ಪ್ಲೇಟೋ, ಅರಿಸ್ಟಾಟಲ್‌ನಿಂದ ಹಿಡಿದುಕೊಂಡು, ವಿನೋಭಾ, ಕವಿ ಕುವೆಂಪು ಅವರ ವರೆಗೆ ಅವರ ಓದಿನ ಹರವು ಹಬ್ಬಿದೆ. ಹೀಗಾಗಿ ನೂರಾರು ಕಥೆ-ಉಪಕಥೆಗಳನ್ನು, ವ್ಯಕ್ತಿ ಗಳನ್ನು, ಉಕ್ತಿಗಳನ್ನು ತಮ್ಮ ಪ್ರವಚನದಲ್ಲಿ ಯಥೋಚಿತವಾಗಿ ಬಳಸಿಕೊಳ್ಳುತ್ತಾರೆ. ಹೀಗಾಗಿ ಇವರ ಪ್ರವಚನ ಓದುವದೆಂದರೆ ಒಮ್ಮೆಲೇ ನೂರು ಪುಸ್ತಕಗಳನ್ನು ಓದಿದ ಅನುಭವ.

ಇದುವರೆಗೂ ಸಹಸ್ರಾರು ಜನ ಅವರಿಂದ ಈ ಪ್ರವಚನವನ್ನು ಮುಖತಃ ಕೇಳಿ ತಮ್ಮ ವ್ಯಕ್ತಿತ್ವವನ್ನು ಬೆಳಗಿಸಿಕೊಂಡಿದ್ದರು. ಇದೀಗ ಅದು ಪುಸ್ತಕ ರೂಪದಲ್ಲಿ ಪ್ರಕಟ ವಾಗಿ ನಾಡನ್ನು ಬೆಳಗಿಸಲು ಸಿದ್ಧವಾಗಿದೆ. ಶರಣರ ಮಹೋನ್ನತ ವ್ಯಕ್ತಿತ್ವನನ್ನು ಸಾರಿ ಹೇಳುವ ಈ ಪ್ರವಚನವನ್ನು ನಾಡಿಗೆ ನೀಡಿದ ಪೂಜ್ಯ ಶ್ರೀ ಷ.ಬ್ರ. ಬಸವಲಿಂಗ ಪಟ್ಟಾಧ್ಯ ಕ್ಷರಿಗೆ ಧರ್ಮಗುರು ಬಸವಣ್ಣನವರು ಸಕಲ ಸನ್ಮಂಗಲವನ್ನುಂಟು ಮಾಡಲೆಂದು ಹೃದಯಪೂರ ಹಾರೈಸಲಾಗಿದೆ.

ಇತಿ ಶುಭಂ

# ಲೇಖಕರ ಮಾತು

ಸುಮಾರು ಇಪ್ಪತ್ತು ವರ್ಷಗಳಹಿಂದೆ ಗದಗಿನ ಜಗದ್ಗುರು ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳವರ ಅಪ್ಪಣೆಯಮೇರೆಗೆ ತೋಂಟದಾರ್ಯ ಸಂಸ್ಥಾನಮಠದಲ್ಲಿ ಶ್ರಾವಣ ನಿಮಿತ್ತ ಪ್ರಭುಲಿಂಗಲೀಲೆಯನ್ನು ಕುರಿತು ಪ್ರವಚನ ಮಾಡಿದ್ದೆ. ಆಕಾಲದ ವಿಷಯವನ್ನೆಲ್ಲ ಮಹಾಸನ್ನಿಧಿಯವರು ಶ್ರೀ ಎಂ. ಬಿ. ಹಂಚಿನಾಳ ಶಿಕ್ಷಕರ ನೆರವಿನಿಂದ ಟೇಪರಿಕಾರ್ಡ ಮಾಡಿಸಿ ಇಡಿಸಿದ್ದರು. ಅದನ್ನು ಈಗ ಗ್ರಂಥರೂಪದಲ್ಲಿ ಪ್ರಕಟಿಸಿ ಓದುಗರ ಕೈಗಿಡುತ್ತಿದ್ದೇವೆ. ನಡುವಯದಲ್ಲಿದ್ದ ಅಂದಿನ ನಮ್ಮ ಸ್ಮರಣಶಕ್ತಿ, ಗ್ರಹಣಶಕ್ತಿ, ಸ್ಫುರಣ ಶಕ್ತಿಗಳು ಕಡಿಮೆಯಾಗಿ, ಇಳಿವಯದಲ್ಲಿದ್ದ ನಮಗೀಗ ವಿಸ್ಮರಣ ಶಕ್ತಿಯೇ ಅಧಿಕವಾಗಿದೆ. ಈ ಗ್ರಂಥವನ್ನು ಮತ್ತೊಮ್ಮೆ ನೋಡಬೇಕು, ತಿದ್ದಿ ತೀಡಬೇಕು, ಶುದ್ಧೀಕರಣ ಮಾಡಬೇಕು ಎಂಬ ಲವಲವಿಕೆಯು ಈಗ ನಮಗಿಲ್ಲದಾಗಿದೆ.

ಶಿವಯೋಗಿಗಳ ಮಣಿಮಾಲಿಕೆಯಲ್ಲಿ ಶಿರೋರತ್ನದಂತಿದ್ದ ಅನಿಮಿತ್ತ ಬಂಧು, ಕರುಣಾಸಿಂಧು ಪ್ರಭುದೇವರು ದೇಶಸಂಚಾರ ಕೈಕೊಂಡು ತಾಯಿಯೇ ಮಗುವಿನ ಬಳಿಗೆ ಹೋಗಿ ಮೊಲೆ ಕುಡಿಸುವಂತೆ ಶಿಷ್ಯರಲ್ಲಿಗೆ ಹೋಗಿ ಜ್ಞಾನಾಮೃತ ಕುಡಿಸಿ ಸದ್ಯೋನ್ಮುಕ್ತ ರನ್ನಾಗಿ ಮಾಡಿದರು. ಅಂದು ಪ್ರಭುದೇವರಿಗೆ ಕಾಣಿಸಿಕೊಂಡ ಅಚ್ಚುಮೆಚ್ಚಿನ ಶಿಷ್ಯರೆಂದರೆ ಗೊಗ್ಗಯ್ಯ, ಸಿದ್ಧರಾಮ, ಮುಕ್ತಾಯಕ್ಕ, ಮಹಾದೇವಿಯಕ್ಕ, ಗೋರಕ್ಷ, ಬಸವರಾಜ-ಮುಂತಾದವರು. ಇವರೆಲ್ಲರಿಗೆ ತಮ್ಮ ಪ್ರಾಸಾದಿಕ ವಾಣಿಯಿಂದ ಪ್ರಭುದೇವರು ತಿಳಿಸಿ ಹೇಳಿದರು. ಇದು ಶಿಷ್ಯರಿಗೆ ತಿಳಿಯದೇ ಹೋದಾಗ ಪ್ರಾಯೋಗಿಕವಾಗಿ ತೋರಿಸಿ ಶಿವಯೋಗದ ಘನತೆಯನ್ನು ಮನದಟ್ಟು ಮಾಡಿಕೊಟ್ಟರು,

ಕೃಷಿಕಾಯಕ ಮಾಡುವ ಗೊಗ್ಗಯ್ಯನಿಗೆ, ಕೆರೆ ಕಾಲುವೆ ನಿರ್ಮಿಸುವ ಸಿದ್ಧರಾಮನಿಗೆ ಶರೀರವನ್ನು ವಜ್ರಕಾಯವಾಗಿಸಿಕೊಂಡ ಗೋರಕ್ಷನಿಗೆ, ತನ್ನ ಅರಿವೇ ತನಗೆ ಗುರು ಎಂಬುದನ್ನು ಮರೆತ ಮುಕ್ತಾಯಕ್ಕನಿಗೆ- ಹೀಗೆ ಹಲವಾರು ಪುಣ್ಯಜೀವಿಗಳಿಗೆ ಅಪರೋಕ್ಷಾನುಭೂತಿಯನ್ನು ಮಾಡಿಕೊಟ್ಟ ಪ್ರಭುದೇವರ ಚರಿತೆ ಅದ್ಭುತವಾದುದು. ಸಾಗರದಲ್ಲಿ ಮುಳುಗಿಮುಳುಗಿದಷ್ಟೂ ಅನರ್ಘ್ಯ ರತ್ನಗಳು ದೊರೆಯುವಂತೆ, ಪ್ರಭುಲಿಂಗಲೀಲೆಯೆಂಬ ಮಹಾಕಾವ್ಯ ರತ್ನಾಕರದಲ್ಲಿ ತಳಕ್ಕೆ ಇಳಿದಷ್ಟೂ ಥಳಥಳ ಹೊಳೆಯುವ ತ್ರಿಕಾಲಾಬಾಧಿತ ತತ್ವಗಳೆಂಬ ಅತ್ಯಮೂಲ್ಯ ರತ್ನಗಳು ದೊರಕುತ್ತವೆ.

ನಾವು ಬರೆದ ಹಸ್ತಪ್ರತಿಯನ್ನು ತಿದ್ದಿ ತೀಡಿ ಶುದ್ಧಗೊಳಿಸಿ ತಮ್ಮ ಭುವನೇಶ್ವರಿ ಪ್ರಕಾಶನದಿಂದ ಪ್ರಕಟಿಸುತ್ತಿರುವ ನಮ್ಮ ಪ್ರೀತಿ ಪಾತ್ರರಾದ ಡಾ॥ ಎಂ. ಎಸ್. ವಾಲಿ ಅವರನ್ನು ನೆನೆಯುವದು ನಮ್ಮ ಕರ್ತವ್ಯವೆಂದು ಭಾವಿಸಿದ್ದೇವೆ. ಈ ಕೃತಿಯನ್ನು ಕೊಂಡು ಓದಿ ಕೃತಾರ್ಥರಾದರೆ ನಮ್ಮ ಶ್ರಮಸಾರ್ಥಕವಾಗುವದು. ಸಹೃದಯರ ಸಲಹೆ - ಸೂಚನೆಗಳಿಗೆ ಸದಾ ಸ್ವಾಗತವಿದೆ.

ಷ. ಬ್ರ. ಶ್ರೀ ಬಸವಲಿಂಗ ಪಟ್ಟಾಧ್ಯಕ್ಷರು.
ಹಿರೇಮಠ, ತೆಲಸಂಗ.

# ಪ್ರಕಾಶಕರ ನುಡಿ

ತೆಲಸಂಗ ಹಿರೇಮಠದ ಷ. ಬ್ರ. ಶ್ರೀ ಬಸವಲಿಂಗ ಪಟ್ಟಾಧ್ಯಕ್ಷರು ಕರ್ನಾಟಕದ ಅನುಭಾವಿಗಳಲ್ಲೊಬ್ಬರು. ಅವರ ಬದುಕು ಬಂಗಾರ. ಸಹಜವಾಗಿ ಸರಳವಾಗಿ ಶಿವಯೋಗ ಸಿದ್ಧಿಯನ್ನು ಪಡೆದವರು. ಅವರ ಮಾತು ಹಿತ-ಮಿತ. ಅದು ಮುತ್ತಿನ ಹಾರ; ಮಾಣಿಕ್ಯದ ದೀಪ್ತಿ; ಸ್ಫಟಿಕದ ಶಲಾಕೆ. ಅಂತೆಯೇ ಅದಕ್ಕೆ ಲಿಂಗಮೆಚ್ಚಿ ಅಹುದಹುದೆನ್ನುವ ಶಕ್ತಿಯುಂಟು. ಶಿವಯೋಗಮಂದಿರದಲ್ಲಿ ಅಧ್ಯಯನ ಮಾಡಿ ಹಾನಗಲ್ಲ ಲಿಂ. ಕುಮಾರ ಮಹಾಸ್ವಾಮಿಗಳವರ ಪ್ರೀತಿ ಸಂಪಾದಿಸಿದ ಶ್ರೀಗಳು ಕನ್ನಡ, ಸಂಸ್ಕೃತ ಭಾಷೆಗಳಲ್ಲಿ ಪ್ರಾವೀಣ್ಯತೆ ಪಡೆದಿದ್ದಾರೆ. ಅವರ ಪ್ರವಚನ ಪಾಂಡಿತ್ಯ ಕಂಡು ತಲೆದೂಗದವರಿಲ್ಲ. ಬಾಗಲಕೋಟೆಯಲ್ಲಿ ಶ್ರೀಗಳ ಪ್ರವಚನ ನಡೆದಾಗ ಅಲ್ಲಿಯ ಚಿತ್ರಮಂದಿರಗಳು ಬಿಕೋ ಎನ್ನುತ್ತಿದ್ದವೆಂದು ಕಂಡವರು ಹೇಳುತ್ತಾರೆ. ಆದರೂ ಅವರು ಪ್ರಚಾರದಿಂದ ಬಹುದೂರ ಎಲೆಮರೆಯ ಪುಷ್ಪದಂತೆ ನಾಡಿನ ತುಂಬ ಅವರ ಸೌರಭ.

ಪೂಜ್ಯ ಸ್ವಾಮಿಗಳವರು ಕ್ರಿ. ಶ. ೧೯೭೮ ರಲ್ಲಿ ಗದಗಿನ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠದಲ್ಲಿ ಪ್ರಭುಲಿಂಗ ಲೀಲೆಯನ್ನು ಕುರಿತು ಪ್ರವಚನ ಮಾಡಿದರು. ಅದನ್ನು ಕೇಳಿದ ಭಕ್ತರು ತೃಪ್ತಿಪಟ್ಟು ಅದನ್ನು ಪುಸ್ತಕ ರೂಪದಲ್ಲಿ ತರಲು ಒತ್ತಾಯಿಸುತ್ತಿದ್ದರು. ಅದನ್ನೀಗ ಶ್ರೀಗಳೇ ಬರೆದು ಈ ಗ್ರಂಥವಾಗಿ ಹೊರಬರಲು ಶ್ರಮಿಸಿದ್ದಾರೆ. ಅವರು ಈಗ ೮೮ ವರುಷಗಳ ವಯೋವೃದ್ಧರು.ಆದರೂ ಅವರದು ಬಿಡುವಿಲ್ಲದ ಹೋರಾಟದ ಬದುಕು.

'ಪ್ರಭುಲಿಂಗಲೀಲಾ ಪ್ರವಚನ' ವೆಂಬ ಈ ಕೃತಿ ವೀರಶೈವರಿಗೊಂದು ಕೈಪಿಡಿಯಂತಿದೆ. ಮೂಲ ಗ್ರಂಥದ ೨೫ ಗತಿಗಳಿಗನುಗುಣವಾಗಿ ವಿಷಯ ನಿರೂಪಣೆ ಸೊಗಸಾಗಿದೆ. ಅಲ್ಲಲ್ಲಿ ಶರಣರ ವಚನಗಳು, ಸರ್ವಜ್ಞನ ತ್ರಿಪದಿಗಳು, ಜನಪದರ ವಾಣಿ ಹಾಗೂ ದೃಷ್ಟಾಂತ ಕಥೆಗಳಿಂದಾಗಿ ವಿಷಯವು ಮನದಾಳದಲ್ಲಿ ಅಚ್ಚೊತ್ತಿ ನಿಲ್ಲುತ್ತದೆ. ಒಮ್ಮೆ ಓದಿದರೆ ಮತ್ತೊಮ್ಮೆ ಓದಬೇಕೆನಿಸುವ ಸುಂದರಗ್ರಂಥವಿದು. ಈಗಾಗಲೇ ಹಾವೇರಿಯ ಶ್ರೀ; ಮ. ನಿ. ಪ್ರ. ಶಿವಬಸವ ಚರಿತ್ರೆ, ಬಬಲೇಶ್ವರದ ಶ್ರೀ ಶಾಂತವೀರ ಸ್ವಾಮಿಗಳ ಚರಿತ್ರೆ ದಿ. ವೇ. ಕೇ. ಶಂಕರಪ್ಪನವರ ಚರಿತ್ರೆ ಮತ್ತು ವೀರಶೈವ ಅಷ್ಟಾವರಣಾಂತರ್ಗತ, ಗುರು, ಲಿಂಗ,ಮಂತ್ರ ಇವುಗಳನ್ನು ಕುರಿತು ಚಿಕ್ಕ ಚಿಕ್ಕ ಹೊತ್ತಿಗೆಗಳು ಪ್ರಕಟವಾಗಿವೆ.ಶಿವಶಂಕರ ಕವಿ ವಿರಚಿತ ಗುಡ್ಡಾಪುರ ದಾನಮ್ಮದೇವೀ ಪುರಾಣವನ್ನು ಸಂಪಾದಿಸಿ ಕೊಟ್ಟಿದ್ದಾರೆ. ಈಗ 'ಪ್ರಭುಲಿಂಗಲೀಲಾ ಪ್ರವಚನ' ಪ್ರಕಟಗೊಳ್ಳುತ್ತಲಿದೆ.

ಈ ಮೌಲಿಕ ಕೃತಿಯನ್ನು ನಮ್ಮ ಭುವನೇಶ್ವರಿ ಪ್ರಕಾಶನದಿಂದ ಪ್ರಕಟಿಸಲು ಅನುವು ಮಾಡಿಕೊಟ್ಟ ಶ್ರೀಗಳಿಗೆ ನಾನು ಅನಂತ ಪ್ರಣಾಮುಗಳನ್ನು ಸಲ್ಲಿಸುವೆ. ಸಕಾಲದಲ್ಲಿ ಸುಂದರವಾಗಿ ಮುದ್ರಿಸಿಕೊಟ್ಟ ನಂದನ ಪ್ರಿಂಟಿಂಗ ಪ್ರೆಸ್ಸಿನ ಒಡೆಯರಾದ ಶ್ರೀ ವಾಯ್. ಎಲ್. ಭಂಟನೂರ ಅವರಿಗೂ ಅವರ ಸಿಬ್ಬಂದಿ ವರ್ಗದವರಿಗೂ ವಂದನೆಗಳು. ಜಿಜ್ಞಾಸುಗಳು ಈ ಗ್ರಂಥವನ್ನು ಕೊಂಡು ಓದಿದರೆ ನಮ್ಮ ಶ್ರಮ ಸಾರ್ಥಕ.

ವಿಜಾಪುರ
೧೨-೧೧-೧೯೯೬

ಡಾ॥ ಎಂ. ಎನ್. ವಾಲಿ.
ಸಂಚಾಲಕರು, ಭುವನೇಶ್ವರಿ ಪ್ರಕಾಶನ, ವಿಜಾಪುರ-೩

## ಶ್ರೀ ಮ. ನಿ. ಪ್ರ ಡಾ॥ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು ಶ್ರೀ ಜಗದ್ಗುರು ಮೂರುಸಾವಿರ ಮಠ ಹುಬ್ಬಳ್ಳಿ ಅವರ

# ಆಶೀರ್ವಚನ

ಪುರಾಣ ಪ್ರವಚನ ಪಟುಗಳೂ ದಿವ್ಯಾನುಭವಿಗಳೂ ಅದ್ವಿತೀಯವಾಗ್ಮಿಗಳೂ ಆದ ಷ. ಬ್ರ. ಶ್ರೀ ಬಸವಲಿಂಗ ಪಟ್ಟಾಧ್ಯಕ್ಷರು ಹಿರೇಮಠ ತೆಲಸಂಗ ಅವರು ಈಗ ೮೮ ವರುಷಗಳ ವಯೋವೃದ್ಧರು. ಅವರ ಪಾಂಡಿತ್ಯ, ಮೌಲ್ಯಾಧಾರಿತವಾದ ಲೇಖನಕಲೆ ಸ್ತುತ್ಯಾರ್ಹವಾದುದು. ಕನ್ನಡ ಸಂಸ್ಕೃತಗಳಲ್ಲಿ ಗ್ರಂಥ ಬರೆಯುವ ಸಾಮರ್ಥ್ಯ ಅವರಲ್ಲಿದೆ. ಜನಮನದ ಹೃದಯವನ್ನು ಗೆಲ್ಲುವ ಅಸ್ಖಲಿತವಾಣಿ ಪಟ್ಟಾಧ್ಯಕ್ಷರಲ್ಲಿದೆ. ಅವರು ನಾಡಿನ ತುಂಬ ಪುರಾಣ, ಪ್ರವಚನ ಹೇಳಿ ಧಾರ್ಮಿಕ ಜೀವನವನ್ನು ಬೆಳಗಿಸಿದ್ದಾರೆ. ಬಾಲ್ಯದಲ್ಲಿ ಬಹಳ ಕಷ್ಟಪಟ್ಟು ಅಧ್ಯಯನಮಾಡಿ ಜ್ಞಾನಸಂಪಾದಿಸಿದ್ದಾರೆ.

ನಮ್ಮ ಪೀಠದ ಲಿಂ. ಜಗದ್ಗುರು ಶ್ರೀ ಗುರುಸಿದ್ಧ ರಾಜಯೋಗೀಂದ್ರರ ಕೃಪಾಶೀರ್ವಾದ ಪಡೆದು ಕೆಲಕಾಲ ನಮ್ಮ ಮಠದಲ್ಲಿದ್ದು ಅಧ್ಯಯನ ಅಧ್ಯಾಪನ ಮಾಡಿದ ಶ್ರೀಗಳು ನಮಗೆ ಅತ್ಯಂತ ಆತ್ಮೀಯರು. ವೀರಶೈವ ಸಿದ್ಧಾಂತದಲ್ಲಿ ಆಳವಾದ ಪಾಂಡಿತ್ಯವನ್ನು ಪಡೆದ ವಿರಳರಲ್ಲಿ ಇವರೊಬ್ಬರು. ಆದರೂ ಇವರದು ನಿರಾಡಂಬರ ಜೀವನ. ಶ್ರೀಗಳು ಶಿವಯೋಗಮಂದಿರದಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗ ಯೋಗಸಾಧನೆಯನ್ನೂ ಮಾಡಿದ್ದಾರೆ. ತಾವು ತೆಲಸಂಗ ಹಿರೇಮಠದ ಅಧಿಕಾರ ವಹಿಸಿಕೊಂಡಂದಿನಿಂದ ಶ್ರೀಮಠದ ಹಾಗೂ ಆ ಗ್ರಾಮದ ಅಭಿವೃದ್ಧಿಗಾಗಿ ಶ್ರಮಿಸುತ್ತಿದ್ದಾರೆ. ಶಿಕ್ಷಣ ಪ್ರೇಮಿಗಳಾದ ಇವರು ತೆಲಸಂಗದಲ್ಲಿ ಪೂರ್ವಪ್ರಾಥಮಿಕ, ಹಾಗೂ ಪ್ರಾಥಮಿಕಶಾಲೆ, ಹಾಯಸ್ಕೂಲ ಮತ್ತು ಪದವಿಪೂರ್ವಕಾಲೇಜನ್ನು ಆರಂಭಿಸಿ ಬಡವರ ಜ್ಞಾನತೃಷೆಗೆ ನೆರವಾಗಿದ್ದಾರೆ.

ವಯೋವೃದ್ಧರೂ ಜ್ಞಾನವೃದ್ಧರೂ ಆದ ತೆಲಸಂಗ ಶ್ರೀಗಳ ಹೃದಯವಂತಿಕೆ ಪಕ್ವಜೀವನ ನಾಡಿಗೆ ಆದರ್ಶಪ್ರಾಯ. ಅಮೃತಮಹೋತ್ಸವವನ್ನು ತೆಲಸಂಗದಲ್ಲಿ ಅತಿ ವಿಜೃಂಭಣೆಯಿಂದ ಮಾಡಿ ಅಲ್ಲಿಯ ಜನತೆ ಅವರಿಗೆ ಕೃತಜ್ಞತೆ ತೋರಿಸಿದ್ದು ಮೆಚ್ಚುವಂತಹದು. ಇದರ ಅಂಗವಾಗಿ 'ತೆಲಸಂಗದ ಶ್ರೀಗಂಧ' ಎಂಬ ಸ್ಮರಣಗ್ರಂಥವೂ ಪ್ರಕಟವಾಗಿದೆ.

ಗುರುತ್ವವೆಂಬುದು ಬಹಳ ಮಹತ್ವದ ತತ್ವವಾಗಿದೆ. ಅಷ್ಟಾವರಣಗಳಲ್ಲಿ ಗುರು ಸ್ಥಾನವೇ ಪ್ರಪ್ರಥಮವಾಗಿರುವದು. ನೈಯಾಯಿಕರು ಮಾಡಿದ ಗುರುತ್ವ ಲಕ್ಷಣವು ಇಲ್ಲಿ ಸಲ್ಲದು, ಅವರು ಹೇಳುವದು ಇಂತಿದೆ: "ಆದ್ಯಪತನಾಯಾ ಸಮವಾಯ ಕಾರಣತ್ವಂ ಗುರುತ್ವಂ". ಮೊದಲನೆಯ ಪತನಕ್ಕೆ ಯಾವುದು ಅಸಮವಾಯಕಾರಣವಾಗುತ್ತದೆಯೋ ಅದೇ ಗುರುತ್ವದ ಲಕ್ಷಣವೆಂಬುದು ಇದರ ಅರ್ಥವಾಗಿದೆ. ಗುರುತ್ವವೆಂದರೆ ಇಲ್ಲಿ 'ಭಾರ' ಎಂಬ ಅರ್ಥವಿದೆ. ಶಿಷ್ಯರ ಸಂಸಾರ ಭಾರವನ್ನು ತೊಲಗಿಸುವದೇ ಗುರುತ್ವ. ಸಂಸಾರದಲ್ಲಿ

ಬರುವ ಶಿಷ್ಯರ ಅನೇಕ ಕಷ್ಟಗಳನ್ನು ಪರಿಹರಿಸುವವನೇ ಗುರು. ಹೀಗಿರುವ ಗುರುಗಳು ದೊರೆಯುವದು ಶಿಷ್ಯರ ಪುಣ್ಯವಿಶೇಷ. ತೆಲಸಂಗದ ಶ್ರೀಗಳು ಇಂತಹ ಅಪರೂಪದ ಗುರುಗಳು. " ಗುರುಃ ಗೃಹಸ್ಥಯೇವಶಾತ್ ನ ಕದಾಚಿತ್ ಯತಿರ್ಗುರುಃ " ಎಂಬ ಉಕ್ತಿಯನ್ನು ಅರ್ಥಪೂರ್ಣವಾಗಿ ಮಾಡಿ ತೋರಿಸಿದವರೇ ತೆಲಸಂಗದ ಶ್ರೀಗಳು. ತಮ್ಮ ಔರಸ ಪುತ್ರನನ್ನು ಶಿರಹಟ್ಟಿಯ ಜಗದ್ಗುರು ಫಕೀರೇಶ್ವರ ಪೀಠಾಧಿಪತಿಗಳನ್ನಾಗಿ ದಯಪಾಲಿಸಿ ಸಮಾಜದ ಉನ್ನತಿಗಾಗಿ, ಧರ್ಮಸಮನ್ವಯಕ್ಕಾಗಿ ಶ್ರಮಿಸಿದ ತೆಲಸಂಗದ ಪಟ್ಟಾಧ್ಯಕ್ಷರು ಅಭಿನಂದನೀಯರು.

'ಪ್ರಭುಲಿಂಗ ಲೀಲೆ' ಚಾಮರಸ ಕವಿಯ ಸುಂದರಕಾವ್ಯ. ಇದು ವೀರಶೈವರ ಕೈಗನ್ನಡಿ. ಇಂಥ ಕಾವ್ಯದ ಮೇಲೆ ಮಾಡಿದ ಪ್ರವಚನವನ್ನು ಗ್ರಂಥರೂಪದಲ್ಲಿ ತರುತ್ತಿರುವದು ನಮಗೆ ಸಂತಸವನ್ನುಂಟು ಮಾಡಿದೆ. ಶ್ರೀಮಂತವಾದ ಕನ್ನಡ 'ಸಾಹಿತ್ಯದಲ್ಲಿ ಪ್ರಭುಲಿಂಗಲೀಲಾ-ಪ್ರವಚನ' ಚಿರಕಾಲ ನಿಲ್ಲುವ ಗ್ರಂಥ. ಇಂತಹ ಗ್ರಂಥವನ್ನು ಕನ್ನಡಮ್ಮನ ಕಣಜಕ್ಕಿತ್ತ ಷ. ಬ್ರ. ಶ್ರೀ ಬಸವಲಿಂಗ ಪಟ್ಟಾಧ್ಯಕ್ಷರಿಗೂ ಇದನ್ನು ಪ್ರಕಟಿಸಿದ ವಿಜಾಪುರದ ಭುವನೇಶ್ವರಿ ಪ್ರಕಾಶನದ ಸಂಚಾಲಕರಾದ ಡಾ॥ ಎಂ. ಎನ್. ವಾಲಿ ಅವರಿಗೂ ಕರ್ತೃಜಗದ್ಗುರು ಗುರುಸಿದ್ಧೇಶ್ವರನು ಆಯುರಾರೋಗ್ಯ ಭಾಗ್ಯಗಳನ್ನಿತ್ತು ಕಾಪಾಡಲೆಂದು ಹಾರೈಸುತ್ತೇವೆ.

ಓಂ ಶಾಂತಿಃ ಶಾಂತಿಃ ಶಾಂತಿಃ

### ಶ್ರೀ ಮ. ನಿ. ಪ್ರ. ಮಹಾಂತ ಮಹಾಸ್ವಾಮಿಗಳವರು ಚಿತ್ತರಗಿ ಸಂಸ್ಥಾನಮಠ ಇಲಕಲ್ಲ ಅವರ

## ಶುಭ ಸಂದೇಶ

ತೆಲಸಂಗ ಹಿರೇಮಠದ ಷ, ಬ್ರ. ಶ್ರೀ ಬಸವಲಿಂಗ ಪಟ್ಟಾಧ್ಯಕ್ಷರದು ನಡೆನುಡಿಗಳೊಂದಾದ ಸಾರ್ಥಕ ಆದರ್ಶಬದುಕು. ಶ್ರೀಗಳು ಬಾಲ್ಯದಿಂದಲೂ ಶರಣಸಿದ್ಧಾಂತ ಸಂಸ್ಕೃತಿಗಳಿಗೆ ಮಾರು ಹೋದವರು; ಯೋಗ ಶಿವಯೋಗಗಳಿಗೆ ಮನ ಸೋತವರು. ಹೊರನೋಟಕ್ಕೆ ಅವರು ಸಾಮಾನ್ಯರಂತೆ ಕಂಡರೂ, ಆಲೋಚಿಸಿದಷ್ಟೂ ಅವರು ಒಳನೋಟಕ್ಕೆ ಧೀಮಂತ ವ್ಯಕ್ತಿಗಳಾಗಿ ಸೋಜಿಗಗೊಳಿಸುತ್ತಾರೆ. ಶ್ರೀ ನಿಜಗುಣ ಶಿವಯೋಗಿಗಳ ಕೈವಲ್ಯಪದ್ಧತಿ, ಮಂಗ್ಗೆಯುಮಾಯಿದೇವನ ಅನುಭಾವಸಾಹಿತ್ಯ, ಷಡಕ್ಷರದೇವ ಕವಿಯ ರಾಜಶೇಖರ ವಿಳಾಸ ಮೊದಲಾದ ಗ್ರಂಥಗಳನ್ನು ಆಳವಾಗಿ ಅಧ್ಯಯನ ಮಾಡಿದ ಶ್ರೀಗಳು ಇವುಗಳ ಬಗ್ಗೆ ನಿರರ್ಗಳವಾಗಿ ಅಧಿಕಾರವಾಣಿಯಿಂದ ಮಾತನಾಡುವ ಪಾಂಡಿತ್ಯ ಪಡೆದಿದ್ದಾರೆ. ಅಷ್ಟಾವರಣ, ಷಟ್‌ಸ್ಥಲ, ಪಂಚಾಚಾರ ಈ ಗಹನ ವಿಷಯುಗಳನ್ನು ಕೇಳುಗರ ಹೃದಯ ಮುಟ್ಟುವಂತೆ ಸರಳ ಸುಂದರವಾಗಿ ಹೇಳುವ ವಾಗ್ಮಿಗಳಾಗಿದ್ದಾರೆ. ಜೊತೆಗೆ ಶ್ರೀ ಸಾಮಾನ್ಯನಿಗೂ ತಿಳಿಯುವಂತೆ ಶರಣಸಾಹಿತ್ಯ ಸಿದ್ಧಾಂತ ಕುರಿತು ಅನೇಕ ಲೇಖನಗಳನ್ನೂ ರಚಿಸಿ ಪ್ರತಿಭಾವಂತ ಬರಹಗಾರರೆನಿಸಿದ್ದಾರೆ; ಚಿಂತನಶೀಲ ಶರಣ ಸಾಹಿತಿಗಳಾಗಿದ್ದಾರೆ.

ಪೂಜ್ಯ ಶ್ರೀ ಬಸವಲಿಂಗ ಪಟ್ಟಾದ್ಯಕ್ಷರು ಶಿವಾನುಭವಿಗಳಾದಿರುವಂತೆ ಕಾಯಕ ಯೋಗಿಗಳೂ ಆಗಿದ್ದಾರೆ. ಜೀರ್ಣವಾಗಿದ್ದ ತೆಲಸಂಗ ಹಿರೇಮಠವು ಅವರಿಂದ ನವೀಕರಣ ಗೊಂಡು ಶಿವಾನುಭವ ಮಂಟಪದ ರಚನೆಯಾಗಿದೆ. ತೆಲಸಂಗದಂತಹ ಹಳ್ಳಿಯಲ್ಲಿಯೂ ಶಿಕ್ಷಣಪ್ರಸಾರ ಕೈಕೊಂಡು ಶಾಲಾ ಕಾಲೇಜುಗಳನ್ನು ಪ್ರಾರಂಭಿಸಿದ್ದು ಅವರ ಮಹತ್ಸಾಧನೆ.

ತೆಲಸಂಗ ಶ್ರೀಗಳು ನಮ್ಮ ಪೀಠದ ಉತ್ಕಟ ಅಭಿಮಾನಿಗಳು. ನಾವು ನಮ್ಮ ಪೀಠದಿಂದ ಕಾಲಕಾಲಕ್ಕೆ ಹಮ್ಮಿಕೊಳ್ಳುತ್ತಿರುವ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ, ಕಾರ್ಯಕ್ರಮಗಳನ್ನು ಅಪಾರವಾಗಿ ಮೆಚ್ಚಿಕೊಂಡವರು. ಇಷ್ಟೇಅಲ್ಲ, ಆ ಕಾರ್ಯಗಳ ಅನುಷ್ಠಾನದಲ್ಲಿ ನಿಷ್ಠೆಯಿಂದ ಪಾಲ್ಗೊಂಡು ಸಂತಸಪಟ್ಟವರು. ನಮ್ಮ ಪೀಠದ ಅಂಗ ಸಂಸ್ಥೆಯಾದ ಶರಣ ಸಿದ್ಧಾಂತ ವಿದ್ಯಾಪೀಠವು ಬೇರೆ ಬೇರೆ ಊರುಗಳಲ್ಲಿ ಸಂಯೋಜಿಸಿದ ವಿಶೇಷ ಶಿಬಿರಗಳಲ್ಲಿ ಬೋಧಕರಾಗಿಯೂ ಮಾರ್ಗದರ್ಶಕರಾಗಿಯೂ ಪಾಲುಗೊಂಡವರು. ಪೂಜ್ಯರು ನಮ್ಮ ಪೀಠಕ್ಕೆ ಹಾಗೂ ಶರಣ ಸಂಸ್ಕೃತಿಗೆ ಸಲ್ಲಿಸಿದ ಅಮೂಲ್ಯ ಸೇವೆ ಹಾಗೂ ಮಾರ್ಗದರ್ಶನವನ್ನು ಸ್ಮರಿಸಿ, ಸಮಾಜದ ಉನ್ನತಿಗಾಗಿ ಶ್ರಮಿಸುತ್ತ ತುಂಬು ಜೀವನ ಸಾಗಿಸಿದುದನ್ನು ಪ್ರಶಂಸಿಸಿ ನಮ್ಮ ಪೀಠದ ಅಭಿಮಾನಿ ಭಕ್ತವೃಂದವು ಇಲಕಲ್ಲಿನ ಶ್ರೀ ವಿಜಯ ಮಹಾಂತೇಶ ಕರ್ತೃ ಗದ್ದುಗೆಯ ಪಾವನ ಪರಿಸರದಲ್ಲಿ ೧೯೮೮ರಲ್ಲಿ ಜರುಗಿದ ಐತಿಹಾಸಿಕ ಸಮಾರಂಭದಲ್ಲಿ ತೆಲಸಂಗದ ಪೂಜ್ಯ ಬಸವಲಿಂಗ ಪಟ್ಟಾಧ್ಯಕ್ಷರಿಗೆ ಚಿನ್ನದ

ಉಂಗುರ ತೊಡಿಸಿ ಶಾಲುಹೊದಿಸಿ ಫಲಪುಷ್ಪಗಳನ್ನಿತ್ತು ಗೌರವಿಸಿದುದು ನಮಗೆ ಹೆಮ್ಮೆಯ ವಿಷಯವಾಗಿದೆ. ಅನಂತರ ತೆಲಸಂಗ ಹಿರೇಮಠದಲ್ಲಿ ಪೂಜ್ಯರ ಅಮೃತ ಮಹೋತ್ಸವವು 'ನ ಭೂತೋ ನ ಭವಿಷ್ಯತಿ' ಎಂಬಂತೆ ನಡೆದುದು ಹಾಗೂ 'ತೆಲಸಂಗದ ಶ್ರೀಗಂಧ' ಎಂಬ ಅವರ ಅಮೃತ ಮಹೋತ್ಸವದ ಸವಿನೆನಪಿನ ಸ್ಮರಣ ಗ್ರಂಥ ಪ್ರಕಟವಾದುದು ಮುಂದಿನ ತಲೆಮಾರಿನವರಿಗೆ ಐತಿಹಾಸಿಕ ದಾಖಲೆಯೆನಿಸಲಿವೆ.

ಸುಮಾರು ಇಪ್ಪತ್ತು ವರುಷಗಳ ಹಿಂದೆ ಗದಗಿನ ಜಗದ್ಗುರು ತೋಂಟದಾರ್ಯ ಮಠದಲ್ಲಿ ಶ್ರೀಗಳು ಮಾಡಿದ 'ಪ್ರಭುಲಿಂಗಲೀಲೆ' ಕುರಿತ ಪ್ರವಚನವನ್ನು ಇದೀಗ ಬರೆದು ಗ್ರಂಥರೂಪವಾಗಿ ಪ್ರಕಟಿಸುತ್ತಿರುವ ಸಂಗತಿ ತಿಳಿದು ಅತ್ಯಾನಂದವಾಗಿದೆ. ಅವರ ಈ ಗ್ರಂಥವು ಸಹೃದಯರ ಮನವನ್ನು ತಣಿಸುವದರಲ್ಲಿ ಸಂದೇಹವಿಲ್ಲ. ಇಳಿವಯಸಲ್ಲಿಯೂ ಅವರ ಉತ್ಸಾಹ ಕುಂಠಿತಗೊಂಡಿಲ್ಲ. ಅವರಿಗೆ ಬೇಸರವೆಂಬುದಿಲ್ಲ. ಇಂಥ ಮೌಲಿಕ ಕೃತಿಯನ್ನು ಬರೆದುಕೊಟ್ಟ ಲೇಖಕರು ಹಾಗೂ ಅದನ್ನು ತಮ್ಮ ಭುವನೇಶ್ವರಿ ಪ್ರಕಾಶನ ದಿಂದ ಪ್ರಕಟಿಸಲು ಶ್ರಮಿಸಿದ ಈ ಪ್ರಕಾಶನದ ಸಂಚಾಲಕರಾದ ಡಾ|| ಎಂ. ಎನ್. ವಾಲಿ ಅವರು ಅಭಿನಂದನಾರ್ಹರು. ಅವರಿಗೆ ನಮ್ಮ ಪೀಠದ ಲಿಂಗೈಕ್ಯ ವಿಜಯ ಮಹಾಂತೇಶ ಯತಿವರರು ಸನ್ಮಂಗಲವನ್ನುಂಟು ಮಾಡಲೆಂದು ಹಾರೈಸುತ್ತೇವೆ.

ಅವ್ಯಾಹತವಾಗಿ ತಿರುಗುವ ಕಾಲಚಕ್ರವು ಮರಳಿ ಮರಳಿ ವಾರ, ಪಕ್ಷ, ಮಾಸ, ಸಂವತ್ಸರಗಳೆಂಬ ಸಾಂಕೇತಿಕ ಪದಪುಂಜವನ್ನು ಹೊಂದಿ ತಿರುಗುವದಷ್ಟೇ! ತೆಲಸಂಗದ ಶ್ರೀಗಳು ಈ ನಿಯಮಕ್ಕೆ ಅತೀತರಾಗಿ ಶತಸಂವತ್ಸರಗಳಾಚೆ ಬಾಳಿಬದುಕಲೆಂದೂ ಅವರಿಂದ ನಾಡು ಇನ್ನಷ್ಟು ಪ್ರಯೋಜನ ಪಡೆಯಲೆಂದೂ ಈಶನಲ್ಲಿ ಪ್ರಾರ್ಥಿಸುತ್ತೇವೆ.

ಶ್ರೀ ಮ. ನಿ. ಪ್ರ. ಪಂಚಮ ಶಿವಲಿಂಗೇಶ್ವರ ಸ್ವಾಮಿಗಳು ಸಿದ್ಧಸಂಸ್ಥಾನಮಠ
ನಿಡಸೋಸಿ ಜಿಲ್ಲಾ–ಬೆಳಗಾವಿ ಅವರ

## ಶುಭ ಹಾರೈಕೆ

'ಬಹುರತ್ನಾ ವಸುಂಧರಾ' ಎಂಬುದೊಂದು ಆರ್ಯೋಕ್ತಿ. ಇದನ್ನೇ ಸ್ವಲ್ಪ ಮಾರ್ಪಡಿಸಿ 'ಬಹುರತ್ನಾ ಶಿವಯೋಗಮಂದಿರಾ' ಎಂದು ಹೇಳುವದು ಉಚಿತವೆನಿಸುತ್ತದೆ. ಶಿವಯೋಗ ಮಂದಿರದ ಕಾರಣಿಕ ಪುರುಷ ಲಿಂಗೈಕ್ಯ ಹಾನಗಲ್ಲ ಕುಮಾರ ಮಹಾಸ್ವಾಮಿಗಳವರು ವೀರಶೈವ ಸಮಾಜಕ್ಕೆ ದಯಪಾಲಿಸಿದ ಒಂದು ದಿವ್ಯ ಕೊಡುಗೆಯೇ ತೆಲಸಂಗದ ಪಟ್ಟಾಧ್ಯಕ್ಷರು.

ವೀರಶೈವ ಸಿದ್ಧಾಂತದಲ್ಲಿ ಗುರು ತತ್ವದೊಡನೆ ಜಂಗಮ ತತ್ವವನ್ನೂ ಅಂಗೀಕರಿಸಲಾಗಿದೆ. ಇದು ಈ ಮತದ ವೈಶಿಷ್ಟ್ಯವೆನಿಸಿದೆ. ಇವೆರಡೂ ತತ್ವಗಳು ಒಂದಕ್ಕೊಂದು ಪೂರಕವಾಗಿವೆ. ಗುರುಗಳಲ್ಲಿ ಸಾಭಾರಿ ಮತ್ತು ನಿರಾಭಾರಿ ಎಂದು ಎರಡು ವಿಧ. ಇವರಲ್ಲಿ ಸಾಭಾರಿ ಗುರುಪಟ್ಟವನ್ನು ಹೊಂದಿದ ತೆಲಸಂಗದ ಬಸವಲಿಂಗಪಟ್ಟಾಧ್ಯಕ್ಷರು ನಮ್ಮ ನಾಡಿನ ಪುಣ್ಯಪುರುಷರು. ಬಾಗಲಕೋಟಿ, ನಿಡಗುಂದಿ ಮೊದಲಾದ ಕಡೆಗಳಲ್ಲಿ ಅವರು ನೀಡಿದ ಪ್ರವಚನಗಳು ಗಂಗಾಜಲದಂತೆ ಹರಿದು ಜನಮನವನ್ನು ಸೂರೆಗೊಂಡಿದ್ದುದು ಒಂದು ದಾಖಲೆಯಾಗಿದೆ. ಅವರ ವಾಕ್‌ಚಾತುರ್ಯದಷ್ಟೇ ಬರವಣಿಗೆಯ ಶೈಲಿಯೂ ಆಕರ್ಷಕವಾದುದು. ಶ್ರೀಗಳಿಂದ ತೆಲಸಂಗದಲ್ಲಿ ನಡೆಸುತ್ತಿರುವ ವಿದ್ಯಾಸಂಸ್ಥೆಗಳು ಅವರ ಶೈಕ್ಷಣಿಕ ಕಳಕಳಿಗೆ ಸಾಕ್ಷಿಯಾಗಿವೆ. ಹೀಗೆ ಪ್ರವಚನ, ಸಾಹಿತ್ಯರಚನೆ, ಶಿಕ್ಷಣ ಪ್ರಸಾರ, ಸಾಮಾಜಿಕ ಕಾರ್ಯಗಳಿಂದಾಗಿ ಅವರು ನಾಡಿನ ನಂದಾದೀಪವಾಗಿದ್ದಾರೆ.

ಶ್ರೀ ಬಸವಲಿಂಗ ಪಟ್ಟಾಧ್ಯಕ್ಷರು ತಮ್ಮ ಹೃದಯ ಹೊಲವನುತ್ತು ಅಧ್ಯಯನವೆಂಬ ಸತ್ವಯುತ ಬಿತ್ತು ಬಿತ್ತಿ ನಿಷ್ಠೆಯೆಂಬ ನೀರನೆರೆದು ಮನವೆಂಬ ಗೊಬ್ಬರವ ಹಾಕಿ ಮಹಾನುಭೂತಿಯೆಂಬ ಬೆಡಗಿನ ಬೆಳೆಯ ಬೆಳೆದರು. ಬುದ್ಧಿಭಾವಗಳ ಬರವ ನೀಗಿದರು. 'ಶ್ರೀ ಗುರುವು ಭಕುತರ ಚಿಂತಿತಾರ್ಥಗಳನ್ನು ಈಯುವ ಚಿಂತಾಮಣಿಯು, ಪುರುಷಾರ್ಥಗಳನ್ನು ದಯಪಾಲಿಸುವ ಪರುಷದ ಕಣಿಯು, ಸ್ವಸ್ವರೂಪವನ್ನು ಕಾಣಿಸುವ ಮುಕುರ ಮಣಿಯು' ಎಂದು ಮಹಾನುಭಾವರೊಬ್ಬರು ಗುರುವಿನ ಹಿರಿಮೆ–ಗರಿಮೆಗಳನ್ನು ಕೊಂಡಾಡಿದ್ದಾರೆ. ಈ ಮಾತುಗಳು ತೆಲಸಂಗದ ಗುರುಗಳಿಗೆ ಯಥಾವತ್ತಾಗಿ ಅನ್ವಯಿಸಬಹುದಾಗಿದೆ.

ಕ್ರಿ. ಶ. ೧೯೭೮ ರಲ್ಲಿ ಗದಗಿನ ತೋಂಟದಾರ್ಯ ಸಂಸ್ಥಾನಮಠದಲ್ಲಿ ತೆಲಸಂಗ ಶ್ರೀಗಳು ಮಾಡಿದ ಪ್ರಭುಲಿಂಗಲೀಲಾ ಪ್ರವಚನವು ಅಸಂಖ್ಯ ಭಕ್ತರನ್ನು ತೃಪ್ತಿಪಡಿಸಿತು. ಅದನ್ನು ಬರೆದು ಗ್ರಂಥ ರೂಪದಲ್ಲಿ ಪ್ರಕಟಿಸುವ ಕಾರ್ಯವನ್ನು ಶ್ರೀಗಳು ಕೈಕೊಂಡುದನ್ನು ಕಂಡು ಆತ್ಮಾನಂದವಾಗಿದೆ. ಈ ಗ್ರಂಥವು ಸಹೃದಯರ ಮನವ ತಣಿಸಲಿ ಎಂದು ಹಾರೈಸಲಾಗಿದೆ.

# ಪರಿವಿಡಿ


| | | |
|---|---|---|
| ಪ್ರಾಸ್ತಾವಿಕ | | ಪುಟ ೧ ರಿಂದ ೧೨ |
| ೧ ನೆಯ ಗತಿ | ಮಂಗಲಾಚರಣ | " ೧೩ ರಿಂದ ೩೧ |
| ೨ ನೆಯ ಗತಿ | ಪಾರ್ವತಿ-ಪರಮೇಶ್ವರ ಸಂವಾದ | " ೩೨ ರಿಂದ ೫೧ |
| ೩ ನೆಯ ಗತಿ | ಮಾಯೆ ಹುಟ್ಟಿದ್ದು | " ೫೨ ರಿಂದ ೬೪ |
| ೪ ನೆಯ ಗತಿ<br>೫ ನೆಯ ಗತಿ | ಮಾಯೆ ಮಧುಕನಾಥನ ಪೂಜಿಸಿದುದು | " ೬೫ ರಿಂದ ೭೦ |
| ೬ ನೆಯ ಗತಿ | ವಿಮಳೆ ಬಂದುದು | " ೭೧ ರಿಂದ ೭೭ |
| ೭ ನೆಯ ಗತಿ | ಪ್ರಭುಮಾಯೆಗೆ ಸಿಕ್ಕದೆ ಹೋದುದು | " ೭೮ ರಿಂದ ೧೦೬ |
| ೮ ನೆಯ ಗತಿ | ಪಾಸ್ತಾವಿಕ, ವಿಷಯಃ ಪ್ರಾರಂಭ | " ೧೦೭ ರಿಂದ ೧೧೩ |
| ೯ ನೆಯ ಗತಿ | ಬಸವಾದಿ ಪ್ರಮಥರು ಧರೆಗಿಳಿದುದು | " ೧೧೪ ರಿಂದ ೧೪೬ |
| ೧೦ ನೆಯ ಗತಿ | ಮಹಾದೇವಿಯಕ್ಕನ ಚರಿತ್ರೆ | " ೧೪೭ ರಿಂದ ೧೬೩ |
| ೧೧ ನೆಯ ಗತಿ | ಗೊಗ್ಗಯ್ಯನ ವೃತ್ತಾಂತ | " ೧೬೪ ರಿಂದ ೧೮೯ |
| ೧೨ ನೆಯ ಗತಿ | ಮುಕ್ತಾಯಕ್ಕಗಳ ವೃತ್ತಾಂತ | " ೧೯೦ ರಿಂದ ೨೨೧ |
| ೧೩ ನೆಯ ಗತಿ | ಸಿದ್ಧರಾಮ ವೃತ್ತಾಂತ | " ೨೨೨ ರಿಂದ ೨೬೮ |
| ೧೪ ನೆಯ ಗತಿ | ಪ್ರಭುದೇವರು ಕಲ್ಯಾಣಕ್ಕೆ ಬಂದುದು | " ೨೬೯ ರಿಂದ ೨೮೭ |
| ೧೫ ನೆಯ ಗತಿ | ಮರುಳ ಶಂಕರ ದೇವರು | " ೨೮೮ ರಿಂರ ೩೨೨ |
| ೧೬ ನೆಯ ಗತಿ | ಇಷ್ಟಲಿಂಗದ ವಿವರಣೆ | " ೩೨೩ ರಿಂದ ೩೪೦ |
| ೧೭ ನೆಯ ಗತಿ | ಅನುಭವ ಮಂಟಪದಲ್ಲಿ ಮಹಾದೇವಿಯಕ್ಕ | " ೩೪೧ ರಿಂದ ೩೬೧ |
| ೧೮ ನೆಯ ಗತಿ | ಸಾಧಕಾಂಗ | " ೩೬೨ ರಿಂದ ೩೭೩ |
| ೧೯ ನೆಯ ಗತಿ | ಗೋರಕ್ಷ ವೃತ್ತಾಂತ | " ೩೭೪ ರಿಂದ ೩೭೯ |
| ೨೦ ನೆಯ ಗತಿ | ಮುನಿಗಳಿಗೆ ಬೋಧನೆ | " ೩೮೦ ರಿಂದ ೩೮೯ |
| ೨೧ ನೆಯ ಗತಿ | ಶ್ರೀ ಬಸವೇಶ್ವರರು ಶೂನ್ಯಸಿಂಹಾಸನವನ್ನು ರಚಿಸಿದುದು | " ೩೯೦ ರಿಂದ ೩೯೨ |
| ೨೨ ನೆಯ ಗತಿ | ಪ್ರಭುದೇವರು ಶೂನ್ಯಸಿಂಹಾಸನ ಏರಿದುದು | " ೩೯೩ ರಿಂದ ೩೯೪ |
| ೨೩ ನೆಯ ಗತಿ | ಪ್ರಭುದೇವರು ಆರೋಗಣೆ ಮಾಡಿದುದು | " ೩೯೫ ರಿಂದ ೪೦೧ |
| ೨೪ ನೆಯ ಗತಿ | ಮನೋಲಯ | " ೪೦೨ ರಿಂದ ೪೦೭ |
| ೨೫ ನೆಯ ಗತಿ | ಪರಮೇಶ್ವರನು ಗಿರಿಜೆಗೆ ಬೋಧಿಸಿದುದು | " ೪೦೮ ರಿಂದ ೪೧೦ |

॥ ಓಂ ॥

# ಪ್ರಭುಲಿಂಗಲೀಲಾ ಪ್ರವಚನ

**ಪ್ರಾಸ್ತಾವಿಕ :**

ಕ್ರಿಸ್ತಶಕ ಒಂದರಿಂದ ಇಂದಿನ ಇಪ್ಪತ್ತನೆಯ ಶತಮಾನದವರೆಗಿನ ಕಾಲಾವಧಿಯಲ್ಲಿ ೧೨ ನೆಯ ಶತಮಾನದಲ್ಲಾದ ಕ್ರಾಂತಿಯು ಅತ್ಯದ್ಭುತವಾದುದು ; ಅವರ್ಣನೀಯ ವಾದುದು. ಹುಟ್ಟಿನಿಂದಲೇ ಮೇಲು ಕೀಳು ಎಂಬ ಜಾತಿವಾದದ ಉಚ್ಚಾಟನ. ಶ್ರೇಷ್ಠ ಕನಿಷ್ಠ ಗುಣಗಳಿಂದಲೇ ಉಚ್ಚ ನೀಚರೆಂಬ ವಿಚಾರಮಂಡನ, ವರ್ಣಾಶ್ರಮಖಂಡನ, ಸತ್ತ್ವಯುತ ತತ್ತ್ವಗಳ ಒಳನುಗ್ಗಿ ಅವುಗಳ ಅಂತಸ್ಸತ್ತ್ವವನ್ನೇ ಕೀಟದಂತೆ ಕತ್ತರಿಸುವ ಮೂಢನಂಬಿಕೆಗಳ ನಿರ್ಮೂಲನ, ಪುರುಷರಂತೆ ಸ್ತ್ರೀಯರಿಗೂ ಧರ್ಮದಲ್ಲಿ ಸಮಾನಾಧಿಕಾರ, ಅಸ್ಪೃಶ್ಯೋದ್ಧಾರ ಹೀಗೆ ಹೇಳತೀರದಷ್ಟು ಸಾಮಾಜಿಕ, ಧಾರ್ಮಿಕ, ಆರ್ಥಿಕ, ಕ್ರಾಂತಿಕಾರೀ ಸುಧಾರಣೆಗಳನ್ನೆಸಗಿ ಸಮಾಜವನ್ನು ಸರ್ವಾಂಗ ಸುಂದರವನ್ನಾಗಿ ಮಾಡಿದ ಶತಮಾನವದು. ಶತಶತಮಾನಗಳಿಂದಲೂ ಗತಿಗಾಣದೆ ನಿರ್ಗತಿಕರಾಗಿ ಬಾಯ್ಬಿಡುವ ಪತಿತರನ್ನು ಉದ್ಧರಿಸಿದ ಶತಮಾನವದು. ವೀರಶೈವನಿರ್ಣಯ ಪರಮಾವತಾರಿ, ಭಕ್ತಜನ ಭಾಗ್ಯ, ಜಗದಾದಿದೇಶಿಕ., ಪುರಾತನಪುಂಗವ, ಪತಿತೋದ್ಧಾರಕರೆನಿಸಿದ ಶ್ರೀ ಬಸವೇಶ್ವರರು ಕ್ರಾಂತಿಯ ಕಹಳೆಯನ್ನೂದಿ ಸುಪ್ತಸಮಾಜದಲ್ಲಿಯ ಗುಪ್ತಶಕ್ತಿಯನ್ನು ಸಿಡಿಲ್ನುಡಿಗಳಿಂದ ಬಡಿದೆಬ್ಬಿಸಿ ಜಾಗ್ರುತಗೊಳಿಸಿದ ಶತಮಾನವದು. ಹುಟ್ಟು ಹಾಕಿ ಹೊಳೆ ದಾಟಿಸುವ ಅಂಬಿಗರ ಚೌಡಯ್ಯ, ಬಟ್ಟೆದೊಳೆದು ಮಡಿಮಾಡುವ ಮಾಚಯ್ಯ, ನಾಟ್ಯವಾಡಿ ಶರಣರ ಮೆಚ್ಚಿಸುವ ಗಟ್ಟಿವಾಳಯ್ಯ. ದನಕಾಯುವ ತುರುಗಾಹಿ ರಾಮಣ್ಣ, ಮದ್ದು ಮಂತ್ರಗಳಿಂದ ಜನರ ಬೇನೆ ಬೇಸರಿಕೆ ಕಳೆವ ವೈದ್ಯಸಂಗಣ್ಣ, ಹಗ್ಗ ಹೊಸೆದು ಕಣ್ಣಿಗಳನ್ನು ಮಾರುವ ನುಲಿಯ ಚಂದಯ್ಯ, ಕುಟ್ಟಿ ಬೀಸಿ ಹೊಟ್ಟೆ ಹೊರಕೊಳ್ಳುವ ಕೊಟ್ಟಣದ ಸೋಮವ್ವೆ, ನೂಲು ತೆಗೆದು ಉದರನಿರ್ವಹಣೆ ಮಾಡುವ ಕದಿರೆಯ ರೆಮ್ಮವ್ವೆ, ಹಡಪದಪ್ಪಣ್ಣನ ಸತಿ ಲಿಂಗಮ್ಮ ಮುಂತಾದ ಸಾಮಾನ್ಯ ಜನರೂ ಸಾಮಾನ್ಯ ಮಹಿಳೆಯರೂ, ಅಸಾಮಾನ್ಯ ಶರಣ–ಶರಣೆಯರಾಗಿ, ಅಸಾಮಾನ್ಯ ವಚನಕಾರ–ವಚನಕಾರ್ತಿಯರಾಗಿ ಮೆರೆದ ಶತಮಾನವದು. ಅಂತೆಯೇ ಸೋಮನಾಥ, ಭೀಮಕವಿ, ಹರಿಹರ ಮುಂತಾದ ಕವಿಪುಂಗವರೂ, ಅನುಭಾವಿಗಳೂ "ಬಸವಂಭಕ್ತಿಗೆ ಮೂಲಂ। ಬಸವಂ ಕಾಲಂಗೆ ಕಾಲನನುಪಮಶೀಲಂ। ಬಸವಂ ಜಂಗಮಲೋಲಂ ಬಸವ ರಕ್ಷಿಪ್ಪುದೆನ್ನ ಸಂಗನಬಸವ।'' "ಎಲೆ ಬಸವ, ಬಸವಣ್ಣ, ಬಸವಯ್ಯ,ಬಸವರಸ, ಬಸವರಾಜ ... ... ಈಶನ ಮೀಸಲಪ್ಪ ಭಕ್ತ ನಿನಗೆಣೆಯಿಲ್ಲ, ಪಡಿಯಿಲ್ಲ, ಪಾಸಟಿಯಾವಂ ......'' "ಸಂಗನಬಸವಣ್ಣ ಬಂದು ಕಲ್ಯಾಣದಲ್ಲಿ ಒಂದು ಮನೆಯು ಕಟ್ಟಿದರೆ ಮರ್ತ್ಯಲೋಕವೆಲ್ಲವೂ ಭಕ್ತಿ ಸಾಮ್ರಾಜ್ಯವಾಯಿತ್ತು. ಆ ಮನೆಗೆ ತಲೆಬಾಗಿ ಹೊಕ್ಕವರೆಲ್ಲರೂ ನಿಜಲಿಂಗಪದಮಂ ಪಡೆದರು'' ಎಂದು ಮುಂತಾಗಿ ಹಾಡಿ ಕೊಂಡಾಡಿರುವರು.

ವಿಜಯಯಾತ್ರೆಗೆ ಹೊರಟ ವೀರಸೇನಾಧಿಪತಿಯ ಹಿಂದೆ ಶಸಸ್ತ್ರ ಸೈನಿಕರು ಸನ್ನದ್ಧರಾಗಿರುವಂತೆ ಪ್ರಚಂಡ ಧರ್ಮಕ್ರಾಂತಿಯನ್ನು ಮಾಡಲೆಳಸಿದ ಶ್ರೀ ಬಸವೇಶ್ವರರ ಹಿಂಬದಿಯಲ್ಲಿ ಬೆಂಬಲಿಗರಾಗಿ ಅನಂತ ಮಹಾನುಭಾವರು ರಾರಾಜಿಸಿದರು. ದ್ವಿತೀಯ ಶಂಭು ಎಂದು ಬಿರುದಾಂಕಿತರಾದ ಶ್ರೀ ಬಸವೇಶ್ವರರು ನಕ್ಷತ್ರ ಮಂಡಲದಲ್ಲಿಯ ಚಂದ್ರಬಿಂಬ

ದಂತೆ ಒಪ್ಪುತ್ತಿದ್ದರಲ್ಲದೆ ಎಲ್ಲ ಶರಣರಿಗೆ [illegible] ತೋರಿಸುವ ಹೋಕಾಯಂತ್ರ[illegible] ದಾರಿತೋರುತ್ತ ಮಾಯಾಕೋಲಾಹಲರೆನಿಸಿದ [illegible]ದೇವರು ಚಿಚ್ಛಕ್ತಿಯಾಗಿ, ಪ್ರೇ[illegible] ಶಕ್ತಿಯಹಾಗಿ, ಸ್ಫೂರ್ತಿಯ ಸೆಲೆಯಾಗಿ, ನಿಲ್ಲಲು [illegible]ಯಾಗಿ ಹಿಂಬದಿಯಲ್ಲಿ ಒಪ್ಪಿದರು.

ವೀರವಿರಾಗಿ ಪ್ರಭುವಿನ ಎತ್ತರ ಬಿತ್ತರ[illegible] ಅಳೆಯುವ ಅಳತೆಗೋಲು [illegible] ದುದಕ್ಕೆ "ಗಗನಂ ಗಗನಾಕಾರಂ ಸಾಗರಃ ಸಾಗರೋಪಮಂ|| ರಾಮರಾವಣಯೋಯು[illegible] ದ್ಧಂ ರಾಮರಾವಣಯೋರಿವ " ಎಂಬ ಉಕ್ತಿಯಂತೆ ಪ್ರಭುವಿನ ವ್ಯಕ್ತಿತ್ವವು ಪ್ರಭುವಿ ವ್ಯಕ್ತಿತ್ವದಂತಹದೇ ಎಂದು ಹೇಳಬೇಕಾಗುತ್ತದೆ. ಪ್ರಭು ಎಂದರೆ ರಾಜ, ಅಧಿಪ[illegible] ಒಡೆಯ, ಯಜಮಾನ ಎಂದು ಅರ್ಥ. ಇಲ್ಲಿ ಅಧಿಪತಿಯೆಂದರೆ ಚತುರಂಗಬಲ, ಅಷ್ಟೈ ಶ್ವರ್ಯ, ಶ್ವೇತಛತ್ರ, ಚಾಮರ, ಸುವರ್ಣದಂಡ, ಕನಕಭಂಡಾರ, ರತ್ನಭಂಡಾ[illegible] ನಿರಂಕುಶ ಸರ್ವಾಧಿಕಾರ ಇವುಗಳಿಂದ ಕೂಡಿದ ಸಾಮ್ರಾಜ್ಯಕ್ಕೆ ಅಥವಾ ಬ್ರಹ್ಮಾಂಡಕ್ಕೆ ಅಧಿಪತಿಯಲ್ಲ, ಇಲ್ಲಿ ಪಿಂಡಾಂಡಕ್ಕೆ ಅಧಿಪತಿಯು ಎಂದರ್ಥ.

ದೇಹವೆಂಬ ಅರಮನೆಯಲ್ಲಿ ಮಹಾಘನಲಿಂಗವೆಂಬ ರಾಜನು ಮನವೆಂಬ ಸಿಂಹಾ ನದ ಮೇಲೆ ಮುಹೂರ್ತಮಾಡಿ ಅಂತಃಕರಣಗಳೆಂಬ ಪರಿಚಾರಕರ ಕೈಯಿಂದ ಪಂಚೇಂದ್ರಿ ಯಂಗಳೆಂಬ ಪರಿವಾಣದಿಂದ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಪದಾರ್ಥಗಳನ್ನು ಎಡೆಮಾಡಿಸಿಕೊಂಡು ಸವಿಯುತ್ತಾ, ಆನಂದವೇ ಮೂರ್ತಿಯಾಗಿರ್ದ ಕಾಪಾ ಉರಿಲಿಂ ಪೆದ್ದಿಪ್ರಿಯವಿಶ್ವೇಶ್ವರ ಎಂಬುದು ನಿತ್ಯಸತ್ಯವಿಚಾರವಾಗಿದೆ. ದೇಹವೆಂಬುದು ಮರವೆಯ ಮನೆಯಲ್ಲ, ಅದು ಜೀವಾತ್ಮನನ್ನು ಬಂಧಿಸಿದ ಸೆರೆಮನೆಯೂ ಅಲ್ಲ. ಅರಿವಿನ ಮ[illegible] ಅಂದರೆ ಜ್ಞಾನಮಂಟಪ ಅಂದರೆ ಹುಡುಕುವ ಮನೆ. ಇಷ್ಟೇ ಅಲ್ಲ ನಿತ್ಯನೂತನ ವಿವಿ[illegible] ಸಂಶೋಧನೆಗಳನ್ನು ಮಾಡುವ ಮನೆ. ಈ ದೇಹವು ಮಹಾಲಿಂಗ ಸ್ವರೂಪನಾದ ಆ[illegible] ನೆಂಬ ಅರಸನು ವಾಸಿಸುವ ಅರಮನೆ. ಈ ಅರಸನು ಮುಹೂರ್ತ ಮಾಡುವ ಸಿಂಹಾಸ[illegible] ವೆಂದರೆ ಸುಮನ ಸಿಂಹಾಸನ. ಈ ಅರಸನು ಯಾವಾಗಲೂ ತನ್ನ ಸನಿಹದಲ್ಲಿ ಮನ, ಬುದ್ಧಿ ಚಿತ್ತಾದಿ ನಾಲ್ವರು ಸೇವಕರನ್ನು ಇಟ್ಟುಕೊಂಡು ನೇತ್ರ ಶ್ರೋತ್ರಾದಿ ಪಂಚೇಂದ್ರಿಯಂಗ ಳೆಂಬ ಬಟ್ಟಲಲ್ಲಿ ರೂಪಶಬ್ದಾದಿ ವಿಷಯಗಳೆಂಬ ಪದಾರ್ಥಗಳನ್ನು ಎಡೆಮಾಡಿಸಿಕೊಂಡು ಸವಿಯುತ್ತ ಆನಂದ ಪಡುತ್ತಿರುವನು ಎಂದು ಷಣ್ಮುಖ ಸ್ವಾಮಿಗಳು ಹೇಳಿದರೆ ಷಟ್ ಸ್ಥಲ ಚಕ್ರವರ್ತಿ ಶ್ರೀ ಚನ್ನಬಸವಣ್ಣನವರು ''ಕಾಯಪುರವೆಂಬ ಪಟ್ಟಣದೊಳಗೆ ಮನ ವೆಂಬರಸು, ತ್ರಿಕರಣವೆಂಬ ಪ್ರಧಾನಿ, ವಶೀಕರಣವೆಂಬ ಶಾನುಭೋಗ; ಆಶೆರೋಷವೆಂಬ ದ್ವಾರಪಾಲಕರು ತ್ರಿಮಲವೆಂಬ ಕೋಟೆ, ಹಸಿವು ತೃಷೆವಿಷಯಾದಿಗಳ ಬೊಬ್ಬೆಯುಬ್ಬರ ಅಷ್ಟಮದವೆಂಬ ಎಂಟಾನೆ — ...., ದುರ್ಮದವೆಂಬ ರಾಜೇಂದ್ರನು ನಿತ್ಯತ್ವದಿಂದ ರಾಜ್ಯಂಗೈಯುತ್ತಿರಲು ಶೂನ್ಯವೆಂಬ ಪಟ್ಟಣದೊಳಗೆ ಅನಾಮಯನೆಂಬ ಶರಣಸ್ವತಂತ ಲೀಲೆಯಿಂದೆಚ್ಚತ್ತು ನೋಡಿಗಹಗಹಿಸಿ ನಗುತ್ತಿಹನು'' ಎಂಬ ವಚನದಲ್ಲಿ ಈ ದೇಹವನ್ನು ಒಂದು ಪಟ್ಟಣಕ್ಕೆ ಹೋಲಿಸಿ ಪುರದ ಅರಸನು, ಪ್ರಧಾನಿ, ಶಾನುಭೋಗ, ಅಂಗ ಸಂರಕ್ಷಕರು, ಕೋಟೆ, ವಿರೋಧಿಪಕ್ಷ, ಚತುರಂಗಬಲ ಮುಂತಾದುದೆಲ್ಲವನ್ನು ರೂಪಕ ಮಾಡಿ ಹೇಳಿರುವರು.

ವಿಸ್ತೀರ್ಣವಾದ ವಿಶಾಲವಾದ ಭೌತಿಕ-ಬ್ರಹ್ಮಾಂಡದ ಸಂಕ್ಷಿಪ್ತರೂಪವೇ ಈ

ಪಿಂಡಾಂಡವಾಗಿದೆ. ದೃಗ್ಗೋಚರವಾದೀ ಸೃಷ್ಟಿಯಲ್ಲಿ ಅಂದರೆ ಬ್ರಹ್ಮಾಂಡದಲ್ಲಿ ಯಾವ ಯಾವುದು ಇದೆಯೋ ಅದೆಲ್ಲವೂ ಪಿಂಡಾಂಡದಲ್ಲಿ ಇದ್ದೇ ಇದೆ ಹಾಗೂ ಪಿಂಡಾಂಡ ದಲ್ಲಿದ್ದುದು ಬ್ರಹ್ಮಾಂಡದಲ್ಲಿದೆ.

ಪಿಂಡಾಂಡವೆಂಬ ಪಟ್ಟಣದಲ್ಲಿಯ ದಟ್ಟಣೆಯನ್ನು ಎಷ್ಟು ಹೇಳಿದರೂ ತೀರದು. ಐದು ವಿಧವಾದ ಇಂದ್ರಿಯಗಳಿಗೆ ಆಗುವ ರೂಪ ರಸಾದಿಗಳ ಹಸಿವು ಮತ್ತು ತೃಷೆಗಳ ಗದ್ದಲ, ಕಾಮಕ್ರೋಧಾದಿ ಷಡ್ರಿಪುಗಳ, ತನುವ್ಯಸನ ಮುಂತಾದ ಸಪ್ತವ್ಯಸನಗಳ, ಜಾತಿ.ಭ್ರಮೆ ಮೊದಲಾದ ಷಡ್ಭ್ರಮೆಗಳ ರೂಪಮದ, ಯೌವನ ಮದ ಮೊದಲಾದ ಅಷ್ಟಮದಗಳ, ಆಧ್ಯಾತ್ಮಿಕಾದಿತಾಪತ್ರಯಗಳ, ಪ್ರಾಣಾಪಾನಾದಿಪಂಚ ಪ್ರಾಣವಾಯುಗಳ ಗದ್ದಲವೇ ಗದ್ದಲ. ಲೆಕ್ಕಮಾಡಲಿಕ್ಕೆ ಬಾರದಷ್ಟು ಸಾಧಕ ಬಾಧಕ ಅಂತಸ್ಸಾಮಗ್ರಿಗಳು ನಾ, ನೀ. ನೀ, ನಾ ಎಂದು ಪಿಂಡಾಂಡದ ಒಳಗೆ ತುಂಬಿತುಳುಕುತ್ತಿರುವವು.

ಶ್ರೀಮನ್ನಿಜಗುಣರು ಶಂಭುಲಿಂಗನ ಬೆಟ್ಟದೊಳಗೆ ಅನುಷ್ಠಾನಗೈಯುವ ಸಮಯದಲ್ಲಿ ತಮ್ಮ ಆರಾಧ್ಯದೇವತೆಯಾದ ಶಂಭುಲಿಂಗನ ಸಮ್ಮುಖದಲ್ಲಿ ಕುಳಿತು ಪಿಂಡಾಂಡ ದಲ್ಲಿ ಬಗೆಬಗೆಯಿಂದ ತೋರಿ ಬಗೆಗೆಡಿಸುವ ಬಗೆಯನ್ನು ಅಂದರೆ ಹಸಿವುತೃಷೆಗಳ ಬಾಧೆ, ವ್ಯಸನವೇಳರ ಬಾಧೆ, ಕುಸುಮಬಾಣನ ಬಾಧೆ, ದೆಸೆಗೆಡಿಸುವರಿಕುಲದ ಬಾದೆ, ಎಂದು ಮುಂತಾಗಿ ಬಾಧೆಗಳ ಸುರುಳಿಯನ್ನೇ ಬಿಚ್ಚುತ್ತಿರಲು ಆರಾಧ್ಯ ದೇವತೆಯಾದ ಶಂಭು ಲಿಂಗನು- ನಿಜಗುಣ- ನಿನಗೆ ಎನಿತುಕಷ್ಟಗಳಿವೆಯೋ ಅನಿತೆಲ್ಲವನ್ನು ಲೆಕ್ಕಮಾಡಿ ಹೇಳೆನ್ನಲು '' ಬೇರೆಬೇರಿನ್ನು ಮೈದೋರಿಕಾಡುವ ಬಾಧೆನೂರುಸಾಸಿರಕೋಟಿ ಉಂಟು ಶಂಕರ । ಮೀರಲರಿಪವನೆನಗೆ ನೀನೆ ತೊಲಗಿಸಿ ಸುಖದ ಸೂರೆಗೊಡು ಗುರುಶಂಭುಲಿಂಗ ಶಂಕರ॥ '' ಎಂದು ಹೇಳಿದರಂತೆ. ಮಥಿತಾರ್ಥವಿಷ್ಟೇ !, ಅಸಮಪರಾಕ್ರಮಿಯಾದ ಕುಸುಮಶರನನ್ನು, ದಿಗ್ಭ್ರಮೆಗೊಳಿಸುವ ಷಡ್ಭ್ರಮೆಗಳನ್ನು ಕಷ್ಟಪರಂಪರೆಯನ್ನುಂಟು ಮಾಡುವ ಅಷ್ಟಮದಗಳನ್ನು ಮೆಟ್ಟಿನಿಂದು ಗುರಿಮುಟ್ಟುವದು ದುಸ್ತರ. ಬ್ರಹ್ಮಾಂಡದಲ್ಲಿ ಮೈಮೇಲೆ ಏರೇರಿ ಬರುವ ವೀರಾಧಿವೀರರನ್ನು ಗಗನಕ್ಕೆ ತೂರಿ ಒಗೆಯಬಹುದು. ಅಷ್ಟೇಏಕೆ ಅವರಿಗೆ ಗೋರಿಯನ್ನೇ ತೋಡಿ ಹುಗಿಯಬಹುದು. ಆದರೆ ಪಿಂಡಾಂಡದಲ್ಲಿಯ ಹಗೆಗಳನ್ನು ಒಗೆಯುವದು ಬಗೆಹರಿಯದ ಮಾತು.

"ಕೇನಜಗತ್‌ಜಿತಂ'' "ಕಃ ಶೂರಃ'' ಅಂದರೆ ಯುದ್ಧದಲ್ಲಿ ಪ್ರಾಣವನ್ನು ಪಣಕ್ಕೆ ಹಚ್ಚಿ ವೈರಿಗಳನ್ನು ಗೆದ್ದವನು ಶೂರನೋ ? ಅಥವಾ ಉತ್ತುಂದ ಹಿಮಾಲಯದ ಎತ್ತರ ವಾದ ಗೌರೀಶಂಕರ ಶಿಖರವನ್ನು ಜೀವದ ಹಂಗುದೊರೆದು ಏರಿದವನು ಶೂರನೋ ಎಂದು ಶಂಕರಾಚಾರ್ಯರು ಪ್ರಶ್ನಿಸಿ ''ಮನೋಹಿಯೇನ ವಿಜಿತೇಂದ್ರಿಯಃ'' ಯಾರು ಮನಸ್ಸನ್ನೂ ಇಂದ್ರಿಯಾದಿಗಳನ್ನೂ ಗೆಲ್ಲುವರೋ ಅವರೇ ಶೂರರು, ಧೀರರು-ಎಂದು ಉತ್ತರಿಸಿರುವರು. ''ಚಂಚಲಂಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಂ ------ ವಾಯೋರಿವಸುದುಷ್ಕರಂ॥ ಕಣ್ಣಿಗೆ ಕಾಣದ ಕೈಗೆ ಸಿಲುಕದ ಗಾಳಿಯನ್ನು ಹಗ್ಗದಿಂದ ಕಟ್ಟಬಹುದು ಆದರೆ ಚಂಚಲವಾದ ಮನಸ್ಸನ್ನು ಒತ್ತಟ್ಟಿಗೆ ನಿಲ್ಲಿಸುವದು ಅಸಾಧ್ಯ ಎಂದು ಗೀತೆಯೂ ಹೇಳುತ್ತದೆ. "ತಡೆವುದಾಗದು ತನಗಗಣಿತ ವಿಷಯದೊಳಿಡೆ

ಯಾಡುವತಿ ಚಪಲತೆಯ ಚಿತ್ತವನು ಧರೆಯನಜಿನದಂತೆ ಸುರುಳಲಹುದು, ಮೇರುಗಿರಿಯ ನಂಗುಲಿಯಕೊನೆಯೊಳಾನಲಹುದು, ಶರಧಿಯನೊಮ್ಮೆ ಪಾನವ ಮಾಡಲಹುದು; ಸೈತಿರಿಸ ಬಾರದು ನಿಮಿಷಾರ್ಧವೀಮನವ» ಎಂದು ನಿಜಗುಣಶಿವಯೋಗಿಗಳು; "ಜಡೆಯ ಕಟ್ಟಲು ಬಹುದು । ಕಡವಸವನುಡಬಹುದು । ಬಿಡದೆ ದೇಗುಲದೊಳಿರಬಹುದು ಕರಣವನು। ತಡೆ ಯುವದೆ ಕಷ್ಟಸರ್ವಜ್ಞ» ಎಂದು ಸರ್ವಜ್ಞನೂ ಮನಸ್ಸಿನ ಅಜೇಯತ್ವದ ಬಗ್ಗೆ ಹೇಳಿರು ವರು.

ಹುಲಿಸಿಂಹಗಳಂತಹ ಕ್ರೂರಪ್ರಾಣಿಗಳು ಗುಡ್ಡದೊಳಗಿರುವ ಗವಿಗಳನ್ನೇ ಮನೆ ಮಾಡಿಕೊಂಡಿರುವವು. ಚಿಗರೆ, ಮೊಲ ಮೊದಲಾದ ಸಾತ್ವಿಕ ಪ್ರಾಣಿಗಳು ನಿರ್ಜನ ಪ್ರದೇಶದಲ್ಲಿ ಮರದಡಿಯ ಒಂದು ತಾಣವನ್ನೇ ಮನೆಯಂತೆ ತಿಳಿದಿರುವವು. ಆಕಾಶದಲ್ಲಿ ಹಾರಾಡುವ ಕಾಗೆ, ಗುಬ್ಬಿ, ಗೀಜಗಗಳಂಥ ಹಕ್ಕಿಗಳು ಸಹ ಒಂದು ಗೂಡನ್ನು ಕಟ್ಟಿ ಕೊಂಡೇ ಇರುವವು. ಆದರೆ ಎಂದೆಂದಿಗೂ ಮನೆ ಕಟ್ಟದ ಗಟ್ಟಿಯಾಗಿ ಒತ್ತಟ್ಟಿಗೆ ನಿಲ್ಲದ, ಮರದಿಂದ ಮರಕ್ಕೆ ಟೊಂಗೆಯಿಂದ ಟೊಂಗೆಗೆ ಜಿಗಿವ, ಕೆಣಕಿದರೆ ಅಣಕಿಸುವ ವಿಚಿತ್ರ ಪ್ರಾಣಿಯೆಂದರೆ ಮಂಗವೊಂದೇ. ಬ್ರಹ್ಮಾಂಡದಲ್ಲಿರುವ ಈ ಮಂಗನ ಚೇಷ್ಟೆಗಳಿಗಿಂತಲೂ ಪಿಂಡಾಂಡದಲ್ಲಿರುವ ಈ ಮನವೆಂಬ ಮರ್ಕಟನ ಚೇಷ್ಟೆಗಳು ಆಶ್ಚರ್ಯಕಾರಕಗಳೂ ವಿಪರೀತವಾದವುಗಳೂ ಇರುತ್ತವೆ.

ಇದನ್ನೇ ಸರ್ಪಭೂಷಣ ಶಿವಯೋಗಿಗಳು ''ಮನವೆಂಬ ಮರ್ಕಟನ ತಡೆಯ ಲಾರೆನುದೇವ ಎನಿತಿದರ ಚಪಲ ಚೇಷ್ಟೆಗಳ ವರ್ಣಿಸಲಿ ॥ಪ॥ ಧರೆಯನೆಲ್ಲವನೊಂದ ಕೊಡೆಯಿಂದಲಾಳುವದು । ಗಿರಿಯ ಗುಹೆಯೊಳುಕುಳಿತು ತಪವ ಮಾಡುವದು । ತರು ಣಿಯರ ಕಂಕುಳೊಳು ಕೈಯಿಕ್ಕಿ ನಗಿಸುವದು । ಕರಿಯಮೇಲಂಬಾರಿಯಲ್ಲಿ ಮೆರೆಯು ವದು । ಪಿಡಿವೆನೆನೆ ಮೊದಲು ಮುಮ್ಮಾರು ಹಾರಾಡಿಹುದು । ಪೊಡೆವೆನೆನಲಾನುಡಿಯ ದಾರದೆಂಬುವದು । ತುಡುಗದನವಿನಕೊರಳಗುದ್ದಿಯಿಂದದೊಳೆನ್ನ । ನೆಡೆವಿಡದೆ ಮಾಜಗ ದೊಳೆಡೆಯಾಡುತಿಹುದು » » ಜನರುಕಪಿಯನು ಕುಣಿಪುದಿದು ಸಹಜಧರೆಯೊಳಗೆ। ಮನವೆಂಬಕಪಿಯೆನ್ನ ಕುಣಿಸುತಿಹುದು -- -- « ಎಂಬ ಪದ್ಯದಲ್ಲಿ ಹೇಳಿರುವರು.

ಗೊಲ್ಲನು ಕಾಡಿನಿಂದ ಮಂಗದ ಮರಿಯನ್ನು ಹಿಡಿತಂದು ಅದರ ಕೊರಳಿಗೆ ಒಂದು ಹಗ್ಗಕಟ್ಟಿ ಮನೆಮನೆಗೆ ತಿರುಗಾಡಿ ಆ ಮಂಗದಿಂದ ಹಿಂಗಾಣೆ ಮುಂಗಾಣೆ ಲಾಗಾಹೊಡಿಸಿ ತನ್ನ ಹೊಟ್ಟೆಯನ್ನು ತುಂಬಿಕೊಳ್ಳುವನು. ಇಲ್ಲಿ ಸೋಜಿಗದ ಸಂಗತಿಯೆಂದರೆ ಮಂಗ ನಾಡಿಸುವ ಗೊಲ್ಲನು ಮಂಗದಿಂದ ಲಾಗ ಹೊಡೆಯಿಸಿದರೆ, ಇಲ್ಲಿ ಮಂಗವೇ ಜೀವಾತ್ಮ ನಿಂದ ಲಾಗ ಹೊಡೆಯಿಸುವದು. ಈ ಮಂಗನ ಕೈಯೊಳಗೆ ಸಿಕ್ಕೇ ರಾಜರ್ಷಿಯಾದ ವಿಶ್ವಾಮಿತ್ರನು, ಅಷ್ಟಾದಶಪುರಾಣಕರ್ತನಾದ, ವೇದವ್ಯಾಸನೂ ಲಾಗ ಹೊಡೆದರ ಲ್ಲವೇ? ಗೊಲ್ಲನು ಕಪಿಯನ್ನು ಕುಣಿಸಿದರೆ ಅದಕ್ಕೆ ವಿಪರೀತವಾಗಿ ಕಪಿಯೇ ಲೋಕದ ಜನ ರನ್ನೆಲ್ಲ ಕುಣಿಸುವದು. ಆರನ್ನಾದರೂ ಕಂಡರೆ ಸುಮ್ಮಸುಮ್ಮನೆ ಅಣಕಿಸುವದು. ಕೆಣಕಿದರೆ ಮತ್ತಿಷ್ಟು ಕುಣಿಕುಣಿದು ಅಣಕಿಸುವದು.ಹಿಡಿಯ ಹೋದರೆ ಮೂರುಮಾರು ಹಾರಿ ದೂರ ಸರಿದು ಜಿಗಿದು ನಿಲ್ಲುವದು. ಲೋಕದಲ್ಲಿರುವ ಮಂಗನ ಚೇಷ್ಟೆಗಳಿಗಿಂತಲೂ ಈ ಮನ ವೆಂಬ ಮರ್ಕಟನ ಚೇಷ್ಟೆಗಳು ಚಮತ್ಕಾರಕವಿವೆ.

ಹೆರವರ ಹೊಲಹೊಕ್ಕು ಬೆಳೆಯನ್ನು ಹಾಳು ಮಾಡಬಾರದೆಂದು ಲೋಕದಲ್ಲಿ

ತುಡುಗದನದ ಕೊರಳಲ್ಲಿ ಒಂದು ಗುದ್ದಿಯನ್ನು ಕಟ್ಟಿ ಮೇಯಲು ಬಿಡುವರು. ಆ ತುಡುಗ ದನ ಎತ್ತೆತ್ತ ಹೋಗುವದೋ ಅತ್ತತ್ತ ಆ ಗುದ್ದಿಯೂ ನೇತಾಡುತ್ತ ಹೋಗುವದು, ಇಲ್ಲಿ ಮನಸ್ಸೇ ಒಂದು ತುಡುಗದನ. ಜೀವಾತ್ಮನೇ ಆದರ ಕೊರಳಲ್ಲಿರುವ ಗುದ್ದಿ ಆ ಮನವೆಂಬ ತುಡುಗದನ ಎತ್ತೆತ್ತ ಹೋಗುವದೋ ಅತ್ತತ್ತ ಜೀವಾತ್ಮನು ಸುತ್ತುತ್ತಿರುವನು. " ಒಂದಲ್ಲ, ಎರಡಲ್ಲ, ಮೂರಲ್ಲ, ನಾಲ್ಕಲ್ಲ, ಎಂಬತ್ತನಾಲ್ಕು ಲಕ್ಷ ಯೋನಿಯೊಳಗೆ ಬಂದೆ ಬಂದೆ ---- " ಎಂಬ ಅಕ್ಕಮಹಾದೇವಿಯ ವಚನದಂತೆ, '' ಘಟೀಯಂತ್ರ ಸರ್ವೋsವಶಃ " " ಚಕ್ರನೇಮಿಕ್ರಮೇಣ " ಎಂಬ ಸುಭಾಷಿತೋಕ್ತಿಯಂತೆ ಅಲೆದಾಡುತ್ತಿರುವನು. ಚಂಚಲಮನಸ್ಸು, ಪಂಚ ಕರ್ಮೇಂದ್ರಿಯ, ಪಂಚಜ್ಞಾನೇಂದ್ರಿಯ, ಪಂಚ ಪ್ರಾಣವಾಯುಗಳು, ವಿವಿಧ ವಿಕಾರಗಳು ಹೀಗೆ ಹೇಳತೀರದಷ್ಟು ಸಾಧಕ ಬಾಧಕ ಸಾಮುಗ್ರಿಗಳಿಂದ ಸಾಂಧ್ರವಾದ ಈ ಪಿಂಡಾಂಡದ ಮೇಲೆ ಆಧಿಪತ್ಯ ನಡೆಯಿಸಿ ವಿಜಯಶೀಲರಾಗುವದು. ಅತೀವದುಸ್ತರವಾದುದು, ದುಸ್ಸಾಧ್ಯವಾದದು. ಅಂತೆಯೇ " ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷತ್ ಆವೃತ್ತಚಕ್ಷುಃ ಅಮೃತತ್ವ ಮಿಚ್ಛನ್" ಕಶ್ಚಿನ್ಮಾಮ್ವೇತಿ ತತ್ವತಃ " " ಸಾವಿರಕೊಬ್ಬ ಸತ್ಯವಂತ, ಲಕ್ಷಕ್ಕೊಬ್ಬ ಭಕ್ತ ಕೋಟಿಗೊಬ್ಬ ಶರಣ" ಎಂದು ಉಪನಿಷತ್ತು, ಗೀತ, ವಚನಸಾಹಿತ್ಯ ಸಾರಿಸಾರಿ ಹೇಳುತ್ತವೆ. ಲೋಕದಲ್ಲಿ ಸಾರ್ವಭೌಮರು, ಏಕಛತ್ರಾಧಿಪತಿಗಳು, ಬ್ರಹ್ಮಾಂಡದ ಅಧಿಪತಿಗಳಾಗಿ ಮೆರೆದರೆ ಅಲ್ಲಮಪ್ರಭುವು ಪಿಂಡಾಂಡದ ಆಧಿಪತಿಯಾಗಿ ಮೆರೆದನು. ಪ್ರಭು ಎಂಬ ಸಂಯುಕ್ತ ಅಥವಾ ಅವಿಭಕ್ತ ಪದದ ವಿವರಣೆ ಮಾಡಿದರೆ ಮೇಲ್ಕಾಣಿಸಿದ ವಿಶಿಷ್ಟ ಅರ್ಥವೇ ಹೊರಹೊಮ್ಮುವದು. ಸ್ವಯಂಭು, ಶಂಭು, ಮೊದಲಾದ ಸಂಯುಕ್ತ ಪದಗಳಂತೆ. ಪ್ರಭು ಎಂಬ ಪದವೂ ಸಂಯುಕ್ತ ಪದವಿದ್ದು ಈ ಪದದ ವಿಭಜನೆಯು ಪ್ರ-ಭು ಎಂದಾಗುವದು. ಪ್ರ ಎಂಬ ಉಪಸರ್ಗದ ಅರ್ಥವನ್ನು ಪ್ರಕೃಷ್ಟ, ಉತ್ಕೃಷ್ಟ, ಶ್ರೇಷ್ಠ ಎಂಬರ್ಥದಲ್ಲಿಯ '' ಭೂ ಸತ್ತಾಯಾಂ, ಎಂಬ ಪಾಣಿನಿ ಧಾತುವಿನ ಅರ್ಥವನ್ನು ಇರುವಿಕೆ, ನಿಲ್ವಿಕೆ, ಎಂಬರ್ಥದಲ್ಲಿಯೂ ಗ್ರಹಿಸಿಕೊಂಡು ಪ್ರಕರ್ಷೇಣ ಭವತೀತಿ ಪ್ರಭುಃ ಎಂದು ಅರ್ಥ ಮಾಡಿದರೆ ಪೂರ್ವೋಕ್ತ ಅರ್ಥವೇ ನಿಷ್ಪನ್ನವಾಗುವದು.

ತೇಜೋಮಾರ್ಗದಿಂದ ಅಂದರೆ ನಿವೃತ್ತಿ ಮಾರ್ಗದಿಂದ ಶಿವನೆಡೆಗೆ ಸಾಗುವದು, ಹಾಗು ತಮೋಮಾರ್ಗದಿಂದ ಅಂದರೆ ಪ್ರವೃತ್ತಿ ಮಾರ್ಗದಿಂದ ಭವದೆಡೆಗೆ ಸಾಗುವದು ಹೀಗೆ ಇರುವು ಇತ್ತೆರ. ಈ ಉಭಯ ಮಾರ್ಗಗಳಲ್ಲೊಂದಕ್ಕೆ ಶ್ರೇಯೋಮಾರ್ಗವೆಂದೂ ಮತ್ತೊಂದಕ್ಕೆ ಪ್ರೇಯೋಮಾರ್ಗವೆಂದೂ ಕಠೋಪನಿಷತು ಹೇಳಿದೆ. ಆತ್ಯಂತಿಕ ಸುಖಕ್ಕೆ ಮೂಲವಾದುದು ಶ್ರೇಯೋಮಾರ್ಗ, ದುಃಖಕ್ಕೆ ಮೂಲವಾದುದು ಪ್ರೇಯೋಮಾರ್ಗ. ಒಂದು ಅಭಯ ಒಂದು ಸಭಯ.

ಮರವೆಯ ಸೆರೆಮನೆಯ ಕಾರಿರುಳಿನಲ್ಲಿ ಕೊರಗಿ ಕೊರಗಿ ಅರಿವಿನ ಅರಮನೆ ಪ್ರವೇಶಿಸಲು ತವಕಿಸುವ, ಇಲ್ಲದ್ದನ್ನು ಇಲ್ಲೆನ್ನಲು ಕಲಿಯದೇ ಅಲ್ಲಿ, ಇಲ್ಲಿ, ಇಲ್ಲಿ ಅಲ್ಲಿ ಎಲ್ಲೆಲ್ಲಿಯೋ ಹುಡುಕಿ ಕಂಗೆಟ್ಟು ಕೊನೆಗೊಮ್ಮೆ ಉಳ್ಳ ಬ್ರಹ್ಮವ ಕಾಂಬ ಕುತೂಹುಲದ, ಹುಟ್ಟು ಸಾವುಗಳ ತಿರುಗಣೆಯ ಮಡುವಿನಲ್ಲಿ ತಿರ್ರನೇ ತಿರುತಿರುಗಿ ಕೊರಗಿ ಹುಟ್ಟದಿಹ ಬಟ್ಟೆಯ ಮುಟ್ಟದ ನಿಷ್ಠೆಯ, ಮುಮುಕ್ಷುವು, ಅಸತೋಮಾ ಸದ್ಗಮಯ

ತಮಸೋಮಾ ಜ್ಯೋತಿರ್ಗಮಯ, "ಮೃತ್ಯೋರ್ಮಾಮೃತಂಗಮಯ" ಎಂದು ಸ್ವ
ಗೊಡ್ಡಿ ದೇವನಲ್ಲಿ ಮೊರೆಯಿಡುತ್ತಾನೆ.

ನಿಕೃಷ್ಟರೀತಿಯಿಂದ ಹೊತ್ತುಗಳೆವುದು, ಕನಿಷ್ಠರೀತಿಯಿಂದ ಕಾಲಕಳೆವುದು ಜೀವನ ಗುರಿಯಾಗಿರದೇ, ಉತ್ಕೃಷ್ಟ ರೀತಿಯಿಂದ, ಪ್ರಕೃಷ್ಟಪದ್ಧತಿಯಿಂದ ಜೀವನ ಕ್ರಮ ಸಾಗಿಸುವದೇ ಮಾನವಜನ್ಮದ ಚರಮಗುರಿಯಾಗಿದೆ.

## ಪ್ರಭುಲಿಂಗಲೀಲೆಯ ಪೂರ್ವಕಥನ

ಹಿಂದಿನ ಜನ್ಮದ ಸುಕೃತ ವಿಶೇಷದಿಂದಲೋ ಅಥವಾ ಧರ್ಮವು ಕಳೆಗುಂದಿದಾಗ ಧರ್ಮೋದ್ಧಾರ ಗೈಯುವ ಬೃಹತ್ಕರ್ಮದ ನಿಮಿತ್ತದಿಂದಲೋ ಶಿವಗಣಾಧೀಶ್ವರರು ಇಳೆಗೆ ಇಳಿಯುವಾಗ ಅವರು ದೊಡ್ಡವರಾಗಿಯೇ ಹುಟ್ಟುವರು, ದೊಡ್ಡವರಾಗಿಯೇ ಬೆಳೆಯುವರು, ಕಟ್ಟಕಡೆಗೆ ಮಹಾವಿಭೂತಿಗಳೆನಿಸಿಕೊಂಡೇ ಇಹಲೋಕಯಾತ್ರೆ ಮುಗಿಸುವರು. ಅತಂಹ ಮಹಾವಿಭೂತಿಗಳಲ್ಲಿ ಪ್ರಭು ದೇವರು ಪ್ರಪ್ರಥಮರೆಂದು ಹೇಳಬಹುದು. ಅಸಾಮಾನ್ಯ ಲೋಕೋತ್ತರ ಮಹಾ ವಿಭೂತಿಯಾದ ಪ್ರಭುವು ಆವುದೊಂದು ಪ್ರಯತ್ನವಿಲ್ಲದೆ ಸಿದ್ಧಿಕೋಟೆಗೆ ಏರಿ ಸಿದ್ಧಪುರುಷನೆನಿಸಿ ಮೆರೆದನು. ಆದುದರಿಂದಲೇ ಕವಿ ಸಾರ್ವಭೌಮನಾದ ಹರೀಶ್ವರ ಕವಿಯು. "ಸಾಧನ ಚತುಷ್ಟಯದ ಹಂಗ ಹೊದ್ದದನಿವಂ ।

ಬೋಧೆಯಕ್ಕರವರಿದುದು ನಿಜವಾದ ನಿಲವಿವಂ । ಕರತಳಾಮಳಕವಾದುದು ತತ್ವವೀತಂಗೆ । ಪರಮಶಿವಯೋಗ ನಿಜವಾದುದೀತಂಗೆ, ಶಶಿರವಿಗಳಂತೆ ಬೆಳಬೆಳಗುಂಬ ರ್ಧನೋಡೆ । ಉಸಿರಲ್ಲಿಲ್ಲದ ಪರಬ್ರಹ್ಮವಾದಂ ಕೂಡೆ । ನಡೆದುದೇ ಬಟ್ಟೆಯಾದುದು ಶಿವಸಮದಕರಿಗೆ । ನುಡಿದುದೇ ವೇದವಾದುದು ಲಿಂಗವಂತಂಗೆ ॥

ಎಂದು ತನ್ನ ರಗಳೆಯಲ್ಲಿ ಪ್ರಭುವನ್ನು ಕೊಂಡಾಡಿರುವನು.

೧೫ ನೆಯ ಶತಮಾನದ ವಿಜಯನಗರದ ಪ್ರೌಢದೇವರಾಯನ ಕಾಲದಲ್ಲಿ ಅತ್ಯದ್ಭುತ ಧರ್ಮಕ್ರಾಂತಿಯನ್ನೆಸಗಿದ, ನೂರೊಂದು ವಿರಕ್ತರ ರತ್ನಮಾಲಿಕೆಯಲ್ಲಿ ಶಿರೋರತ್ನದಂತೆ ಒಪ್ಪಿದ ಸಂಸ್ಕೃತ ಕನ್ನಡ ಭಾಷಾಕೋವಿದ, ಕುಮತವಿಭೇದಿ ಷಟ್‌ಸ್ಥಲಬ್ರಹ್ಮವಾದಿ ಎಂಬ ಬಿರುದಾಂಕಿತರಾದ ಮಗ್ಗೆಯಮಾಯಿದೇವರು ತಮ್ಮ ಶತಕತ್ರಯದಲ್ಲಿ ಅಲ್ಲಮಪ್ರಭುವನ್ನು

"ಪ್ರಭುವೆ ಮಹಾಗುರುಪ್ರಭುವೆ ಲಿಂಗಕಳಾಪ್ರಭುವೇ ಚರಾಭಿದ ।
ಪ್ರಭುವೆ ಶಿವಾತ್ಮವಿತ್ಪ್ರಭುವೆ ಯೋಗಿವರಪ್ರಭುವೆ ಚಿದಂಗನಾ ।
ಪ್ರಭುವೆ ಸದಾಮಲಪ್ರಭುವೆ ರಕ್ಷಿಸುದೇವಾ ಗುಹೇಶ್ವರಾಲ್ಲಮ।
ಪ್ರಭುವೆ ನಿರಂಜನ ಪ್ರಭುವೆ ಮತ್ಪ್ರಭುವೇ ಪ್ರಭುವೇ ಶಿವಾಧವಾ ।

ಶಿವಾತ್ಮವಿತ್, ಯೋಗಿವರ, ಚಿದಂಗನಾ, ಪ್ರಭು, ಸದಾಮಲ ಮುಂತಾದ ಒಂಬತ್ತು ಅರ್ಥಪೂರ್ಣಗಳಾದ ವಿವಿಧ ವಿಶೇಷಣ ಪದಗಳ ಪೂರ್ವಕ ಪ್ರಭು ಎಂಬ ವಿಶೇಷ್ಯ ಪದವನ್ನು ಕೊಂಡಾಡಿ ಕೊಂಡಾಡಿ ಸಾಕಾಗದೆ ಕಟ್ಟಕಡೆಗೆ ಮತ್ಪ್ರಭುವೇ ಎನ್ನೊಡೆಯನೇ, ಎನ್ನಾಳ್ದನೇ, ಎನ್ನರಸನೇ ಎಂದು ಭಾವ ಪುಲಕಿತನಾಗಿ ಸ್ತುತಿಸಿರುವನು. ಕವಿ ಚಕ್ರವರ್ತಿ

ಸುರಂಗಕವಿ, ಉಭಯಕವಿತಾ ವಿಶಾರದ ಷಡಕ್ಷರಕವಿ, ಸೋಮಕವಿ, ಭೀಮಕವಿ, ಮುಂತಾದ ಮಹಾನುಭಾವರು ತಾವು ಬರೆದ ಗದ್ಯಪದ್ಯಾತ್ಮಕ ಚಂಪೂಕಾವ್ಯಕ್ಕೆ ಇಲ್ಲವೆ ಪದ್ಯಾತ್ಮಕವಾಗಿ ಬರೆದ ಪುರಾಣಕ್ಕೆ ತ್ರಿಷಷ್ಠಿಪುರಾತನ ಚಾರಿತ್ರ, ರಾಜಶೇಖರ ವಿಳಾಸ, ಬಸವಪುರಾಣ ಎಂದು ಮೊದಲಾಗಿ ಮುಖ್ಯಾಭಿ ದಾನವನ್ನಿಟ್ಟಂತೆ ನೂರೊಂದು ವಿರಕ್ತದಲ್ಲಿ ಒಬ್ಬನಾದ ಚಾಮರಸನು ತಾನುವಿರಚಿಸುವ ಪ್ರಭುವಿನ ಚರಿತೆಗೆ ಇಂತಹ ಒಂದು ನಾಮವನ್ನಿಡದೆ "ಪ್ರಭುಲಿಂಗಲೀಲೆ" ಎಂಬ ವಿನೂತನ ಹೆಸರನ್ನು ಆಯ್ಕೆ ಮಾಡಿ ಕೊಂಡಿರುವನು. ವಿಶಿಷ್ಟಾರ್ಥವನ್ನು ಗರ್ಭೀಕರಿಸಿಕೊಂಡ ಪ್ರಭು ಎಂಬ ಏಕೈಕ ಪದಕ್ಕೆ ವಟಬೀಜ ವಟವೃಕ್ಷಕೋಟಿಯ ನುಂಗಿಪ್ಪಂತೆ ಅಜಾಂಡ ಕೋಟಿ ಬ್ರಹ್ಮಾಂಡಗಳ ನುಂಗಿಪ್ಪ ಲಿಂಗವೇ, ಎಂಬ ವಚನಕಾರರ ಅಭಿಮತದಂತೆ ಎಲ್ಲವನ್ನು ತನ್ನೊಳಗೆ ಅಡಗಿಸಿಕೊಂಡು ಮೆರೆವುದೆಂಬ ವಿಶಾಲಾರ್ಥವುಳ್ಳ ಲಿಂಗಪದವನ್ನು ಸಂಯೋಜನೆ ಮಾಡಿದಾಗ ಪ್ರಭುಲಿಂಗ ಎಂದಾಗುವದು. ಚಾಮರಸನು ತಾನು ಬರೆದ ಮಹಾಕಾವ್ಯಕ್ಕೆ ಪ್ರಭುಲಿಂಗ ಚರಿತ್ರೆ ಪ್ರಭುಲಿಂಗ ವಿಳಾಸ, ಪ್ರಭುಲಿಂಗ ಪುರಾಣ ಎಂದು ಹೇಳದೆ ಪ್ರಭುಲಿಂಗಲೀಲೆ ಎಂದು ಹೇಳಿರುವನು. ಚರಿತೆಗಳೂ, ಪುರಾಣಗಳೂ, ರಗಳೆಗಳೂ ಅಚ್ಚರಿಯನ್ನುಂಟುಮಾಡುವ ಪವಾಡಗಳ ಸಂತೆಯಾಗಿ ಬುದ್ಧಿಜೀವಿಗಳ ವೈಚಾರಿಕತೆಗೆ, ತಾತ್ವಿಕ ಜಿಜ್ಞಾಸೆಗೆ, ವೈಜ್ಞಾನಿಕ ದೃಷ್ಟಿಕೋನಕ್ಕೆ ಅವಕಾಶವೀಯದೇ ಭಾವುಕರ ಮನವನ್ನು ಮಾತ್ರ ತಣಿಸುವವು.

'ಪುರುಷಸಿಂಹ': ಎಂಬ ಪದವನ್ನು ಉಚ್ಚರಿಸಿದಾಕ್ಷಣ ಸಿಂಹದಂತೆ ಪರಾಕ್ರಮಿಯಾದ ಪುರುಷನು ಎಂದು ಹೇಗೆ ತಿಳಿದುಬರುವದೋ ಹಾಗೆ ಪ್ರಭುಲಿಂಗ ಎಂದೊಡನೆ ಲಿಂಗದ ಮಂಗಲಗುಣಗಳನ್ನು ಅಂಗದಲ್ಲಿ ಅಂಗವಿಸಿಕೊಂಡ ಮಂಗಲಜಂಗಮಪುಂಗವ ಎಂದು ತಿಳಿದು ಬರುವದು, ಶಿವಲಿಂಗ ಎಂಬ ಪದದಲ್ಲಿ ಶಿವನೇ ಲಿಂಗ ಲಿಂಗವೇಶಿವ ಎಂದು ಉಭಯ ಪದಗಳಿಗೆ ಹೇಗೆ ಅಭೇದವಿರುವದೋ ಹಾಗೆ ಪ್ರಭುಲಿಂಗ ಎಂಬ ಪದದಲ್ಲಿಯೂ ಪ್ರಭುವೇಲಿಂಗ, ಲಿಂಗವೇ ಪ್ರಭು ಎಂದು ಅಭೇದವಿರುವದು. ಪ್ರಭುಃ ಲಿಂಗಮಿವ ಎಂದು ಉಪಮಿತ ಸಮಾಸವನ್ನು ಮಾಡಿದಲ್ಲಿ ಲಿಂಗದಂತೆ ಮಂಗಲಗುಣಗಳಿಂದ ಕಂಗೊಳಿಸುವ ಪ್ರಭುವು ಎಂಬರ್ಥ ನಿಷ್ಪತ್ತಿಯಾಗುವದು.

ಲೋಕವತ್ತು ಲೀಲಾಕೈವಲ್ಯಂ ಅಧ್ಯಾಯ ೨, ಪದ್ಯ ೩೩ ಪಾದ ೧ ಹೇಗೆ ಲೋಕದಲ್ಲಿ ರಾಜನು ಏನೊಂದೂ ಪ್ರಯೋಜನವನ್ನು ಅಪೇಕ್ಷಿಮಾಡದೆ ಕೇವಲ ಲೀಲೆಯಿಂದ ಆಟ ಮಾಡುವನೋ ಹಾಗೆ ಈಶ್ವರನು ಹೊರಗಣ ಆವ ಪ್ರಯೋಜನವನ್ನೂ ಅಪೇಕ್ಷಿಸದೆ ಲೀಲೆಯಲ್ಲಿ ತೊಡಗುವನು.

ರತ್ನಕೀಟಾಲಂಕೃತಮಸ್ತಕನಾಗಿ ರತ್ನಸಿಂಹಾಸನದ ಮೇಲೆ ಮುಹೂರ್ತಮಾಡಿದ ಏಕಛತ್ರಾಧಿಪತಿ ಮಹಾರಾಜನು ಸುವರ್ಣದಂಡವ ಪಿಡಿದು ಶ್ವೇತಛತ್ರದಡಿಯಲ್ಲಿ ಮಂತ್ರಿ ಮಂಡಳ, ಚತುರಂಗಬಲ, ಅಂಗಸಂರಕ್ಷಕದಳ ಸಮೇತನಾಗಿ ಸೈನ್ಯದ ಪಡೆಯಗೌರವ ಸ್ವೀಕರಿಸುತ್ತ ವಾದ್ಯವೈಭವದೊಡನೆ ಬಾಗಿ ಕೈಮುಗಿವ ಲಕ್ಷೋಪಲಕ್ಷ, ಜನರ ಜಯಜಯ ಕಾರದೊಳಗೆ ಗಜರಾಜನಮೇಲೆ ರತ್ನಖಚಿತ ಅಂಬಾರಿಯಲ್ಲಿ ಕುಳಿತು ಯಾತ್ರೆಕೈಕೊಳ್ಳು ವದು ಲೀಲಾವಸ್ಥೆ ಎನಿಸುವದು.

ಲೋಕದಲ್ಲಿ ಬೇಕಾದುದೆಲ್ಲ ಬೇಕಾಗುವಷ್ಟು, ಸಾಕಾಗುವಷ್ಟಿದ್ದರೂ ಬೇಕೆನ್ನದೆ ಸಾಕು ಸಾಕಾಗಿ, ಲೋಕಾಂತವ ತೊರೆದು ಏಕಾಂತದಲ್ಲಿ ಮೌನದಿಂದ ತಾನೇತಾನಾಗಿರುವದೇ ಕೇವ ಲಾವಸ್ಥೆ ಎನಿಸುವದು, ಈ ಲೀಲಾವಸ್ಥೆ, ಕೇವಲಾವಸ್ಥೆಗಳೆರಡಕ್ಕೂ ಮಹಾರಾಜನ ನಿರ್ಹೇತುಕ ಇಚ್ಛೆಯೇ ಕಾರಣವಲ್ಲದೆ ಬೇರೆ ಯಾರ ಇಚ್ಛೆಯೂ ಕಾರಣವಲ್ಲ. ಹೀಗೆ ಪರಶಿ ವನಲ್ಲಿಯೂ ಕೇವಲಾವಸ್ಥೆ, ಲೀಲಾವಸ್ಥೆ ಎಂದು ಅವಸ್ಥಾದ್ವಯುವುಂಟು.

"ಆದಿ ಅನಾದಿ ಇಲ್ಲದಂದು, ಹಮ್ಮು ಬಿಮ್ಮುಗಳಿಲ್ಲದಂದು
ಸುರಾಳ ನಿರಾಳವಿಲ್ಲದಂದು, ಶೂನ್ಯ ನಿಶೂನ್ಯವಿಲ್ಲದಂದು
ಸಚರಾಚರವೆಲ್ಲ ರಚನೆಗೆ ಬಾರದಂದು
ಗುಹೇಶ್ವರನೊಬ್ಬನೇ ಇದ್ದೆಯಲ್ಲ ಇಲ್ಲದಂತೆ"
"ಗಗನಕ್ಕೆ ನಿಚ್ಚಣಿಗೆಯನಿಕ್ಕಿದವರುಂಟೇ ?
ವಾಯುವಿನ ಸ್ಥಳವನರಿದವರುಂಟೇ ?
ಅಂಬುನಿಧಿಯ ಗುಣ್ಪನಳೆದವರುಂಟೇ ?
ಲಿಂಗದ ಪ್ರಮಾಣ ಹೇಳಬಹುದೇ ?
ಚಂದ್ರಮಂಡಲ ಸೂರ್ಯಮಂಡಲ ತಾರಾಮಂಡಲ ಎತ್ತೆತ್ತಲಯ್ಯಾ
— — — — " ಗುಹೇಶ್ವರ.

"ಅಸುರರ ಮಾಲೆಗಳಿಲ್ಲ ತ್ರಿಶೂಲ ಡಮರುಗವಿಲ್ಲ
ಬ್ರಹ್ಮಕಪಾಲವಿಲ್ಲ ಭಸ್ಮಭೂಷಣನಲ್ಲ.
ವೃಷಭವಾಹನನಲ್ಲ ಋಷಿಗಳೊಡನೆ ಇಪ್ಪಾತನಲ್ಲ.

ಬಸಗುವ ಸಂಸಾರದ ಕುರುಹಿಲ್ಲದಾತಂಗೆ । ಹೆಸರಾವುದೂ ಇಲ್ಲವೆಂದನಂಬಿಗರ ಚೌಡಯ್ಯ
" ಆಕಾಶವ ಮೀರುವ ತರುಗಿರಿಗಳುಂಟೇ ? ನಿರಾಕಾರವ ಮೀರುವ ಸಾಕಾರವುಂಟೇ ?
ಗುಹೇಶ್ವರಲಿಂಗವ ಮೀರುವ ಒಡೆತನ ಉಂಟೇ ಸಂಗನಬಸವಣ್ಣ "

ನಿಷ್ಕಲ, ನಿರ್ಗುಣ, ನಿರವಯುವ ನಿರಂಜನ ಪರಶಿವನ ಕೇವಲಾವಸ್ಥೆಯನ್ನುದ್ದೇಶಿಸಿ ಪ್ರಮಾಣವಚನಗಳಿರುವಂತೆ, ಪರಶಿವನ ಲೀಲಾವಸ್ಥೆಯನ್ನುದ್ದೇಶಿಸಿಯೂ ಪ್ರಮಾಣ ವಚನಗಳುಂಟು.

" ಮರದೊಳಗಣ ಪತ್ರ ಫಲಂಗಳು ಮರಕಾಲವಶದಲ್ಲಿ ತೋರುವಂತೆ,
ಹರನೊಳಗಣ ಪ್ರಕೃತಿ ಸ್ವಭಾವಂಗಳು ಹರಭಾವದಿಚ್ಛೆಗೆ ತೋರುವವು
ಲೀಲೆಯಾದೊಡೆ ಉಮಾಪತಿ, ಲೀಲೆ ತಪ್ಪಿದಡೆ ಸ್ವಯಂಭು ಗುಹೇಶ್ವರ"
ಶಿವ ಜಗವಾಗಬಲ್ಲ ಶಿವಜಗವಾಗದಿರಲೂ ಬಲ್ಲ ।
ಶಿವ ರೂಪಾಗಬಲ್ಲ ಶಿವ ರೂಪಾಗದಿರಲೂ ಬಲ್ಲ"
ಶಿವ ಅಜಾಂಡ ಕೋಟಿಗಳ ಮಾಡಬಲ್ಲ ಮಾಡದಿರಲೂ ಬಲ್ಲ
ಶಿವ ಕೆಡಿಸಬಲ್ಲ, ಕೆಡಿಸದಿರಲೂ ಬಲ್ಲ ಶಿವ ಜಂಗಮವಾಗಿ ಪೂಜಿಸಬಲ್ಲ.
ಶಿವ ಲಿಂಗವಾಗಿ ತಾನೆ ಪೂಜೆಯುಕೈಕೊಳ್ಳಲೂ ಬಲ್ಲ "
" ತನ್ನ ವಿನೋದಕ್ಕೆ ತಾನೇ ಸೃಷ್ಟಿಸಿದ ಸಕಲಪ್ರಪಂಚವನ್ನು.

ತನ್ನ ವಿನೋದಕ್ಕೆ ತಾನೆ ತಿರುಗಿಸಿದ ಅನಂತ ದುಃಖಗಳಲಿ,
ಇಂತೆನ್ನ ಚನ್ನಮಲ್ಲಿಕಾರ್ಜುನನೆಂಬ ಪರಶಿವನು,
ಜಗದ್ವಿಲಾಸ ಸಾಕಾದೊಡೆ ಮತ್ತೆಪರಿವನಾ ಮಾಯಾಪಾಶವನು"

ಈ ವಚನಗಳು ಪರಶಿವನ ಲೀಲಾವಸ್ಥೆಯನ್ನು ಬಿತ್ತರಿಸುತ್ತವೆ.

ವಿರೂಪಾಕ್ಷ ಪಂಡಿತರು ವಿರಚಿಸಿದ ಚೆನ್ನಬಸವ ಪುರಾಣದಲ್ಲಿ ಶಿವನ ಪಂಚವಿಂಶತಿ ಲೀಲೆಗಳ ಉಲ್ಲೇಖವು ಬರುವದಷ್ಟೇ. ಅವುಗಳಲ್ಲಿ "ಸಮುದ್ರ ಮಥನ, ವಿಷಧರಲೀಲೆ'' ಯೆಂಬುದೊಂದು ಶಿವನ ಸತ್ಕ್ರಿಯೆಯು. ಲೋಕವನು ಕಾಪಿಡುವ ದೃಷ್ಟಿಯಿಂದ ಜಗತ್ತನ್ನೇ ದಹಿಸುವ ಹಾಲಾಹಲ ವಿಷವನ್ನು ಕಂಠದಲ್ಲಿ ಧರಿಸಿದ ಸತ್ಕೃತಿಯೇ ಸಮುದ್ರ ಮಥನ ವಿಷಧರಲೀಲೆ. ಇದೇ ರೀತಿಯಾಗಿ ಶರಭಾವತಾರ ಲೀಲೆಯ ಕಥೆಯಲ್ಲಿಯೂ ಲೋಕಹಿತದೃಷ್ಟಿಯು ಹುದುಗಿಕೊಂಡಿದೆ. ಶಿವನು ಅಥವಾ ಶಿವಾಂಶಸಂಭೂತರು ಮಾಡುವ ಲೀಲೆಗಳು 'ಬೆಕ್ಕಿಗೆ ಚೆಲ್ಲಾಟ ಇಲಿಗೆ ಪ್ರಾಣಸಂಕಟ'–ಎಂಬಂತಿರುವದಿಲ್ಲ. ಮಹಾತ್ಮರಲೀಲೆಗಳು ದುಷ್ಟಶಕ್ತಿಗಳನ್ನು ಸಮೂಲ ವಿಧ್ವಂಸನಗೊಳಿಸುವ ತ್ರಿಶೂಲಗಳಾಗಿಯೂ, ಸಜ್ಜನರಿಗೆ ಸುಖಶಾಂತಿಗಳನೀಯಲಿಕ್ಕೆ ಮೂಲಕಾರಣಗಳಾಗಿಯೂ ಮೆರೆದಿವೆ. '' – – – – ಲೀಲೆಯಾದೊಡ ಉಮಾಪತಿ ಲೀಲೆ ತಪ್ಪಿದೊಡೆ ಸ್ವಯಂಭು ಗುಹೇಶ್ವರ" ಕಾಣುವ ಜಗವೆಲ್ಲವೂ ಶಿವಲೀಲೆಯೇ.ಲೀಲೆಯಿಲ್ಲದಿರೆ ಜಗವೇತೋರದು.ಶಿವ, ಪಾರ್ವತೀ ಷಣ್ಮುಖ, ವೀರಭದ್ರ, ಗಣಪತಿ, ನಂದಿ, ಭೃಂಗಿ, ದೇವಾನು ದೇವತೆಗಳು ದೃಗ್ಗೋಚರವಾದ ಚರಾಚರವೆಲ್ಲವೂ ಶಿವಲೀಲೆಯೇ '' ಆದಿಅನಾದಿ – – – – – – ಗುಹೇಶ್ವರನೊಬ್ಬನೇ ಇದ್ದೆಯಲ್ಲ ಇಲ್ಲದಂತೆ" ಎಂಬ ವಚನದಂತೆ ಇದ್ದು ಇಲ್ಲದಂತಿರುವ ಆ ಪರವಸ್ತುವೊಂದೇ ವಿವಿಧ ಸೃಷ್ಟಿರೂಪವಾಗಿ ತೋರಿ–

"ಪತ್ರ ಶಾಖಾದಿರೂಪೇಣ ಯಥಾ ತಿಷ್ಠತಿ ಪಾದಪಃ ।
ತಥಾ ಭೂಮ್ಯಾದಿರೂಪೇಣ ಶಿವ ಏಕೋವಿರಾಜತೇ"

ಎಂಬ ಜಗದ್ಗುರು ರೇಣುಕರ ಉಕ್ತಿಯಂತೆ 'ಸತ್ಯಂ ಶಿವಂ, ಸುಂದರಂ' ಆಗಿ ರಾರಾಜಿಸುತ್ತದೆ. ಏನೆಲ್ಲವನ್ನು ಒಳಗೊಂಡು ಏನೇನೂ ಇಲ್ಲದಂತಿರುವ ಬೀಜದಲ್ಲಿ ಹಸಿರೆಲೆ, ಪಸರಿಸುವ ಶಾಖೋಪಶಾಖೆ, ಕುಸುಮಸಂಚಯ, ರಸಫಲಗಳು ಅಡಗಿದ್ದು ಅವು ಸಕಾಲದಲ್ಲಿ ಹೊರಹೊಮ್ಮಿ ತೋರುವಂತೆ, ಈ ವಿಶ್ವವೆಲ್ಲವೂ ಶಿವನಿಂದಲೇ ತೋರುವದು. ಈ ವಿಶ್ವವೆಲ್ಲವೂ ಶಿವನ ಲೀಲೆ. ಇದು ಪರಶಿವನ ಲೀಲಾವಸ್ಥೆ ಎನಿಸುವದು. "ಅಯ್ಯಾ ಏಳೇಳು ಜನ್ಮದಲ್ಲಿ ಶಿವಭಕ್ತನಾಗಿ ಬಾರದಿರ್ದೊಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ — — —" ಎಂದು ಶ್ರೀ ಬಸವೇಶ್ವರರು ತಮ್ಮ ಹಿಂದಿನ ಏಳುಜನ್ಮಗಳ ಐತಿಹ್ಯವನ್ನು ಹೇಳುತ್ತ "ಮೂರನೆಯ ಭವಾಂತರದಲ್ಲಿ ನೀಲಲೋಹಿತನೆಂಬ ಗಣೇಶ್ವರನ ಮಾಡಿ ಹೆಸರಿಟ್ಟುಕರೆದು ನಿಮ್ಮ ಲೀಲಾವಿನೋದದಿಂದ ಇರಿಸಿಕೊಂಡಿರ್ದಿರಯ್ಯ " ಎಂದು ಹೇಳಿಕೊಂಡಿರುವರು.

ಓ ! ಸಂಗಮೇಶನೇ ! ಏಳೇಳು ಜನ್ಮದಲ್ಲಿ ಕಾರುಣ್ಯವತೋರಿ, ಬೃತ್ಯಭಾವದಿಂದ ಲೀಲಾವಿನೋದದಿಂದ ಇರಿಸಿಕೊಂಡು ನನ್ನನ್ನು ಉದ್ಧಾರಮಾಡಿದಿರಿ. ಭವಭವಾಂತರದಲ್ಲಿ

ಬಂದರೂ ಸಹ ಶಿವಭಕ್ತನಾಗಿ ನಿಮ್ಮ ಸೇವೆಗೈದು ಪುನೀತನಾಗುವೆ. ಈ ಮಾತುಪೊಳ್ಳು ಬಯಲೊಳಗಿನ ಜೊಳ್ಳು ಶಬ್ದವಲ್ಲ, ನಿಮ್ಮ ಹಾಗೂ ನಿಮ್ಮ ಪ್ರಮಥರ ಸಾಕ್ಷಿಯಾಗಿ ಪ್ರತಿಜ್ಞೆ ಮಾಡಿ ಹೇಳುವೆ. ಈ ವಚನದಲ್ಲಿ ಬರುವ ಲೀಲಾ ಎಂಬ ಶಬ್ದದಿಂದಲೂ ಸಹ ಭವಬಂಧನದಿಂದ ಬಿಡುಗಡೆಯು ಎಂಬರ್ಥವೇ ಧ್ವನಿತವಾಗುವದು, ಬಾಲಲೀಲೆಗಳಮಾಡಿ ತೊಟ್ಟಿಲಲ್ಲಾಡಿ ಶಿವಯೋಗ ಸಾಮ್ರಾಜ್ಯದಲ್ಲಿ ಲೋಲಾಡಿದ ಮುಳಗುಂದದ ಬಾಲ ಲೀಲಾಮಹಾಂತ ಶಿವಯೋಗಿಗಳ ಲೀಲೆಗಳೇ ಭಕ್ತರ ಐಶ್ವರ್ಯದ ನಿಧಿಯಾಗಿ ಮೆರೆದಿರುವವು.

ಸಾಮಾನ್ಯವಾಗಿ ಲೀಲೆ ಎಂದರೆ ಆಟ, ವಿನೋದ, ಚೆಲ್ಲಾಟ, ಸೌಂದರ್ಯ, ದೇವತ ಸಂಬಂಧ, ಎಂದರ್ಥವಾಗುವದು. ದೊಡ್ಡಾಟ, ಪಾರಿಜಾತ ಆಟ, ಕಬಡ್ಡಿ ಆಟ, ಕ್ರಿಕೆಟ್ ಆಟ, ಜೂಜಾಟ, ಪಂದ್ಯಾಟ, ಇಸ್ಪೇಟ ಆಟ, ರೊಕ್ಕದಾಟ ಮುಂತಾದವುಗಳೆಲ್ಲ ಆಟಗಳೇ. ಇವುಗಳಲ್ಲಿ ಹಲಕೆಲವು ಆಟಗಳು ದೈಹಿಕ ಬಲದ ಬೆಳವಣಿಗೆಗೂ. ಹಲವಾರು ಆಟಗಳು ಕೇವಲ ಮನರಂಜನೆಗೂ, ಕಾಲ ಕಳೆಯುವದಕ್ಕೂ ಕಾರಣವಾದರೆ, ಕೆಲವಂತೂ ಬದುಕಿನ ಸರ್ವತೋಮುಖವಾದ ಅಧಃಪತನಕ್ಕೆ ಕಾರಣವಾಗಿ ಜೀವನವೃಕ್ಷದ ಮೂಲ ಕ್ಕೇನೇ ಕುಠಾರಪ್ರಾಯವಾಗಿರುವವು. ಮೇಲ್ಕಾಣಿಸಿದ ಆಟಗಳಲ್ಲಿ ಶಾರೀರಿಕ ಬಲಸಂವರ್ಧ ನೆಗಾಗಿ ಆಡುವ ಆಟಗಳನ್ನು ವಿಧಾಯಕ ಆಟಗಳೆಂದೂ, ಪರಮಾರ್ಥದ ಅಥವಾ ಲೌಕಿಕದ ಪ್ರಗತಿಗೆ ಅಡ್ಡಿಆತಂಕಗಳನ್ನುಂಟು ಮಾಡುವ ಆಟಗಳನ್ನು ವಿಘಾತುಕ ಆಟಗಳೆಂದೂ ಇಬ್ಬಗೆಯಾಗಿ ವಿಂಗಡಿಸಬಹುದು.

" ಆಡಿ ನಳ ಕೆಟ್ಟ ಮತ್ತಾಡಿ ಧರ್ಮಜ ಕೆಟ್ಟ ।
ಕೂಡಿದ ನಾಲ್ವರ್ ತಿರಿದುಂಡರ್ ನೆತ್ತವನು ।
ಆಡಬೇಡೆಂದ ಸರ್ವಜ್ಞ "

ಸಾಮ್ರಾಟ, ಚಕ್ರವರ್ತಿ,ಸಾರ್ವಭೌಮನೆನಿಸಿದ ನಳಮಹಾರಾಜ, ಪ್ರಥಮಪಾಂಡವನೆನಿಸಿದ ಧರ್ಮರಾಜ ಮುಂತಾದ ವೀರಾಧಿವೀರರೂ ವಿಘಾತುಕ ಆಟಗಳನ್ನಾಡಿ ರಾಜ್ಯಭ್ರಷ್ಟರಾಗಿ, ಕೈಯಲ್ಲಿ ಭಿಕ್ಷಾಪಾತ್ರೆ ಹಿಡಿದು ತಿರಿದುಣ್ಣುವಂತಹ ದುರವಸ್ಥೆಗೆ ತುತ್ತಾಗಿ ಕಂಗೆಟ್ಟರು. ಕಾರಣ ವಿಘಾತಕ ಆಟಗಳನ್ನು ಆಡಬಾರದೆಂದು ಸರ್ವಜ್ಞನು ಹೇಳಿರುವನು. ಈ ಲೌಕಿಕ ಆಟ. ನೋಟ, ಬೇಟ.ಮಾಟಗಳ ಧಾಟಿಯೇ ಬೇರೆಯಾಗಿರುವದು. ಶಿವಾನುಭಾವಿಗಳಾದ ದಿವ್ಯಜ್ಞಾನಿಗಳು ಆಧ್ಯಾತ್ಮಿಕ ವಿಷಯ ವಿವೇಚನಾಪ್ರಸಂಗದಲ್ಲಿ,ಇಲ್ಲವೇ ಮಹಾಶಿವಯೋಗಿ ಗಳ ಸತ್ಪ್ರಸಂಗಗಳನ್ನು ಪದ್ಯರೂಪ ಪ್ರಬಂಧ ರೂಪದಲ್ಲಿಯೋ, ಗದ್ಯಪದ್ಯಾತ್ಮಕ ಚಂಪೂ ರೂಪದಲ್ಲಿಯೋ, ರಗಳೆಯ ರೂಪದಲ್ಲಿಯೋ ಬಿತ್ತರಿಸುವ ಪ್ರಸಂಗದಲ್ಲಿ ಪ್ರಯೋಗಿಸಿದ ಲೀಲಾಶಬ್ದದ ವೈಶಿಷ್ಟ್ಯವೇ ಬೇರೆ ಬಗೆಯದು. ಪರಮಾರ್ಥಪಥದಲ್ಲಿ ಮುನ್ನಡೆದ ಅಸಾ ಮಾನ್ಯ ಮಹಾಪುರುಷರು ತಾವುನಡೆದ ಆಧ್ಯಾತ್ಮಪಥದಲ್ಲಿ ಸಾಮಾನ್ಯ ಜನಕೋಟಿಯನ್ನು ಮುನ್ನಡೆಯಿಸುವ ದೃಢಸಂಕಲ್ಪವುಳ್ಳವರಾಗಿ, ತಾವು ಕಂಡುಂಡ ಸವಿಯನ್ನು ಅವ ರಿಗೂ ಉಣಿಸುವ ಮಹೋದ್ದೇಶದಿಂದ, ಯಾವಯಾವ ಸತ್ಕ್ರಿಯೆಗಳನ್ನು ಮಾಡು ವರೋ ಅವೆಲ್ಲವೂ ಲೀಲೆಯೇ.

ನಾಮಾಂಕಿತ ಶಿವಕವಿಯೆನಿಸಿದ ಚಾಮರಸನು ನಾಮ, ನೇಮ, ಸೀಮೆಗಳನ್ನು ನಿರ್ನಾಮಮಾಡಿ ಪ್ರಭುದೇವರ ಲೋಕಾನುಗ್ರಹವ ಮಾಡಿದುದರ ಬಗೆಗೆ ಪ್ರಬಂಧ ಬರೆ

ಯುವಾಗ ಅದಕ್ಕೆ ಪ್ರಭುಲಿಂಗ ಪುರಾಣ, ಪ್ರಭುಲಿಂಗ ಚರಿತೆ, ಪ್ರಭುಲಿಂಗ ಕಥೆ, ಪ್ರಭು ಲಿಂಗ ವಿಳಾಸ ಹೀಗೊಂದೂ ನಾಮವನ್ನಿಡದೆ ಪ್ರಭುಲಿಂಗಲೀಲೆಯೆಂದು ಕರೆದಿರುವನು. ಪುರಾಣ, ಕಥೆ, ಚರಿತ್ರೆ, ವಿಳಾಸ ಮೊದಲಾದ ಪದಗಳಲ್ಲಿಲ್ಲದ ಒಂದು ಮಹತ್ತರವಾದ ಅರ್ಥವು ಲೀಲಾ ಶಬ್ದದಲ್ಲಿ ಅಡಗಿದೆ. ಅಂತೆಯೇ ಕವಿಯು ಪ್ರಭುಲಿಂಗಲೀಲೆ ಎಂದು ತಾನು ಬರೆದ ಮಹಾಕಾವ್ಯಕ್ಕೆ ಹೆಸರಿಟ್ಟನು.

"ಪ್ರತಿಪಾದ್ಯ ಮಹಿಮ್ನಾಚ ಪ್ರಬಂಧೋಹಿ ಮಹತ್ತರಃ"

ಕಾವ್ಯಲೇಖಕನು ತಾನು ವಿರಚಿಸುವ ಮಹಾಕಾವ್ಯದಲ್ಲಿ ಪ್ರತಿಪಾದಿಸುವ ವಿಷಯುವು ಮಹತ್ತರವಾದಷ್ಟು, ಅಲ್ಲದೆ ತನ್ನ ಕಾವ್ಯಕ್ಕೆ ಯಾವ ಮಹಾವಿಭೂತಿಯನ್ನು ಕಥಾನಾಯಕ ನನ್ನಾಗಿ ಆಯ್ಕೆ ಮಾಡಿಕೊಳ್ಳುವನೋ ಆ ವಿಭೂತಿಯು ವಿಶ್ವಮಾನ್ಯನಾದಷ್ಟು, ಆ ಪ್ರಬಂಧವು ಉತ್ತಮೋತ್ತಮ ಕೃತಿಯೆನಿಸಿ ವಿದ್ವಜ್ಜನರ ಮೆಚ್ಚುಗೆಯನ್ನು ಪಡೆಯುವದು.

ಬಸವ ಪುರಾಣ, ಚೆನ್ನಬಸವ ಪುರಾಣ, ರೇಣುಕವಿಜಯ, ರಾಜಶೇಖರ ವಿಳಾಸ, ಸಿದ್ಧೇಶ್ವರ ಪುರಾಣ ಮುಂತಾದ ಪ್ರಬಂಧಗಳು ಉಪನಿಷತ್ತು, ಗೀತೆ, ಸಿದ್ಧಾಂತಶಿಖಾ ಮಣಿ, ವಿವೇಕ ಚಿಂತಾಮಣಿ, ಅನುಭವಾಮೃತ, ದಾಸಬೋಧ ಮುಂತಾದ ತಾತ್ವಿಕ ಗ್ರಂಥಗಳು ಕಥಾನಾಯಕನ ಮಹಿಮಾತಿಶಯದಿಂದಲೂ, ಸತ್ವಯುತ ತಾತ್ವಿಕ ವಿಷಯ ಪ್ರತಿಪಾದನೆಯಿಂದಲೂ ಸಾಹಿತ್ಯ ನಭೋಮಂಡಲದಲ್ಲಿ ಧ್ರುವ ತಾರೆಯಂತೆ ಥಳಥಳ ಹೊಳೆಯುತ್ತಲಿವೆ. ಪ್ರಭುಲಿಂಗಲೀಲೆಯೆಂದರೆ ಆಧ್ಯಾತ್ಮಿಕ ಸೌರಭವನ್ನೀಂಟುವ ಮುಮುಕ್ಷು ಮಧುಕರಗಳಿಗೆ ಹೂದೋಟ, ತತ್ವಾಮೃತ ಬುಭುಕ್ಷುಗಳಿಗೆ ಸವಿಯೂಟ, ಆತ್ಮಸೌಂದರ್ಯ ದಿದೃಕ್ಷುಗಳಿಗೆ ಸುಂದರನೋಟ, ಶಿವಸಾಮರಸ್ಯವ ಪಡೆಯಲು ತವಕಿ ಸುವ ಶಿವಯೋಗಿಗಳಿಗೆ ಮಹಾಕೂಟ. ಇಂತಹದೊಂದು ಮಹಾಕೃತಿಯನ್ನು ವಿರಚಿಸ ಲಿಕ್ಕೂ ಒಂದು ಹಿನ್ನೆಲೆಯಿದೆ.

ವಿಜಯನಗರದ ಅರಸನಾದ ಪ್ರೌಢದೇವರಾಯನು ಭಾರತವನ್ನು ಕನ್ನಡದಲ್ಲಿ ಬರೆ ಯಬೇಕೆಂದು ಕುಮಾರವ್ಯಾಸ ಮತ್ತು ಚಾಮರಸ ಈರ್ವರಿಗೂ ತಿಳಿಸಿ ಯಾರ ಕಾವ್ಯವು ನವರಸಭರಿತವೆನಿಸಿ ಶ್ರೇಷ್ಠವೆಂದು ವಿದ್ವಜ್ಜನರ ಮೆಚ್ಚುಗೆಯನ್ನು ಪಡೆಯುವದೋ ಅವ ರಿಗೆ ಗೌರವಾದರಗಳು ಸಲ್ಲುತ್ತವೆ ಎಂದು ಆಜ್ಞಾಪಿಸಿದನು. ಈರ್ವರೂ ಬರೆದ ಕಾವ್ಯ ಗಳನ್ನು ವಿದ್ವಜ್ಜನರ ಸಭೆಯಲ್ಲಿ ಪರೀಕ್ಷಿಸಲು ಚಾಮರಸನ ಕಾವ್ಯವೇ ನವರಸಭರಿತವಾದು ದೆಂದೂ, ಅದಕ್ಕೇನೇ ಗೌರವಾದರಗಳು ಸಲ್ಲಬೇಕೆಂದೂ ನಿರ್ಣಯವಾಯಿತು. ಇದರಿಂದ ಚಿಂತಾಮಗ್ನನಾದ ಕುಮಾರವ್ಯಾಸನು ಚಾಮರಸನ ತಂಗಿಯೇ ತನ್ನ ಹೆಂಡತಿಯಾದುದ ರಿಂದ ಅವಳ ಕೈಯಿಂದ ಚಾಮರಸನ ಕೃತಿಯನ್ನು ಯುಕ್ತಿಯಿಂದ ತರಿಸಿಸುಡಿಸಿದನು. ಇದ ರಿಂದ ಖಿನ್ನಮನಸ್ಕನಾಗಿ ಚಾಮರಸನು ಮಲಗಿರಲು, ಪಂಪಾವತಿ ವಿರೂಪಾಕ್ಷನು ಕನಸಿನಲ್ಲಿ ಬಂದು ಶರಣರನ್ನಲ್ಲದೆ ನರರನ್ನು ಕುರಿತು ಕಾವ್ಯ ಬರೆದುದಕ್ಕಾಗಿ ಈ ದುರ್ಘಟನೆ ಸಂಭವಿ ಸಿದೆ. ಇನ್ನಾದರೂ ಶಿವಯೋಗಿಗಳನ್ನು ಕುರಿತು ಕಾವ್ಯವನ್ನು ರಚಿಸು, ಅವರನ್ನು ಹಾಡಿ ಹರಸು, ಅಂದರೆ ನಿನಗೆ ಕಲ್ಯಾಣವಾಗುವದು ಎಂದು ಹೇಳಿ ಅಂತರ್ಧಾನನಾದನು. ಚಾಮ ರಸನ ಕಾವ್ಯವೇ ಇಲ್ಲದುದಕ್ಕಾಗಿ ಕುಮಾರವ್ಯಾಸನಿಗೆ ರಾಜಮನ್ನಣೆ ದೊರೆತು ಕನಕಸ್ನಾನ

ಮಾಡಿಸಿ ಅವನ ಕಾವ್ಯವನ್ನು ಆನೆಯ ಮೇಲಂಬಾರಿಯಲ್ಲಿ ಮೆರೆಯಿಸುವ ವ್ಯವಸ್ಥೆಯಾ ಯಿತು. ನೂರೊಂದು ವಿರಕ್ತರಲ್ಲಿ ಮುಖ್ಯರಾದ ಜಕ್ಕಣಾರ್ಯ ಮೊದಲಾದವರು ಸತ್ತವರ ಕಥೆಗೆ ಈ ಮನ್ನಣೆಯು ಸಲ್ಲತಕ್ಕದ್ದಲ್ಲ, ಈ ಗೌರವಾದರಗಳು ಶರಣರ ಚರಿತೆಗೇ ಸಲ್ಲ ತಕ್ಕವು ಎಂದು ಅವರಿಗೂ ಮುಕುಂದಪೆದ್ದಿ ಮೊದಲಾದವರಿಗೂ ವಾದವಿವಾದಗಳಾ ಕೊನೆಗೆ ಸತ್ತವರಲ್ಲದವರ ಕಥೆಯನ್ನು ತರಿಸುವೆವೆಂದು ಹೇಳಿ, ಚಾಮರಸನಿಂದ ದಿ ವೊಂದಕ್ಕೆ ೧೦೧ ಪದ್ಯಗಳಂತೆ ೧೧ ದಿನಗಳಲ್ಲಿ ೧೧೧೧ ಪದ್ಯಗಳುಳ್ಳ ಪ್ರಭುಲಿಂಗಲೀಲೆ ಯನ್ನು ಬರೆಯಿಸಿ ಅದನ್ನು ರಾಜನಿಗೆ ಒಪ್ಪಿಸಿ ರಾಜಸಭೆಯಲ್ಲಿ ಮನ್ನಣೆ ಪಡೆದರು.

ವಿಶ್ಲೇಷಣೆ ಮಾಡಿದಷ್ಟು ವಿಶಿಷ್ಟಾರ್ಥವನ್ನೀಯುವ ಪ್ರಭು, ಲಿಂಗ, ಲೀಲೆ ಎಂಬ ಪದತ್ರಯಗಳ ವಿವರಣೆ ಹಾಗೂ ಪ್ರಭುಲಿಂಗ ಲೀಲೆ ಮಹಾಕಾವ್ಯೋದಯಕ್ಕೆ ಕಾರಣ ಇದೆಲ್ಲದರ ಸ್ಪಷ್ಟೀಕರಣವಾದಂತಾಯಿತು. ಬಸವಾದಿ ಪ್ರಥಮರಿಗೆ ಜ್ಞಾನೋಪ ದೇಶಕನೂ ಶ್ರೀ ಬಸವಣ್ಣನವರಿಂದ ಸಂಸ್ಥಾಪಿಸಲ್ಪಟ್ಟ ಶೂನ್ಯ ಸಿಂಹಾಸನದ ಅಧಿಕಾ ರಿಯೂ ಆದ ಅಲ್ಲಮಪ್ರಭುವಿಗೆ ಹೇಗೆ ಮಹೋನ್ನತ ಸ್ಥಾನವಿದೆಯೋ ಹಾಗೆ ವೀರಶೈವ ಮತಪ್ರಶ್ರೇಷ್ಠತೆಯ ಬಗ್ಗೆ ಅನ್ಯಮತದವರೊಡನೆ ವಾದ ಮಾಡಿ ಅವರನ್ನು ಸೋಲಿಸಿ "ಅನ್ಯಮತ ಕೋಲಾಹಲ" "ವೀರಶೈವಮತ ಸಾರೋದ್ಧಾರ" ಎಂಬ ಬಿರುದು ಪಡೆ ಚಾಮರಸನಿಗೂ, ಹಾಗೂ ಅವನು ಬರೆದ ಪ್ರಭುಲಿಂಗಲೀಲೆಗೂ ಉನ್ನತೋನ್ನತ ಸ್ಥಾನವಿದೆ.

---

# ಮಂಗಲಾಚರಣ

**೧ನೆಯ ಗತಿ :**

ಉತ್ತರಕರ್ನಾಟಕದಲ್ಲಿ ಉತ್ತಮಪಟ್ಟಣವೆನಿಸಿದ ಗದಗಿನಲ್ಲಿ ನೆಲೆಸಿ ಹೋದಾತ ಕುಮಾರ ವ್ಯಾಸ. ಮಹಾಸನ್ನಿಧಿಯವರು ಎಳೆವಯದಲ್ಲಿ ಹೂಬಳ್ಳಿಯ ಮೂರು ಸಾವಿರ ಮಠದ ಧಾರ್ಮಿಕ ಶಿಕ್ಷಣ ಪಡೆದ ತಾಣ ಕುಮಾರೇಶ್ವರ ಸಂಘ. ವಿದ್ಯಾಭ್ಯಾಸಂಗ ಮಾಡಿ ವಿಶ್ವವಿದ್ಯಾಲಯದಿಂದ ಎಂ. ಎ. ಪದವೀ ವಿಭೂಷಿತರಾದ ಕುಮಾರ ಸಣ್ಣ ಜಗದ್ಗುರುಗಳು. ಕುಮಾರವ್ಯಾಸ, ಕುಮಾರೇಶ್ವರ ಸಂಘ, ಕುಮಾರಜಗದ್ಗುರುಗಳು ನಾಮ ಮಾತ್ರದಿಂದ ಅಥವಾ ಅನ್ವರ್ಥಕನಾಗಿ ಎಳೆಯರಾದರೆ,ಪ್ರಭುಲಿಂಗಲೀಲೆಯನ್ನು ಹೇಳುವ ನಾನು ಹಳೆಯನು. ಜಗದ್ಗುರುಗಳು ವಯದಿಂದ ಕಿರಿಯರಾದರೂ ಸಹ ವಿರತಿ, ನಿರಹಂಕಾರ, ಭಕ್ತಾನುಕಂಪ, ತನುವಿನಲ್ಲಿ ನಿರ್ಮೋಹ ಮುಂತಾದ ಲೋಕೋತ್ತರ ಗುಣಗಳಿಂದ ಹಿರಿಯರಾಗಿ ಮೆರೆಯುತ್ತಿರುವವರು. ವಯದಿಂದ ಹಿರಿಯನಾದರೂ ಗುಣರಾಶಿಯಿಂದ ಕಿರಿಯನಾದ ನಾನು ಅವರಿಗೆ ಹೃತ್ಪೂರ್ವಕವಾಗಿ ಅಭಿವಂದಿಸಿ ಪ್ರಭುಲಿಂಗಲೀಲೆಯನ್ನು ಪ್ರಾರಂಭಿಸುವೆನು. ಪ್ರವಚನ ಪ್ರಾರಂಭಿಸುವ ಮುನ್ನ ಸಮಯದ ಔಚಿತ್ಯವರಿತು ಪ್ರಾಸಂಗಿಕವಾಗಿ ನಾಲ್ಕು ನಲ್ನುಡಿಗಳನ್ನು ಹೇಳುವೆ,

ಒಂದು ವರ್ಷದಲ್ಲಿ ಚೈತ್ರ ಮಾಸ ಮೊದಲು ಮಾಡಿ ಫಾಲ್ಗುಣದವರೆಗೆ ಬರುವ ಹನ್ನೆರಡು ಮಾಸಗಳಲ್ಲಿ ಶ್ರಾವಣ ಮಾಸ ಒಂದು. ಶ್ರವಣ ಶಬ್ದದಿಂದ ಶ್ರಾವಣ ಪದ ಬಂದಿದೆ. ಶ್ರವಣ ಅಂದರೆ ಜೈನಸನ್ಯಾಸಿ, ಒಂದು ನಕ್ಷತ್ರ, ಚಿಮ್ಮಟ್ಟಿಗೆ ಹೀಗೆ ವಿವಿಧ ಅರ್ಥಗಳಿದ್ದರೂ ಇಲ್ಲಿ ಶ್ರವಣ ಶಬ್ದಕ್ಕೆ ಕಿವಿ ಎಂದು ಸಂದರ್ಭಕ್ಕೆ ಅನುಸರಿಸಿ ಅರ್ಥಮಾಡಬೇಕಾಗುವದು. "ಶ್ರವಣಸ್ಯ ಇದಂ ಶ್ರಾವಣ ಅಂದರೆ ಕಿವಿಗೆ ಸಂಬಂಧ ಪಟ್ಟ ಮಾಸ. ಈ ಮಾಸದಲ್ಲಿ ಗುರುದೇವತಾ ಭಕ್ತಿಸಂಪನ್ನರಾದ ಶಿಷ್ಯರು ತತ್ವಶಾಸ್ತ್ರ ಕೋವಿದನಾದ ಸದ್ಗುರುವಿನ ಸನ್ನಿಧಿಯಲ್ಲಿ ಕುಳಿತು ನಿಷ್ಠೆಯಿಂದ ತತ್ತ್ವಶಾಸ್ತ್ರವನ್ನು ಕಿವಿಗೊಟ್ಟು ಕೇಳುವದು; ಒಂದೊಂದು ಕಡೆ ಶ್ರವಣವಿಲ್ಲದೇ ಶ್ರಾವಣ ಮಾಸವು ಒಣಪಣ ಮಾಸವಾಗುವದು. ದ್ವೇಷಾಸೂಯೆಗಳಿಂದ ದೂಷಿತರಾದ ಜನರಿಗೆ ಶ್ರಾವಣಮಾಸ ರಾವಣ ಮಾಸವಾಗುವದು, ನಿಜವಾಗಿ ನೋಡಿದರೆ ಶ್ರಾವಣ ಮಾಸ ಪಾವನ ಮಾಸ.

ಆಶ್ವೀಜಮಾಸ ಕಾರ್ತಿಕ ಮಾಸಗಳಲ್ಲಿ ಗುಡಿಗೋಪುರಗಳಲ್ಲಿಯೂ ಅಂಗಡಿಯ ಅಂಗಳಗಳಲ್ಲಿಯೂ ದೀಪಗಳನ್ನು ಸಾಲುಸಾಲಾಗಿ ಹಚ್ಚುವರು. ಇದರಿಂದ ನೇತ್ರಾನಂದವಾಗುವದು. ಆಷಾಢದಲ್ಲಿ ಅತ್ತಿಸೊಸಿ ಕೂಡಿ ಇರಬಾರದೆಂದು ಹೇಳುವರು. ಇದು ಲೌಕಿಕ. ಫಾಲ್ಗುಣ ಮಾಸವು ಅಶ್ಲೀಲ ಮಾಸ, ಅಶ್ಲೀಲ ರೀತಿಯಿಂದ ಬೈದಾಡಿ ಶಂಖವಾದ್ಯ ಮಾಡುವರು. ಆದರೆ ಶ್ರಾವಣ ಮಾಸ ಅಂತಹದಲ್ಲ. ಅದರ ವೈಶಿಷ್ಟ್ಯವೇ ಬೇರೆ. ನವವಿಧ ಭಕ್ತಿಗಳಲ್ಲಿ ಪ್ರಥಮಭಕ್ತಿಯೆನಿಸಿದ ಶ್ರವಣ ಕಾರ್ಯವು ಈ ಮಾಸದಲ್ಲಿ ತಪ್ಪದೇ ನಡೆಯುವದು. ಬೃಹದಾರಣ್ಯಕೋಪನಿಷತ್ತಿನಲ್ಲಿ ಯಾಜ್ಞವಲ್ಕ್ಯರು ಮೈತ್ರೇಯಿಯನ್ನು ಕುರಿತು ನೆರೆಕೇಳು ಕೇಳ್ದುದನರಿಯರಿದುದನೊಮ್ಮೆ ಮರೆಯದಿರು, ಗುರುಹೇಳ್ದ

ತೆರದೊಳು। ತೊರೆ ವಿಷಯವನು ತೊರೆದು ನಿರ್ವಿಷಯದೊಳು ಕರಿಗೊಂಡು ನಿಲೆ ನೀನ್ನೆ ಸುಖಿಯಪ್ಪೆ ಎಂದು ಹೇಳಿರುವರು. ಆತ್ಮಾಮೀಮಾಂಸೆಯನ್ನು ಮಾಡುವ ಪ್ರಸಂಗದಲ್ಲಿ ಉಪನಿಷತ್ತುಗಳೂ ಸಹ "ಶ್ರೋತವ್ಯ: ಮಂತವ್ಯ ನಿಧಿಧ್ಯಾಸತವ್ಯಃ, ಎಂದು ಹೇಳುವಲ್ಲಿ ಶ್ರವಣಕ್ಕೇ ಪ್ರಥಮ ಸ್ಥಾನ ಕೊಟ್ಟಿರುವವು. ಇಂಥಹ ಶ್ರವಣ ಕಾರ್ಯ ಈ ಮಾಸದಲ್ಲಿ ನಡೆವುದರಿಂದ ಇದು ಮೇಲಾದ ಮಾಸವು.

ಆತ್ಮಾನಂರಥಿನಂವಿದ್ಧಿ ಶರೀರಂರಥಮೇವತು।
ಬುದ್ಧಿಂಚ ಸಾರಥಿಂ ವಿದ್ಧಿ ಮನಃಪ್ರಗ್ರಹಮೇವಚ॥ ಕಠಶ್ರುತಿ

ಕಾಲುಗಳೆರಡು ಗಾಲಿಕಂಡಯ್ಯ।
ದೇಹವೆಂಬುದು ತುಂಬಿದ ಬಂಡಿ ಕಂಡಯ್ಯ।
ಬಂಡಿಯ ಹೊಡೆವರು ಐವರು ಮಾನಿಸರು।
ಒಬ್ಬರಿಗೊಬ್ಬರು ಸಮವಿಲ್ಲವಯ್ಯ।
ಅದರಿಚ್ಚೆಯನರಿದು ಹೊಡೆಯದಿದ್ದರೆ।
ಅದರಚ್ಚು ಮುರಿಯಿತ್ತು ಗುಹೇಶ್ವರ ಪ್ರಭುದೇವ॥

ಕಡೆಗೀಲಿಲ್ಲದ ಬಂಡಿ ಹೊಡೆಗೆಡೆವುದ ಮಾಬುದೇ।
ಕಡೆಗೀಲು ಬಂಡಿಗಾಧಾರ. ಕಡುದರ್ಪವೇರಿದ ಒಡಲೆಂಬ ಬಂಡಿಗೆ।
ಮೃಡಶರಣರ ನುಡಿಗಡಣವೇ ಕಡಗೀಲು ಕಾಣಾ ರಾಮನಾಥ॥
—ದೇವರದಾಸಿಮಯ್ಯ

ಹೀಗೆ ಉಪನಿಷತ್ಕಾರರೂ, ವಚನಕಾರರೂ, ಈ ದೇಹವನ್ನು ಒಂದು ರಥಕ್ಕೆ ಇಲ್ಲವೆ ಚಕ್ಕಡಿಗೆ ಹೋಲಿಸಿದ್ದಾರೆ. ಇದು ಬರಿದಾದ ಬಂಡಿಯಲ್ಲ. ತರತರದ ಸರಕುಗಳಿಂದ ಪೂರ್ಣ ತುಂಬಿದ ಬಂಡಿಯು, ಈ ಬಂಡಿಯಲ್ಲಿ ಷಡ್ಗುಣೈಶ್ವರ್ಯ ಸಂಪತ್ತು ಇದೆ. ಸಾಧನ ಚತುಷ್ಟಯದ ಭಾಂಡಾರವಿದೆ. ಶಮದಮಾದಿ ಸದ್ಗುಣಗಳ ಹೇಮಭಾಂಡಾರವಿದೆ. ಅಣಿಮಾದಿ ಅಷ್ಟ ಸಿದ್ಧಿಗಳ ವೈಭವವಿದೆ, ಪ್ರಾಣಾಪಾನಾದಿ ಪಂಚವಾಯುಗಳ ಸಂಚಯ ವಿದೆ. ಬೇಕಾದುದು ಬೇಕಾದಷ್ಟಿದ್ದರೂ, ಬೇಡಾದುದೂ ಈ ಬಂಡಿಯಲ್ಲಿ ಸಾಕಷ್ಟಿದೆ. ಷಡ್ರಿಪುಗಳು, ಪಾಪತ್ರಯಗಳು, ಅಷ್ಟಮದಗಳು ಇಂತಿವೆಲ್ಲ ಈ ಬಂಡಿಯಲ್ಲಿ ತುಂಬಿ ತುಳುಕುತ್ತವೆ. ಜೀವಾತ್ಮನು ಕುಳಿತಿರುವ ಈ ಬಂಡಿಯಲ್ಲಿಯ ಪಯಣವಾದರೋ ಎರಡು ಮೂರು ದಿನದ್ದಲ್ಲ; ನೂರಾರು ವರುಷದ ಪಯಣ. ಹಾದಿಯೂ ಇಕ್ಕಟ್ಟಿನದು, ಬಿಕ್ಕಟ್ಟಿನದು. ಗಾಡಿಯು ತಗ್ಗಿನಲ್ಲಿ ಉರುಳಿ ಬಿದ್ದರೆ ಅದನ್ನು ಸದ್ಗುರುವಿನ ಹೊರತು ಮತ್ತಾರೂ ಎತ್ತುವವರಿಲ್ಲ, ಮುಂದಕ್ಕೆ ಒತ್ತುವವರಿಲ್ಲ. ಈ ಬಂಡಿಯು ಸುರಕ್ಷಿತವಾಗಿ ಮೋಕ್ಷಪಟ್ಟಣಕ್ಕೆ ಮುಟ್ಟಬೇಕಾದರೆ ಮಹಾನುಭಾವರ ಶಿವಾನುಭವದ ನುಡಿಗಳೆಂಬ ಕೀಲಗಳನ್ನು ಎಡಬಲ ಕಿವಿಗಳಲ್ಲಿ ಹಾಕಬೇಕು. ಆಗ ಮಾತ್ರ ಗಾಡಿಯು ಎಲ್ಲಿಯೂ ಅತ್ತಿತ್ತ ಹೊಯ್ದಾಡದೇ ಒಗ್ಗಾಲಿಯಾಗದೇ ನೇರವಾಗಿ ಮುಕ್ತಿಮಂದಿರಕ್ಕೆ ಮುಟ್ಟುವದು. ಅಂತೆಯೇ ನಿಜಗುಣರು —

ಶ್ರೀ ಗುರು ವಚನುಪದೇಶವನಾಲಿಸಿದಾಗಲೇ [illegible] ಮುಕುತಿ

ಶ್ರೀ ಗುರುವಿನಿಂದ ಶಿವಾನುಭವ ಶಾಸ್ತ್ರವನ್ನು ಕೇಳಿದಾಗಲೇ ಮುಮುಕ್ಷುವಿಗೆ ಮುಕ್ತಿಯಾಗುವದು ಎಂದು ಹೇಳಿರುವರು.

ಅದೇತಾನೇ ಮದುವೆಯಾದ ಮದುಮಕ್ಕಳು, ಕಾರಿನಲ್ಲಿ ಕುಳಿತು ಊರಹೊರಗೆ ತಿರುಗಾಡಲು ಹೋದಾಗ, ಮೋಟಾರು ಮರಕ್ಕೆ ಡಿಕ್ಕಿ ಹೊಡೆದು ನವದಪಂತಿಗಳು ಸತ್ತರೆ ಹಾನಿಯಾಯಿತೆಂದು ಹೇಳುವರು. ವಿವಿಧ ಸರಕುಗಳಿಂದ ತುಂಬಿದ ನೌಕೆಯೊಂದು ಆಕಸ್ಮಿಕವಾಗಿ ಬಂಡೆಗಲ್ಲಿಗೆ ಅಪ್ಪಳಿಸಿ ನೀರಲ್ಲಿ ಮುಳುಗಿ ಹೋದರೆ ಆಗಬಾರದ್ದು ಆಯಿತೆಂದು ಹೇಳುವರು. ಹೊಸದಾಗಿ ಕಟ್ಟಿದ ಮನೆಯೊಂದು ಬೆಂಕಿಯಿಂದ ಸುಟ್ಟು ಭಸ್ಮವಾದರೆ ಕೇಡು ಆಯಿತೆಂದು ಹಳಹಳಿಸುವರು. ಶ್ರೀ ಗುರುಸನ್ನಿಧಿಯಲ್ಲಿ ತತ್ವಶಾಸ್ತ್ರಕೇಳಿ ಮಾನವಜನ್ಮವನ್ನು ಸಾರ್ಥಕ ಮಾಡಿಕೊಳ್ಳದೇ ಹೋದ ಪಕ್ಷದಲ್ಲಿ ಆಗುವ ಹಾನಿಯು ಈ ಎಲ್ಲ ಹಾನಿಗಳಿಗಿಂತಲೂ ಮಿಗಿಲಾದ ಹಾನಿ ಎಂದು ಉಪನಿಷತ್ತು – "ನಚೇದಿಹಾವೇದೀನ್ಮಹತೀವಿನಷ್ಟಿಃ" ಎಂಬ ಮಂತ್ರದಿಂದ ಹೇಳುವದು.

"ಶ್ರೋತ್ರಂಶ್ರುತೇನೈವ ನಕುಂಡಲೇನ" ಕರ್ಣಕ್ಕೆ ಸತ್‌ಶಾಸ್ತ್ರಶ್ರವಣವೇ ಭೂಷಣವಲ್ಲದೆ ರತ್ನ ಕುಂಡಲಗಳಾಗಲಿ, ಚಿನ್ನಾದ ಮುರುವುಗಳಾಗಲಿ, ಓಲೆಗಳಾಗಲಿ, ಭೂಷಣವಲ್ಲವೆಂದು ಭರ್ತೃಹರಿಯು ಹೇಳಿರುವನು.

> "ಶಂಭುವಿನಸತ್ಕಥೆಯ ನಂಬಿ ಕೇಳದ ಮನುಜ।
> ಹುಂಬನೆನಿಸುವನು ಅವನ ಕಿವಿಯುತಾ।
> ತಂಬೂರಿಯ ಕಿವಿಯು ಸರ್ವಜ್ಞ॥

ಗಾಯಕರು ಹಾಡುವಾಗ ಕೈಯಲ್ಲಿ ಹಿಡಿಯುವ ತಂಬೂರಿಗೆ ಮೇಲ್ಭಾಗದಲ್ಲಿ ಶ್ರುತಿ ಗೂಡಿಸುವದಕ್ಕೋಸುಗ ತಂತಿಗಳನ್ನು ಬಿಗಿದ ಕಟ್ಟಿಗೆಯ ಕಿವಿಗಳಿರುತ್ತವೆ. ಯಾರು ಸದ್ಗುರುವಿನ ಸಾನಿಧ್ಯದಲ್ಲಿ ಕುಳಿತು ತತ್ವಶಾಸ್ತ್ರವನ್ನು ಕೇಳುವದಿಲ್ಲವೋ ಅವರ ಕಿವಿಗಳೂ ತಂಬೂರಿಗಿರುವ ಕಟ್ಟಿಗೆಯ ಕಿವಿಗಳಿಗೆ ಸಮಾನ ಎಂದು ಓರ್ವ ಅನುಭಾವಿ ಹೇಳಿರುವನು.

ಶತಾಯುಷಿಯಾದ ಅಸಿತಮಹಾಮುನಿಯು ವಿಶ್ವವಿಭೂತಿಯಾಗಲಿರುವ ಬುದ್ಧನ ಹಸ್ತರೇಖೆಯನ್ನು ನೋಡಿ ಪ್ರಬುದ್ಧನಾದ ಮೇಲೆ ಈ ಮಹಾಪುರುಷನು ಮಾನವಕೋಟಿಗೆ ನೀಡುವ ದಿವ್ಯ ಸಂದೇಶವನ್ನು ಕೇಳುವ ಮಹಾಭಾಗ್ಯ ನನಗಿಲ್ಲವಲ್ಲ ಎಂದು ಕಂಬನಿಗರೆದನಂತೆ.

ಹಸಿವು ತೃಷೆಯುಳ್ಳವರಿಗೆ ಅನ್ನನೀರುಗಳು ಹೇಗೇ ಅವಶ್ಯವೊ ಹಾಗೆ ತತ್ತ್ವಶಾಸ್ತ್ರದಲ್ಲಿ ಮುನ್ನಡೆವ ಸಾಧಕನಿಗೆ ಶ್ರವಣವು ಅತೀವ ಪ್ರಧಾನವಾದುದು. ವಿಶ್ವದಲ್ಲಿ ವಿವಿಧ ಜಾತಿ, ಮತ, ಪಂಥಗಳ ಜನರಿದ್ದರೂ ಅವರಲ್ಲಿ ಭವಿ–ಭಕ್ತ ಅಥವಾ ನಾಸ್ತಿಕ–ಆಸ್ತಿಕ ಎಂದು ಎರಡೇ ಎರಡಾಗಿ ವಿಭಜಿಸಬಹುದು. ಆಸ್ತಿಕರು ದೇವರಲ್ಲಿ ವಿವಿಧ ಸಂಬಂಧಗಳನ್ನು ಕಲ್ಪಿಸಿಕೊಂಡು ದೇವತೋಪಾಸನೆ ಮಾಡುವರು. ಭೃತ್ಯಭಾವದಿಂದ ನಡೆದುಕೊಳ್ಳುವ ಋಷಿಮುನಿಗಳು ದೇವರನ್ನು ಸ್ವಾಮಿ, ಅಧಿಪತಿ, ಒಡೆಯ ಎಂಬ ಭಾವದಿಂದ ಆರಾಧಿಸ್ಸುವರು. ಶಾಕ್ತರು ಆದಿಶಕ್ತಿಯನ್ನು ತಾಯಿಯೆಂದೂ, ಕ್ರೈಸ್ತರು ದೇವರನ್ನು ತಂದೆಯೆಂದೂ,

ಯಶೋದಾ, ಬಿಜ್ಜಮಹಾದೇವಿ ಮೊದಲಾದ ಮಹಿಳೆಯರು ಮಗನೆಂದೂ, ಅರ್ಜುನನು ಗೆಳೆಯನೆಂದೂ, ದ್ರೌಪದಿಯು ಅಣ್ಣನೆಂದೂ ಭಾವಿಸಿ ಉಪಾಸನೆ ಮಾಡಿರುವರು. ಬಸವಣ್ಣನವರಂತೂ "ತಂದೆ ನೀನು ತಾಯಿನೀನು, ಬಂಧುನೀನು ಬಳಗನೀನು, ನೀನಲ್ಲದೆ ಮತ್ತಾರು ಇಲ್ಲವಯ್ಯ ಕೂಡಲಸಂಗಮದೇವ" ಎಂದು ಬಗೆಬಗೆಯ ಸಂಬಂಧಗಳನ್ನು ಕಲ್ಪಿಸಿ ಸರ್ವಾತ್ಮನಾದ ದೇವರಿಗೆ ಮೊರೆಹೊಕ್ಕಿದ್ದಾರೆ. ವೀರಶೈವ ಷಟ್‌ಸ್ಥಲ ಸಿದ್ಧಾಂತವು ಈ ಎಲ್ಲ ಸಂಬಂಧಗಳಿಗೆ ವಿಭಿನ್ನವಾದ ಸತಿ ಪತಿ ಭಾವಾತ್ಮಕ ಸಂಬಂಧವನ್ನು ಹೇಳುತ್ತದೆ.

"ಶರಣಸತಿಯ ಮದುವೆಯ ಸಂಭ್ರಮವನು ನೋಡಿರಮ್ಮ ।
ಪರಮಾನಂದಪಯೋನಿಧಿಯೊಳಗೆ ಓಲಾಡಿರಮ್ಮ"

"ಹೆಮ್ಮಗಳು ನಾನಿಮ್ಮ ನೆಮ್ಮಿಕೊಂಡಿರುವೆನ್ನೈ ।
ಗಮ್ಮನೇ ಎನ್ನನ್ನು ಕರೆಯ ಬನ್ನಿ –"

"ಗುರುವೇ ತೆತ್ತಿಗನಾದ, ಲಿಂಗವೇ ಮದುವಣಿಗನಾದ ಆನುಮದುಮಗಳಾದೆನು"
"ಜಗವೆಲ್ಲರಿಯಲು ಎನಗೊಬ್ಬ ಗಂಡನುಂಟು, ಆನುನಿತ್ಯೈದೆ, ಆನು ಮುತ್ತೈದೆ"

ಮುಂತಾದ ಗೇಯಸಾಹಿತ್ಯವು ಮೇಗಣ ಅಭಿಪ್ರಾಯವನ್ನೇ ಪುಷ್ಟೀಕರಿಸುತ್ತದೆ. ಶರಣರಾದ ನಾವೆಲ್ಲರೂ ಸತಿಯರು, ಲಿಂಗದೇವನೇ ನಮಗೆ ಪತಿಯು. ಶರಣನೇ ಸತಿಯು ಲಿಂಗವೇ ಪತಿಯೆಂದು ತಿಳಿದು ಮಾಡುವ ಆರಾಧನೆಗೆ ಮಧುರಾಭಕ್ತಿ ಎಂದು ಕರೆಯುವರು. ಹಲವೆಡೆಗೆ ಪರಮಾತ್ಮನೇ ಸತಿಯೆಂದೂ ತಾನು ಪತಿಯೆಂದೂ ತಿಳಿದು ಮಾಡಿದ ಆರಾಧನೆಯು ಕಂಡುಬರುವದು. ಇರಾಣದೇಶದ ಸುಫೀ ತತ್ವಜ್ಞರು ಹೀಗೆ ಆರಾಧಿಸುವರೆಂದು ತಿಳಿದುಬರುವದು. ೧೨ನೇಶತಮಾನದ ಶ್ರೀ ಬಸವಣ್ಣನವರ ಮಹಾಮನೆಯಲ್ಲಿ ಮಹಾ ಪ್ರಸಾದಿಯೆಂದು ಕೀರ್ತಿವೆತ್ತ ಮರುಳಶಂಕರದೇವರು ಶರಣ ಪತಿ ಲಿಂಗಸತಿ ಎಂಬ ಭಾವದಿಂದ ಆರಾಧನೆ ಮಾಡುತ್ತಿದ್ದರೆಂದು ಅವರ .

ಶ್ರೀ ಮಹಾಗುರುವೇ ತಂದೆ ಮಹಾಜಂಗಮವೇ ತಾಯಿ ಇವರಿಬ್ಬರ ಸಂಗಸಂಯೋಗದಿಂದ ಆನು ಹುಟ್ಟಿದೆನೋಡಯ್ಯ ಆನುಹುಟ್ಟಿದ ಬಳಿಕ ತಂದೆತಾಯಿಗಳಿಬ್ಬರೂ ಲಿಂಗವೆಂಬ ಹೆಣ್ಣು ತಂದು ಎನ್ನಕೊರಳಲ್ಲಿ ಕಟ್ಟಿ ಮದುವೆಯ ಮಾಡಿದರಯ್ಯಾ — — " ಎಂಬ ವಚನದಿಂದ ತಿಳಿದು ಬರುವದು.

ಮಾನವ ಜನಾಂಗದಲ್ಲಿ ತೋರುವ ಪಿತೃ-ಪುತ್ರ, ಅಣ್ಣ-ತಮ್ಮ ಸ್ವಾಮಿ-ಭೃತ್ಯ, ಮಾತೃ-ಪುತ್ರ ಮುಂತಾದ ಸಂಬಂಧಗಳಲ್ಲಿ ಸತಿಪತಿ ಭಾವಸಂಬಂಧವು ಅತ್ಯಂತ ನಿಗೂಢವೂ, ಪ್ರಗಾಢವೂ, ಮಧುರತಮವೂ, ನೈಸರ್ಗಿಕವೂ ಇರುವದು.

ಲೋಕದಲ್ಲಿ ಪತಿವ್ರತಾಶಿರೋಮಣಿಯಾದ ಸತಿಯು ತನ್ನ ಪ್ರಿಯಪತಿಯನ್ನು ಭಕ್ತಿಯಿಂದ ಸೇವೆಗೈಯುವಂತೆ ಶರಣ ಸತಿಯು ತ್ರಿಕರಣ ಶುದ್ಧಿಯಿಂದ ಲಿಂಗದೇವನನ್ನು ಸೇವಿಸತಕ್ಕದ್ದು. ಮುತ್ತೈದೆಯಾದ ಚೆಲ್ವರಸಿಯು ವಿವಿಧ ಅಲಂಕಾರಗಳಿಂದ ಅಲಂಕೃತಳಾಗುವಂತೆ ಶರಣಸತಿಯು ಅಲೌಕಿಕ ಅಲಂಕಾರಗಳಿಂದ ಭೂಷಿತಳಾಗಬೇಕು. ಗಂಡನ ಮನೆಗೆ ಕಳುಹುವ ಮುನ್ನ ತಾಯಿಯು ಮಗಳನ್ನು ಸಿಂಗರಿಸಿ ಕಳುಹುವಂತೆ ಮಾತೃಹೃದ

ಯದ ಜಗದ್ಗುರುಗಳವರು ಶರಣಸತಿಯರಾದ ನಿಮ್ಮನ್ನು ಲಿಂಗಪತಿಯ ಗೃಹಕ್ಕೆ ಕಳುಹುವಾಗ ಪ್ರಭುಲಿಂಗ ಲೀಲಾಶ್ರವಣವೆಂಬ ಮುತ್ತುರತ್ನಗಳ ಓಲೆಯನ್ನು ಕಿವಿಯೊಳ ಗಿಟ್ಟು ಕಳುಹಲಿರುವರು,

ಪ್ರಭುಲಿಂಗಲೀಲೆಯನ್ನು ಬರೆದ ಚಾಮರಸನು ವಿರಕ್ತನು. ಕಾವ್ಯದ ಕಥಾನಾಯಕ ನಾದ ಅಲ್ಲಮಪ್ರಭುವು ವಿರಕ್ತನು. ಪ್ರಭುಲಿಂಗಲೀಲೆಯನ್ನು ಹೇಳಲು ಅಪ್ಪಣೆ ಮಾಡಿದ ಜಗದ್ಗುರುಗಳೂ ಅನುಪಮವಿರಕ್ತರು. ಈ ವಿರಕ್ತತ್ರಯರ ಸಮ್ಮುಖದಲ್ಲಿ ಶ್ರವಣಾ ಪೇಕ್ಷೆಯಿಂದ ಬಂದು ಕುಳಿತವರು ಮಾತ್ರ ಅನುರಕ್ತರು. ರತಿಯಲ್ಲಿ ವಿರತಿಯನ್ನು, ಭೋಗದಲ್ಲಿ ತ್ಯಾಗವನ್ನು, ಇಹದಲ್ಲಿ ಪರವನ್ನು, ಪ್ರವೃತ್ತಿಯಲ್ಲಿ ನಿವೃತ್ತಿಯನ್ನು ಹೇಗೆ ಸಾಧಿಸಬೇಕೆಂಬುದನ್ನು ಬೋಧಿಸುವ ಪ್ರಭುಲಿಂಗಲೀಲೆಯನ್ನು ಪ್ರವಚನ ರೂಪದಲ್ಲಿ ಪ್ರಾರಂಭಿಸುವೆ.

ಮಾನವನಿಗೆ ಉಡಿಗೆ ತೊಡಿಗೆಗಳ ಸಡಗರವಿಲ್ಲದಿದ್ದರೂ ನಡೆದೀತು. ಆದರೆ ಒಡಲಿಗೆ ಊಟ ವಿಲ್ಲದಿದ್ದರೆ ಉಡುಗೊರೆಯ ಸಡಗರವು ಸೊಗಸೆನಿಸದು. ಅಂತೆಯೇ ಸರ್ವಜ್ಞನು-

ನಿದ್ದೆಗಳು ಬಾರವು ಬುದ್ಧಿಗಳು ತಿಳಿಯವು ।
ಮುದ್ದಿನಾ ಮಾತು ಸೊಗಸದು ಬೋನದ ।
ಮುದ್ದಿ ತಪ್ಪಿದರೆ ಸರ್ವಜ್ಞ ।।

ಎಂದು ಹೇಳುವನು. ಈ ಊಟದಲ್ಲಿಯೂ ಎರಡು ಬಗೆ, ಒಂದು ಅನ್ನಭೋಜನ, ಮತ್ತೊಂದು ಜ್ಞಾನಾಮೃತ ಭೋಜನ.

"ತೆತ್ತೀಸ ಕೋಟಿ ಮಾನವರೆಲ್ಲರೂ ತುತ್ತಿನ ಚೀಲವ ಒತ್ತಿಒತ್ತಿ ತುಂಬುವರಲ್ಲದೆ ನೆತ್ತಿಯ ಚೀಲವ ತುಂಬುವ ಉತ್ತಮರ ಕಾಣೆನೆಂದ ನಮ್ಮ ಗುಹೇಶ್ವರ''

"ಒಲೆಯ ಮೇಲೆ ಅಟ್ಟುಂಬರೆ ಹೊಗೆಯುಂಟು. ಧಗೆಯುಂಟು ಹಗೆಯುಂಟು ತಲೆಯ ಮೇಲೆ ಅಟ್ಟುಂಬರೆ ಹೊಗೆಯಿಲ್ಲ ಧಗೆಯಿಲ್ಲ ಹಗೆಯಿಲ್ಲ ನಗೆಯುಂಟು ಗುಹೇಶ್ವರ"

ತುತ್ತಿನ ಚೀಲದಲ್ಲಿ ಅನ್ನದ ತುತ್ತುಗಳನ್ನು ಒತ್ತಿ ಒತ್ತಿ ತುಂಬುವದೊಂದು ಊಟವಾದರೆ, ನೆತ್ತಿಯ ಚೀಲದಲ್ಲಿ ತತ್ವದ ನುಡಿಗಳನ್ನು ತುಂಬುವದೊಂದು ಊಟ. ಅನ್ನದೂಟ ಮಧುರಾದಿ ಷಡ್ರಸಗಳಿಂದ ಕೂಡಿದರೆ, ಜ್ಞಾನಭೋಜನ ವೀರ ಕರುಣಾದಿ ನವರಸಗಳಿಂದ ಕೂಡಿದುದು. ಅನ್ನದೂಟಕ್ಕೆ ಒಂದೇ ಬಾಯಿಯಿದ್ದರೆ ಜ್ಞಾನಾಮೃತ ಭೋಜನಕ್ಕೆ ಎರಡು ಬಾಯಿಅಂದರೆ ಕರ್ಣದ್ವಯಗಳುಂಟು ಒಂದರಿಂದ ಕ್ಷಣಿಕತೃಪ್ತಿಯೂ ಜ್ಞಾನಾಮೃತ ಭೋ ಜನದಿಂದ ನಿತ್ಯ ಸಂತೃಪ್ತಿಯೂ ಆಗುವದು. ಅನ್ನದಿಂದ ಅಜೀರ್ಣವಾಗಿ ಜ್ವರಾಧಿ ಭಯವಿದ್ದರೆ ಜ್ಞಾನಾಮೃತಭೋಜನದಿಂದ ಯಾವಭಯವೂ ಇರುವದಿಲ್ಲ.ಒಲೆಯಮೇಲೆ ಅಡಿಗೆಯನ್ನು ಮಾಡುವ ಸಮಯದಲ್ಲಿ ಹೊಗೆಯುಂಟು,ಧಗೆಯುಂಟು.ನಾಲ್ಕೆನಾಲ್ಕು ಜನರಿಗೆ ಅಡಿಗೆಯಿರು ವಾಗ ಹತ್ತೆಂಟು ಜನರು ಬಂದುಕುಳಿತರೆ ನನಗೆನಿ ನಗೆಂದು ಹಗೆತನ ಉಂಟಾಗುವದು.ಆದರೆ ತಲೆಯ ಮೇಲಿನ ಅಡಿಗೆ ಮಾಡುವಾಗ ಹೊಗೆಯಿಲ್ಲ, ಧಗೆಯಿಲ್ಲ, ಹಗೆಯಿಲ್ಲ. ಇದಕ್ಕೆ ವ್ಯತಿ ರಿಕ್ತವಾಗಿ ಸೊಗಸಾದ ನಗೆಯುಂಟು.ಒಲೆಯ ಮೇಲಿನ ಅಡಿಗೆಗೂ ತಲೆಯ ಮೇಲಿನ ಅಡಿ ಗೆಗೂ ಬಹಳ ಅಂತರವುಂಟು. ಒಂದು ಐಹಿಕ, ಮತ್ತೊಂದು ಪಾರಲೌಕಿಕ. ಮಿತಿಯಿಲ್ಲದ

ಅನ್ನದಲಿತಿ ಭೋಜನವು ರೋಗಮೂಲವಾದುದು.ಒಮ್ಮೆ ಓರ್ವಡಾಕ್ಟರರು ತಮ್ಮ
ಹುಟ್ಟು ಹಬ್ಬದ ನಿಮಿತ್ತವಾಗಿ ಮನೆಯಲ್ಲಿ ಬುಂದೆ, ಜಿಲೇಬಿ ಮಾಡಿಸಿದ್ದರು. ಜ
ಊಟಕ್ಕೆ ಕುಳಿತಾಗ ಸ್ವತಃ ಡಾಕ್ಟರರೇ ಜನರಿಗೆ ಹೆಚ್ಚುಹೆಚ್ಚಾಗಿ ನೀಡುತ್ತಿದ್ದರು. ಊ
ಕುಳಿತವರಲ್ಲಿ ಒಬ್ಬನು ದಿಟ್ಟತನದಿಂದ 'ಏನರೀ ಡಾಕ್ಟರರಾದ ನೀವೇ ಹೆಚ್ಚ
ನೀಡಿದರೆ ನಮಗೆ ಅಜೀರ್ಣವಾಗಿ ಜ್ವರಬರುವದಿಲ್ಲವೇ ? ರೋಗಪರೀಕ್ಷೆ ಮಾ
ನೀವೇ ಹೀಗೆ ಮಾಡಿದರೆ ಹೇಗೆ ?' ಎಂದು ಕೇಳಲು, ಡಾಕ್ಟರರು ಈಗ ಮುದ್ದಾಂ ನ
ನೀಡುವೆವು.ಇದರಿಂದ ನಿಮಗೆ ಅಜೀರ್ಣವಾಗಿ ಜ್ವರಬಂದು ನಮ್ಮ ದವಾಖಾನೆಗೆ ಬ
ಈಗ ಊಟಕ್ಕೆ ವೆಚ್ಚವಾದ ಹಣವೆಲ್ಲ ಇಂಜೆಕ್ಸನ್ ಮಾಡುವದರಿಂದ ಔಷಧಗಳನ್ನು ಕೊ
ವದರಿಂದ ವಸೂಲ ಆಗುವದು ಎಂದು ಹೇಳಿದರಂತೆ.ಮಂಗಲವು ಆಶೀರ್ವಾದಾ
ಮಂಗಲ, ನಮಸ್ಕಾರಾತ್ಮಕ ಮಂಗಲ, ವಸ್ತುನಿರ್ದೇಶಾತ್ಮಕ ಮಂಗಲ ಎಂದು ಮೂ
ಬಗೆಯಾಗಿದೆ.

ಸರ್ವಸನ್ಮಂಗಳಕ್ಕೂ, ಸರ್ವಶ್ರೇಯೋಭಿವೃದ್ಧಿಗೂ ಮೂಲಕಾರಣನಾದ ಕಷ್ಟ
ಗೇನೇ ವಿಜಯಶೀಲನಾಗು ಸರ್ವೋತ್ಕೃಷ್ಟನಾಗು, ಭಾಗ್ಯಶಾಲಿಯಾಗು ಎಂದು ಮುಂ
ಓಣಿಓಣಿಗುಂಟ ತಿರುಪೆಬೇಡುವ ತಿರುಕನು ಸಿರಿವಂತರ ಮನೆಯ ಮುಂದೆನಿಂತು ನಿಮ್ಮ
ಯಲ್ಲಿ ತೊಟ್ಟಿಲ ತೂಗಲಿ,ಬೆಳ್ಳಿಯ ಬಟ್ಟಲವಾಗಲಿ, ನಿಮ್ಮ ಜಸವು ದಶದಿಕ್ಕಿಗೆ ಪಸ
ಎಂದು ಹರಕೆ ಕೊಡುವದು ಆಶೀರ್ವಾದಾತ್ಮಕ ಮಂಗಲವೆಂದೂ, ಉಪಾಸ್ಯ ಮೂ
ಗಳಾದ ಹರಗುರು ಚರಮೂರ್ತಿಗಳಿಗೆ ಸದು ಹೃದಯವಾಗಿ ಶಿರಬಾಗುವದೇ ನಮಸ್ಕಾ
ತ್ಮಕ ಮಂಗಲವೆಂದೂ, ಸರ್ವಜ್ಞತ್ವ ಸರ್ವಕರ್ತೃತ್ವಾದಿ ಅಲೌಕಿಕ ದಿವ್ಯ ಗುಣಗ
ಕೂಡಿದ ಪರಾತ್ಪರ ಪರವಸ್ತುವಿನ ಸಂಸ್ತುತಿಯು ಅಥವಾ ನಿರೂಪಣೆಯು ವಸ್ತುನಿ
ಶಾತ್ಮಕ ಮಂಗಲವೆಂದೂ ಹೇಳಲ್ಪಡುವದು.

"ನಿರ್ವಿಘ್ನಪರಿಸಮಾಪ್ತಿಕಾಮೋ ಮಂಗಲ ಮಾಚರೇತ್'' ಎಂಬ ಆರ್ಷ ಉಕ್ತಿಯ
ಚಾಮರಸನು ತಾನು ಬರೆಯುವ ಮಹಾಕಾವ್ಯವು ಏನೂ ಅಡೆತಡೆಗಳಿಲ್ಲದೆ ಪರಿಸಮಾ
ಯಾಗಬೇಕೆಂಬ ಮಹೋದ್ದೇಶದಿಂದ ಪ್ರಪ್ರಥಮದಲ್ಲಿ ನಾಮ, ನೇಮ, ಸೀಮೆಗಳ
ನಿಸ್ಸೀಮ ತೇಜೋವ್ಯೋಮ ಮೂರುತಿಯಾದ ಗುರುಗುಹೇಶ್ವರನನ್ನೂ, ಭಕ್ತ ಜನ
ಪುರಾತನ ಪುಂಗವ ಜಗದಾದಿದೇಶಕನೆನಿಸಿದ ಶ್ರೀ ಬಸವೇಶ್ವರನನ್ನೂ,ಷಟ್‌ಸ್ಥಲಚಕ್ರವ
ಚೆನ್ನಬಸವಣ್ಣನನ್ನೂ, ಕಾಯಕಯೋಗಿ ಶ್ರೀ ಸಿದ್ಧರಾಮನನ್ನೂ, ವಿಷಕಂಠಾನುರಾಗಿ
ವಿಷಯವಿರಾಗಿಣಿ ಅಕ್ಕಮಹಾದೇವಿಯನ್ನೂ, ಮನದ ಮೈಲಿಗೆ ತೊಳೆದ ಮಾಚಿ
ಯನ್ನೂ ಮರುಳುಶಂಕರದೇವ, ಕಿನ್ನರಿ ಬೊಮ್ಮಯ್ಯ ಮುಂತಾದ ಮಹಾಮಹಿಮರನ್ನ
ಅಭಿವಂದಿಸಿ, ಅವರೆಲ್ಲರಿಗೆ ಶರಣುಶರಣಾರ್ಥಿಗಳನ್ನು ಸಲ್ಲಿಸಿ ಕಾರ್ಯಾರಂಭ ಮಾಡುವ

ಒಂದು ಭವ್ಯವಾದ ಗುಡಿಯ ಒಳಗೆ ಕುಳಿತು ಓರ್ವನು ಮಾತನಾಡಿದರೆ
ಮಾತುಗಳೇ ಪ್ರತಿಧ್ವನಿಯಾಗಿ ಮರಳಿ ವಾಯುಮಂಡಲದಲ್ಲಿ ತೇಲಿ ಬಂದು ಆ ಅಚೇ
ವಾದ ಗುಡಿಯೇ ಮಾತನಾಡಿದಂತಾಗುವದು. ಅಚೇತನವಾದ ಗುಡಿಗೆ ಎಂದಿಗಾದರ
ಮಾತುಗಳನ್ನಾಡಲು ಬಂದೀತೇ ? ಅದಕ್ಕೆ ನುಡಿವಸಾಮರ್ಥ್ಯವಿಲ್ಲ. ನುಡಿಯುವ

ಬೇರೆ. ಈ ದೇಹವೇ ಒಂದು ದೇವಾಲಯ. ಈ ದೇವಾಲಯದ ಮಧ್ಯದೊಳಗಿರುವ ಹೃದಯ ಸಿಂಹಾಸನದಲ್ಲಿ ಮುಹೂರ್ತ ಮಾಡಿದ ಎನ್ನ ಆರಾಧ್ಯದೇವತೆಯಾದ ಗುರು ಗುಹೇಶ್ವರನು ಏನೇನನ್ನು ನುಡಿಸುವನೋ ಅದನ್ನೇ ನಾನು ನುಡಿಯುವೆನು. ನಾನು ನುಡಿಯುವವನು ಮಾತ್ರ; ನುಡಿಯಿಸುವವನು ಗುರುಗುಹೇಶ್ವರನೆ. ಶಿವಕವಿಯಾದ ಚಾಮರಸನು ಹನ್ನೊಂದೇ ದಿನಗಳಲ್ಲಿ ಇನಿತೊಂದು ಮಹಾಕಾವ್ಯವನ್ನು ಬರೆಯುವ ಆಶು ಕವಿಯಾಗಿದ್ದರೂ ತಾನು ಮಹಾಕವಿಯೆಂಬ ಹೆಮ್ಮೆಗೆ ಒಳಗಾಗದೇ, ಕವಿಪುಂಗವನು ಕವಿ ವರೇಣ್ಯನು ಎಂಬ ಹಮ್ಮು-ಬಿಮ್ಮುಗಳ ಸುಳಿಗೆ ಸಿಲುಕದೇ ನಿರಹಂಭಾವದಿಂದ ಗುರು ಗುಹೇಶ್ವರನ ಕೈಯೊಳಗೆ ನಾನು ನಿಮಿತ್ತ ಪಾತ್ರನು ಎಂದು ಹೇಳಿಕೊಳ್ಳುತ್ತಾನೆ.

ಸೋಜಿಗವನ್ನುಂಟುಮಾಡುವ ಒಣಮೋಜಿನ ಮಾತುಗಳನ್ನು ಕೇಳಿ ಆ ಎಂದು ಬಾಯ್ದೆ ರೆದು ಅಚ್ಚರಿಪಟ್ಟು ಗಹಗಹಿಸಿ ನಕ್ಕುನಲಿಯುವ ಆಡಂಬರದ ಗೋಷ್ಠಿಯು ಈ ಪ್ರಭು ಲಿಂಗಲೀಲೆಯಲ್ಲಿಲ್ಲ. ಯಾವಸಾಧಕರಿಗೆ ಕಾಯಾರ್ಪಣ, ಕರಣಾರ್ಪಣ,ಭಾವಾರ್ಪಣಗಳನ್ನು ಮಾಡಿ ಶಿಖಿಕರ್ಪೂರನ್ಯಾಯದಂತೆ ಅಕಾಯಸ್ಥಿತಿಯನ್ನು ಪಡೆಯುವ ಹಂಬಲವಿದೆಯೋ ಅಂತಹ ಶ್ರೇಷ್ಠ ಸಾಧಕರು ಈ ಪ್ರಭುಲಿಂಗಲೀಲೆಯನ್ನು ಕೇಳಿ ಧನ್ಯರಾಗಬೇಕು. ಅಕಾಯ ಸ್ಥಿತಿಯೆಂದರೆ ದೇಹಧರ್ಮಗಳನ್ನೆಲ್ಲ ದೂರೀಕರಿಸಿ ಶಿವೋಹಂಭಾವನೆಯಲ್ಲಿ ನೆಲೆಯಾಗಿ ನಿಲ್ಲುವದು. ಇದುವೇ ನಿರ್ದೇಹಾಗಮಸ್ಥಲವೆಂದು ಸಿದ್ಧಾಂತಶಿಖಾಮಣಿಯಲ್ಲಿ ಪ್ರತಿಪಾದಿ ಸಲ್ಪಟ್ಟಿದೆ. ಅಹಂಭಾವವಳಿದು ದಾಸೋಹಂಭಾವವಳವಡುವದೇ ನಿರ್ದೇಹಾಗಮಸ್ಥಲ ವೆಂದು ಚನ್ನಬಸವೇಶ್ವರರು ತಮ್ಮ –

ದೇಹ ನಿರ್ದೇಹವೆನುತಿಪ್ಪರಯ್ಯ 'ದೇಹನಿರ್ದೇಹವಪ್ಪ ಮರ್ಮವನರಿಯರು'
ಅಹಂ ಎಂಬುದೇ ದೇಹ, ದಾಸೋಹಂ ಎಂಬುದೇ ನಿರ್ದೇಹನೋಡಾ,
'ಅಕಾಯೋ ಭಕ್ತಕಾಯಂಮಮ,' ಎಂದುದಾಗಿ, ಅಹಂಭಾವವಳಿದವರು
ಕೂಡಲ ಚನ್ನಸಂಗಯ್ಯನಲ್ಲಿ ನಿರ್ದೇಹಿಗಳೆಂಬೆ'–ಎಂಬ ವಚನದಲ್ಲಿ ಸ್ಪಷ್ಟವಾಗಿ ತಿಳಿಸಿರುವರು.

ಬ್ರಹ್ಮಾಂಡದಲ್ಲಿ ನಡೆಯುವ ಅಲ್ಲದ ಸಲ್ಲದ ಬಹಿರಂಗ ಸುದ್ದಿ ಇಲ್ಲಿಲ್ಲ. ಇಲ್ಲಿರುವದು ಪಿಂಡಾಂಡದಲ್ಲಿಯ ಅಂತರಂಗದ ಯುದ್ಧದ ಸುದ್ದಿಯು. ಎಷ್ಟು ಉಣಿಸಿದರೂ ಎಷ್ಟು ತಣಿಸಿದರೂ ಸಾಕೆನ್ನದೆ ಮತ್ತೂ ಬೇಕು ಬೇಕೆಂದೇ ಬಾಯ್ಬಿಡುವ ಮನ ಇಂದ್ರಿಯಗಳನ್ನು ತಣಿಸುವದು ಯಾರಿಂದಲೂ ಆಗದಮಾತು. ಎಲ್ಲರೂ ಮನದಿಚ್ಛೆಯಂತೆ ನಡೆಯುವವರೆ. ಮನದ ಮೇಲೆ ಅಧಿಕಾರ ನಡೆಯಿಸುವವರು ಎಲ್ಲಿಯೋ ಒಬ್ಬರು. ಕರಣೇಂದ್ರಿಯಗಳ ಕಾದಾಟ ಸಣ್ಣದಲ್ಲ, ಈ ಕರಣೇಂದ್ರಿಯಗಳನ್ನು ಗೆಲ್ಲುವ ಕಾದಾಟದ ಕಥೆಯು ಇಲ್ಲಿರುವದ ಲ್ಲದೆ ಹೊರಗಣ ಕಾಳಗದ ಕಥೆ ಇಲ್ಲಿಲ್ಲ.

ಆದಿಯಲ್ಲಿ ಅಮೃತದಂತೆ ತೋರಿ ಅಂತ್ಯದಲ್ಲಿ ವಿಷವನ್ನೇ ಕಾರುವ ವಿಷಯೇಂ ದ್ರಿಯ ಸನ್ನಿಕರ್ಷಜನ್ಯಗಳಾದ, ಹಾಗೂ ಗೋಮುಖವ್ಯಾಘ್ರದಂತಿರುವ ವಿಷಯಗಳ ಸಂಗ್ರಹಣದ ನಿರೂಪಣೆಯಾಗಲಿ, ಸತಿಪತಿಗಳ ಕೂಟದ ವಿಧಿಯಾಗಲಿ ಇಲ್ಲಿಲ್ಲ. ನವಚಕ್ರ

ಗಳಲ್ಲಿ ಮೊದಲನೇ ಚಕ್ರವಾದ ಆಧಾರಚಕ್ರದ ಕಡೆಗೆ ಕೆಳಮುಖವಮಾಡಿಕೊಂಡಿರು ಕುಂಡಲಿನಿಯನ್ನು ಬ್ರಹ್ಮರಂಧ್ರದ ಕಡೆ ಮೇಲು ಮುಖವಮಾಡಿ ತಿರುಗಿಸಿ, ಆಧಾರ ಚಕ್ರಗಳನ್ನು ಮೆಲ್ಲಮೆಲ್ಲನೆ ಮೇಲೇರಿ, ಕೊನೆಯದಾದ ಪಶ್ಚಿಮ ಚಕ್ರದಲ್ಲಿರುವ ತಾ ಬ್ರಹ್ಮದಲ್ಲಿ ನಿರ್ವಯಲಾಗುವದೇ ಶಿವಯೋಗದ ಅಂತಿಮಗುರಿ. ಸುರತ ಅಂ ಸ್ತ್ರೀಪುರುಷ ಸಂಯೋಗ. ಕೀಲು ಅಂದರೆ ಗೌಪ್ಯವಾದ ಅರ್ಥ. ಕುಂಡಲಿ ಅಂದರೆ ಸುರು ಸುತ್ತಿಕೊಂಡಿರುವ ಹಾವು ಎಂದು ಸಾಮಾನ್ಯಾರ್ಥ. ಇಲ್ಲಿ ಸುರತ ಅಂದರೆ ಕಣ್ಮರೆಯಾಗು ಸತಿಪತಿಗಳ ಮೃಣ್ಮಯ ದೇಹಗಳ ಸಾಮರಸ್ಯವಲ್ಲ. ಇಲ್ಲಿ ಚಿನ್ಮಯ ಚೈತನ್ಯಗಳ ಸಾ ರಸ್ಯ. ಚಿದ್ಬಿಂದು ಚಿತ್ಸಿಂಧುಗಳ ಸಾಮರಸ್ಯ, ಮಹಾಕೂಟ. ಜೀವನು ದೇವನಾಗು ನರನು ಹರನಾಗುವ, ಬದ್ಧನು ಮುಕ್ತನಾಗುವ ರಹಸ್ಯಾರ್ಥವು ಇಲ್ಲಿದೆ. ... ಒಕ್ಕಲಿಗ ಹೊಲದ ರಾಸಿಯನ್ನು ಮಾಡಿ ಮನೆಯೊಳಗಿರುವ ಹಗೆಗಳನ್ನು ಕಾಳಿನಿಂದ ತುಂಬುವ ಆದರೆ ತನುವಿನೊಳಗಿರುವ ಹೊಟ್ಟೆಯೆಂಬ ಹಾಳುಹಗೆಯನ್ನು ಯಾರೂತುಂಬಿಲ್ಲ, ತು ವದಿಲ್ಲ. ತುಂಬಿದರೂ ಅರಗಳಿಗೆಯಲ್ಲಿಯೇ ಮತ್ತೆ ಬರಿದಾಗುವದು. ಈ ಗೇಣು ಹೊ ಯ ಪಾಡಿಗಾಗಿ ಜಾಣರೂ ಹೆರವರ ಗೋಣು ಮುರಿಯುವದು, ನೇಣು ಹಾಕುವ ಮೊದಲಾದ ಹೀನ ಹಿಂಸಾಕೃತ್ಯಗಳನ್ನು ಎಸಗುವರು. ಇಂತಹ ಹೇಯಕೃತ್ಯಗಳ ಮ ಗಳ ರೀತಿಯಿಲ್ಲಿಲ್ಲ. ಆಕಾಶದಂತೆ ಸರ್ವವ್ಯಾಪಕ, ಸಚ್ಚಿದಾನಂದ ನಿತ್ಯಪರಿಪೂ ಪರವಸ್ತುವಿನಲ್ಲಿ ಬೆರೆದು ಆನಂದಪಡುವ ಸಂವಿಧಾನವು ಇಲ್ಲಿ ಬಿತ್ತರಿಸಲ್ಪಟ್ಟಿದೆ.

ಈ ಪ್ರಪಂಚದೊಳಗಿನ ಮಾನವರಲ್ಲಿ ಸತ್ತವರು, ಇದ್ದೂ ಸತ್ತವರು, ಸತ್ತ ಇದ್ದವರು ಎಂದು ಮೂರುವಿಭಾಗ ಮಾಡಬಹುದು.

ಸಗಣಿಯಲ್ಲಿ ಸಾವಿರ ಹುಳಗಳು ಹುಟ್ಟುವಂತೆ ಹುಟ್ಟಿ, ಬಚ್ಚಲ ಮೋರಿಯ ಲಕ್ಷ ಹುಳಗಳು ಹುಟ್ಟಿ ಒದ್ದಾಡುವಂತೆ ಒದ್ದಾಡಿ, ಆತ್ಮಾನಾತ್ಮ ವಿಚಾರ ಮಾಡ ವಿವೇಕಶೂನ್ಯರಾಗಿ ಪಶುವಿನಂತೆ ಬಾಳಿ ವಿಷಯ ವ್ಯಾಮೋಹದಲ್ಲಿ ಸಿಲುಕಿ ವಿ ರೋಗರುಜಿನಗಳಿಗೆ ತುತ್ತಾಗಿ ಹೋಗುವವರೇ ಸತ್ತವರು. ಸಾಮಾನ್ಯವಾಗಿ ಲೌಕಿಕದ ಆವುದೊ ಒಂದು ರೋಗಕ್ಕೆ ತುತ್ತಾಗಿ ಇಲ್ಲವೆ ಆವುದಾದರೊಂದು ಅಪಘಾತಕ್ಕೀಡಾ ಪ್ರಾಣೋತ್ಕ್ರಮಣವಾದರೆ ಅದು ಸಾವೆಂದೂ, ಪಂಚೇಂದ್ರಿಯ ಮನಬುದ್ಧ್ಯಾದಿ ಮುಖಾಂತರ ಪಂಚವಿಷಯಾಸಕ್ತನಾದರೆ ಅದು ಬದುಕೆಂದೂ ಹೇಳುವರು. ವ್ಯವಹಾ ದೃಷ್ಟಿಯಿಂದ ಸಾವು ಬದುಕುಗಳ ವ್ಯಾಖ್ಯೆ ಹೀಗಿದ್ದರೂ, ಪಾರಮಾರ್ಥಿಕ ದೃ ಯಿಂದ ಇವುಗಳ ನಿರೂಪಣೆ ಬೇರೆ ಬಗೆಯಾಗಿದೆ. ಪ್ರಾಣ ಮನ ಬುದ್ಧೀಂದ್ರಿಯ ಗಳಿಂದ ಕೂಡಿ ಬದುಕಿದರೂಸಹ ಜೀವಾತ್ಮನಿಗೆ ನಾನಾರು ? ನಾನಿಲ್ಲಿಗೆ ಬಂದುದೇಕೆ ಬಂದುದೆಲ್ಲಿಂದ ? ಮುಂದೆ ಹೋಗುವದೆಲ್ಲಿಗೆ ? ಜೀವನದ ಅಂತಿಮ ಧ್ಯೇಯವೇನು ಎಂಬ ಅರಿವಿಲ್ಲದೆ ಹೋದರೆ ಆ ಬದುಕು ಬದುಕೇ ಅಲ್ಲ. ಅದು ತಾತ್ವಿಕ ದೃಷ್ಟಿಯಿಂ ಸಾವು ಎಂಬ ಅಭಿಪ್ರಾಯವೆ. "ಪ್ರಮಾದೋ ಬ್ರಹ್ಮನಿಷ್ಠಾಯಾಂ ಮೃತ್ಯುಂ ವೈಶ್ರುತಿಃ' ಈ ಪ್ರಮಾಣದಲ್ಲಿದೆ. ಸ್ವಸ್ವರೂಪವಿಸ್ಮೃತಿ ಹೊಂದಿದ ಇವರು ನಡೆಯ ನುಡಿಯಲಿ, ಹಿಡಿಯಲಿ, ನೋಡಲಿ, ಮಾಡಲಿ, ಹಾಡಲಿ- ಕೂಡಲಿ ಏನೆಲ್ಲವನ್ನು ಮಾ ದರೂ ಅವರು ಬದುಕಿದಂತಲ್ಲ. ಇವರು ಇದ್ದರೂ ಸತ್ತವರೆ, ಇದನ್ನೇ ಶ್ರೀ ಬಸವಣ್ಣ

ವರು. " ಹೊತ್ತಾರೆ ಎದ್ದು ಶಿವಲಿಂಗದೇವನ ದೃಷ್ಟಿಯಾರೆ ನೋಡದವನ ಸಂಸಾರವೇನವನ ? ಬಾಳುವೆಣನ ಬೀಳುವೆಣನ ಸಂಸಾರವೇನವನ ? ನಡೆವೆಣನ ನುಡಿವೆಣನ ಸಂಸಾರವೇನವನ ? ಕರ್ತೃಕೂಡಲಸಂಗಮದೇವನ ನಿಮ್ಮ ತೊತ್ತುಗೆಲಸ ಮಾಡದವನ ಸಂಸಾರವೇನವನ ? ಎಂಬ ವಚನದಲ್ಲಿ ಹೇಳಿರುವರು. ಇವರೇ ಇದ್ದು ಸತ್ತವರು. ಕೊನೆಯುಸಿರೆಳೆದವರು. ದಫನ ಕ್ರಿಯೆಯಿಂದಲೋ, ದಹನಕ್ರಿಯೆಯಿಂದಲೋ ಕಣ್ಮರೆಯಾಗಿ ಸತ್ತವರು ಎನಿಸಿಕೊಳ್ಳುವದೇನೂ ಆಶ್ಚರ್ಯವಲ್ಲ. ಆದರೆ ಕೊನೆಯುಸಿರೆಳೆಯದೆ ದಫನ ದಹನಾದಿ ಕ್ರಿಯೆಗಳಿಗೆ ಒಳಗಾಗದೇ ಕಣ್ಮುಂದಿದ್ದೂ ಸತ್ತವರು ಎನಿಸಿಕೊಂಬುದಿದು ಸೋಜಿಗದ ಸಂಗತಿಯು. " ಮರಣಂಪ್ರಕೃತಿಃ ಶರೀರಿಣಾಂ ವಿಕೃತಿಃ ಜೀವನಂ" ಎಂಬ ಉಕ್ತಿಯಂತೆ ೪ + ೪ ಕೂಡಿದರೆ ಎಂಟು ಆಗುವದು ಹೇಗೆ ಗಣಿತಶಾಸ್ತ್ರದ ಸತ್ಯ ಸಿದ್ಧಾಂತವೋ ಹಾಗೆ ಮರಣವು ಎಲ್ಲರಿಗೂ ಕಟ್ಟಿಟ್ಟದ್ದೇ. « ಈಶ್ವರೇಚ. ದರಿದ್ರೇಚ ಮೃತ್ಯೋಃ ಸರ್ವತ್ರ ತುಲ್ಯತಾ,, ಎಂಬ ಅಭಿಜ್ಞರ ಉಕ್ತಿಯಂತೆ ಜಗದಲ್ಲಿ ಯಾರ ಹಂಗಿಗೂ ಒಳಗಾಗದ ನಿಷ್ಪಕ್ಷಪಾತ ದೇವತೆಯೆಂದರೆ ಮೃತ್ಯುದೇವತೆಯೊಂದೇ. " ಮೃತ್ಯುದೇವತೆಯೆತ್ತಿ ಹೊತ್ತುತಾನಾಡಿಸುತ । ತುತ್ತು ಇದ್ದಲ್ಲಿ ಒಯ್ದುಣಿಸಿ ಕಡೆಯಲ್ಲಿ ಊತ್ತು ಚೆಲ್ಲುವಳು ಸರ್ವಜ್ಞ " ಎಂಬ ಸರ್ವಜ್ಞನ ಉಕ್ತಿಯಂತೆ ಎಲ್ಲರೂ ಮೃತ್ಯು ದೇವತೆಗೆ ಬಲಿಯಾಗುವವರೇ ! ಮೃತ್ಯು ಲೋಕಕ್ಕಿಳಿದು ಬಂದವರೆಲ್ಲರೂ ಅಳಿದರೂ ಸಹ ಕೀರ್ತಿಕಾಯರಾಗಿ ಉಳಿಯುವವರು ಹಲಕೆಲವರು. ಉಪನಿಷತ್ಕಾಲೀನ ಋಷಿ ಮುನಿಗಳು ಜಗನ್ನಾಟಕ ಸೂತ್ರಧಾರಿಯಾದ ಈಶ್ವರನಲ್ಲಿ « ಮೃತ್ಯೋರ್ಮಾಮೃತಂಗಮಯ » ಈ ಕರಾಳ ಮೃತ್ಯುವನ್ನು ಒದ್ದು ಗೆದ್ದು ಅಮರನಾಗುವ ಸುಪಥ ತೋರಿಸು ಎಂದು ಸೆರಗೊಡ್ಡಿ ಬೇಡಿಕೊಂಡಿರುವರು.

ಕನ್ನಡ ಅನುಭಾವಿಗಳಾದ ಘನಮಠ ಶಿವಯೋಗಿಗಳು -

'ಮೃತ್ಯುಂಜಯನಾಗೋ ಎಲೊ ಎಲೊ ಮೃತ್ಯುಂಜಯನಾಗೋ ।
ಮೃತುಂಜಯನಾಗತ್ಯುಕ್ತಿಲಿ ಗುರು ಪುತ್ರನಾಗಿ ಸಲೆಸತ್ಯವಿಡಿದುನೀ' ॥ಪ॥
ಆಶಾಪಾಶನಳಿದು ರಾಗದ್ವೇಷವಾಸನಳಿದು ।
ಸಾಸಿರ ದಳಪದ್ಮಾಸನನಾಗಿಹ ದೇಶಿಕ ಘನಮಠವಾಸನೊಳೈದಿನೀ'

ಮೃತ್ಯುವಿಗೆ ಅಂಜುವ ಮರ್ತ್ಯದಮಾನವನಿಗೆ 'ಎಲೋಮಾನವನೇ ಮಾಯಾಲೋಕವನ್ನೇ ನುಂಗಿ ನೀರ್ಗುಡಿವ ಮೃತ್ಯುವನ್ನು ಗೆಲ್ಲುವ ವಿಧಾನ ಹೇಳುವೆ ಕೇಳು' ಎಂದು ಮೃತ್ಯುಂಜಯನಾಗುವ ವಿಧಾನಹೇಳಿರುವರು. ಘನಮಹಿಮರಾದ ಘನಮಠ ಶಿವಯೋಗಿಗಳವರ ಘನವಾದ ಉಪದೇಶದಂತೆ,ಚಿನುಮಯನ ನೆನೆನೆನೆದು ಯಾರು ಧನ್ಯರಾಗುವರೋ ಅವರೇ ಸತ್ತೂಇದ್ದವರು. ಪಾರ್ಥಿವ ಶರೀರವನ್ನು ಸಾರ್ಥಕ ಮಾಡಿಕೊಂಡ ಮಹಾಮಹಿಮರಿವರು. ನಶ್ವರವಾದ ದೇಹವು ನಾಶ ಹೊಂದಿದರೂ ಶಾಶ್ವತವಾದ ಕೀರ್ತಿಕಾಯದಿಂದ ಆ ಸೂರ್ಯನಿರುವ ಪರ್ಯಂತರ ಬೆಳಗತಕ್ಕವರಿವರು. ಇವರ ದೇಹವು ಕಣ್ಮರೆಯಾದರೂ ತತ್ವೋಪಾಸನೆಯಲ್ಲಿ ತನ್ಮಯರಾದ ಇವರು ಸತ್ತರೂ ಇದ್ದಂತೆಯೇ. ಹೀಗೆ ವಿಶ್ವದಲ್ಲಿಯ ಜನರನ್ನು ಸತ್ತವರು, ಇದ್ದೂ ಸತ್ತವರು, ಸತ್ತೂ ಇದ್ದವರು, – ಎಂದು

ಮೂರುಬಗೆಯಾಗಿ ವಿಂಗಡಿಸಲಾಗಿದೆ. ಸಾಮಾನ್ಯವಾಗಿ ಹುಟ್ಟುವದು ಸಂತೋಷ
ಸಾವುದು ದುಃಖವೆಂದೂ ಲೌಕಿಕರು ತಿಳಿಯುವರು ಅಂತೆಯೇ ಹುಟ್ಟಿದಾಗ ಹುಟ್ಟು
ಜನ್ಮೋತ್ಸವ,ತನ್ನಿಮಿತ್ಯ ಮಧುಪದಾರ್ಥ ಪ್ರದಾನವನ್ನೂ, ಮರಣವಾದಾಗ ದುಃ
ಪಗಳನ್ನೂ ದುಃಖಸೂಚಕ ಸಭೆಗಳನ್ನೂ ಮಾಡಿ ಸುಖದುಃಖ ಪ್ರದರ್ಶನ ಮಾಡು
ಗೃಹಸ್ಥನಿಗೆ ಮೊಮ್ಮಕ್ಕಳು, ಮರಿಮಕ್ಕಳು, ಗಿರಿಮಕ್ಕಳು ಹುಟ್ಟಿದರೆ ದೀರ್ಘ
ಬಾಳಿದ ಸವಿನೆನಹಿಗಾಗಿ ಅಥವಾ ಮೊಮ್ಮಕ್ಕಳು ಮರಿಮಕ್ಕಳು ಹುಟ್ಟಿದ ಸು
ಮುತ್ತಜ್ಜನ ಹಾಗೂ ಅಜ್ಜಿಯ ಮೇಲೆ ಬಂಗಾರದ ಹೂ ಹಾರಿಸುವರು.

ಸತ್ತವರು ಅನಂತ. ಇದ್ದವರೂ ಅನಂತ. ಸತ್ತು ಇದ್ದವರು ಮಾತ್ರ
'' ಕಶ್ಚಿದ್ಧೀರಃ'' "ಕಶ್ಚಿನ್ಮಾಂವೇತ್ತಿತತ್ವತಃ'' ಎಂದು ಗೀತೋಪನಿಷತ್ತುಗಳೂ "
ಹೂವೆಲ್ಲ ಹಣ್ಣಾಗಬಲ್ಲದೆ » « ಕಣಿಯಲ್ಲಿರುವ ಕಲ್ಲುಗಳೆಲ್ಲ ಲಿಂಗಗಳಾಗಬಲ್ಲವೆ? «
ದಿಂದುದುರಿದ ಜಲಬಿಂದುಗಳೆಲ್ಲ ಮುತ್ತುಗಳಾಗಬಲ್ಲವೆ ? « ಪರ್ವತ ಪ್ರಾಂ
ಹುಟ್ಟಿದ ಮರಗಳೆಲ್ಲವೂ ಸುಗಂಧ ಚಂದನ ಮರಗಳಾಗಬಲ್ಲವೆ ? « ನಮ್ಮ ಪುರಾ
ಬೀಜಕ್ಕೊಬ್ಬರುಳಿದಾರು» ಮುಂತಾದ ಚನ್ನಬಸವಣ್ಣನವರ ಬಿಡಿ ವಚನಗಳು
ಕಾಲಜ್ಞಾನದ ವಚನಗಳು ಮೇಲಣ ಅಭಿಪ್ರಾಯವನ್ನೇ ಸಮರ್ಥನಮಾಡು
ಜನನ ಮರಣ ರೂಪವಾದ ತಗ್ಗಿನಲ್ಲಿ ಬಿದ್ದು ನುಗ್ಗುನುಗ್ಗಾದವರ ಸಂಚಿತಾದಿ ಕ
ಯಗಳ ಕಾರ್ಗತ್ತಲೆಯಲ್ಲಿ ಸಿಲುಕಿ ಮುಗ್ಗರಿಸಿದವರ, ಹೊತ್ತು ಹೋಗಲಾರದ
ಪುಂಡ ಜನರು ಕೇಳುತ್ತಿರುವ ಕೀಳುಜನರ ಪುಂಡಾಟಿಕೆಯ ಭಂಡ ಕಥೆಗಳನ್ನು
ಚಿತ್ಪ್ರಭಾಪುಂಜರಂಜಿತರೂ, ಸ್ವಾನಂದ ಸಾಮ್ರಾಜ್ಯ ಸಾರ್ವಭೌಮರೂ ಆದ ವಿ
ಪ್ರಭುಲಿಂಗದೇವರ ಲೀಲೆಗಳನ್ನು ಕೇಳುವೆ. ಸತ್ವಶಾಲಿಗಳಾದ ಸತ್ಯಶರಣರು
ನಲಿದಾಡಬೇಕು. ಕೊಬ್ಬಿ ಬೆಳೆದ ಒಂದು ಕಬ್ಬಿನ ತೋಟದಲ್ಲಿ ಹೋದ ಕುರಿ
ಕಬ್ಬಿನ ಮೇಗಣ ಒಣ ಸಿಪ್ಪೆಯನ್ನೇ ತಿಂದು ನಲಿಯುವದಲ್ಲದೆ ಆನೆಯಂತೆ ಕಬ್ಬಿನ
ಇನಿರಸವನ್ನೀಂಟಿ ಆನಂದದಿಂದ ಕಣ್ಣುಮುಚ್ಚೀತೆ ? ಇಲ್ಲಿಲ್ಲ. ಆಡು ರಸದ ಸಿ
ಯದು. ಗಜಸುರೆಂದು ರಸಗುಡಿದು ಸಿಹಿಯರಿಯುವದಲ್ಲದೆ ಒಣ ಸಿಪ್ಪೆಯ ಮು
ಪ್ರಭುಲಿಂಗಲೀಲೆ ಎಂಬ ಮಹಾಕೃತಿಯೇ ಒಂದು ಕಬ್ಬಿನ ತೋಟ, ಕೊಬ್ಬಿಬೆಳೆದ ಕ
ಇನಿವಾಲು ಹೊರ ಚಿಮ್ಮುವಂತೆ ಪ್ರಭುಲಿಂಗಲೀಲೆಯಲ್ಲಿ ಭಕ್ತಿರಸ ಪ್ರವಾಹವು
ತುಳುಕುತ್ತಿದೆ. ಗಜರಾಜನು ಕಬ್ಬಿನ ತೋಟದೊಳನುಗ್ಗಿ ಶುಂಡಾದಂಡವ
ಲಟಲಟನೆ ಇನಿಗೋಲುಗಳನ್ನು ಮುರಿದು, ಇನಿರಸವ ಕುಡಿದು ಆನಂದಿಸು
ಜೇಂಗೊಡದಲ್ಲಿಯ ಇನಿಜೇನನ್ನು ಕುಡಿದು ಜೇನ್ನೊಣಗಳು ಝೇಂಕಾರ
ಮಾಳ್ಪಂತೆ, ಹೂದೋಟದೊಳಗೆ ಗಂಧಕುಸುಮಗಳಲ್ಲಿಯ ಮಕರಂದವ
ಭ್ರಮರಗಳು ಗುಂಜಾರವಗೈವಂತೆ ಸತ್ಯಶರಣರು ಪ್ರಭುಲಿಂಗಲೀಲೆಯಲ್ಲಿಯ ಭ
ಕುಡಿದು ಆನಂದ ಪರವಶರಾಗಿ ಹಾಡಲಿ.

ಜಗತ್ತಿನಲ್ಲಿ ಚಿನ್ನದಗೊಂಬೆ, ಕಟ್ಟಿಗೆಗೊಂಬೆ, ಮಣ್ಣಿನಗೊಂಬೆ, ಸಕ್ಕರೆಗೊ
ಕರ್ಪೂರಗೊಂಬೆ, ಸೆಗಣಿಯ ಗೊಂಬೆ ಹೀಗೆ ಬಹುವಿಧ ಗೊಂಬೆಗಳಿರುತ್ತವೆ.
ಸೆಗಣಿಯಗೊಂಬೆಯನ್ನು ಎಷ್ಟೇ ಅಲಂಕರಿಸಿದರೂ ಅದು ತನ್ನ ಹೊಲಸು

ಬಿಡುವದಿಲ್ಲ. ಬದ್ಧಜೀವಿಗಳು ಸೆಗಣಿಯು ಗೊಂಬೆಗಳಂತೆ ಎಂಬುದು ಕವಿಯ ಹೃದ್ಗತ ಆಶಯ. ಇದನ್ನೇ ಶ್ರೀ ಬಸವೇಶ್ವರರು 'ಸೆಗಣಿಯ ಬೆನಕಂಗೆ ಸಂಪಿಗೆಯ ಅರಳಲ್ಲಿ ಪೂಜಿಸಿದರೆ ರಂಜನೆಯಹುದಲ್ಲದೆ ಅದರ ಗಂಜಳ ಬಿಡದಣ್ಣ — ಎಂದು ಹೇಳಿ ರುವರು. ಆಧುನಿಕ ಸಂತಶಿರೋಮಣಿಗಳಾದ ರಾಮಕೃಷ್ಣ ಪರಮಹಂಸರು ಮುಕ್ತಿ, ಮುಮುಕ್ಷು, ಬ್ರಹ್ಮ ಈ ಮೂವರನ್ನು ಸಕ್ಕರೆಯಗೊಂಬೆ, ಅರಿವೆಯಗೋಬೆ ಕಲ್ಲಿನ ಗೊಂಬೆಗಳಿಗೆ ಹೋಲಿಸಿದ್ದಾರೆ. ನೀರಲ್ಲಿ ಮುಳುಗಿಸಿದ ಸಕ್ಕರೆ ಗೊಂಬೆಯು ನೀರೇ ಆಗಿ ಹೋಗುವಂತೆ 'ಬ್ರಹ್ಮವಿದ್ ಬ್ರಹ್ಮೈವ ಭವತಿ' ಎಂಬುಕ್ತಿಯಂತೆ ಬ್ರಹ್ಮವನ್ನರಿತವನು ಬ್ರಹ್ಮವೇ ಆಗಿ ಮುಕ್ತನಾಗುವನು. ಅರಿವೆಯ ಗೊಂಬೆಯು ಹಾಗಲ್ಲ. ಅದನ್ನು ನೀರಲ್ಲಿ ಬಿಟ್ಟರೆ ನೀರೂ ಆಗದು, ನೀರನ್ನು ಹಿಡಿಯದೆಯೂ ಬಿಡದು. ಇತ್ತ ಸಂಸಾರದಲ್ಲಿಯೂ ಇಲ್ಲ. ಅತ್ತ ಪಾರಮಾರ್ಥದಲ್ಲಿಯೂ ಇಲ್ಲ, ಅರಿವೆಯ ಗೊಂಬೆಗಳಂತೆ ಇರುವವರು ಮುಮುಕ್ಷುಗಳು. " ಎನಿಸು ಕಾಲ ಕಲ್ಲು ನೀರೊಳಗಿರ್ದಡೇನು ನೆನೆದು ಮೃದುವಾಗ ಬಲ್ಲುದೇ ?" ಎಂಬ ಶ್ರೀ ಬಸವಣ್ಣನವರ ಉಕ್ತಿಯಂತೆ ಕಲ್ಲು ನೆನೆಯದು, ಕರಗದು. ಇದರಂತೆ ಬದ್ಧರಿಗೆ ಏನೆಲ್ಲ ಹೇಳಿದರೂ ಅವರು ಬದ್ಧರೇ ಅಲ್ಲದೆ ಶುದ್ಧರೆಂದಿಗೂ ಆಗುವದಿಲ್ಲ. ಬದ್ಧರು ಕಲ್ಲಿನ ಗೊಂಬೆಗಳಂತೆ.

ಪ್ರಭುವಿನ ಸತ್ಸಂಪ್ರದಾಯದಲ್ಲಿದ್ದ ಕವಿಪುಂಗವ ಚಾಮರಸನು ಬೆಂಕಿಯಲ್ಲಿಟ್ಟರೆ ಸುಟ್ಟು ಹೋಗುವ ಕಟ್ಟಿಗೆಯ, ಬೆಲೆಯುಳ್ಳ ಬಂಗಾರದ, ಉರಿಯ ಹಚ್ಚಿದರೆ ತನ್ನಷ್ಟಕ್ಕೆ ತಾನು ಜ್ಯೋತಿಯಾಗಿ ಹೋಗುವ ಕಪ್ಪುರದ, ನೀರಲ್ಲಿ ಹಾಕಿದರೆ ಸ್ವಯ ಮೇವ ಕರಗಿ ಹೋಗುವ ಸಕ್ಕರಿಯ ಗೊಂಬೆಯ ವಿಚಾರವನ್ನು ಹೇಳದೇ ಕೀಳುಕಬ್ಬಿಣ ವನ್ನು ಸ್ಪರ್ಶಮಾತ್ರದಿಂದ ಚಿನ್ನವನ್ನಾಗಿ ಮಾಡುವ ಅದ್ಭುತ ಶಕ್ತಿಯುಳ್ಳ ಪರುಷದ ಗೊಂಬೆಯ ವಿಚಾರ ಹೇಳಿದ್ದಾನೆ. ಪತಿತೋದ್ಧಾರಕನಾದ ಪ್ರಭುವನ್ನೇ ತನ್ನ ಮಹಾ ಕಾವ್ಯಕ್ಕೆ ಕಥಾನಾಯಕನನ್ನಾಗಿ ಮಾಡಿಕೊಂಡು ವಿರಚಿಸಿದ ಪ್ರಭುಲಿಂಗಲೀಲೆಯನ್ನು ಪರುಷದ ಗೊಂಬೆಗೆ ಹೋಲಿಸಿದ್ದಾನೆ.

" ಸ್ಪರ್ಶಶ್ಚೇತ್ತತ್ರಕಲ್ಪ್ಯಃ ಸನಯುತಿಯದಹೋ ಸ್ವರ್ಣತಾಮಶ್ಮಸಾರಂ–''
ಶಂಕರಾಚಾರ್ಯ,
"ಪರುಷವೇದಿಯು ಸೋಂಕೆ ಕಬ್ಬೊನ್ನು ಕನಕ ... " ಸರ್ಪಭೂಷಣ,
"ಶ್ರೀ ಗುರುವು ಸದ್ಭಕ್ತ ಜನಕೆ ಪರುಷದ ಕಣಯು" — ಬಸವಲಿಂಗಶರಣರು
"ಪರುಷಕ್ಕೆ ಬೆಲೆಯಿಲ್ಲ ಪ್ರಾಣಕ್ಕೆ ನಿರ್ಮಾಲ್ಯವಿಲ್ಲ —'' ಪ್ರಭು,
"ಪರುಷದ ಗಿರಿಯಲ್ಲಿ ಚಿಂತಾಮಣಿರತ್ನವ ಕಂಡೆನಯ್ಯ'' ತೋಂಟದ ಸಿದ್ಧಲಿಂಗೇಶ್ವರ
"ಪರುಷದ ಗೃಹದೊಳಗಿರ್ದು ತಿರಿವನೇ ಮನೆಮನೆಯ'' ಉರಿಲಿಂಗದೇವ.
ಪರುಷವಾದರೂ ಒಂದರಲ್ಲಿ ಇರಿಸಿರಬೇಕು'' ಚಂದಯ್ಯ
"ಪರುಷದ ಪರ್ವತದಲ್ಲಿ ಕಬ್ಬುನ ಉಂಟೆ ಅಯ್ಯಾ'' ಚನ್ನಬಸವಣ್ಣ
" — ಪರುಷ ಗುಣವ ನರಸುವದೇ ಕಬ್ಬುನದಲ್ಲಿ —" ಬಸವೇಶ್ವರ
ಹೀಗೆ ಅನೇಕಾನೇಕ ಮಹಾವಿಭೂತಿಗಳು ಅವುದಾದರೊಂದು ಮಹತ್ವದ ವಿಷಯವನ್ನು

ಸಮರ್ಥನ ಮಾಡುವ ಮಹಾಪ್ರಸಂಗದಲ್ಲಿ ಈ ಪರುಷಮಣಿಯ ಪ್ರಸಂಗವನ್ನು ಉದಾಹರಿಸಿದ್ದಾರೆ.

ಚಿಂತಿಸಿದ್ದನ್ನು ಕೊಟ್ಟು ಚಿಂತೆಯನ್ನು ದೂರಮಾಡುವ ಚಿಂತಾಮಣಿ, ಕಾಮಿಸಿದ್ದನ್ನು ಕೊಡುವ ಕಾಮಧೇನು, ಸಂಕಲ್ಪ ಮಾಡಿದ್ದನ್ನು ಕೊಡುವ ಕಲ್ಪವೃಕ್ಷ, ಸೋಂಕಿದಾಕ್ಷಣ ಕಬ್ಬಿಣವನ್ನು ಚಿನ್ನವನ್ನಾಗಿ ಮಾಡುವ ಪರುಷಮಣಿ ಇವೆಲ್ಲ ಕಾಲ್ಪನಿಕವೆಂದು ಕೆಲವರ ಅಭಿಮತ. ಆಚ್ಚರಿಯ ಸಂಗತಿಯೇನೆಂದರೆ ಮುಂಬಯಿ ಹತ್ತಿರ ಗೋರಖಪುರದಲ್ಲಿ ಕಲ್ಯಾಣ ಎಂಬ ಹಿಂದೀ ಮಾಸಪತ್ರಿಕೆ ಹೊರಡುತ್ತಿದ್ದು ಅದರಲ್ಲಿ ಒಂದು ಲೇಖ ಬಂದಿತ್ತು. ಓರ್ವ ಕುರುಬ ನೂರಾರು ಕುರಿಗಳನ್ನು ಕಾಯುತ್ತಿದ್ದ. ಒಂದು ದಿನ ಕುರಿಗಳನ್ನೆಲ್ಲ ಕಾಡಿನಲ್ಲಿ ಮೇಯಿಸಿ ಸಾಯಂಕಾಲ ದಡ್ಡಿಗೆ ತಂದು ಹಾಕಿದಾಗ ಒಂದು ಕುರಿಯ ಕಾಲಗೆ ಬಡಿದ ನಾಲು ಬಂಗಾರವಾಗಿತ್ತು. ಕುರುಬನು ಆಚ್ಚರಿಗೊಂಡು ಜಾಣರನ್ನು ಕೇಳಲು ಅವರು ಹಾಗಾದುದು ಪರುಷಮಣಿಯ ಸಂಪರ್ಕದಿಂದ ಎಂದು ಹೇಳಿ ಕುರಿಯು ತಿರುಗಾಡಿದ ಸ್ಥಾನದಲ್ಲೆಲ್ಲ ಪರುಷಮಣಿಯನ್ನು ಹುಡುಕಾಡಿದರು, ಆದರೆ ಅದು ಸಿಗಲಿಲ್ಲ.

ವಿಮರ್ಶಕರು ಕಾಲ್ಪನಿಕವೆಂದು ಹೇಳುವ ಪರುಷಮಣಿ ಮೊದಲಾದವುಗಳನ್ನು ಅನೇಕ ಮೇಧಾವಿಗಳು ಹಾಗೂ ಅನುಭಾವಿಗಳು ತಮ್ಮ ತಮ್ಮ ಗ್ರಂಥಗಳಲ್ಲಿ ತಾತ್ವಿಕ ವಿಷಯ ಪ್ರತಿಪಾದನ ಮಾಡುವ ವಿಶಿಷ್ಟ ಪ್ರಸಂಗದಲ್ಲಿ ಹೇಳಿಯೇಇದ್ದಾರೆ. ಗೋರಖಪುರದ ಸಂಗತಿಯನ್ನು ಓದಿದರೆ ಪರುಷಮಣಿ ಇದೆ ಎಂದೆನಿಸುವದು. ಪರುಷಮಣಿಯು ಇದೆಯೋ ಇಲ್ಲವೋ ಎಂಬ ಗೊಂದಲದಲ್ಲಿ ಬೀಳದೆ ಅದರ ಗುಣಧರ್ಮಗಳನ್ನು ತಿಳಿದುಕೊಂಡು ನಾವು ಮುಂದುವರಿದರೆ ಸಾಕು. ಪರುಷ ಮಣಿಯಂತಿರುವ ಪ್ರಭುಲಿಂಗಲೀಲೆಯನ್ನು ಮುಟ್ಟಿದ ಕೈಗಳು ಪರುಷಹಸ್ತಗಳಾಗುತ್ತವೆ. ಮುಟ್ಟಿದ ಕಂಗಳು ಅಂದರೆ ನೋಡಿ ಓದಿದ ಕಣ್ಣುಗಳು ಶಿವಲಿಂಗವಾಗುತ್ತವೆ. ಪ್ರಭುವಿನ ಚಿಂತನೆ ಮಾಡುವ ಮನಸ್ಸು ಮಹಾಲಿಂಗವಾಗುತ್ತದೆ. ಪ್ರಭುವಿನ ಲೀಲೆಯೆಂಬ ಪರುಷಮಣಿಯು ಸೋಂಕಿನಿಂದ ನನ್ನ ತೊದಲ್ನುಡಿಗಳು, ಬಡನುಡಿಗಳು, ಬೆಡಗಿನ ನುಡಿಗಳಾಗುತ್ತವೆ.

ಒಮ್ಮೆ ಇಂದ್ರ ಚಂದ್ರಾದಿ ದೇವತೆಗಳು ಒಂದಾಗಿ ನಾವೆಲ್ಲರೂ ಮೇಗಣ ಲೋಕದಲ್ಲಿ ಅಂದರೆ ಸ್ವರ್ಗದಲ್ಲಿ ಇರುವವರು. ಯಾವಾಗಲೂ ಅಮೃತ ಪಾನ ಮಾಡುವವರು, ಮಾನವರು ಸತ್ತ ಮೇಲೆ ನಮ್ಮಲ್ಲಿಗೇ ಬರುವರು. ಚಿಂತಿಸಿದ್ದನ್ನೆಲ್ಲ ನಿಂತಲ್ಲಿಯೇ ಕೊಟ್ಟು ಚಿಂತೆಗಳನ್ನೆಲ್ಲ ಪರಿಹಾರ ಮಾಡುವ ಚಿಂತಾಮಣಿಯು ನಮ್ಮ ಬಳಿ ಇದೆ. ಹೀಗೆ ಏನೇನೋ ವಿಚಾರಮಾಡುತ್ತ ಹೆಮ್ಮೆಪಡುತ್ತಿರುವಾಗ, ಮೃತ್ಯುಲೋಕದ ಮಾನವರೆಲ್ಲರೂ ಒಂದಾಗಿ ಹುಟ್ಟು ಸಾವುಗಳ ಕಷ್ಟವ ಪರಿಹರಿಸಿ ನೆಟ್ಟನೆ ಶಿವಪಥವ ಮುಟ್ಟಿಸುವ ನಮ್ಮ ವಿವೇಕ ಚಿಂತಾಮಣಿಯ ಮುಂದೆ ಚಿಂತಿತಾರ್ಥವನ್ನೀಯುವ ಆ ದೇವಲೋಕದ ಚಿಂತಾಮಣಿಯ ಹೆಚ್ಚಳವನ್ನು ದೇವತೆಗಳು ಹೇಳುತ್ತಿರುವದು ಹುಚ್ಚುತನ. ಏನೇ ಕೊಟ್ಟರೂ ಅದು ಕಲ್ಲಲ್ಲವೇ ? ಅದು ಹೇಮ, ಭೂಮಿ, ಕಾಮಿನಿಗಳನ್ನೂ, ಆಯುರಾರೋಗ್ಯ ಐಶ್ವರ್ಯಾದಿಗಳನ್ನೂ ಕೊಟ್ಟೀತಲ್ಲದೆ ಹುಟ್ಟು ಸಾವುಗಳ ಬೀಜವನ್ನು ಸುಟ್ಟೀತೇ ? ಕಾಮಾದಿ ಷಡ್ರಿಪುಗಳನ್ನು ಮೆಟ್ಟೀತೇ ? ಇದಾವುದೂ ಅದರಿಂದಾಗದು. ನಮ್ಮ ವಿವೇಕಚಿಂತಾಮಣಿಯು

ಲಿಂಗಾಂಗ ಸಾಮರಸ್ಯವನ್ನು ದೊರಕಿಸಿ ನಿಜನಿವಾಸದಲ್ಲಿರಿಸುವದು. ಇಂತಹ ಅಸಾಧಾರಣ ಗುಣವುಳ್ಳ ವಿವೇಕಚಿಂತಾಮಣಿಯ ಮುಂದೆ ಅದೇತರಮಣಿ ? ಆರಂಭದಲ್ಲಿ ಅಮೃತೋಪಮವೆನಿಸಿ ಪರಿಣಾಮದಲ್ಲಿ ವಿಷೋಪಮವಾಗಲಾದ ಕಾಮಿನೀಕಾಂಚನಗಳನ್ನಿತ್ತು ಅಧೋಮುಖವೆನಿಸಿದ ಪ್ರವೃತ್ತಿ ಮಾರ್ಗದತ್ತ ಸೆಳೆದೊಯ್ಯುವ ಆ ಚಿಂತಾಮಣಿಯು ಮತ್ತೆ ಚಿಂತೆಯ ಸಂತೆಯನ್ನೇ ತಂದೀವುದು. ಕಾರಣ ಆತ್ಯಂತಿಕ ಶಾಂತಿಯನ್ನೀಯುವ ನಮ್ಮ ವಿವೇಕಚಿಂತಾಮಣಿಯೇ ಮೇಲೆಂದು ಮಾನವರ ವಾದ. ಹೀಗೆ ಉಭಯಪಕ್ಷಗಳಲ್ಲಿ ರಭಸದ ತಿಕ್ಕಾಟನಡೆದು ಆ ವಾದದ ನಿರ್ಣಯಕ್ಕಾಗಿ ಬ್ರಹ್ಮದೇವನ ಕಡೆಗೆ ಹೋದರಂತೆ. ಸೃಷ್ಟಿಕರ್ತನಾದ ಬ್ರಹ್ಮನು ಉಭಯ ಪಕ್ಷಗಳ ವಾದಕೇಳಿ ಸುದೀರ್ಘ ವಿಚಾರಮಾಡಿ, ದೇವಲೋಕದ ಚಿಂತಾಮಣಿಗಿಂತಲೂ ಭೂಲೋಕದ ವಿವೇಕ ಚಿಂತಾಮಣಿಯು ಮೇಲಿನದಾಗಿದ್ದು, ಇದನ್ನು ಹೇಳಿದರೆ ಖಂಡಿತವಾದಿ ಲೋಕವಿರೋಧಿ ಎಂಬಂತೆ ಸ್ವಜನ ವಿರೋಧವಾಗುವದೆಂದೂ, ದೇವಲೋಕದ ಚಿಂತಾಮಣಿಯು ಹೆಚ್ಚೆಂದು ಹೇಳಿದರೆ, ದಿಟವನ್ನಾಡದೆ ಸಟೆಯನ್ನಾಡಿದ ದ್ರೋಹವುಂಟಾಗುವದೆಂದೂ ಬಗೆದು ಮೌಖಿಕವಾಗಿ ಹೇಳುವ ತೀರ್ಮಾನವನ್ನು ಬಿಟ್ಟು ಎರಡೂ ಚಿಂತಾಮಣಿಗಳನ್ನು ಎರಡು ಪರಡಿಯಲ್ಲಿ ಇಟ್ಟು ತೂಗುವ ನಿರ್ಣಯ ಕೈಕೊಂಡನು. ಆಗ ತಕ್ಕಡಿಯನ್ನು ತರಿಸಿ ಎರಡೂ ಚಿಂತಾಮಣಿಗಳನ್ನು ಎರಡು ಪರಡಿಗಳಲ್ಲಿಟ್ಟು ತೂಗಲು ಭಾರವಾದ ವಿವೇಕಚಿಂತಾಮಣಿಯು ಭೂಲೋಕದಲ್ಲೇ ಉಳಿದು ಹಗುರಾದ ಚಿಂತಾಮಣಿಯು ಮೇಲೆ ಸ್ವರ್ಗಕ್ಕೆ ಹೋಯಿತಂತೆ. ಅಂದಿನಿಂದ ಇಂದಿನತನಕ ಚಿಂತಾಮಣಿಯು ದೇವಲೋಕದಲ್ಲಿಯೂ, ವಿವೇಕ ಚಿಂತಾಮಣಿಯು ಭೂಲೋಕದಲ್ಲಿಯೂ ಇರುವವಂತೆ. ಹೀಗೆ ನಿಜಗುಣರ ದಿವ್ಯಕೃತಿಯೆನಿಸಿದ ವಿವೇಕ ಚಿಂತಾಮಣಿಯನ್ನು ಸಂಸ್ಕೃತಕ್ಕೆ ಭಾಷಾಂತರಿಸಿದ ಕೊಡಗಿನ ಲಿಂಗರಾಜರು—

"ವಿವೇಕ ಚಿಂತಾಮಣಿ ರಬ್ಜ ಜನ್ಮನಾ ।
ಚಿಂತಾಮಣಿ ಃ ಪ್ರಾಕ್– ತುಲಿತಃ ಸಕೌತುಕಂ ।
ಪೂರ್ವೋ ಗುರುರ್ಲಿಂಗ ನೃಪಂ ಸಮಾಗಮತ್ ।
ಗೀರ್ವಾಣ ಹೇತೋರಪರೋಲಿಘುರ್ಹರಿಂ ॥

ಎಂದು ಮಾರ್ಮಿಕವಾಗಿ ಹೇಳಿರುವರು.

ಸಾಹಿತ್ಯದಲ್ಲಿ ಕಾಯಸಾಹಿತ್ಯ, ಆತ್ಮಸಾಹಿತ್ಯ ಎಂದು ಎರಡುಬಗೆ. ಭೌತಪ್ರಪಂಚದಲ್ಲಿರುವ ವಿವಿಧ ವಸ್ತುಗಳ, ಅಥವಾ ಶರೀರದ ವರ್ಣನೆ ಮಾಡುವದು ಕಾಯಸಾಹಿತ್ಯ. "ಸೋಲದಾತನೇ ವಿರತನು ಮನದೊಳಗೆ ಬಾಲೆಯರ ಸಿಂಗರವನೇ ಕಂಡು ತಳಿರಡಿಯ ನುಣ್ದೊಡೆಯ ಚೆಲುವಿನೊಬ್ಬುಳಿಯುಹ ನಿತಂಬ ಭರದ ನಡೆಗೆ ಬಳಕುವತಿ-ಬಡನಡುವಿನ – – – – –'' ವೀರ ವಿರಕ್ತನ ವೈರಾಗ್ಯಪರ್ವತವನ್ನು ಪುಡಿಪುಡಿ ಮಾಡುವಂತಹ ವಜ್ರಾಯುಧದಂತಿರುವ ಈ ಸ್ತ್ರೀವರ್ಣನೆಯು ಕಾಯಸಾಹಿತ್ಯ—

'' ನಡದರ ನಡುಸಣ್ಣ ಪದುಮಜಾತಿಯ ಹೆಣ್ಣ ।
ಮಾವಿನಹೋಳು ನಿನ ಕಣ್ಣ । ಎಲೆ ಹುಡುದಿ ।
ಮಾವ ಬಂದಾನ ಒಳಗೋಡ್ಡಗ ।

ಎಂಬುದೂ ಕಾಯಸಾಹಿತ್ಯ. ದೇಹಸೌಂದರ್ಯದ ಸ್ಪರ್ಧೆಯಲ್ಲಿಯೂ ಪ್ರಥಮ ದ್ವಿತೀ ಬಹುಮಾನಗಳನ್ನು ಪಡೆಯುತ್ತಿರುವ ಸಂಗತಿಯನ್ನು ಪತ್ರಿಕೆಯಲ್ಲಿ ಓದುತ್ತಿದ್ದೇ ಅಂತಃಸೌಂದರ್ಯವೆನಿಸಿದ ಆತ್ಮ ಸೌಂದರ್ಯ ಮಾಸುವದಿಲ್ಲ, ಹ್ರಾಸವಾಗುವದಿಲ್ಲ. ಗಳೆದಷ್ಟು ನಿತ್ಯನೂತನವಾಗಿ ಮೆರೆಯುತ್ತದೆ. ಆತ್ಮ ಸೌಂದರ್ಯವಿಲ್ಲದ ಕೇವಲ ದ ಸೌಂದರ್ಯವನ್ನು "ರಂಡೆಗೊದಗಿದ ಯೌವನದಂತೆ, ನಾಯ ಮೊಲೆಯೊಳಗಿರ್ದ ಹ ನಂತೆ, ಹೆಣಕೆ ಮಾಡಿದ ಶೃಗಾರದಂತೆ" ನಿಷ್ಫಲ, ವ್ಯರ್ಥ, ಅನರ್ಥ ಎಂದು ಸರ್ವಜ್ಞ ಣರು ಹೇಳಿರುವರು. ಬಾಹ್ಯ ಸೌಂದರ್ಯವು ಅಂತಃಸೌಂದರ್ಯದ ಆವಿಷ್ಕಾರಕ್ಕೆ ವಿಶಾ ಸಾಧನವಾಗಬೇಕೇ ಹೊರತು ಅದೇ ಸಾಧ್ಯವಾಗಬಾರದು.

ಅಮೇರಿಕೆಗೆ ಸರ್ವಧರ್ಮಪರಿಷತ್ತಿಗಾಗಿ ಹೋಗಿದ್ದ ವಿವೇಕಾನಂದರು ಒಮ್ಮೆ ಓ ದಿವ್ಯಸುಂದರಿಯನ್ನು ದಿಟ್ಟಿಸಿ ನೋಡುತ್ತಿರಲು ಬಳಿಯಿದ್ದ ಓರ್ವಶಿಷ್ಯನು ವಿವೇಕಾ ರಿಗೆ "ನಷ್ಪೃಶೇದ್ದಾರವೀಮಪಿ" 'ಕಟ್ಟಿಗೆಯಿಂದ ಮಾಡಿದ ಗೊಂಬೆಯನ್ನು ಸಹ ಮು ಬಾರದು, ಪರಸ್ತ್ರೀಯನ್ನು ನೋಡಬಾರದು ಎಂದು ಹೇಳುವ ತಾವೇ ಈ ಚೆಲುವೆಯ ಮಹಿಳೆಯನ್ನು ಎಷ್ಟು ನೋಡುತ್ತೀರಲ್ಲ' ಎಂದು ಕೇಳಲು ವಿವೇಕಾನಂದರು ಶಿಷ್ಯ ನಾನು ಈ ಸುಂದರಿಯ ಸೌಂದರ್ಯವನ್ನೇ ನೋಡುತ್ತಿರುವೆನೆಂದು ನೀನು ತಿಳಿದಿ ಅದು ಶುದ್ಧತಪ್ಪು. ನಾನು ನೋಡುತ್ತಿರುವ ಈ ಸೌಂದರ್ಯದ ನಿರೀಕ್ಷಣೆಯ ಬಗೆ ಬೇರೆ. "ಈ ಸುಂದರಿಯ ಸೌಂದರ್ಯವೇ ಪ್ರೇಕ್ಷಣೀಯವಿರುವಾಗ, ಈ ಸೌಂದ ನಿರ್ಮಾಪಕನಾದ ದೇವರು ಅದೆಷ್ಟು ಸುಂದರನಿರಬಹುದು ಈ ಸಾಂತ ಸೌಂದ ದಿಂದ, ಈ ಪರಿಮಿತ ಸೌಂದರ್ಯದಿಂದ ಅನಂತ ಸೌಂದರ್ಯವನ್ನು, ಅಮಿತ ಸೌ ರ್ಯವನ್ನು ನೋಡುತ್ತಿರುವೆನು, ಎಂದು ಹೇಳಲು, ಸಂಶಯಗ್ರಸ್ತನಾದ ಶಿಷ್ಯನು ಗುರು ಸಮಾಧಾನಕಾರಕ ಉತ್ತರ ಕೇಳಿ ಆನಂದಭರಿತನಾದನು. ಆತ್ಮ ಸಾಹಿತ್ಯವನ್ನು ಪ್ರ ಪಾದನ ಮಾಡುವ ಸಾಹಿತ್ಯವೇ ತತ್ತ್ವಸಾಹಿತ್ಯ, ಸತ್ವಸಾಹಿತ್ಯ.

ಎಲ್ಲ ಬಲ್ಲವರಿಲ್ಲ ಬಲ್ಲವರು ಬಹಳಿಲ್ಲ।
ಬಲ್ಲಿದರಿದ್ದು ಬಲವಿಲ್ಲ। ಸಾಹಿತ್ಯ
ಎಲ್ಲರಿಗೆ ಇಲ್ಲ ಸರ್ವಜ್ಞ।

ಎಂದು ಸಾಹಿತ್ಯಾಚಾರ್ಯನೆಂದುಖ್ಯಾತಿವೆತ್ತ ಸರ್ವಜ್ಞನು ತತ್ವಸಾಹಿತ್ಯ ದೊರ ಬೇಕಾದರೆ ಅದಕ್ಕೆ ಪೂರ್ವದ ಸಂಸ್ಕೃತಿಬೇಕೆಂದು ಹೇಳಿರುವನು.

"ಕರಿಯನಿತ್ತಡೆ ಒಲ್ಲೆ ಸಿರಿಯನಿತ್ತಡೆ ಒಲ್ಲೆ। ಹಿರಿದಪ್ಪ ರಾಜ್ಯವನಿತ್ತಡೆ ಒಲ್ಲೆ
ನಿಮ್ಮ ಶರಣರ ಸೂಳ್ನುಡಿಯ ಒಂದರಗಳಿಗೆ ಇತ್ತಡೆ ನಿಮ್ಮನಿತ್ತೆ
ಕಾಣಾ ರಾಮನಾಥ" ಎಂದು ಮೂಲ ವಚನಕಾರನೆನಿಸಿದ ದೇವ ದಾಸಿಮಾರ್ಯನು, ಸಾಯುಜ್ಯದ ಏಕಛತ್ರಾಧಿಪತ್ಯವೂ ಸಹ ತತ್ವಸಾಹಿತ್ಯದ ಮುಂ ತೃಣಪ್ರಾಯವಾದುದು, ನನಗೆ ಶರಣರ ಸೂಳ್ನುಡಿಗಳನ್ನೇ ದಯಪಾಲಿಸು ಎಂದು ತನ್ನ ಆರಾಧ್ಯದೇವತೆಗೆ ಬೇಡಿಕೊಂಡಿರುವನು.

ಕಾಯಸಾಹಿತ್ಯವನ್ನು ಅಂದರೆ ಶೃಂಗಾರನಿರಸಪ್ರಧಾನವಾದ ಕಾದಂಬರಿಯನ್ನು

ಕಟ್ಟುಕಥೆ, ಕಾಲ್ಪನಿಕ ಕಥೆ, ತಾತ್ಪೂರ್ತಿಕವಾಗಿ ಮನಾನಂದವನ್ನುಂಟು ಮಾಡುವ ಅಶ್ಲೀಲ ಸಾಹಿತ್ಯವನ್ನು ಬರೆಯುವವರು ಬಹಳ, ಆದರೆ ಹೃದಯ ಕಾರಂಜಿಯಲ್ಲಿ ನಿತ್ಯಾನಂದದ ನೆಲೆಯು ಪುಟಿಯುವಂತೆ ಮಾಡುವ ತತ್ತ್ವಸಾಹಿತ್ಯವನ್ನು ಬರೆಯುವವರು ವಿರಳ.

"ಕಾಲಿಲ್ಲದ ಗಮನ, ಕೈಯಿಲ್ಲದ ಸೋಂಕು, ಬಾಯಿಯಿಲ್ಲದ ರುಚಿ,
ನಡೆದು ನಿರ್ಗಮನಿ, ನುಡಿದು ನಿಶ್ಶಬ್ದ, ಭಾವವೇಖರ್ಪರವಾಗಿ
ಪರನುದೇಹಿ ಎಂದು ಬೇಡುವ ಪರಮಂನತೋರಯ್ಯ ಗುಹೇಶ್ವರ"

ವಿರೋಧಾಭಾಸವಾಗಿ ತೋರುವ ಈ ವಚನ ಪ್ರಭುದೇವರದು. ಎಲ್ಲ ವಸ್ತುಗಳನ್ನು ಮುಟ್ಟುವನಂತೆ, ಆದರೂ ಮುಟ್ಟುವ ಕೈಗಳೇ ಇಲ್ಲವಂತೆ. ಏನೆಲ್ಲವನ್ನು ಆಸ್ವಾದಿಸುವನಂತೆ, ಆದರೂ ನುಡಿವ, ರುಚಿನೋಡುವ ನಾಲಿಗೆಯೇ ಇಲ್ಲವಂತೆ. ನುಡಿದು ನಿಶ್ಶಬ್ದನಂತೆ, ಎಲ್ಲೆಡೆಗೂ ಸಂಚರಿಸುವನಂತೆ, ಆದರೆ ನಡೆಯಲು ಕಾಲುಗಳೇ ಇಲ್ಲವಂತೆ, ನಡೆದೂ ನಡೆಯದಂತೆ, ನುಡಿದೂ ನುಡಿಯದಂತೆ, ಹಿಡಿದೂ ಹಿಡಿಯದಂತೆ ಇರುವ ಪ್ರಭುವಿನ ಎತ್ತರ ಬಿತ್ತರಗಳು ಈ ವಚನದಲ್ಲಿರುವವು.

ಪ್ರಭುವಿನ ಈ ವಚನ ಓದಿದಾಗ –

"ತದೇ ಜತಿ ತನ್ನೈ ಜತಿ, ತದ್ದೂರೇ
ತದ್ವಂತರೇ'' "ಪಶ್ಯತಿ ಅಚಕ್ಷುಃ ಸಶೃಣೋತಿ ಅಕರ್ಣಃ'' "ಆಶಿನೋ
ದೂರಂ ವ್ರಜತಿ,'' ಶಯಾನೋಯಾತಿ ಸರ್ವಶಃ, ಸರ್ವತಃ ಪಾಣಿಪಾದಂತತ್

ಸರ್ವತೋಕ್ಷಿ ಶಿರೋಮುಖಂ, ಎಂದು ಮುಂತಾಗಿ ಆತ್ಮತತ್ವವನ್ನು ಪ್ರತಿಪಾದಿಸುವ ಈಶ ಕಠೋಪನಿಷತ್ತಿನಮಂತ್ರಗಳು ಥಟ್ಟನೇ ನೆನಪಿಗೆಬರುವವು, ಓದಿದರೆ ಕೇಳಿದರೆ ಆತ್ಮಸಾಕ್ಷಾತ್ಕಾರವನ್ನು ಆತ್ಮಸಾತ್ ಮಾಡುವ ಪ್ರಭುಲಿಂಗಲೀಲೆಯು ಆತ್ಮಸಾಹಿತ್ಯವೇ ಆಗಿದೆ.

ಸಾಮಾನ್ಯವಾಗಿ ಸಾಹಿತ್ಯವು ಸೊಗಸಾದುದೇ. ಅಂತೆಯೇ–

« ಸಾಹಿತ್ಯರಸಮಾಧುರ್ಯಂ ಶಂಕರೋ ವೇತ್ತಿವಾನವಾ।
ಸಂಗೀತರಸಸಾಹಿತ್ಯೇ ಸರಸ್ವತ್ಯಾಸ್ತನದ್ವಯಂ»

ಮುಂತಾದ ಗೀರ್ವಾಣೋಕ್ತಿಗಳು ಸಾಹಿತ್ಯದ ಘನತೆಯನ್ನು ಸಾರುತ್ತವೆ.

ಲೋಕಕ್ಕೆ ಭೀಕರನಾದ ಯಮರಾಜನ ಬಳಿಗೆ ಬಾಲಕ ನಚಿಕೇತನು ಹೋಗಿ ಆತ್ಮವಿದ್ಯೆಯನ್ನು ಹೇಳು ಎಂದು ಕೇಳಿದಾಗ ಯಮನು ಮಗುವೇ ನಿನಗೆ ಬೇಕಾಗಿದ್ದರೆ ಅಖಂಡ ಭೂಮಂಡಲದ ಆಧಿಪತ್ಯವನ್ನೇ ಕೇಳು. ಬೇಕಾದರೆ ಅಷ್ಟೈಶ್ವರ್ಯಗಳನ್ನುಕೇಳು. ಮತ್ತೇನು ಬೇಕಾಗಿದ್ದರೂ ಅದನ್ನು ಕೂಡಲೇ ಕೊಟ್ಟುಬಿಡುವೆನು. ಆದರೆ ಆತ್ಮವಿದ್ಯೆಯ ಮಾತನ್ನು ಮಾತ್ರ ಎತ್ತಬೇಡ. ದೇವಾಧಿದೇವತೆಗಳೂ ಈ ಆತ್ಮವಿದ್ಯೆಯ ಚಿಕಿತ್ಸೆ ಮಾಡಿ ತಿಳಿಯದೇ ಹೊಳೆಯದೇ ಹೋಗಿರುವರು ಕಾರಣ ಆ ಆತ್ಮವಿದ್ಯೆಯ ಗೋಜಿಗೆ ಹೋಗಬೇಡ ಎಂದು ಪರಿಪರಿಯಿಂದ ಹೇಳಿ ನಚಿಕೇತನ ಮನವೊಲಿಸಲು ಪ್ರಯತ್ನ ಮಾಡಿದರೂ ನಚಿಕೇತ ಆ ಮಾತಿಗೊಪ್ಪದೆ ಛಲವಿಡಿದು ಆ ಆತ್ಮವಿದ್ಯೆಯನ್ನೇ ಪಡೆದನೆಂಬ ಕಥೆಯು ಕಠೋಪನಿಷತ್ತಿನಲ್ಲಿ ಸುಪ್ರಸಿದ್ಧವಿದೆ.

ನಿಜಾಮರ ಸುಪ್ರಸಿದ್ಧ ಮನೆತನದ ನವಾಬರೊಬ್ಬರು ಹುಬ್ಬಳ್ಳಿಯ ಸಿದ್ಧಾರೂಢ ಸಂದರ್ಶನಕ್ಕೆ ಬಂದಾಗ ಸಿದ್ಧಾರೂಢರು ನವಾಬರನ್ನು ಕುರಿತು 'ನೀನಾರು' ಎಂ ಕೇಳಿದರಂತೆ. ಆಗ ನವಾಬರು ನಾನು ಯಾರೆಂಬುದೇ ಗೊತ್ತಿಲ್ಲ. ಅದನ್ನು ತಿಳಿ ವದಕ್ಕಾಗಿಯೇ ತಮ್ಮೆಡೆಗೆ ಬಂದಿರುವೆನೆಂದು ಹೇಳಿದರಂತೆ. ಅಂದರೆ ತನ್ನನ್ನು ತಾ ತಿಳಿವುದೇ ಅತೀ ಮಹತ್ವದ್ದು.

ಗ್ರೀಕದೇಶದ ಸುಪ್ರಸಿದ್ಧ ತತ್ವಜ್ಞಾನಿಯಾದ ಪ್ಲೇಟೋಗೆ ಓರ್ವ ಶಿಷ್ಯನು "ಈ ತ್ರಿನಲ್ಲಿ ತಿಳಿಯಲಿಕ್ಕೆ ಅತೀವ ಕಠಿಣವಾದ ವಿದ್ಯೆ ಯಾವದು ? ಎಂದು ಪ್ರಶ್ನೆ ಮಾ ನಂತೆ. ಆಗ ಗುರುವು " ನಿನ್ನನ್ನು ನೀನು ತಿಳಿಯುವದೇ ಅತೀವ ಮಹತ್ವದ್ದು. ನಿನ್ನ ನೀ ತಿಳಿಯದೇ ಉಳಿದೆಲ್ಲವನ್ನು ತಿಳಿದರೂ ಆ ತಿಳಿವು ವ್ಯರ್ಥ. ಹೊಳೆಯ ಮ ಮಳೆಗರೆದಂತೆ ನಿರರ್ಥಕ. ಅಂತೆಯೇ ಮಹಾನುಭಾವರು " ತನ್ನ ತಾನರಿದ ಮುಕ್ತ. ತಾನೇ ತನ್ನನರಿಯದೊಡೆ ಹೇಗೆ ವಿರಕ್ತ – ಎಂದು ಹಾಡಿರುವರು. ಗ್ರೀಕದೇ ದಾರ್ಶನಿಕರು ವಿಶ್ವವಿದ್ಯಾಲಯಗಳ ಮುಂದಿರುವ ಮಹಾದ್ವಾರಗಳ ಮೇಲೆ " ನಿನ್ನ ನೀ ತಿಳಿದುಕೋ " ಎಂದು ದೊಡ್ಡ ದೊಡ್ಡ ಅಕ್ಷರಗಳಲ್ಲಿ ಬರೆಯುತ್ತಿರುವ '' ನಿನ್ನ ನೀ ತಿಳಿ'' ಎಂಬ ಮಹತ್ವದ ವಿಷಯದ ಮೇಲೆಯೇ ಶ್ರೀ ಸೊನ್ನಲಿಗ ಸಿದ್ಧರಾಮದೇವರು–

ತಿಳಿನೀರೆಂಬೆ ತಿಳಿನೀರೆಂಬೆ । ತಿಳಿನೀಯೆಂದು
ಒಂದು ದಿನ ಅಂದಿಲ್ಲಲೋ ಮಾನವ ।
ಕ್ಷಣಕ್ಷಣಕ್ಕೆ ತಿಳಿ ನೀ ಎಂದರೆ
ತಳುಹದೇ ತನ್ನ ನಿಜವ ಕೊಡನೇ ಕಪಿಲಸಿದ್ಧ ಮಲ್ಲಿಕಾರ್ಜುನ

ಎಂಬ ವಚನವನ್ನು ಹೇಳಿದ್ದಾರೆ. ಮತ್ತೆ ಮತ್ತೆ ತಿಳಿನೀರಲ್ಲಿ ಮುಳುಮುಳುಗಿ ಏಳುವ ತಕ್ಕೆ ? ಕುಡಿಯಲು ತಿಳಿನೀರು, ಮೈದೊಳೆಯಲು ತಿಳಿನೀರು, ಬಟ್ಟೆದೊಳೆಯಲು ತಿ ನೀರು ಎಂದೂ ಎಲ್ಲಕ್ಕೂ ತಿಳಿನೀರೆಂದು ಗಳುಹುತ್ತಿರುವೆ.ಒಂದು ದಿನವಾದರೂ ನಿನ್ನ ತಿಳಿದುಕೊಂಡಿಲ್ಲ. ದಿನದಿನದಲಿ ಕ್ಷಣಕ್ಷಣದಲಿ ನಿನ್ನ ನೀ ತಿಳಿದುಕೋ, ಈ ಆತ್ಮಜ್ಞಾನ ತಿಳಿದು ದಿವ್ಯಪಥ ತುಳಿದರೆ ಕಪಿಲಸಿದ್ಧ ಮಲ್ಲಿಕಾರ್ಜುನನು ಕೃಪೆ ಮಾಡಿ ನಿಜಪದ ಯನ್ನೇ ಕರುಣಿಸುವನು.

ಭೂದಾನಯಜ್ಞದ ಆದ್ಯ ಪ್ರವರ್ತಕರಾದ, ಹಾಗೂ ಗಾಂಧೀಜಿಯವರ ಆಧ್ಯಾತ್ಮ ಸಂಪತ್ತಿನ ವಾರಸುದಾರರಾದ ಶ್ರೀ ಸಂತವಿನೋಬಾಜಿಯವರು ಒಮ್ಮೆ ಮೈಸೂರಿ ಬಂದಾಗ ಅಲ್ಲಿರುವ ಅರಮನೆಯನ್ನು ನೋಡದೇ ಅರಿವಿನ ಮನೆ ಅಂದರೆ ಜ್ಞಾನ ಮಂಟ ದಂತಿರುವ ರಾಷ್ಟ್ರಕವಿ ಕೆ. ವಿ. ಪುಟ್ಟಪ್ಪನವರನ್ನು ಭೆಟ್ಟಿಯಾಗಿ ಅವರು ಬರ 'ರಾಮಾಯಣದರ್ಶನಂ' ಎಂಬ ಮಹಾಕಾವ್ಯದ ಬಗ್ಗೆ ಮಾತಾಡುತ್ತ ಅದರಲ್ಲಿರುವ–

ಬಹಿರ್ಘಟನೆಯಂ ಪ್ರತಿಕೃತಿಸುವಾ ಲೌಕಿಕ ಚರಿತ್ರೆಯಲಿದು ।
ಅಲೌಕಿಕ ನಿತ್ಯ ಸತ್ಯಂಗಳಂ ಪ್ರತಿ ಮಿಸುವ ಸತ್ಯಸ್ಯ ಸತ್ಯಕಥನಂಕಣಾ"

"ಕಥೆತಾಂ ನಿಮಿತ್ತಮಾತ್ರಂ'' ''ರಾಮನ ಕಥೆಯ ಬಂಧನದಲಿ ಪರಾತ್ಪರ ಪುರುಷೋತ್ತಮನ ಲೋಕಲೀಲಾವಿಲಾಸ ——" ರಾಮಾಯಣಂ ವಿರಾಮಾಯಣಂ" "ಆತ್ಮಕ್ಕೆ ದೇಹವೋಲಂತೆ" ಮುಂತಾದ ಮಾತುಗಳು ಹೃದಯಂಗಮವಾಗಿವೆ ಎಂದು ಹೇಳಿ, ಆನಂದಪುಲಕಿತರಾಗಿ ಗೌರವಿಸಿ ಹೊರಟಾಗ ಕುವೆಂಪು ಅವರು ವಿನೋಭಾಜಿಗೆ ಕುಡಿಯಲು ಒಂದು ಲೋಟಾ ಹಾಲು ತಂದರು. ಆಗ ವಿನೋಭಾಜಿಯವರು ಪುಟ್ಟಪ್ಪನವರನ್ನು ಕುರಿತು ''ರಾಮಾಯಣದರ್ಶನಂ" ಎಂಬ ಮಹಾಕಾವ್ಯವನ್ನು ಬರೆದು ತನ್ಮೂಲಕ ವಿಶ್ವಜನಾಂಗಕ್ಕೆಲ್ಲ ಶಾಶ್ವತಾನಂದಧೀವ ಜ್ಞಾನಾಮೃತವನ್ನು ಕುಡಿಸಿದ ನೀವು ನನಗೆ ಈ ಗೋಕ್ಷೀರ ಕುಡಿಸಲು ಬಂದಿರಾ ? ಎಂದು ಮಾರ್ಮಿಕವಾಗಿ ಹೇಳಿದರಂತೆ.

ಆಧ್ಯಾತ್ಮಿಕ ಸಂಪತ್ತಿನ ಗಣಿಯಂತಿರುವ ಉಪನಿಷತ್ತುಗಳು, ವಿಶ್ವಕೋಶವೆನಿಸಿ ಲೌಕಿಕ, ಅಲೌಕಿಕ ಜ್ಞಾನಗಳ ಭಾಂಡಾರದಂತಿರುವ ವಿವೇಕ ಚಿಂತಾಮಣಿ, ಸಾಧನ ಚತುಷ್ಟಯದ ಹಂಗಿಲ್ಲದೇ ಸಿದ್ಧ ಕೋಟಿಗೇರಿದ, ಅಧ್ಯಯನವಿಲ್ಲದೇ ಸಕಲ ವಿದ್ಯೆಗಳನ್ನು ಬುದ್ಧಿಯಲ್ಲಿರಿಸಿಕೊಂಡ, ನುಡಿದುದೇ ವೇದ, ನಡೆದುದೇ ದಾರಿಯಾದ ಮಹಾಮಹಿಮ ಪ್ರಭುವಿನ ಲೀಲೆಗಳನ್ನು ಹೇಳುವ ಪ್ರಭುಲಿಂಗಲೀಲೆ, ಶರಣರು ಎದೆದುಂಬಿ ಹಾಡಿದ ವಚನಸಾಹಿತ್ಯ ಇವೇ ಮೊದಲಾದವುಗಳನ್ನು ಪರುಷಮಣಿಯಿಂದ ಮಾಡಿದ ಗೊಂಬೆಗಳೆಂದು ಹೇಳಬಹುದು. ಆ ತತ್ವಗ್ರಂಥಗಳ ಶ್ರವಣದಿಂದ ಓದುಗರೂ ಮುಕ್ತರಾಗುವರು. ಪ್ರಭುಲಿಂಗಲೀಲೆಯೆಂಬ ಮಹಾಕೃತಿಯಲ್ಲಿ ಪ್ರತಿಪಾದ್ಯನಾದ ಪ್ರಭುವಿಗೂ, ಪ್ರತಿಪಾದಕ ಗ್ರಂಥಕ್ಕೂ ಅಭೇದವಿರುವದು.

ಆದ್ಯ ಶಂಕರಾಚಾರ್ಯರು ಸದ್ಗುರು ಸಾರ್ವಭೌಮನಿಗೆ ಕೊಡಲಿಕ್ಕೆ ದೃಷ್ಟಾಂತವು "ದೃಷ್ಟಾಂತೋನೈವದೃಷ್ಟಃ ತ್ರಿಭುವನ ಜನರೇ" ಎಂದು ಹೇಳಿ ಗತ್ಯಂತರವಿಲ್ಲದೇ ಮಂದಮತಿಯಾದ ಶಿಷ್ಯನ ಸಮಾಧಾನಕ್ಕಾಗಿ ಸ್ಪರ್ಶಮಣಿಯ ದೃಷ್ಟಾಂತವನ್ನು ಕೊಟ್ಟಿರುವರು. ಪರುಷಮಣಿಯು ತನ್ನ ಸೋಂಕಿನಿಂದ ಕೀಳು ಕಬ್ಬಿಣವನ್ನು ಬಂಗಾರ ಮಾಡಿದರೂ ಅದು ತನ್ನಲ್ಲಿರುವ ಸ್ಪರ್ಷಮಾತ್ರದಿಂದ ಚಿನ್ನವಾಗುವಂತಹ ಶಕ್ತಿಯನ್ನು ಮಾತ್ರ ಎಂದಿಗೂ ಕೊಡುವದಿಲ್ಲ. ಗುರುದೇವನು ಹಾಗಲ್ಲ. ತನ್ನಿಂದ ಅನುಗ್ರಹಿತನಾದ ಶಿಷ್ಯನನ್ನು ತನ್ನಂತೆ ಮಾಡಿಕೊಳ್ಳುವನಲ್ಲದೇ ತನ್ನ ಅದ್ಭುತ ಶಕ್ತಿಯನ್ನೇ ಶಿಷ್ಯನಿಗೆ ದಯಪಾಲಿಸುವನು. ಅಂದರೆ ತಾನು ತನ್ನ ಶಿಷ್ಯನನ್ನು ಮುಟ್ಟಿ ತನ್ನಂತೆ ಹೇಗೆ ಗುರುವನ್ನಾಗಿ ಮಾಡಿಕೊಳ್ಳುವನೋ ಹಾಗೆ ಆ ಗುರುವಾದ ಶಿಷ್ಯನೂ ತನ್ನ ಶಿಷ್ಯನನ್ನು ಗುರುವಾಗಿ ಮಾಡುವನು. ಸದ್ಗುರುವರೇಣ್ಯನ ಕೃಪಾದೃಷ್ಟಿ ತಾಕಿದರೆ ಶಿಷ್ಯನು ಮುಕ್ತನಾಗುವನು- ಎಂಬ ಬಗೆಗೆ ಮತ್ತೊಂದು ದೃಷ್ಟಾಂತವನ್ನು ಕೊಟ್ಟು ಸಮಾಧಾನಪಡಿಸುತ್ತಾರೆ.ಒಂದು ದೀಪದಿಂದ ಮತ್ತೊಂದು ದೀಪಹಚ್ಚಿಕೊಂಡರೆ ಮೊದಲಿನ ದೀಪವು ಹಚ್ಚಿಸಿಕೊಂಡ ಎರಡನೇದೀಪಕ್ಕೆ ತನ್ನಲ್ಲಿರುವ ದಾಹಕಶಕ್ತಿ,ತಮೋನಿವಾರಣ ಶಕ್ತಿ,ನಯನ ಮನೋಹರ ಪ್ರಭಾಪಶಾಲಿಯ ತೇಜಃಕಿರಣ ಮೊದಲಾದವುಗಳನ್ನು ಅಣುಮಾತ್ರ ವ್ಯತ್ಯಾಸವಾಗದಂತೆ ಹೇಗೆ ಕೊಟ್ಟುಬಿಡುವದೋ ಹಾಗೆ,ಸದ್ಗುರುವು ತನ್ನ ಶಿಷ್ಯಪರಂಪರೆಗೆ ಸರ್ವಶಕ್ತಿಯನ್ನು ಧಾರೆಯೆರೆದರೂ ತಾನು ಸ್ವಯಂಪೂರ್ಣವಾಗಿಯೇ ಇರುವನು.

ದಿವ್ಯದರ್ಶನವನ್ನು ಪಡೆದ ಆ ಚಿಜ್ಜ್ಯೋತಿ ಜಗಜ್ಜ್ಯೋತಿ ಪ್ರಭುವಿನ ಲೀಲೆಗಳನ್ನು ಸಣ್ಣ ಒಡನುಡಿಗಳಿಂದ ಬಣ್ಣಿಸಲು ಯತ್ನಿಸುವದೆಂದರೆ ಮಹಾಮಹಾ ವಿಜ್ಞಾನಿಗಳಾದ ಗಗನಯಾತ್ರಿಕರು, ಅತಿವೇಗದ ರಾಕೆಟ್, ವಿಮಾನ ಮೊದಲಾದವುಗಳಿಂದ ಹೋಗಿ ಮುಟ್ಟಲು ಅಸಾಧ್ಯವೆನಿಸಿದ ಸೂರ್ಯಚಂದ್ರರನ್ನು ಭೂಮಿಯ ಮೇಲೆ ಕಾಲಿನಿಂದ ನಿಂತು ಮುಟ್ಟಲು ಯತ್ನಿಸಿದಂತೆ ಹಾಸ್ಯಾಸ್ಪದವಾದುದು. ವಿಶ್ವವಿಭೂತಿ ಪ್ರಭುವಿನ ಲೀಲೆಗಳನ್ನು ಬರೆಯುವದೆಂದರೆ ಅಪಾರವಾದ ಸಮುದ್ರವನ್ನು ಕೆರೆಯಿಂದ ದಾಟಲು ಯತ್ನಿಸಿದಂತೆ! ಹಿಮಾಲಯವನ್ನೇ ಎತ್ತಿ ಬೆನ್ನಮೇಲಿಟ್ಟುಕೊಳ್ಳುವ ಸಾಹಸಮಾಡಿದಂತೆ!!

ಸಮುದ್ರದಲ್ಲಿ ಅಪಾರವಾದ ಜಲರಾಶಿಯಿದ್ದರೂ ವಿವಿಧ ಪಾತ್ರೆಗಳು ತಮ್ಮ ಗಾತ್ರದಲ್ಲಿ ಹಿಡಿಯುವಷ್ಟು ಜಲವನ್ನು ತುಂಬಿಕೊಳ್ಳುವಂತೆ, ವಿಶಾಲವಾದ ಗಗನದಲ್ಲಿ ಬಗೆಬಗೆಯ ಖಗಗಳು ತಮಗೆ ಹಾರಲು ಎಷ್ಟು ಸಾಧ್ಯವೋ ಅಷ್ಟೇ ಹಾರಾಡುವಂತೆ, ತಾಮ್ರದ ತಂತಿಗಳಲ್ಲಿ ವಿದ್ಯುತ್ಪ್ರವಾಹವು ತುಂಬಿ ತುಂಬಿ ಹರಿಯುತ್ತಿದ್ದರೂ ಬಲ್ಬುಗಳು ತಮ್ಮ ತಮ್ಮ ಶಕ್ತಿಗೆ ತಕ್ಕಂತೆ ತಂತಿಗಳಲ್ಲಿಯ ವಿದ್ಯುತ್ತನ್ನು ತೆಗೆದುಕೊಳ್ಳುವಂತೆ, ಪ್ರಭುವಿನ ಲೀಲೆಗಳು ಅನಂತ ಅಪಾರ ಮಾತುಮನಂಗಳಿಗೆ ನಿಲುಕದ ವಾಗಿದ್ದರೂ ಅವನ್ನು ಯಥಾಮತಿಯಾಗಿ ಸಂಗ್ರಹಿಸಿ ಹೇಳುವೆನೆಂಬುದು ಈ ಆಶಯವು.

> ದೇಹಾದಿ ಕರಣಮಂ ಮೀರಿರ್ದನೆಲ್ಲವಂ
> ಮೋಹವರತುದು ತಾನೆತಾನಾದನಲ್ಲವಂ ॥
> ಇರುತ ಲಿಂಗಕ್ಕೆ ನೋಟ್ಟದೊಳೆ ಮಜ್ಜನಕೆರೆದು ।
> ಅರಳ್ದಕ್ಷಿಯೆಂಬ ಪೂವಿಂದೆ ಪೂಜಿಸಿಮರೆದು ॥
> ನರುಸುಯ್ಯ ಕಂಪಿಂದೆ ನವಧೂಪವಂ ಕೊಟ್ಟು ।
> ನರೆಮನದ ಬೆಳಗಿನಾರತಿಯೆತ್ತಿ ಪೊಡೆಮಟ್ಟು ॥

ಎಂದು ಕವಿಸಾರ್ವಭೌಮನಾದ ಹರಿಹರಕವಿಯಿಂದ ಸ್ತುತಿಸಲ್ಪಟ್ಟ ಪ್ರಭುವು ಚರಾಚರಸೃಷ್ಟಿಯನ್ನು ಹುಟ್ಟಿಸುವ ಕಾರ್ಯವನ್ನು ಬ್ರಹ್ಮನಿಗೆ, ಹುಟ್ಟಿಸಿದ ಸೃಷ್ಟಿಯನ್ನು ಸಂರಕ್ಷಿಸುವ ಕಾರ್ಯವನ್ನು ವಿಷ್ಣುವಿಗೆ, ಹುಟ್ಟಿಸಿ ಸಂರಕ್ಷಿಸಿದ ಸೃಷ್ಟಿಯನ್ನು ಸಂಹರಿಸುವ ಕಾರ್ಯವನ್ನು ರುದ್ರನಿಗೆ, ತಿರೋಧಾನ ಅನುಗ್ರಹಗಳೆಂಬ ಕೃತ್ಯಗಳನ್ನು ಈಶ್ವರ ಸದಾಶಿವರಿಗೆ ಅಂದರೆ ಸೃಷ್ಟಿ, ಸ್ಥಿತಿ, ಸಂಹಾರ, ತಿರೋಧಾನ, ಅನುಗ್ರಹವೆಂಬ ಪಂಚಕೃತ್ಯಗಳನ್ನು ಕಾರ್ಯಕೋಟಿಯಲ್ಲಿ ಸೇರಿದ ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವನೆಂಬ ಐವರು ದೇವತೆಗಳಿಗೆ ನಿಯಮಿಸಿ—

> ಆದಿ ಅನಾದಿ ಇಲ್ಲದಂದು । ಹಮ್ಮು ಬಿಮ್ಮುಗಳಿಲ್ಲದಂದು ।
> ಸುರಾಳ ನಿರಾಳವಿಲ್ಲದಂದು । ಶೂನ್ಯ ನಿಶ್ಶೂನ್ಯವಿಲ್ಲದಂದು ।
> ಸಚರಾಚರವೆಲ್ಲ ರಚನೆಗೆ ಬಾರದಂದು ।
> ಗುಹೇಶ್ವರನೊಬ್ಬನೇ ಇದ್ದನು ಉತ್ಪತ್ತಿಯಿಲ್ಲದಂತೆ ॥

ಬ್ರಹ್ಮವಿಷ್ಣುಗಳ ಮಾಯೆ ತೊತ್ತಳದುಳಿದಂದು ।
ದೇವದಾನವರ ಮಾಯೆ ಅಗಿದಗಿದು ತಿಂಬಂದು ।
ರುದ್ರಗಣ ಪ್ರಮಥಗಣರೆಂಬರ ಮಾಯೆ ಮರುಳ್ಮಾಡಿ ಕಾಡುವಂದು ।
ಮೊದಲಲೋಕಂಗಳ ಪಂಚಮುಖ ದಶಭುಜದವರಿಗೆ
ಮಾಯೆ ಅರ್ಧಾಂಗಿಯಾದಂದು ।
ಅಷ್ಟಾಶೀತಿ ಸಹಸ್ರ ಋಷಿಗಳ ಮಾಯೆ ತಪೋಮದದಲಿ ಕೆಡಹುವಂದು ।
ನಾನು ಮಾಯಾಕೋಲಾಹಲನಾಗಿರ್ದೆ ಕಾಣಾ ಗುಹೇಶ್ವರ ॥೨॥

ಎಂಬುಕ್ತಿಯಂತೆ ಪ್ರಭುವು ನಿರಂಜನ ಪ್ರಣವಸ್ವರೂಪಿಯಾಗಿ ಮೆರೆದನು.

— ೩ನೆಯ ಗತಿ —

## ಪಾರ್ವತೀ-ಪರಮೇಶ್ವರ ಸಂವಾದ

ಪ್ರಪಂಚದಲ್ಲಿರುವ ವಿವಿಧ ಧರ್ಮಗಳಲ್ಲಿ ಶೈವಧರ್ಮವು ಪ್ರಾಚೀನತಮ ಧ
ವೆನಿಸಿರುವದು. ಋಗ್ವಾದಿವೇದಗಳೂ, ಈಶಾದ್ಯುಪನಿಷತ್ತುಗಳೂ, ಕಾಮಿಕಾದಿ
ಆಗಮಗಳೂ ಶೈವಧರ್ಮದ ಸ್ವರೂಪವನ್ನು ಸ್ಫುಟವಾಗಿ ಪ್ರತಿಪಾದಿಸುತ್ತವೆ. ಶೈ
ಧರ್ಮವು ಭಾರತದಲ್ಲಿ ಅಷ್ಟೇ ಏಕೆ? ಇಡೀ ವಿಶ್ವದ ತುಂಬ ವ್ಯಾಪಿಸಿತ್ತು ಎಂಬು
ಸ್ಕಾಟಲಂಡದಲ್ಲಿರುವ ಸುವರ್ಣಲಿಂಗ, ಅರಬಸ್ತಾನದಲ್ಲಿರುವ ಮಕ್ಕೇಶ್ವರ
ಅಮೇರಿಕೆಯ ಟೆನ್ಸಿ ಪಟ್ಟಣದಲ್ಲಿರುವ ಘನಲಿಂಗ ಮೊದಲಾದವುಗಳು ಸಾಕ್ಷಿಯಾ
ಭಾರತದಲ್ಲಿಯಂತೂ ದ್ವಾದಶ ಜ್ಯೋತಿರ್ಲಿಂಗಗಳೂ, ಅನೇಕ ಶಿವಮಂದಿರಗ
ಶಿವಧರ್ಮಕ್ಕೆ ನಿದರ್ಶನವಾಗಿ ನಿಂತಿವೆ. ಕವಿಸಾರ್ವಭೌಮನಾದ ಕಾಲಿದಾಸನೂ, ರಾ
ಬಾಣ ಮೊದಲಾದ ಅಸುರರೂ, ಅದ್ವೈತಮತ ಸಂಸ್ಥಾಪಕರಾದ ಶಂಕರ ಭಗವ
ದರೂ, ಪರಮ ಶಿವಭಕ್ತರೆಂಬುದು ಇತಿಹಾಸದಿಂದ ತಿಳಿದುಬರುವದು, ರಾಮಾ
ಮಹಾಭಾರತಗಳಲ್ಲಿ ಶಿವಾರಾಧನೆಯ ವಿಷಯ ಬಂದಿದೆ. ಬ್ರಹ್ಮಹತ್ಯಾದೋಷನಿವಾ
ಗಾಗಿ ಶ್ರೀರಾಮಚಂದ್ರನು ಲಿಂಗಪೂಜೆ ಮಾಡಿದನೆಂದೂ, ದುಷ್ಟರಾದ ಕೌ
ಸಂಹಾರಕ್ಕಾಗಿ ಮಧ್ಯಮ ಪಾಂಡವನಾದ ಅರ್ಜುನನು ಇಂದ್ರಕೀಲ ಪರ್ವತದಲ್ಲಿ ಶಿವ
ಕುರಿತು ತಪಸ್ಸು ಮಾಡಿದುದಾಗಿಯೂ ಪುರಾಣಗಳಿಂದ ತಿಳಿದುಬರುವದು. ತಮಿ
ನಾಡಿನ ೬೩ ಪುರಾತನರು ದೃಢಭಕ್ತಿಯಿಂದ ಶಿವನನ್ನು ಮೆಚ್ಚಿಸಿ ಕೈಲಾಸಕ್ಕೆ ಹೋ
ರೆಂದು ಅವರ ಚರಿತ್ರೆಯಿಂದ ತಿಳಿಯುವದು.

ವೀರಶೈವಮತ ಸಂಸ್ಥಾಪಕರಾದ ಜಗದ್ಗುರು ರೇಣುಕಶಿವಾಚಾರ್ಯ
ಅಗಸ್ತ್ಯನಿಗೆ ವೀರಶೈವ ಷಟ್‌ಸ್ಥಲ ಸಿದ್ಧಾಂತವನ್ನು ಉಪದೇಶ ಮಾಡುವ ಪ್ರಸಂಗದ
ಸಿದ್ಧಾಂತ ಶಿಖಾಮಣಿಯೊಳಗೆ ಮೊದಲು–

"ತ್ರೈಲೋಕ್ಯ ಸಂಪದಾಲೇಖ್ಯ ಸಮುಲ್ಲೇಖನ ಭಿತ್ತಯೇ ।
ಸಚ್ಚಿದಾನಂದರೂಪಾಯ ಶಿವಾಯ ಬ್ರಹ್ಮಣೇನಮಃ ।

"ಬ್ರಹ್ಮೇತಿವ್ಯಪದೇಶಸ್ಯ ವಿಷಯಂ ಯಂ ಪ್ರಚಕ್ಷತೇ ।
ವೇದಾಂತಿನೋ ಜಗನ್ಮೂಲಂ ತಂ ನಮಾಮಿ ಪರಂಶಿವಂ ॥"

ಇವೇ ಮೊದಲಾದ ಸಪ್ತಶ್ಲೋಕಗಳಿಂದ ಶಿವನನ್ನು ಸ್ತುತಿಸಿರುವರು.

ಕೈಲಾಸಪತಿಯಾಗಿರುವ ಶಿವನಿಗಿರುವ ಸಗುಣ ನಿರ್ಗುಣ ರೂಪಗಳಲ್ಲಿ ಸಗು
ರೂಪವು ವಿರಾಡ್ರೂಪದ್ದಿದ್ದು ಅದನ್ನು ಅನೇಕ ಮಹಾನುಭಾವರು ಹೃದಯಂಗಮವಾ
ಬಣ್ಣಿಸಿರುವರು. ಪಾರ್ವತೀಪತಿ, ಪಂಚಮುಖಿ, ಮುಕ್ಕಣ್ಣ, ತ್ರಿಶೂಲಧಾರಿ, ನಂದಿವಾಹ
ಗಂಗಾಧರ, ಚಂದ್ರಶೇಖರ, ನೀಲಕಂಠ, ಸರ್ಪಾಭರಣ, ಕೃತ್ತಿವಾಸ, ಜಟಾಧಾರಿ ಶಿವನನ್ನು
ಎಷ್ಟು ಹಾಡಿ ಹರಸಿದರೂ, ಸ್ಮರಿಸಿದರೂ ಪೂಜೆ ಮಾಡಿದರೂ ಶಿವಭಕ್ತರ ಸಂತೋಷ
ಎಣೆಯಿಲ್ಲ. ಶಿವನು ಅಸಂಖ್ಯಲೀಲೆಗಳನ್ನು ಮಾಡಿ ಭಕ್ತಕೋಟಿಯನ್ನು ಉದ್ಧರಿ

ದ್ದಾನೆ. ಅವುಗಳಲ್ಲಿ ಕಾಮದಹನ, ತ್ರಿಪುರದಹನ, ಗಿರಿಜಾಕಲ್ಯಾಣ, ಭಿಕ್ಷಾಟನ ಮುಂತಾದ ಲೀಲೆಗಳು ಸುಮನೋಹರವಾಗಿದ್ದು ಅವುಗಳನ್ನು ಸಂಸ್ಕೃತ ಕನ್ನಡ ಕವಿಗಳು ತಮ್ಮ ಕಾವ್ಯ ವಸ್ತುವನ್ನಾಗಿ ಮಾಡಿಕೊಂಡು ಸುಂದರ ಕೃತಿಗಳನ್ನು ರಚಿಸಿದ್ದಾರೆ.

ಶಿವಮಹಿಮೆಗಳ ಬಗೆಗೆ ಪುಷ್ಪದಂತನು ತನ್ನ ''ಶಿವಮಹಿಮಸ್ತೋತ್ರದಲ್ಲಿ ಹೀಗೆ ಹೇಳಿದ್ದಾನೆ–

ಅಸಿತಗಿರಿ ಸಮಂಸ್ಯಾತ್ ಕಜ್ಜಲಂ ಸಿಂಧು ಪಾತ್ರೇ ।
ಸುರತರುವರ ಶಾಖಾ ಲೇಖನೀ ಪತ್ರಮುರ್ವೀ ॥
ಲಿಖತಿಯದಿಗೃಹೀತ್ವಾ ಶಾರದಾ ಸರ್ವಕಾಲಂ ।
ತದಪಿ ತವಗುಣಾನಾಮೀಶ ಪಾರಂನಯಾತಿ ॥

ಸಮುದ್ರವನ್ನೇ ಮಸಿಯ ಕುಡಿಕೆಯನ್ನಾಗಿ ಮಾಡಿ, ಕಲ್ಪ ವೃಕ್ಷಶಾಖೆಯನ್ನೇ ಲೆಕ್ಕಣಿಕೆಮಾಡಿ,ಭೂತಳವನ್ನೇ ಕಾಗದಮಾಡಿ ಸಾಕ್ಷಾತ ವಿದ್ಯಾದೇವತೆಯಾದ ಸರಸ್ವತಿಯೇ ಹಗಲಿರುಳೂ ಶಿವನ ಗುಣಗಳನ್ನು ಎಷ್ಟು ಬರೆದರೂ ಅವಕ್ಕೆ ಕೊನೆಯೆಂಬುದಿಲ್ಲ.

ವೇದವ್ಯಾಸರು ಕಾಶಿಯಲ್ಲಿ "ಗೋವಿಂದಾದಧಿಕಂ ನದೈವತಂ'' ಎಂದು ಎರಡೂ ಭುಜಗಳನ್ನು ಮೇಲೆತ್ತಿದಾಗ ಕೈಕತ್ತರಿಸಿ ಬೀಳಲು " ಶಿವ ಏಕೋಧ್ಯೇಯಃ ಸರ್ವಮನ್ಯ ತ್ಪರಿತ್ಯಜ್ಯ" ಎಂಬ ಶ್ರುತ್ಯುಕ್ತಿಗನುಸರಿಸಿ ಶಿವನಪರವಾಗಿ ಹತ್ತು ಪುರಾಣಗಳನ್ನು ಬರೆಯಲು ಕತ್ತರಿಸಿ ಬಿದ್ದಕೈಗಳು ಬಂದವೆಂಬುದು ಜಗತ್ಪ್ರಸಿದ್ಧವಿರುವದು.

ಶಿವನಿಗೆ ಉಗ್ರ–ಸೌಮ್ಯ; ಭೀಕರ–ಸುಂದರ; ಕಠೋರ–ಕರುಣಾಮಯ ರೂಪ ಗಳಿದ್ದು ಅವುಗಳಲ್ಲಿ ಸೌಮ್ಯ, ಸುಂದರ, ಕರುಣಾಮಯ, ಭಕ್ತಾನುಗ್ರಹಪರ, ಭಕ್ತಾಭೀಷ್ಟ ಪ್ರದ ರೂಪಗಳನ್ನು ಧರಿಸಿದ ಶಿವನನ್ನು ಶ್ರೀ ಬಸವೇಶ್ವರರು–

"ಹೊನ್ನ ಹಾವಿಗೆಯ ಮೆಟ್ಟಿದವನ, ಮಿಡಿಮುಟ್ಟಿದ ಕೆಂಜೆಡೆಯವನ;
ಮೈಯಲಿ ವಿಭೂತಿ ಧರಿಸಿದವನ, ಕರದಲಿ ಕಪಾಲವ ಹಿಡಿದವನ,
ಅರ್ಧನಾರಿಯಾದವನ, ಬಾಣನ ಬಾಗಿಲ ಕಾಯ್ದವನ,
ನಂಬಿಗೆ ಕುಂಟಣಿಯಾದವನ, ಚೋಳಂಗೆ ಹೊನ್ನಮಳೆಗರೆದವನ,
ಎನ್ನ ಮನಕೆ ಬಂದವನ ಸದ್ಭಕ್ತರ ಹೃದಯದಲಿಪ್ಪವನ ।
ಮಾಡಿದ ಪೂಜೆಯಲೊಪ್ಪುವನ ಕೂಡಲಸಂಗಯ್ಯನೆಂಬವನ''

ಎಂಬ ವಚನದಿಂದ ಹೊಗಳಿದ್ದಲ್ಲದೆ, ಶಿವನು ಅಯೋನಿಜ, ಸ್ವಯಂಭು ಎಂಬುದನ್ನು–

"ಅಮೃತವತಿ ಸೋಮಶಂಭುವಿಗೆ ಹುಟ್ಟಿದಾತ ಇಂದ್ರ
ಸತ್ಯಋಷಿ ಜ್ಯೇಷ್ಠಾದೇವಿಗೆ ಹುಟ್ಟಿದಾತ ಬ್ರಹ್ಮ
ವಸುದೇವ ದೇವಕಿಗೆ ಹುಟ್ಟಿದಾತ ವಿಷ್ಣು
ನಾಭಿರಾಜ ಮರುತಾದೇವಿಗೆ ಹುಟ್ಟಿದಾತನರುಹ
ಇವರೆಲ್ಲರೂ ಅಯೋನಿಜರೆಂಬುದು ತ್ರಿಜಗಬಲ್ಲುದು

ಉತ್ಪತ್ತಿ ಸ್ಥಿತಿ ಪ್ರಳಯಕ್ಕೆ ಹೊರಗಾದ ಕೂಡಲಸಂಗಮದೇವಂಗೆ
ಮಾತಾಪಿತರುಳ್ಳರೆ ಹೇಳಿರೋ !''

ಈವಚನದಿಂದ "ನಮ್ಮ ದೇವರೇ ಮೇಲು'' "ನಮ್ಮ ದೇವರಿಗಿಂತ ಮಿಗಿ ದೇವರಿಲ್ಲ'' ಎಂದು ಎದೆತಟ್ಟಿ ಮಾತನಾಡುವ ಅತಿಮತಾಭಿಮಾನವುಳ್ಳವರಿಗೆ ಪ್ರ ಮಾಡಿರುವರು.

''ತಾಯಿ ತಂದೆ ಇಲ್ಲದ ಕಂದ । ನಿನಗೆ ನೀನೇ ಹುಟ್ಟಿ ಬೆಳೆದೆಯಲ್ಲ।
ನಿನ್ನ ಪರಿಣಾಮವೇ ನಿನಗೆ ತೃಪ್ತಿಯಾಗಿ ಇದ್ದೆಯಲ್ಲ
ಭೇದಕರಿಗೆ ಅಭೇದ್ಯನಾಗಿ, ನಿನ್ನ ನೀನೆ ಬೆಳಗುತ್ತಿರ್ದೆಯಲ್ಲ,
ನಿನ್ನ ಚಾರಿತ್ರ್ಯ ನಿನಗೆ ಸಹಜ ಗುಹೇಶ್ವರ"

''ಲೀಲೆಯಾದೊಡೆ ಉಮಾಪತಿ, ಲೀಲೆತಪ್ಪಿದೊಡೆ ಸ್ವಯಂಭು ಗುಹೇಶ್ವ
''ಶಿವಜಗವಾಗಬಲ್ಲ; ಶಿವ ಜಗವಾಗದಿರಲೂ ಬಲ್ಲ;
ಶಿವ ರೂಪಾಗಬಲ್ಲ; ಶಿವರೂಪಾಗದಿರಲೂ ಬಲ್ಲ;
ಶಿವ ಅಜಾಂಡ ಕೋಟಿಗಳ ಮಾಡಬಲ್ಲ; ಮಾಡದಿರಲೂ ಬಲ್ಲ;
ಶಿವ ಕೆಡಿಸಬಲ್ಲ; ಕೆಡಿಸದಿರಲೂ ಬಲ್ಲ
ಶಿವ ಜಂಗಮವಾಗಿ ಪೂಜಿಸಬಲ್ಲ, ಶಿವಲಿಂಗವಾಗಿ
ತಾನೇ ಪೂಜೆಯ ಕೈಕೊಳ್ಳಲೂ ಬಲ್ಲ — — —"

ಎಂದು ಮುಂತಾಗಿ ವಚನಕಾರರು ಶಿವನು ಸರ್ವಸಮರ್ಥನು, ಶಿವನು ಸರ್ವವ್ಯಾಪ ಶಿವನು ಅಖಿಲ ಬ್ರಹ್ಮಾಂಡಗಳನ್ನು ನಿರ್ಮಿಸಿ ಅದರಲ್ಲಿ ತಾನು ವ್ಯಾಪಿಸಿದ್ದರೂ ವಿಶ್ವ ಬಂಧನಕ್ಕೆ ಸಿಲುಕದೇ "ಅತ್ಯತಿಷ್ಠದ್ದಶಾಂಗುಲಂ" ಎಂಬ ಶ್ರುತ್ಯುಕ್ತಿಯಂತೆ. ವಿಶ್ವದ ಇರುವನು ಎಂದು ಹೇಳಿರುವರು.

ಒಮ್ಮೆ ವೃದ್ಧಳಾದ ರಾವಣನ ತಾಯಿಯು ಭುಜಬಲವುಳ್ಳ ಮಗನಾದ ರಾವ ನನ್ನು ಕುರಿತು ''ತಮ್ಮ, ಮುದುಕಿಯಾದ ನಾನು ಎತ್ತರವಾದ ಕೈಲಾಸಪರ್ವತವನ್ನ ದಿನಾಲು ಶಿವನ ಪೂಜೆಯುನ್ನು ಮಾಡಲು ಶಕ್ತಿಯಿಲ್ಲದಂತಾಗಿದೆ. ಮಗುವೇ, ಹ ಮಾಡಲಿ" ಎನ್ನಲು ಪರಾಕ್ರಮಿಯಾದ ರಾವಣನು ಕೈಲಾಸ ಪರ್ವತವನ್ನೇ ಎತ್ತಿ ತರ ಕೆಂದು ತನ್ನ ಇಪ್ಪತ್ತು ಭುಜಗಳಿಂದ ಸುತ್ತು ಹಾಕಿ ಎತ್ತುತ್ತಿರಲು ಕೈಲಾಸ ಪರ್ವ ಅತ್ತಿತ್ತ ಹೊಯ್ದಾಡಹತ್ತಿತು. ಇದನ್ನರಿತ ಶಿವನು ರಾವಣನ ಗರ್ವಭಂಗ ಮಾಡ ಉದ್ದೇಶಿಸಿ ಅವನ ಎದೆಯುನ್ನು ಮೆಟ್ಟಲು ಹಣ್ಣಾದನು, ಸಣ್ಣಾದನು. ಇದನ್ನೇ ನಿಜಗು ಶಿವಯೋಗಿಗಳು–

"ದಿಟ್ಟ ರಾವಣನು ರಜತಾಚಲವನೆತ್ತಲೊತ್ತಿ ಬಿಟ್ಟಿತು
ರಸಾತಳಕೆ ನಿನ್ನ ಪಾದ" ಎಂದು ಹಾಡಿರುವರು.

ಅಜ, ಹರಿ, ಸುರರಿಗಿಂತಲೂ ಶಿವನೇ ಸರ್ವೋತ್ಕೃಷ್ಟನು ಎಂಬುದನ್ನು–

"ಧರೆಯತೇರನು ಮಾಡಿ ಅಜನ ಸಾರಥಿ ಮಾಡಿ ।
ಹರಿಯಶರ ಮಾಡಿ ತ್ರಿಪುರವನು ಅಳಿದಂಗೆ
ಸರಿಯಾರೊ ಹೇಳು ಸರ್ವಜ್ಞ"

ಇಂದ್ರನಾನೆಯನೇರಿ ಒಂದನೂ ಕೊಡಲರಿಯ ।
ಚಂದ್ರಶೇಖರನು ಮುದಿಯೆತ್ತನೇರಿ ಬೇ ।
ಕೆಂದುದನು ಕೊಡುವ ಸರ್ವಜ್ಞ ॥

ಎಂಬ ಪದ್ಯಗಳಿಂದ ಹೃದಯಂಗಮವಾಗಿ ಹೇಳಿರುವನು.

" ಶಿವಶಿವನೆಂದರೆ ಸಿಡಿಲೆಲ್ಲ ಬಯಲಾಗಿ ।
ಕಲ್ಲುಬಂದೆರಗಿ ಕಡೆಗಾಗಿ । ಎಲೆಮನವೆ ।
ಶಿವನೆಂಬ ಶಬ್ದದ ಬಿಡಬೇಡ."

ಎಂದು ಜನಪದರೂ ಇವನ ಮಹಿಮೆಯನ್ನು ಕುಣಿಕುಣಿದು ಹಾಡಿದ್ದಾರೆ.

ಕವಿಸಾರ್ವಭೌಮನಾದ ಕಾಲಿದಾಸನು–

" ಜಗತಃ ಪಿತರೌವಂದೇ ಪಾರ್ವತೀ ಪರಮೇಶ್ವರೌ " ಎಂದಿರುವರು.

ಒಂದು ಕುಟುಂಬದಲ್ಲಿ ತಾಯಿತಂದೆಗಳು ಮಕ್ಕಳ ಲಾಲನೆ ಪಾಲನೆ ಮಾಡುವಂತೆ ಪಾರ್ವತೀ ಪರಮೇಶ್ವರರು ವಿಶ್ವದಲ್ಲಿಯ ಸಮಸ್ತ ಜೀವ ಕೋಟಿಯನ್ನು ಸಂರಕ್ಷಿಸುವರು. ಅಂಥವರನ್ನು ವಂದಿಸುವೆ ಎಂದು ತನ್ನ ಕಾವ್ಯಾರಂಭದಲ್ಲಿ ಹೇಳಿರುವನು. ಅನ್ನಪೂರ್ಣೆ, ಸರ್ವಮಂಗಲೆ, ಪಾರ್ವತಿ, ಪರಮೇಶ್ವರಿ ಮುಂತಾದ ಸಾರ್ಥಕ ನಾಮಗಳಿಂದ ಕರೆಯಿಸಿಕೊಳ್ಳುವ ಆದಿಶಕ್ತಿಯು ಶಿವನ ಎಡದೊಡೆಯ ಮೇಲೆ ಮುಹೂರ್ತ ಮಾಡಿದ್ದಾಳೆ. ಪರಶಿವನಿಗಿಂತ ಪರಮೇಶ್ವರಿಯ ಮಹಿಮೆಯು ಘನವಾದುದು.

ಬ್ರಹ್ಮಾಂಡಗಳನ್ನೆಲ್ಲ ಕಾಳ್ಗಿಚ್ಚಿನಂತೆ ಸುಟ್ಟುಬಿಡುವ ಭಯಂಕರವಾದ ಕಾಳಕೂಟ ವಿಷವನ್ನು ಕುಡಿದ ಶಿವನು ಅಂದು ಸಾಯದೇ ಇಂದೂ, ಮುಂದೂ, ಎಂದೆಂದಿಗೂ ಮೃತ್ಯುಂಜಯನಾಗಿ ಬದುಕುವದಕ್ಕೆ ಮುತ್ತೈದೆಯಾದ ಪಾರ್ವತಿಯ ಮುತ್ತೈದಿತನವೇ ಕಾರಣವಲ್ಲದೆ ಮತ್ತಾವಕಾರಣವೂ ಇಲ್ಲ. ಶಿವನು ಮೃತ್ಯುಂಜಯನಾದುದು ಪಾರ್ವತಿಯ ಮಹಿಮೆಯಿಂದ. ಸುಡುಗಾಡ ಬೂದಿಯನ್ನು ಮೈತುಂಬ ಬಡಿದು, ಭಿಕ್ಷಾ ಪಾತ್ರೆಯನ್ನು ಕೈಯೊಳಗೆ ಹಿಡಿದು, ಸಟೆದಾನೆದೊಗಲನ್ನು ಹೊದೆದು, ಮನೆ ಮನೆಗೆ ನಡೆದು ತಿರಿದುಂಬುವ ನಿನ್ನ ವಿಕಟ ರೂಪವನ್ನು ಕಂಡರೆ ಎಲ್ಲರೂ ಅಂಜುವರು. ಆದರೆ ಸರ್ವಮಾಂಗಲ್ಯದೇವಿಯು ನಿನ್ನ ಕೈವಿಡಿದುದರಿಂದ ಎಲ್ಲರೂ ನಿನ್ನನ್ನು ಮಂಗಲ ಮಯನೆಂದು ಹಾಡಿಹರಸುವರು.

ಸಕಲಸಿದ್ಧಿ, ವೈಭವಾದಿಗಳನ್ನು ಹೊಂದಿದ ಪಾರ್ವತಿಯ ಸಾನ್ನಿಧ್ಯದಿಂದಲೇ ಶಿವನು ಬೇಡಿದವರಿಗೆ ಬೇಡಿದ ವರಗಳನ್ನು ಕೊಡಲು ಸಮರ್ಥನಾಗಿರುವನು. ಅವಳಿಲ್ಲದಿರಲು ಶಿವನು ಬರಿಗೈ ಬಂಟನೇ ? ಅವಳ ಸಾನ್ನಿಧ್ಯದಿಂದಲೇ ಸಕಲ ಇಷ್ಟಾರ್ಥಗಳನ್ನು ಕೊಟ್ಟು ಭಕ್ತರಿಂದ ಪೂಜೆಗೊಂಬನು. ಅವಳ ಮಹಿಮೆಗೆ ಸರಿಯಿಲ್ಲ ಎಂದು ಮುಂತಾಗಿ ನಿಜಗುಣ ಶಿವಯೋಗಿಗಳು–

"ಪಾಲಿಸೆನ್ನನು ಪದುಳವೆರಸಿ ಪರಶಿವನಿಗತಿ ।
ಮೇಲೆನಿಪ ಸುಗುಣ ಸಂಪನ್ನೆ ಶರ್ವಾಣಿ"

ಎಂಬ ಪದ್ಯದಲ್ಲಿ ಹೇಳಿರುವರು.

ಷಡ್ರಿಪು, ಷಡ್ಭಾವವಿಕಾರ, ಷಡ್ಭ್ರಮೆ, ತಾಪತ್ರಯ, ಗುಣತ್ರಯ, ಕರ್ಮ ಇವುಗಳ ವಿವರಣೆಯು ತತ್ವಶಾಸ್ತ್ರದಲ್ಲಿ ಹಾಸುಹೊಕ್ಕಾಗಿ ಬಂದಿದೆ. ಸತ್ವ, ರಜ, ಎಂಬವೇ ಗುಣತ್ರಯಗಳು. ಸತ್ವ ಗುಣ ಶುಭ್ರವೆಂದೂ, ರಜಸ್ತಮೋ ಗುಣಗಳು ಮತ್ತು ಕಪ್ಪೆಂದೂ ಹೇಳುವರು. ನಿರಾಕಾರವಾದ, ಸರ್ವಶ್ರೇಯೋಭಿವೃದ್ಧಿಗೆ ಕಾರಣವಾದ ಸತ್ವಗುಣವೇ ಸಾಕಾರವಾಗಿ, ಒಬ್ಬುಳಿಯಾಗಿ, ಮೈದಾಳಿ ನಿಂತಿದೆ ಏನೋ ಎಂಬಂತೆ ರಜತಗಿರಿ, ಬೆಳ್ಳಿಬೆಟ್ಟ, ಕೈಲಾಸಪರ್ವತವು ಒಪ್ಪುತ್ತಿತ್ತು. ಆ ರಜತಗಿರಿಯ ಸುತ್ತಮುತ್ತ ನಿಗಮ ನಿಕರವೇ ಕೋಟೆಯ ಗೋಡೆಯಾಗಿ, ಆರು ಶಾಸ್ತ್ರಗಳೇ ಯಾಗಿ, ಆಗಮಗಳೇ ಮಹಾದ್ವಾರವಾಗಿ ಸ್ವಯಂಶುಭ್ರವಾದ ಬೆಳಕಿನಲ್ಲಿ ರಜತಗಿರಿ ಸೂರ್ಯಚಂದ್ರರ ಬೆಳಕಿನ ಹಂಗಿಲ್ಲದೆ ಝಗಝಗ ಹೊಳೆಯುತ್ತಿತ್ತು. ಆ ರಜತಗಿರಿ ಭಕ್ತಿಯೋಗವೆಂಬ ರಾಜಬೀದಿಗಳೂ, 'ಸೋಹಂ' ಎಂಬ ತಳಿರುತೋರಣ ಕಟ್ಟಿದ ಮಸಿ ಎಂಬ ಉಪ್ಪರಿಗೆಯ ಮನೆಗಳೂ, ಇದ್ದವು. ಇಂತಹ ಅಭೂತಪೂರ್ವವಾದ ದಿಂದಕೂಡಿದ ರಜತಗಿರಿಯ ಜ್ಞಾನಪೀಠದ ಮೇಲೆ ಶಿವಪಾರ್ವತಿಯರು ಮಾಡಿದ್ದರು. ಛತ್ರ, ಚಾಮರ, ಪಾದುಕೆ, ಕನ್ನಗನ್ನಡಿ, ವಿವಿಧ ವಸ್ತ್ರಅಲಂಕಾರ ಹಿಡಿದುಕೊಂಡು ರುದ್ರಕನ್ನಿಕೆಯರು, ರುದ್ರ ಗಣಂಗಳು ಶಿವನ ಎಡಬಲಭಾಗಗಳಲ್ಲಿ ಗರದಿಂದ ನಿಂತಿದ್ದರು.

ಸೃಷ್ಟಿಕರ್ತ, ಸ್ಥಿತಿಕರ್ತ, ಸಂಹಾರಕರ್ತರಾದ ಬ್ರಹ್ಮ, ವಿಷ್ಣು, ರುದ್ರರಿಂದ ಶಿವನಿಂದಕರನ್ನು ಸಿಟ್ಟಿನಿಂದ ಸೀಳಿ ನೆಲಕ್ಕಪ್ಪಳಿಸುವ ವೀರಾವೇಶದ ವೀರಭದ್ರನಿಂದ ವಿವಿಧ ಭಂಗಿಯಿಂದ ನಾಟ್ಯವಾಡುವ ಭೃಂಗೀಶನಿಂದಲೂ, ದ್ವಾರಪಾಲಕನಾದ ನಿಂದಲೂ, ಸಮುದ್ರವನ್ನೇ ಕುಡಿದು, ಮೇರುಗಿರಿಯನ್ನೇ ಅತ್ತಿತ್ತ ಸರಿಸುವ ಅದ್ಭುತ ಸಾಮರ್ಥ್ಯವುಳ್ಳ ಭೂತ ಪ್ರೇತಗಳಿಂದಲೂ, ಅತ್ರಿ, ಭಾರದ್ವಾಜ, ವಿಶ್ವಾ ಗೌತಮ, ಗಾರ್ಗಿ ಮುಂತಾದ ಮುನಿಪುಂಗವರಿಂದಲೂ, ಆದಿತ್ಯ ಸೋಮ ಮೊದಲ ನವಗ್ರಹಗಳಿಂದಲೂ, ಪ್ರಮಥನಾಥ, ಪಾವಕಲೋಚನ ಮುಂತಾದ ದಿಕ್ಪಾಲಕರಿಂದ ಬ್ರಹ್ಮರಾಣಿ ಸರಸ್ವತಿ, ವಿಷ್ಣುವಿನ ರಾಣಿ ಲಕ್ಷ್ಮೀ, ಇಂದ್ರನ ರಾಣಿ ಶಚಿ ಮುಂ ದೇವತಾಂಗನೆಯರಿಂದಲೂ ಶಿವನಸಭೆಯು ಇಂದಿನ ಲೋಕಸಭೆ, ವಿಧಾನಸಭೆ ಶಾಸಕರಿಂದ ತುಂಬಿತುಳುಕುವಂತೆ ತೋರುತ್ತಿತ್ತು.

ರಾಜ್ಯದಲ್ಲಿರುವ ಮುಖ್ಯಮಂತ್ರಿಯು ತನ್ನ ರಾಜ್ಯದಲ್ಲಿರುವ ಪ್ರಜೆಗಳ ಸು ಸಮೃದ್ಧಿಗಾಗಿ, ನೀರಾವರಿ ಖಾತೆ, ಆರೋಗ್ಯಖಾತೆ ಮುಂತಾದವುಗಳನ್ನು ಆಯಾಯ ಖಾತೆಗೆ ಒಬ್ಬ ಮಂತ್ರಿಯನ್ನು ನಿಯಮಿಸುವಂತೆ ಜಗಚ್ಚಾಲಕನಾ ಪರಶಿವನೂ ವಿವಿಧ ಖಾತೆಗಳನ್ನು ವಿಭಾಗ ಮಾಡಿ ಆಯಾಯ ಖಾತೆಗಳಿಗೆ ಅಂದ ನೀರಾವರಿ ಖಾತೆಗೆ ಜಲಾಧಿದೇವತೆಯಾದ ವರುಣನನ್ನು ಗೃಹಖಾತೆ ಅಂದರೆ ರಕ್ಷಣ ಖಾತೆಗೆ ಯಮನನ್ನು, ಶಿಕ್ಷಣ ಖಾತೆಗೆ ವಿದ್ಯಾಧಿದೇವತೆಯಾದ ಸರಸ್ವತಿಯನ್ನು ವಿದ್ಯುತ್ ಖಾತೆಗೆ ಸೂರ್ಯಚಂದ್ರರನ್ನು, ಆಹಾರ ಖಾತೆಗೆ ಭೂದೇವಿಯನ್ನು ಆರೋಗ್ಯ ಖಾತೆಗೆ ಧನ್ವಂತರಿಯನ್ನು, ವಾರ್ತಾ ಪ್ರಚಾರ ಖಾತೆಗೆ ವಾಯುದೇವರನ್ನು

ನಾರದರನ್ನು, ಸಮಾಜ ಕಲ್ಯಾಣ ಖಾತೆಗೆ ವಿಶ್ವಕುಟುಂಬಿಗಳಾವ ಸಂತರನ್ನು, ಕಂದಾಯ ಖಾತೆಗೆ ಲಕ್ಷ್ಮೀದೇವಿಯನ್ನು ನಿಯಮಿಸಿ ಅಖಿಲಬ್ರಹ್ಮಾಂಡವನ್ನು ಸಂರಕ್ಷಿಸುತ್ತಿರುವನು. ಭಾದ್ರಪದಮಾಸದಲ್ಲಿ ಮಾತ್ರ ಕೈಲಾಸದಿಂದ ಭೂಲೋಕಕ್ಕಿಳಿದು ಬಂದು ೪-೬ ದಿನನಿಂತು ಕೈಲಾಸಕ್ಕೆ ಮರುಪಯಣ ಮಾಡುವ ಪಾರ್ವತಿಯ ಪ್ರೀತಿಯ ಮುದ್ದುಮಗು ಲೋಕ ಪ್ರಿಯನಾದ ಗಣಪತಿಯು ಅತ್ತಿತ್ತ ಕಿರುಹೆಜ್ಜೆಗಳನ್ನಿಡುತ್ತ ಅಲೆಯುತ್ತಲಿದ್ದಾನೆ. ರಾಜ ಯೋಗಿಗಳು, ಹಠಯೋಗಿಗಳು, ಕರ್ಮಯೋಗಿಗಳು, ಮಂತ್ರಯೋಗಿಗಳು, ಸಿದ್ಧರು, ಸಾಧ್ಯರು, ಕಿನ್ನರರು, ಕಿಂಪುರುಷರು, ಗರುಡರು, ಗಂಧರ್ವರು, ಯಕ್ಷರು ಶಿವ ಸಂದರ್ಶನಕ್ಕಾಗಿ ಗುಂಪುಗುಂಪಾಗಿ ಬರುತ್ತಿದ್ದಾರೆ. ಕೋಟಿ ಕೋಟಿ ದೇವತೆಗಳು, ಮನು ಮುನಿಗಳು, ಋಷಿಪುಂಗವರು, ಯೋಗಿವರೇಣ್ಯರು, ಸದ್ಭಕ್ತ ಶಿಖಾಮಣಿಗಳು, ಶರಣರು ಶರಣೆಯರು ಇವರುಗಳ ಮಧ್ಯದಲ್ಲಿ–

> ಸಸಿಯ ಶೀತಳದಂತೆ ಕಪ್ಪುರ ।
> ದೆಸೆವ ಕಂಪುಗಳಂತೆ ಕನಕದ ।
> ಮಿಸುಪ ಲೋಹಸುವರ್ಣದಂತೆ ಸುಧಾಂಶುರುಚಿಯಂತೆ ।
> ಲಸಿತ ಮಿಥುನಾಲಾಪ ಹೊರಗಾ ।
> ಣಿಸದೆ ಶಕ್ತಿ ಸಮೇತ ಶಂಕರ ।
> ನೊಸೆದು ಕುಳ್ಳಿತು ಮೆರೆವುತಿರ್ದನು ದಿವ್ಯತೇಜದಲಿ ॥

'ಶಿವಾದ್ವೈತಮತ, ವಿಶೀಷ್ಟಾದ್ವೈತಮತ, ದ್ವೈತಾದ್ವೈತ ಮತ, ಶಕ್ತಿವಿಶಿಷ್ಟಾ ದ್ವೈತ ಮತ ಮುಂತಾದ ಪದಗಳು ವೀರಶೈವ ಮತ ಪರವಾಗಿದ್ದು ವಿಶಿಷ್ಟಾರ್ಥ ಪರಿಪೂರ್ಣಗಳಾಗಿವೆ. ದೊಡ್ಡದೊಡ್ಡ ಹೊತ್ತಿಗೆಗಳನ್ನು ಬರೆದರೂ ಸಹ ಮುಗಿಯ ದಂತಹ ತತ್ತ್ವಾರ್ಥಗಳು ಆಯಾ ಚಿಕ್ಕಪದಗಳಲ್ಲಿ ತುಂಬಿಕೊಂಡಿವೆ. ಪ್ರಭುಲಿಂಗಲೀಲೆ ಯನ್ನು ಬರೆದ ಚಾಮರಸನು "ಸಸಿಯಶೀತಳದಂತೆ ... .... ..." ಎಂಬ ಪದ್ಯದಲ್ಲಿ ಶಕ್ತಿವಿಶಿಷ್ಟಾದ್ವೈತ ಮತದ ನಿರೂಪಣೆಯನ್ನು ಮಾಡುತ್ತಾನೆ.

" ಭೂತಲೇಘಟಃ'' " ಹಸ್ತೇ ಪುಸ್ತಕಂ" ಎಂಬುವಲ್ಲಿ ಭೂತಲಕ್ಕೂ ಘಟಕ್ಕೂ, ಹಸ್ತಕ್ಕೂ ಪುಸ್ತಕಕ್ಕೂ. ಇರುವ ಸಂಬಂಧ ಸಂಯೋಗ ಸಂಬಂಧವೆನಿಸುವದು. ಭೂತಲ ದಿಂದ ಘಟವನ್ನು ತಕ್ಕೊಂಡು ಮತ್ತೊಂದೆಡೆಗೆ, ಕೈಯೊಳಗಿದ್ದ ಪುಸ್ತಕವನ್ನು ಬೇರೆಕಡೆಗೆ ಇಡಲೂ ಒಯ್ಯಲೂ ಬರುವದು. ಎರಡು ವಸ್ತುಗಳು ಬೇಕಾದಾಗ ಕೂಡಲೂಬಹುದು. ಕೂಡದಿರಲೂಬಹುದು. ಇದು ಸಂಯೋಗ ಸಂಬಂಧವೆನಿಸುವದು. ಹಾಲು ಹಾಲಿನ ಸಿಹಿ, ಸಕ್ಕರೆ ಸಕ್ಕರೆಯ ಸಿಹಿ, ದೀಪ ದೀಪದ ಬೆಳಕು, ಬೆಳದಿಂಗಳು, ಬೆಳ್ದಿಂಗಳೊಳಗಿನ ತಂಪು, ಕುಸುಮ, ಕುಸುಮದಲ್ಲಿಯ ಕಂಪು, ಜೇಂಗೊಡ, ಜೇಂಗೊಡದೊಳಗಿನ ಇಂಪು ಇವುಗಳನ್ನು ಮಾತ್ರ ಎಂದೆಂದಿಗೂ ಅಗಲಿಸಲಿಕ್ಕೆ ಬರುವದಿಲ್ಲ. ಕೂಡಿದ ವಸ್ತುಗಳನ್ನು ಬೇರ್ಪಡಿಸಲಿಕ್ಕೆ ಬಾರದ ಸಂಬಂಧವೇ ಸಮವಾಯಸಂಬಂಧ. ಶಿವಶಕ್ತಿಯರು ಅವಿನಾ ಭಾವದಿಂದ ಕೂಡಿಕೊಂಡಿರುವರು. ಶಿವನನ್ನು ಬಿಟ್ಟು ಶಕ್ತಿಯಿಲ್ಲ. ಶಕ್ತಿಯನ್ನು ಬಿಟ್ಟು ಶಿವನಿಲ್ಲ. ಇದನ್ನೇ ಜಗದ್ಗುರು ರೇಣುಕರು ಸಿದ್ಧಾಂತ ಶಿಖಾಮಣಿಯಲ್ಲಿ–

" ವಾಗರ್ಥಾವಿವಸಂಪೃಕ್ತೌ ವಾಗರ್ಥಪ್ರತಿಪತ್ತಯೇ ॥
ಜಗತಃಪಿತರೌ ವಂದೇ ಪಾರ್ವತೀಪರಮೇಶ್ವರೌ, "

ಕವಿ ಸಾರ್ವಭೌಮನಾದ ಕಾಳಿದಾಸನು ಶಬ್ದಾರ್ಥಗಳಂತೆ ಕೂಡಿಕೊಂಡಿ[illegible] ಜಗತ್ತಿನ ತಾಯಿತಂದೆಗಳಾದ ಪಾರ್ವತೀ ಪರಮೇಶ್ವರರನ್ನು ನಮಸ್ಕರಿಸಿ ಕಾವ್ಯಾ[illegible] ಮಾಡುವನು.

ಬೋಧಕಬೋಧ್ಯಗಳಾದ ಪದಪದಾರ್ಥಗಳಿಗೆ ನಿತ್ಯ ಸಂಬಂಧವಿರುವದರಿಂದ ಘ[illegible] ಪಟ ಎಂದು ಉಚ್ಚರಿಸಿದಾಕ್ಷಣ ಬೋಧ್ಯಗಳಾದ ಜಲಾನಯನಯೋಗ್ಯ ಕುಂಭ. ಮತ್ತು ಶರೀರಾಚ್ಛಾದಕ ವಸ್ತ್ರಗಳ ಸಂಸ್ಮರಣೆಯಾಗುವದು. ಪದವನ್ನು ಬಿಟ್ಟು ಅರ್ಥವಿ[illegible] ಅರ್ಥವನ್ನು ಬಿಟ್ಟು ಪದವಿಲ್ಲ. ಶಿವಶಕ್ತಿಯರು ಹಾಗೆ ಕೂಡಿಕೊಂಡಿರುವರೆಂಬು[illegible] ಕವಿಯಆಶಯ.

ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠದ ಜಗದ್ಗುರುಗಳ ಪರಂ[illegible] ಯಲ್ಲಿ ಶ್ರೀಅರ್ಧನಾರೀಶ್ವರರೆಂಬ ಮಹಾನುಭಾವರು ಪೀಠಾಧಿಪತಿಗಳಾಗಿ ಹೋ[illegible] ವರೆಂದು ತಿಳಿದುಬರುವದು. ಅರ್ಧನಾರೀಶ್ವರರು ಎಂದರೆ ಶಕ್ತಿಸಮೇತ ಶಿವಸ್ವರೂಪ[illegible] ಎಂದರ್ಥವಾಗುವದು.

ದಾಸಕುಲತಿಲಕರೆನಿಸಿದ ಕನಕದಾಸರು ಶಿವಶಕ್ತಿಯರ ನಿಲುವನ್ನು ಹೃದಯಂ[illegible] ವಾಗಿ ಹೇಳಿರುವರು–

ನೀಮಾಯೆಯೊಳಗೊ ನಿನ್ನೊಳು ಮಾಯೆಯೋ ॥
ಸವಿಯೊಳಗೆ ಸಕ್ಕರೆಯೋ । ಸಕ್ಕರೆಯೊಳಗೆ ಸವಿಯೋ ।
ಸವಿಯು ಸಕ್ಕರೆಯೆರಡು ಜಿಹ್ವೆಯೊಳಗೊ ।
ಜಿಹ್ವೆ ಮನಸಿನ ಒಳಗೊ ಮನಸು ಜಿಹ್ವೆಯ ಒಳಗೊ ।
ಮನಸು ಜಿಹ್ವೆಗಳೆರಡು ನಿನ್ನೊಳಗೊ ಕೃಷ್ಣಾ ॥೧॥

ಬಯಲೊಳಗೆ ಆಲಯವೊ ಆಲಯದೊಳಗೆ ಬಯಲೋ
ಬಯಲು ಆಲಯವೆರಡು ನಯನದೊಳಗೊ ।
ನಯನ ಬುದ್ಧಿಯ ಒಳಗೊ ಬುದ್ಧಿನಯನದ ಒಳಗೋ ।
ನಯನ ಬುದ್ಧಿಗಳೆರಡು ನಿನ್ನೊಳಗೊ ಕೃಷ್ಣ ॥೨॥

ಕುಸುಮದಲಿ ಗಂಧವೋ ಗಂಧದಲಿ ಕುಸುಮವೋ ।
ಕುಸುಮ ಗಂಧಗಳೆರಡು ಘ್ರಾಣದೊಳಗೋ ।
ಅಸಮಭವ ಕಾಗಿನೆಲೆಯಾದಿಕೇಶವ ನಿನ್ನ ।
ಉಸುರಲೆನ್ನಳವಲ್ಲ ಎಲ್ಲ ನಿನ್ನೊಳಗೊ ॥

ಸತ್ವ, ರಜ, ತಮ, ಎಂಬ ಮೂರು ಗುಣಗಳಲ್ಲಿ ಶ್ರೇಷ್ಠವಾದುದು ಸತ್ವಗುಣ. ಆ ಶು[illegible] ಸತ್ವಗುಣವೇ ಸಾಕಾರವಾಗಿ ನಿಂತಿರುವದೋ ಏನೋ ಎಂಬುವಂತೆ ರಜತಗಿರಿ ಒಪ್ಪುತ್ತ[illegible]

ಬೆಳ್ಳಿಯಬೆಟ್ಟ.ಅಲ್ಲಿರುವ ತತ್ವಜ್ಞಾನರತ್ನ ಸಿಂಹಾಸನದಮೇಲೆ ಇಂಗಡಲು ಇಂಪು,ಕುಸುಮ ಕಂಪು,ಬೆಳುದಿಂಗಳು ತಂಪು ಕೂಡಿರುವಂತೆ ಪಾರ್ವತೀ ಪರಮೇಶ್ವರರು ಒಂದಾಗಿ ವಿರಾಜ ಮಾನರಾಗಿದ್ದಾರೆ. ಶಿವನಸಭೆಯಲ್ಲಿ ಎಣಿಕೆ ಮಾಡಲಿಕ್ಕೆ ಬಾರದಷ್ಟು ಗುಣಿಸಲು ಬರ ದಷ್ಟು ಮಹಾಜನರು ಕೂಡಿದ್ದಾರೆ. ಸೃಷ್ಟಿ, ಸ್ಥಿತಿ, ಸಂಹಾರ, ತಿರೋಧಾನ, ಅನುಗ್ರಹ ಎಂಬ ಪಂಚಕೃತ್ಯಗಳನ್ನು ನಿರ್ವಹಿಸುವ ಬ್ರಹ್ಮ, ವಿಷ್ಣು, ರುದ್ರ ಈಶ್ವರ, ಸದಾಶಿವ ಎಂಬ ಐವರು ದೇವತೆಗಳು, ಏಕಾದಶರುದ್ರರು, ರಕ್ಕಸರು, ಯಕ್ಷರು, ಕಿನ್ನರರು, ಗಂಧರ್ವರು, ವಿದ್ಯಾಧರರು, ಸಿದ್ಧರು, ಗರುಡರು, ಸಪ್ತರ್ಷಿಗಳು, ಬಕ, ಶುಕ, ಗಾಲವ ಗಾರ್ಗ್ಯ, ಶರಭ, ಕೌಂಡಿನ್ಯ, ಮುದ್ಗಲ, ಪುಷ್ಪದಂತ, ಸನಕ, ಸನತ್ಕುಮಾರ ಮುಂತಾದ ಋಷಿವರೇಣ್ಯರು, ಸಿರಿ, ಸರಸ್ವತಿ,ಶಚಿ, ಅಹಲ್ಯೆ,ಲೋಪಾಮುದ್ರೆ, ಅರುಂಧತಿ ಮುಂತಾದ ಪುಣ್ಯಾಂಗನೆಯರು. ಊರ್ವಸಿ. ರಂಭೆ, ಮೇನಕೆ, ತಿಲೋತ್ತಮೆ ಮೊದಲಾದ ಪಣ್ಯಾಂಗ ನೆಯರು, ಸಪ್ತಮಾತ್ರಿಕೆಯರು, ಚೌಸಷ್ಟಿಯೋಗಿನಿಯರು, ಅಷ್ಟದಿಕ್ಪಾಲಕರು, ನಾಗ ಕನ್ನೆಯರು, ಅಷ್ಟವಿಧಮಹಾಲಕ್ಷ್ಮಿಯರು, ತುಂಬುರ–ನಾರದರು, ಚತುರ್ವಿಧಮೋಕ್ಷ ಗಳನ್ನು ಪಡೆದ ಮಹಾನುಭಾವರು ಹೀಗೆ ಅಸಂಖ್ಯ ದೇವಾಧಿದೇವತೆಗಳಿಂದಲೂ, ದೇವಿ ಯರಿಂದಲೂ ಶಿವನಸಭೆಯು ಕಿಕ್ಕಿರಿದು ತುಂಬಿಹೋಗಿತ್ತು. ಸಹಸ್ರಾರು ಯೋಜನ ವಿಸ್ತಾರವಾದ ಕೈಲಾಸ ಪರ್ವತದ ಸಂದಿಗೊಂದಿಗಳಲ್ಲಿ ಮೂಲೆಮೂಲೆಗಳಲ್ಲಿ ಒಂದು ಚಿಕ್ಕ ಇರುವೆಗೂ ಒಳಗೆಹೋಗಲಿಕ್ಕೆ ಬರದಷ್ಟು ಸ್ಥಾನವಿಲ್ಲದೆ ಘನ ಮಹಾ ಮಹಿಮರೆಲ್ಲರೂ ತುಂಬಿದ್ದನ್ನು ನೋಡಿ ಅಂಬಿಕೆಗೆ ಕಡುಸೋಜಿಗವಾಗಿ ಶಂಭುವಿನಲ್ಲಿ ಒಂದು ಪ್ರಶ್ನೆ ಕೇಳಬಯಸಿದಳು. ಪಾರ್ವತಿಯ ಮನದಲ್ಲಿ ಒಂದು ಸಂಶಯ ಬಂದು ಆಕೆಗೆ ಮುಂದಿನ ಹಾದಿಯೇ ತೋಚದಂತಾಯಿತು.

ಜ್ಞಾನಪಥದಲ್ಲಿ ನಡೆವ ಸಾಧಕನಿಗೆ ವಿವಿಧ ಅಡೆತಡೆಗಳು ಬಂದರೂ ಅವನ್ನೆಲ್ಲ ತೊಡೆದುಹಾಕಿ ಮುಕ್ತಿಮಂದಿರಕೆ ಮುಟ್ಟಿಸುವ ಮಹಾರಾಯನೆಂದರೆ ಸದ್ಗುರು ವರೇಣ್ಯರೆ. ಜಗಜ್ಜನನಿಯಾದ ಪಾರ್ವತಿಯೇ ಜಗಜ್ಜನಕನಾದ ಪರಮೇಶ್ವರನಲ್ಲಿ ಮನದಸಂಶಯ ಬಿಚ್ಚಿಟ್ಟು ನಿಚ್ಚಳಜ್ಞಾನವನ್ನು ಪಡೆಯುವಳು. ಲೌಕಿಕದಲ್ಲಿ ಸತಿಪತಿಗಳು ಸಂಸಾರವೆಂಬ ರಥಕ್ಕೆ ಎರಡು ಗಾಲಿಗಳಿದ್ದಂತೆ. ಸತಿಪತಿಗಳು ಕೌಟುಂಬಿಕ ಜೀವನದಲ್ಲಿ ಎಷ್ಟೇ ಹೊತ್ತುಗಳೆದರೂ ಸಹ ವಿರಾಮವಿದ್ದಾಗ ಆಧ್ಯಾತ್ಮಿಕ ವಿಷಯದಲ್ಲಿ ಕಾಲಕ್ಷೇಪ ಮಾಡಬೇಕು.ವೇದಕಾಲದಲ್ಲಿ ಇಂದ್ರಸೇನಾ, ಸುಧಾ, ಅಗಸ್ತ್ಯಭಗಿನಿ,ಅಪಾಲಾ, ವಾಚಕ್ನವಿ, ಬ್ರಹ್ಮವಾದಿನಿ, ಮುಂತಾದ ಮಹಿಳಾ ರತ್ನಗಳು ಆಧ್ಯಾತ್ಮ ವಿದ್ಯೆಯಲ್ಲಿ ಪಾರಂಗತರಿದ್ದರಲ್ಲದೆ ವೇದದ ಋಕ್ಕುಗಳನ್ನು ಸಹ ಬರೆದರೆಂದು ತಿಳಿದುಬರುವದು. ಮಹಾಭಾರತದಲ್ಲಿ ಜನಕ-ಸುಲಭಾ ಸಂವಾದ ಮತ್ತು ಮೈತ್ರೇಯ್ಯುಪನಿಷತ್ತಿನಲ್ಲಿ ಯಾಜ್ಞವಲ್ಕ್ಯ-ಮೈತ್ರೇಯಿೀ ಸಂವಾದ ಸುಪ್ರಸಿದ್ಧವಿದೆ.

ಪ್ರತಿಯೊಬ್ಬ ಸಾಧಕನ ಅಥವಾ ಸಾಧಕಿಯ ಮನೋಮಂಡಲದಲ್ಲಿ ಸಂಶಯ ಭಾವನೆ, ಅಸಂಭಾವನೆ, ವಿಪರೀತಭಾವನೆ ಮುಂತಾದ ಕಾರ್ಮೋಡಗಳು ಮುತ್ತಿದಾಗ ಅವನ್ನು ಚದುರಿಸಲು ಗುರುಬೋಧೆಯೆಂಬ ಪ್ರಚಂಡ ಮಾರುತವು ಬೇಕಾಗುವದು.

ಇಲ್ಲವೆ ಅಜ್ಞಾನಾಂಧಕಾರದಲ್ಲಿ ಮುಚ್ಚಿದ ಶಿಷ್ಯನಹೃತ್ಕಮಲವು ಅರಳಬೇಕಾದ ಗುರುಬೋಧೆಯೆಂಬ ಜ್ಞಾನಸೂರ್ಯನ ಹೊಂಗಿರಣಗಳು ಬೀಳಬೇಕಾಗುವದು.

ಅರ್ಜುನನು ದುಷ್ಟಕೌರವರನ್ನು ಸಂಹರಿಸಿ ವಿಜಯುಗಳಿಸಲು ಇಂದ್ರಕೀಲ ಪರ್ವತದಲ್ಲಿ ಉಗ್ರತಪಸ್ಸು ಮಾಡಿದನು. ಅಂತಹ ಅರ್ಜುನನೇ–

"ನಕಾಂಕ್ಷೇವಿಜಯಂಕೃಷ್ಣ" ಎಂದು ಹೇಳಿ ಶಸ್ತ್ರಾಸ್ತ್ರ ಕೆಳಗಿಟ್ಟು ಹೆಂಬೇಡಿಯಾಗಿ ಕುಳಿತಾಗ ಶ್ರೀಕೃಷ್ಣನು

"ಉತ್ತಿಷ್ಠೋತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ"

ಧರ್ಮ್ಯಾದ್ಧಿ ಯುದ್ಧಾತ್ ಶ್ರೇಯೋಽನ್ಯತ್ ಕ್ಷತ್ರಿಯಸ್ಯ ನವಿದ್ಯತೇ"

ಎಂದು ಮುಂತಾಗಿ ಅರ್ಜುನನಿಂದ –

ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ।
ಸ್ಥಿತೋಽಸ್ಮಿಗತ ಸಂದೇಹಃ ಕರಿಷ್ಯೇ ವಚನಂ ತವ" ।

ಎಂದು ಸಮಾಧಾನಕರ ಉತ್ತರ ಬರುವವರೆಗೂ ಹೇಳಿ ಅರ್ಜುನನಿಂದ ದುಷ್ಟನಿಗ್ರಹ ಶಿಷ್ಟಪರಿಪಾಲನ ರೂಪ ಕಾರ್ಯ ಮಾಡಿಸಿದನು.

ಅಜ್ಞಾನ, ಆವರಣ, ವಿಕ್ಷೇಪ, ಸಂಶಯ, ಅಸಂಭಾವನೆ, ವಿಪರೀತ ಭಾವನೆಗಳು ಮುಂತಾದವುಗಳು ಮುತ್ತಿ ವಿಷ್ಣುವಿನ ದಶಾವತಾರಗಳಲ್ಲಿ ಓರ್ವನಾದ ರಾಮನೇ ಮರವೆಯಿಂದ ಸ್ವಸ್ವರೂಪವನ್ನು ಮರೆತಾಗ ವಶಿಷ್ಠಋಷಿಗಳು ಬಗೆಬಗೆಯಿಂದ ಉಪದೇಶಿಸಿ ಸ್ವರೂಪವನ್ನು ತಿಳಿಸಿದ ವಿಚಾರ ಪ್ರಣಾಲಿಕೆಯು ಯೋಗವಾಶಿಷ್ಠ ಎಂಬ ಬೃಹದ್ಗ್ರಂಥದಲ್ಲಿ ಸುಪ್ರಸಿದ್ಧವಿದೆ. ದಕ್ಷಬ್ರಹ್ಮನ ಯಜ್ಞದಲ್ಲಿ ಪತಿನಿಂದೆಯನ್ನು ಸಹಿಸದ ದಾಕ್ಷಾಯಣಿಯು ಯಜ್ಞದಲ್ಲಿ ಧುಮುಕಿ ಪ್ರಾಣತ್ಯಾಗ ಮಾಡಿ ಮರುಜನ್ಮದಲ್ಲಿ ಪರ್ವತರಾಜನ ಮಗಳಾಗಿ ಹುಟ್ಟಿದಳು. ರಾಜಮನೆತನದ ರಾಜವೈಭವದಲ್ಲಿ ಪಾರ್ವತಿಯು ತನ್ನ ಪೂರ್ವ ಜನ್ಮದ ವೃತ್ತಾಂತವನ್ನೇ ಮರೆತುಬಿಟ್ಟಳು. ಆಗ ದೇವರ್ಷಿಗಳಾದ ನಾರದರು ಬಂದು ಗಿರಿಜೆಗೆ ಪೂರ್ವ ಜನ್ಮದ ವೃತ್ತಾಂತವನ್ನು ಅರುಹಿದರು. ಆಗ ಪಾರ್ವತಿಗೆ ತಾನು ಯಾರೆಂಬುದು ತಿಳಿದು ಹಿಮವತ್ಪರ್ವತದಲ್ಲಿ ಉಗ್ರತಪಸ್ಸು ಮಾಡಿ ಶಿವನ ಪಾಣಿಗ್ರಹಣ ಮಾಡಿದಳೆಂಬುದು ಪುರಾಣಪ್ರಸಿದ್ಧವಿದೆ. ಶಿಷ್ಯನು ಸಂಶಯ ಪರಿಹಾರ ಮಾಡಿಕೊಳ್ಳುವದಕ್ಕಾಗಿ ಶ್ರೋತ್ರಿಯ ಬ್ರಹ್ಮನಿಷ್ಠರಾದ ಗುರುವನ್ನು ಕೇಳಬೇಕು. ಗುರುವಾದರೂ ಅನುಭವಜನ್ಯಜ್ಞಾನದಮೂಲಕ ಶಿಷ್ಯನ ಸಂಶಯಗಳನ್ನೆಲ್ಲ ಪರಿಹಾರ ಮಾಡಬೇಕು.

"ಗೃಣಾತಿ ತತ್ವಾರ್ಥಂ ಉಪದಿಶತೀತಿ ಗುರುಃ, "
"ಗುಕಾರಸ್ತ್ವಂಧಕಾರಃ ಸ್ಯಾತ್ ರುಕಾರಸ್ತನ್ನಿರೋಧಕಃ ।
ಅಂಧಕಾರನಿರೋಧಿತ್ವಾತ್ ಗುರುರಿತ್ಯಭಿಧೀಯತೇ" ।
"ವಿಧಿವಧೀತನಾದ ಶಿಷ್ಯಂಗೆ ಮರಳಿ ಸಂಶಯಮಂಕುರಿಸದಂತೆ"
ತತ್ವೋಪದೇಶವಂಗೈದು ಅಜ್ಞಾನವಂ ಪರಿಹರಿಸುವಾತನೇ ಶ್ರೀಗುರುವಕ್ಕುಂ

ಷ್ಟುಂತಾದ ಮಹಾನುಭಾವರ ಸೂಕ್ತಿಗಳು ಯಾರು ತತ್ವಾರ್ಥವನ್ನು ಉಪದೇಶಿಸುವರೋ ಅವರು ಗುರುಗಳು. ಶಿಷ್ಯನ ಹೃನ್ಮಂದಿರದಲ್ಲಿರುವ ಅಜ್ಞಾನಾಂಧಕಾರಕಳೆದು ಅಲ್ಲಿ ಯಾರು ಜ್ಞಾನದೀಪ ಹಚ್ಚುವರೋ ಅವರೇ ಗುರುಗಳು. ಕರುಣೆ, ಶಿವಕಲೆ, ಶಾಸ್ತ್ರಪಾಂಡಿತ್ಯ। ಸ್ವಾನುಭಾವ, ಆತ್ಮಸೌಂದರ್ಯ, ಸುಜ್ಞಾನ, ಸತ್ಕ್ರಿಯೆಗಳಿಂದ ಕೂಡಿದವರಾಗಿ ಯಾರು ಗುರುದೇವತಾ ಭಕ್ತಿಸಂಪನ್ನನಾದ ಶಿಷ್ಯನನ್ನು ಸಂಸಾರ ಸಾಗರದಿಂದ ಮೇಲೆತ್ತಿಕೊಳ್ಳು ವರೋ ಅವರೇ ಸದ್ಗುರುಗಳು. ವಿಹಿತಗುರುಗಳು ಎಂದು ಬಗೆಬಗೆಯಾಗಿ ಸದ್ಗುರು ಸಾರ್ವಭೌಮನ ಮಹಿತಿಯನ್ನು ಹೇಳಿರುವರು.

ಹೇಳಬಲ್ಲಡೆ ಗುರುವು ಕೇಳಬಲ್ಲಡೆ ಶಿಷ್ಯ।
ಹೇಳಲು ಕೇಳಲರಿಯದ ಗುರುಶಿಷ್ಯರ।
ಮೇಳವೆಂತೆಂದ ಸರ್ವಜ್ಞ॥

ಎಂದು ಸರ್ವಜ್ಞನು ಈರ್ವರ ಲಕ್ಷಣವನ್ನು ತಿಳಿಸಿರುವನು.

ಸದ್ಗುರುಗಳು ಎಷ್ಟೇ ಜ್ಞಾನ ಭಾಂಡಾರದಂತಿದ್ದರೂ ಅವರು ಶಿಷ್ಯನ ಜಿಜ್ಞಾಸಾಬುದ್ಧಿಯಪ್ರಶ್ನೆಯಿಲ್ಲದೆ ಏನನ್ನೂ ಹೇಳರು. ಎಂಥ ತಾಯಿಯಾದರೂ ಮಗು ಅಳದೇ ಮೊಲೆ ಕುಡಿಸುವಳೇ ? ಎತ್ತಿಕೊಳ್ಳುವಳೇ ? ಮುದ್ದಿಸುವಳೇ ? ಈ ವಿಷಯದಲ್ಲಿ ಶ್ರೀರಾಮ ಕೃಷ್ಣಪರಮಹಂಸರು ಹೇಳಿದ ಒಂದು ದೃಷ್ಟಾಂತವು ಮನನೀಯವಿದೆ.

ಮರದಲ್ಲಿ ತೂಗುಬಿದ್ದ ಜೇಂಗೊಡದ ಜೇನುತುಪ್ಪ ಸಿಗಬೇಕಾದರೆ ಹುತ್ತಿನ ಕೆಳಗೆ ಸುಮ್ಮನೆ ಆ ಎಂದು ಬಾಯ್ತೆರೆದು ಕುಳಿತರೆ ಸಿಗುವದೇ ? ಇಲ್ಲವೇ ಇಲ್ಲ. ಸವಿಜೇನು ಬೇಕಾದರೆ ಹುಟ್ಟಿನಕೆಳಗೆ ಹೊಗೆ ಹಾಕಬೇಕು. ಕೋಲಿನಿಂದ ಹುಟ್ಟಿಗೆ ತಿವಿಯಬೇಕು ಚುಚ್ಚಬೇಕು, ಪ್ರಸಂಗವಶಾತ್ ಹುಳುಗಳು ಹಾರಾಡಿ ಬಂದು ಕಡಿದರೆ ಕಡಿಸಿಕೊಳ್ಳಬೇಕು. ಹೀಗೆ ಏನೇನೂ ಆಗದೇ ಸವಿಜೇನು ಸವಿಯಲು ಸಿಕ್ಕೀತೇ ? ಹಾಗೆಯೇ ಗುರುವಿನ ಹೃದಯಾಂತರಾಳದಲ್ಲಿರುವ ಮಧುವಿದ್ಯೆಯು ಅಂದರೆ ಆತ್ಮವಿದ್ಯೆಯು ದೊರೆಯಬೇಕಾದರೆ ವಿವಿಧ ಪ್ರಶ್ನೆಗಳನ್ನು ಮಾಡಬೇಕು. ತ್ರಿಕರಣ ಶುದ್ಧಿಯಿಂದ ಗುರುಸೇವೆಗೈಯಬೇಕು. ಪ್ರಸಂಗವಶಾತ್ ಸದ್ಗುರುವಿನಿಂದ ಶಿಕ್ಷೆಯನ್ನು ಪಡೆಯಬೇಕು. ಹೀಗಾದಾಗ ಮಾತ್ರ ಗುರುವಿನಿಂದ ಆತ್ಮವಿದ್ಯೆಯು ದೊರೆಯುವದು. ಇದನ್ನೇ ಶ್ರೀಕೃಷ್ಣನು ಗೀತೆಯಲ್ಲಿ–

ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನಸೇವಯಾ।
ಉಪದೇಕ್ಷ್ಯಂತಿ ತೇಜ್ಞಾನಂ ಜ್ಞಾನಿನಸ್ತತ್ವದರ್ಶಿನಃ॥

ಎಂದು ಹೇಳಿರುವನು. ಜಿಜ್ಞಾಸಾಬುದ್ಧಿಯುಳ್ಳ ಶಿಷ್ಯನು ಶ್ರೀಗುರುವಿನ ಹೇಳಿಕೆಯನ್ನು ಕೇಳಿದಷ್ಟು ಕೃತಾರ್ಥನಾಗುವನು, ಲೌಕಿಕದಲ್ಲಿಯೇ ಆಗಲಿ, ಪಾರಮಾರ್ಥದಲ್ಲಿಯೇ ಆಗಲಿ ಹೇಳಿಕೆ ಕೇಳಿಕೆಗಳಿಗೆ ಅತೀವಪ್ರಾಧಾನ್ಯವಿದೆ. ಶಿಷ್ಯನು ಸರ್ವಸಮರ್ಥನಾದ ಶ್ರೀಗುರುವಿನಲ್ಲಿ ವಿವಿಧ ಪ್ರಶ್ನೆಗಳನ್ನು ಮಾಡಿ ಸಂಶಯನಿರಸನ ಮಾಡಿಕೊಂಡು, ಸಹಜ ಸುಜ್ಞಾನವನ್ನು ಪಡೆಯಬೇಕು. ಋಗ್ವಾದಿ ಚತುರ್ವೇದಗಳು ಮಹಾ ಚತುಷ್ಟಯ ವಾಕ್ಯದಿಂದ ಜೀವನಿಗೆ "ತದೇವತ್ವಮಸಿ," ಎಂದು ಉಪದೇಶಿಸಿದರೂ ಸಹ "ಉಭಯಕೋಟ್ಯಾಲಂಬನಂಜ್ಞಾನಂ

ಸಂಶಯ : " ಎಂಬುಕ್ತಿಯಂತೆ ನಾನು ಬ್ರಹ್ಮನಹುದೋ ಅಲ್ಲವೋ ಎಂದು ಅನು
ವದೇ ಸಂಶಯವೆನಿಸುವದು. ನಿಶ್ಚಯಜ್ಞಾನವಿಲ್ಲದ ಈ ಸಂಶಯಜ್ಞಾನದಿಂದ "ಸ
ತ್ಮಾವಿನಶ್ಯತಿ " ಎಂಬುಕ್ತಿಯಂತೆ ಜೀವಾತ್ಮನು ಅಧಃಪತನಹೊಂದುವನು.

ಜಗಜ್ಜನನೀಜನಕರಾದ ಪಾರ್ವತೀ ಪರಮೇಶ್ವರರು ವಿನೋದದಿಂದ
ಡುತ್ತ ಕುಳಿತಾಗ, ಪಾರ್ವತಿಯು ಬ್ರಹ್ಮ ಮೊದಲಾದವರಿಂದ ತುಂಬಿದ ಸ
ನೋಡಿ, ಮನದಲ್ಲಿ ಸಂಶಯ ಮೂಡಿ ಆ ಸಂಶಯದ ನಿವಾರಣೆಗಾಗಿ ಒಂದು
ಪ್ರಶ್ನೆಮಾಡಿದಳು. ಚತುರ್ದಶ ಬ್ರಹ್ಮಾಂಡ ನಾಯಕನಾದ ಶಿವನೇ, ಈ
ಲಕ್ಷ್ಮೀಸಮೇತನಾಗಿ ವಿಷ್ಣುವು, ಸರಸ್ವತೀ ಸಮೇತನಾಗಿ ಬ್ರಹ್ಮನು, ಶಚೀಸಮ
ದೇವೇಂದ್ರನು, ಇನ್ನೂ ಅಸಂಖ್ಯ ದೇವಾಧಿದೇವತೆಗಳು, ಸುರರು,
ಮನುಜರು,ಮನುಮುನಿಗಳು, ಕಿನ್ನರರು,ಕಿಂಪುರುಷರು,ಆಚಾರ್ಯರು,ಏಕಾದಶ
೭೭೦ ಅಮರಗಣಾಧೀಶ್ವರರು, ಇನ್ನೂ ಅನೇಕಾನೇಕ ಘನಮಹಿಮರು ಕೂಡಿ
ಇವರೆಲ್ಲರೂ ಇಲ್ಲಿದ್ದೇ ಭವಭವಾಂತರದಲ್ಲಿ ತಿರುಗದೇ ನಿತ್ಯ ಸುಖಶಾಂ
ಹೊಂದಿಕೊಂಡಿರುವರೊ ? ಅಥವಾ ಇವರೆಲ್ಲರೂ '' ಪುನರಪಿಮರಣಂ ಪುನರಪಿ
ಪುನರಪಿ ಜನನೀ ಜಠರೇಶಯನಂ'' ಎಂಬುಕ್ತಿಯಂತೆ ಜನನಮರಣಾತ್ಮಕ
ಸಂಸಾರಚಕ್ರದಲ್ಲಿ ತಿರುಗುವರೋ ? ಇವರ ನಿಜವಾದ ಆಗುಹೋಗುಗಳ
ನನಗುಂಟಾದ ಈ ಸಂಶಯವನ್ನು ಪರಿಹರಿಸಬೇಕು ಎಂದು ಬಿನ್ನವಿಸಲು,
ಪಾರ್ವತಿಗೆ ತಿಳಿಯುವಂತೆ ಹೇಳಿ ಸಂಶಯ ಪರಿಹಾರ ಮಾಡಿದನು. ಪಾರ್ವತಿ
ಮಾಡಿದ ಪ್ರಶ್ನೆಯು ಅತೀವ ಮಹತ್ವದ್ದು, ನಾಮ ರೂಪಗಳನ್ನು ಧಾರ
ವಿವಿದ ಕ್ರಿಯಾಕಲಾಪಗಳಲ್ಲಿ ತೊಡಗಿದ ಈ ಘನಮಹಿಮರೆಲ್ಲರೂ ನಿತ್ಯಸು
ಇವರೆಲ್ಲರೂ ಒಂದಿಲ್ಲೊಂದು ದಿನ ಪುನಃ ಭವಚಕ್ರದಲ್ಲಿ ಸಿಲುಕುವರು. ನಾಮ
ಕ್ರಿಯೆಗಳನ್ನು ದಾಟಿದ ಸ್ಥಿತಿಯನ್ನು ಪಡೆದಾಗಲೇ ಇವರಿಗೆ ಆತ್ಯಂತಿಕ, ಶಾಶ್ವತ,
ಬಾಧಿತ ನಿತ್ಯಸುಖ ದೊರಕುವದು.

ಅಸ್ತಿ, ಭಾತಿ, ಪ್ರಿಯಂ, ರೂಪಂ, ನಾಮ ಚೇತ್ಯಂಶಪಂಚಕಂ ।
ಆದ್ಯಂತ್ರಯಂ ಬ್ರಹ್ಮರೂಪಂ ತತೋರೂಪಂ ಜಗದ್ವಯಂ ॥

ಅಸ್ತಿ, ಭಾತಿ, ಪ್ರಿಯಗಳು ಬ್ರಹ್ಮಾಂಶವೆಂದೂ, ನಾಮರೂಪಗಳು ಮಾಯಾಂಶ
ಹೇಳುವರು.

"ಯನ್ಮೂರ್ತಂ ತದಸತ್ಯಂ ಯದಮೂರ್ತಂ ತತ್ಸತ್ಯಂ''

ಎಂಬುಕ್ತಿಯಂತೆ ಯಾವುದು ಸಾವಯವವೋ ಸಾಕಾರವೋ ನಾಮರೂಪ ವಿ
ಅದು ಮಿಥ್ಯ, ಸಟೆಯೆಂದೂ, ಯಾವುದು ನಿರವಯವವೋ ನಿರಾಕಾರವೋ
ರೂಪರಹಿತವೋ ಅದುವೇ ಸತ್ಯ,ದಿಟವೆಂದೂ ಉಪನಿಷತ್ತು ಶಿವಾಗಮಗಳು ಹೇಳು

"ಯಥಾನದ್ಯಃ ಸ್ಯಂದಮಾನಾಃ ಸಮುದ್ರೇ ಅಸ್ತಂಗಚ್ಛಂತಿ ನಾಮರೂಪೇ ವಿಹಾ
ತಥಾವಿದ್ವಾನ್ ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷ
ಮುಪೈತಿ ದಿ

ಗಂಗಾ, ಕೃಷ್ಣಾ, ಕಾವೇರೀ, ಗೋದಾವರೀ ಮುಂತಾದ ನಾಮಗಳನ್ನು ಹಾಗೂ ಕೃಷ್ಣ ವರ್ಣ ಗೌರವರ್ಣ ಮುಂತಾದ ರೂಪಗಳನ್ನು ಧರಿಸಿದ ನದೀನದಗಳು ಹೇಗೆ ತಮ್ಮ ತಮ್ಮ ನಾಮರೂಪಕಗಳನ್ನು ಪರಿತ್ಯಾಗಮಾಡಿ ಸಮುದ್ರದಲ್ಲಿ ಕೂಡಿದಾಗಲೇ ಅವಕ್ಕೆ ವಿರಾಮವೋ ಹಾಗೆ, ವಿವಿಧ ನಾಮಗಳನ್ನು ಹಾಗೂ ವಿವಿಧ ರೂಪಗಳನ್ನು ಧರಿಸಿದ ವಿದ್ವಾಂಸರು ಬ್ರಹ್ಮೋಪಾಸನೆ ಮಾಡಿ "ಬ್ರಹ್ಮವಿದ್ ಬ್ರಹ್ಮೈವಭವತಿ" ಎಂಬುಕ್ತಿಯಂತೆ ಬ್ರಹ್ಮವೇತ್ತಾವಾಗಿ ಸಚ್ಚಿದಾನಂದ ಸ್ವರೂಪರಾಗಿ ವಿರಾಮ ಪಡೆಯುವರು.

> "ಚಿನ್ನದಿಂದಲಾದ ಹಲವು ಭಂಗಾರ್ಥವಳಿದು ಕರಗಿದರೆ
> ಮುನ್ನಿನ ಚಿನ್ನವೇ ಆದಂತೆ,
> ಉದಕದಿಂದಾದ ವಾರಿಕಲ್ಲು ಕರಗಿ ಮುನ್ನಿನ ಉದಕವೇ ಆದಂತೆ,
> ಚಿನ್ಮಯ ವಸ್ತುವಿನಿಂದ ಉದಯವಾದ ಚಿತ್‌ಸ್ವರೂಪನಾದ ಶರಣನು
> ಆ ಚಿನ್ಮಯ ವಸ್ತುವನೇ ಬೆರಸಿ ಪರಮಶಿವಯೋಗಿಯಾದನಯ್ಯ
> ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ"

ಬಂಗಾರದಿಂದ ಮಾಡಲ್ಪಟ್ಟ ಆಭರಣಗಳು ವಿವಿಧ ನಾಮ, ರೂಪ, ಆಕಾರಗಳನ್ನು ಧರಿಸಿದರೂ ಕರಗಿಸಿದರೆ ಕೊನೆಗೆ ಅವು ಚಿನ್ನವೇ ಆಗುವಂತೆ, ನೀರಿನಿಂದಾದ ವಾರಿಕಲ್ಲು ವಿವಿಧ ಆಕಾರವನ್ನು ತಾಳಿದರೂ ಕೊನೆಗೆ ಅದು ನೀರೇ ಆಗುವಂತೆ, ವಿವಿಧ ನಾಮ ರೂಪಗಳನ್ನು ಧರಿಸಿದ ವಿದ್ವಾಂಸರೂ ಸಹ ಕೊನೆಗೆ ಶಿವಸ್ವರೂಪಿಗಳೇ ಆಗುವರು. ನಾಮರೂಪಗಳೆಲ್ಲವೂ ದಿಟವಲ್ಲ, ಅವೆಲ್ಲವೂ ಸಟೆ. ನಾಮರೂಪಗಳೆಲ್ಲ ಮಿಥ್ಯಾ ನಾಮಧೇಯ, ಸೀಮೆಯಿಲ್ಲದ ನಿರ್ನಾಮ ನಿರ್ಲೇಪ ಬ್ರಹ್ಮವೊಂದೇ ಸತ್ಯ. ನಾಮರೂಪ ಕ್ರಿಯಾತ್ಮಕವಾದೀ ಜಗತ್ತನ್ನು ಯಾರು ಮೋಹಿಸುವರೋ ಅವರು ನಿತ್ಯಾನಂದ ಪಡೆಯುವದಿಲ್ಲ. ಯಾರು ತೀವ್ರ ವಿರಕ್ತಿಯಿಂದಲೂ ಭಕ್ತಿ-ಜ್ಞಾನ-ಸತ್ಕ್ರಿಯೆಗಳಿಂದಲೂ ಈ ಬಾಹ್ಯ ಪ್ರಪಂಚಕ್ಕೆ ಮೋಹಿಸದೇ ಇರುವರೋ ಅವರೇ ನಿಜಸುಖ ಪಡೆಯುವರು. ನಾಮರೂಪಗಳೆಲ್ಲ ಸಟೆಯೆಂದೂ, ನಾಮರೂಪಗಳಿಲ್ಲದ ಬ್ರಹ್ಮವೊಂದೇ ದಿಟವೆಂದೂ ನಿಜಗುಣರು-

> "ಘಟವೇ ಪುಸಿ ಘಟವೇ ನೀನು ದಿಟದಂತೆ ತೋರಿ ಮೋಹಿಪುದನೇನೆಂಬೆ ॥ ಪ ॥
>
> ಮೊದಲು ಮೃತ್ತಿಕೆಯ ಪಿಂಡದೊಳು ನೀನಿಲ್ಲ ಪು ।
> ಟ್ಟಿದ ಬಳಿಕೊಡೆದು ಧೂಳಾಗಿ ನೀನಿಲ್ಲ ॥
> ವಿದಿತವಿದಾದ್ಯಂತ ದೊಳಗೆ ನೀನಿಲ್ಲಮ ।
> ಧ್ಯದೊಳಾವ ರೂಪು ನಿನಗೆ ನಿಜವಹುದು" ।೨॥
>
> ನೆಲೆರ ಮುಖದ ನುಡಿ ಮಾತ್ರದಿರ್ಪವಿನಿಸಿದೆ ।
> ಪರಿಕಲ್ಪಿತಾಕಾರದಿಂದೆ ವಿವೇಕ ।
> ವಿರಹಿತರಿಗೆ ಪರಮಾರ್ಥವೆನಿಸಿ ತೋರ್ಪೆ ।
> ಪರಿಕಿಸಲೊಂದೆಂದು ನಿನಗುಂಟೆ ತೋಕೆ ॥೩॥

ಇಲ್ಲನಿಸದ ತೋರದಡಗದೆ ಮೃತ್ತಿಕೆ।
ಯಲ್ಲದೆ ನಿನ್ನನೆಲ್ಲಿಯೂ ಕಾಣೆನರಸಿ ॥
ಉಳ್ಳಮೃತ್ತಿಕೆಯಂತೆ ಶಂಭುಲಿಂಗವೆ ಜಗ।
ವೆಲ್ಲವು ನಿನ್ನಿಂದವಾದುದಿತಂರ್ಧಿಯೆ ॥೩॥

ಎಂಬ ಪದ್ಯದಿಂದ ಸೊಗಸಾಗಿ ಹೇಳಿರುವರು.

ಶಿವನ ಮುಖದಿಂದ ಹೊರಹೊಮ್ಮಿದ ಆಗಮೋಕ್ತಿಗಳನ್ನು ಉಪನಿಷನ್ಮಂತ್ರಗಳ ಕೇಳಿದ ಪಾರ್ವತಿಯು, ಪ್ರಾಣನಾಥನೇ, ನೀ ಹೇಳಿದ ವಿಷಯವೆಲ್ಲ ತಿಳಿಯಿತು, ನಾ ರೂಪಗಳನ್ನು ಗೆಲ್ಲುವ, ನಿತ್ಯಾನಂದದಲ್ಲಿ ನಿಲ್ಲುವ ವಿಮಲ ಮಾರ್ಗವಾವುದು ? ಅದನ್ನು ಹೇಳುವ ಮಹಾಮಹಿಮರಾರು ? ಪೇಳೆನ್ನಲು ಶಿವನು ಗಿರಿಜೆಗೆ ನಾಮ ಗಳನ್ನು ಮೀರಿ ನಿಲ್ಲುವ ಬಗೆಯನ್ನು ಬಿತ್ತರಿಸುವನು.

ಭೋಗಭೂಮಿಯ ಭೋಗತನುವಿನ।
ಲಾಗದನುಪಮಸಿದ್ಧಿ ಕರ್ಮೊ
ದ್ಯೋಗ ಭೂಮಿಯ ಕರ್ಮತನುವಿನಲಿಲ್ಲದವರಿಂದ।
ಯೋಗಯೋಗ್ಯರು ಯೋಚಿಸುತ ಭೂ।
ಭಾಗದಲಿ ಮಾನವಶರೀರಿಗ।
ಳಾಗಿ ಸಾಧಿಸಿ ನಿಜವನರಿದರು ಗಿರಿಜೆ ಕೇಳೆಂದ

ಲೋಕದಲ್ಲಿ ಕರ್ಮಲೋಕ, ಭೋಗಲೋಕವೆಂದು ಎರಡು ವಿಧ. ತನುವಿನಲ್ಲಿ ಕರ್ಮತ ಭೋಗತನು ಎಂದು ಎರಡು ಪ್ರಕಾರ. ನಾಮ-ರೂಪ-ಕ್ರಿಯೆಗಳನ್ನು ಮೀರಿ ನಿಲ್ಲುವ ಪಮಸ್ಥಿತಿಯು ಪ್ರಾಪ್ತವಾಗಬೇಕಾದರೆ, ಕರ್ತಾರನ ಕಮ್ಮಟವೆನಿಸಿದ ಮೃತ್ಯುಲೋಕ ಅಂದರೆ ಈ ಕರ್ಮಭೂಮಿಯಲ್ಲಿ ಹರಪೂಜೆ ಗುರುಸೇವಾದಿಗಳನ್ನು ಮಾಡಬೇಕು.

'ಕುರ್ವನ್ನೇವೇಹಕರ್ಮಾಣಿ ಜಿಜೀವಿಷೇತ್‌ಶತ ಸಮಾಃ'

ಎಂಬ ಉಪನಿಷದುಕ್ತಿಯಂತೆ ಕ್ಷಣಮಾತ್ರವಾದರೂ ವ್ಯಥಾಕಾಲಹರಣ ಮಾ ಸತ್ಕ್ರಿಯಾಸಂಪನ್ನನೂ, ಸಮ್ಯಗ್ ಜ್ಞಾನ ವಿಶಿಷ್ಟನೂ ಆಗಿ ಜೀವನ ಯಾತ್ರೆ ಸಾಗಿಸ ಯಾವ ಭೂಮಿಯ ಮೇಲೆ ನಿಂತು ವಿವಿದ ಕ್ರಿಯಾ ಕಲಾಪ ಮಾಡುತ್ತೇವೆಯೋ ಭೂಮಿಯು ಕರ್ಮಭೂಮಿಯೆನಿಸುವದು. ಯಾವ ಶರೀರದಿಂದ ಹರಪೂಜೆ, ಗುರುಸೇ ಜನತಾ ಸೇವೆ ಮಾಡುವೆವೋ ಆ ಶರೀರವು ಕರ್ಮತನುವೆನಿಸುವದು. ದೇವಾಧಿದೇ ಗಳಿರುವ ಈ ಲೋಕವು ಭೋಗಭೂಮಿಯೆನಿಸುವದು. ಈ ಲೋಕದಲ್ಲಿ ಭೂಲೋಕ ಳಗೆ ಮಾಡಿದ ಕ್ರಿಯಾಕಲಾಪಗಳ ಫಲವನ್ನು ಉಣ್ಣುವದಷ್ಟೇ ಕೆಲಸ. ಅದಕ್ಕಾಗಿ ಅಂದರೆ ಮಾಡಿದ ಕ್ರಿಯೆಗಳ ಫಲವನ್ನು ಭೋಗಿಸುವ ಕಾರಣದಿಂದಲೇ ಈ ಲೋಕ ಭೋಗಲೋಕವೆನ್ನುವರು. ಇದು ಮಾಡುವ ಲೋಕವಲ್ಲ. ಮಾಡಿದ್ದನ್ನು ಉಣ್ಣುವ ಕಾರಣ ಭೋಗಲೋಕವೆನಿಸುವದು.

ತೇತಂಭುಕ್ತ್ವಾ ಸ್ವರ್ಗಲೋಕಂ ವಿಶಾಲಂ ಕ್ಷೀಣೇ ಪುಣ್ಯೇ.

ಮರ್ತ್ಯ ಲೋಕಂ ವಿಶಂತಿ" ಎಂಬುಕ್ತಿಯಂತೆ ಪುಣ್ಯಕ್ರಿಯೆಗಳನ್ನು ಮಾಡಿ ಸ್ವರ್ಗದಲ್ಲಿ ಕೆಲಕಾಲ ಅಂದರೆ ಪುಣ್ಯಕ್ಷಯವಾಗುವ ಪರ್ಯಂತರ ಇದ್ದು ಪುನಃ ಕರ್ಮಲೋಕಕ್ಕೆ ಬರಬೇಕಾಗುವದು. ಪಾಪಕ್ರಿಯೆಗಳನ್ನು ಮಾಡಿ ನರಕ ದುಃಖ ಅನುಭವಿಸಲಿಕ್ಕೂ ಕರ್ಮಲೋಕದಲ್ಲಿ ಮಾಡಿದ ಪಾಪಕೃತಿಗಳೇ ಮೂಲಕಾರಣ. ಕೇವಲ ಕರ್ಮಭೂಮಿಯಲ್ಲಿ ಮಾಡಿದ ಫಲವನ್ನು ಅನುಭವಿಸುವ ಈ ಭೋಗಲೋಕದಲ್ಲಿ ಜಪತಪಾದ್ಯನುಷ್ಠಾನಗಳನ್ನು ಮಾಡಿ ಅನುಪಮ್ಯ ಅನಿರ್ವಚನೀಯ ಸಿದ್ಧಿಯನ್ನು ಪಡೆಯಲು ಸಾಧ್ಯವಿಲ್ಲ. ಅವುಪಾದರೊಂದು ಮಹಾಸಾಧನೆಯನ್ನು ಮಾಡಿ ಸಿದ್ಧಿಯನ್ನು ಪಡೆಯಬೇಕಾದರೆ ಕರ್ಮಲೋಕಕ್ಕೇನೇ ಹೋಗಬೇಕು. ಈ ಕಾರಣದಿಂದಲೇ ಅಸಂಖ್ಯ ಮಹಾನುಭಾವರು ಭೂಭಾಗದಲ್ಲಿಯೇ ಮಾನವ ಶರೀರ ಧಾರಣ ಮಾಡಿ ಸಾಧನಚತುಷ್ಟಯ ಸಂಪನ್ನರಾಗಿ ಸದ್ಗುರು ಸೇವೆಗೈದು ಆ ಮಹಿಮ ಸದ್ಗುರುವಿನ ಸದುಪದೇಶದಿಂದ ನಿತ್ಯಮುಕ್ತರಾಗಿರುವರು.

ಭೋಗಭೂಮಿ, ಕರ್ಮಭೂಮಿ, ಭೋಗತನು, ಮತ್ತು ಕರ್ಮತನು ಇವುಗಳ ವಿವರವನ್ನು ವ್ಯಾವಹಾರಿಕ ದೃಷ್ಟಾಂತಗಳಿಂದ ಇನ್ನೂ ನಿಚ್ಚಳವಾಗಿ ತಿಳಿಯ ಬಹುದು. ರಾಜ್ಯ ಸರಕಾರದ ದೊಡ್ಡ ಹುದ್ದೆಯಲ್ಲಿ ಓರ್ವ ಮೇಲಾಧಿಕಾರಿಯು ತನ್ನ ಕಾರ್ಯಾಲಯದಲ್ಲಿ ವಿವಿಧ ಕಾರ್ಯ ಕಲಾಪಗಳನ್ನು ಮಾಡಿ ವೇತನರೂಪವಾಗಿ ಲಕ್ಷಾಂತರ ಹಣಗಳಿಸಿ ಪ್ರಖರಬೇಸಿಗೆ ಬಂದಾಗ ಆ ತಾಪಬಾಧೆಯಿಲ್ಲದ, ಶೀತಪ್ರದೇಶವೆನಿಸಿದ ಮಹಾಬಲೇಶ್ವರಕ್ಕೊ ಸಿಮ್ಲಾಕ್ಕೊ ಹೋಗಿ ವಿಶ್ರಾಂತಿ ಪಡೆಯುವರು. ಬಿಡುವಿಲ್ಲದೇ ದುಡಿದುಡಿದು ಗಳಿಸಿದ ಹಣವನ್ನು ಕಟ್ಟಿಕೊಂಡು ಹೋಗಿ ಅಲ್ಲಿ ಏನೇನೂ ಮಾಡದೇ ಕೇವಲ ಸುಖಾಸನದ ಮೇಲೆ ಕುಳಿತು ವಿದ್ಯುತ್‌ಪಂಖದಿಂದ ಗಾಳಿಯ ಸೇವನೆ ಮಾಡುವದು, ವಿವಿಧ ರಸ ಪಾನೀಯಗಳನ್ನು ಸೇವಿಸುವದು ಮುಂತಾದವುಗಳಿಂದ ಕೂಡಿದ ಮಹಾಬಲೇಶ್ವರವು ಭೋಗಭೂಮಿಯಿದ್ದಂತೆ. ಸ್ವಗ್ರಾಮದಲ್ಲಿಯೋ ಅಥವಾ ನಿಯೋಜಿತ ಸ್ಥಳದಲ್ಲಿಯೋ ಇದ್ದುಕೊಂಡು ಬಿಡುವಿಲ್ಲದೇ ವಿವಿಧ ಕಾರ್ಯಕಲಾಪಗಳನ್ನು ಮಾಡಿ ಹಣಗಳಿಸುವ ಕಾರ್ಯಾಲಯ ಕರ್ಮಭೂಮಿಯಿದ್ದಂತೆ. ಆಫೀಸಿನಲ್ಲಿ ದಕ್ಷತೆಯಿಂದಲೂ, ಶಿಸ್ತಿನಿಂದಲೂ ಸ್ವಕರ್ತವ್ಯದಲ್ಲಿ ತೊಡಗಿದ ತನುವು ಕರ್ಮತನುವಾದರೆ ಮಹಾಬಲೇಶ್ವರದಲ್ಲಿ ಏನೇನೂ ಮಾಡದ.ವಿವಿಧ ತಂಪು ಪಾನೀಯಗಳನ್ನು ಕುಡಿದ ದೇಹವು ಭೋಗತನುವೆನಿಸುವದು.

ಒಕ್ಕಲಿಗರು ಭೂದೇವಿಯ ಪೂಜೆ ಮಾಡುವ ಮುನ್ನಾದಿನ ರಾತ್ರಿ ಅಡಿಗೆಯ ಮನೆಯಲ್ಲಿ ಹುಳಿಬಾನ, ಎಳ್ಳು ಹಚ್ಚಿದ ಸಜ್ಜೆರೊಟ್ಟಿ, ತರತರದ ಹಿಂಡಿ, ವಿವಿಧ ಪಲ್ಲೆಗಳನ್ನು ಸವಿಸವಿಯಾದ ತಿನಿಸುಗಳನ್ನೂ ಮಾಡಿಕೊಂಡು ಬೆಳಿಗ್ಗೆ ಬುಟ್ಟಿ ತುಂಬಿಕೊಂಡು ಹೊಲಕ್ಕೆ ಹೋಗುವರು. ಅಲ್ಲಿ ವಿಶಾಲವಾದ ಒಟ್ಟಬೈಲಲ್ಲಿ ಕುಳಿತುಕೊಂಡು ಬುಟ್ಟಿಯಲ್ಲಿರುವ ತರತರದ ಅಡಿಗೆಯನ್ನು ಉಣ್ಣುವರು, ಯಾವ ಪ್ರಶಸ್ತವಾದ ಹೊಲದಲ್ಲಿ ಕುಳಿತು ಉಣ್ಣುವರೋ ಆ ಹೊಲವೇ ಭೋಗಭೂಮಿಯಿದ್ದಂತೆ. ಯಾವ ಅಡಿಗೆಯ ಮನೆಯಲ್ಲಿ ರಸಪಾಕಗಳನ್ನು ಸಿದ್ಧಮಾಡಿದರೋ ಅದು ಕರ್ಮಭೂಮಿಯಿದ್ದಂತೆ ಹೊಲದಲ್ಲಿ ಕುಳಿತು ಪಂಚಪಕ್ವಾನ್ನಗಳನ್ನು ಉಣ್ಣುವ ಶರೀರವು ಭೋಗತನುವಾದರೆ,

ಅಡುಗೆಯ ಮನೆಯೊಳಗೆ ಒಲೆಯ ಮುಂದೆ ಕುಳಿತು ಅಡಿಗೆಯನ್ನು ಮಾಡುವ ಕರ್ತನು ಎನಿಸುವದು.

ಮನುಜರು ವಾಸಮಾಡುವ ನರಲೋಕಕ್ಕೆ ಮಧ್ಯಮಲೋಕ, ಮೃತ್ಯುಲೋಕ, ಕರ್ಮಲೋಕ, ಭೂಲೋಕ ಹೀಗೆ ಬಗೆಬಗೆಯಾಗಿ ಕರೆಯುವರು. ಬ್ರ... ಇವರು ವಾಸಮಾಡುವ ಲೋಕಕ್ಕೆ ಭೋಗಲೋಕವೆಂದೂ. ಸ್ವರ್ಗ, ... ಪರಂಧಾಮ ಎಂದು ಕರೆಯುವರು. ಮೇಲಿನ ಸ್ವರ್ಗ, ಕೆಳಗಿನ ಪಾತಾ... ಇವುಗಳ ಮಧ್ಯದಲ್ಲಿರುವದರಿಂದ ಈ ಭೂಲೋಕಕ್ಕೆ ಮಧ್ಯಮಲೋಕವೆಂದೂ, ... ಬಂದವರೆಲ್ಲರೂ ಒಂದಿಲ್ಲೊಂದು ದಿನ-

" ಮೃತ್ಯುದೇವತೆಯೆತ್ತಿ ಹೊತ್ತು ತ್ತಾನಾಡಿಸುತ ।
ತುತ್ತು ಇದ್ದಲ್ಲಿ ಒಯ್ದು ಣಿಸಿ ಕಡೆಯಲ್ಲಿ ।
ಹೊತ್ತು ಚೆಲ್ಲುವಳು ಸರ್ವಜ್ಞ ॥

ಎಂಬ ಸರ್ವಜ್ಞನ ಉಕ್ತಿಯಂತೆ ಮೃತ್ಯುವಿಗೆ ತುತ್ತಾಗುವದರಿಂದ ಇದಕ್ಕೆ ಮೃತ್ಯು... ವೆಂದೂ, ಸಾವಿಗೊಳಗಾಗುವ ಪ್ರಾಣಿಗಳು ಇಲ್ಲಿ ವಾಸ ಮಾಡುವದರಿಂದ ಈ ... ಮೃತ್ಯುಲೋಕವೆಂದೂ, ಈ ವಿಶ್ವವೆಂಬ ರಂಗಭೂಮಿಯ ಮೇಲೆ ಮಾನವನು ಸ... ಸಮ್ಯಗ್‌ಜ್ಞಾನ, ಸದಾಚಾರ, ಸುವಿಚಾರಗಳಿಂದೊಡಗೂಡಿ ದೇವಮಾನವನಾ... ದುರ್ಬುದ್ಧಿ, ದುರಾಚಾರ, ದುರ್ವ್ಯಸನ ದುಷ್ಟವೃತ್ತಿಗಳಿಂದೊಡಗೂಡಿ ಪಾಪ... ಯಲ್ಲಿ ಹುಟ್ಟುವದಕ್ಕೂ, ಸುಖದುಃಖಗಳಿಗೆ, ಕಾರಣೀಭೂತಗಳಾದ ಪುಣ್ಯ... ಕರ್ಮಗಳನ್ನು ಇಲ್ಲಿಯೇ ಮಾಡುವದರಿಂದಲೂ ಇದಕ್ಕೆ ಕರ್ಮಲೋಕವೆಂದೂ, ... ಕೋಟಿ ಜನಾಂಗಕ್ಕೆ ಭೂದೇವಿಯು ವಿವಿಧ ದವಸ ಧಾನ್ಯಗಳನ್ನು ಕೊಟ್ಟು ಸ... ವದರಿಂದ ಭೂಲೋಕವೆಂದೂ ಕರೆಯುವರು.

... ನಿತ್ಯಾನಿತ್ಯ ವಸ್ತು ವಿವೇಕ, ಇಹಾಮುತ್ರಾರ್ಥಫಲಭೋಗ ವಿರಾಗ, ಶಮಾದಿ ಸಂಪತ್ತಿ, ಮುಮುಕ್ಷುತ್ವ ಎಂಬ ಸಾಧನ ಚತುಷ್ಟಯ ಸಂಪನ್ನನಾಗಿ ಕರ್ಮಲೋ... ಸದ್ಗುರು ಸೇವೆಯನ್ನು ಮಾಡಿ ನಿಜರೂಪವನ್ನರಿಯಬೇಕು, ಎಂದು ಶಿವನು ... ದೇವಾಧಿದೇವಾ ಕರ್ಮಲೋಕದಲ್ಲಿ ಅಂತಹ ದಿವ್ಯಪಥವನ್ನು ತೋರಿಸುವ ಗುರುವಾ... ಸಂಸಾರ ಶರಧಿಯನ್ನು ದಾಂಟಿಸಿ ಮುಕ್ತಿಮಂದಿರಕ್ಕೆ ಕರೆದೊಯ್ಯುವ ಗುರುದೇವನು... ಮಾಡು ಕೇಳಲು ಶಿವನು

ಎನ್ನ ಹೇಳುವೆನಾದಿಯಲಿ ಸು ।
ಜ್ಞಾನಿ ನಿರಹಂಕಾರರೆಂಬರ ।
ನೂನತಪವನು ಮಾಡಲೆನ್ನ ನಿಜಸ್ವರೂಪವರ ।
ಸೂನು ವೆಂಬಂದದಲಿ ಸುಳಿದನು ।
ತಾನೆಯಲ್ಲಮನೆಂಬ ಪೆಸರೊಳು ।
ಮಾನಿನಿಯೆ ಕೇಳಾಮಹಾತ್ಮನೊಳರಿವುದರಿವುಗಳ ॥

ಅಂತಹ ಸದ್ಗುರು ಸಾರ್ವಭೌಮನು ಇರುವನು. ಅವನು ಭವಭವಾಂತರದಲ್ಲಿ ಬಿದ್ದು ಒದ್ದಾಡುವ ಬದ್ಧಜೀವನನ್ನು ಉದ್ಧರಿಸುವನು. ಅವನ ಮಾತಾಪಿತೃಗಳು ಸುಜ್ಞಾನಿ ನಿರಹಂಕಾರರೆಂಬುವವರು. ಸುಜ್ಞಾನಿ ದೇವಿಯು ತನ್ನ ಹೆಸರಿಗೆ ತಕ್ಕಂತೆ ಸುಜ್ಞಾನವಾರ್ಗ ದಲ್ಲಿ ಅಂದರೆ ಶ್ರೀಮುನ್ನಿಜಗುಣ ಶಿವಯೋಗಿಗಳು ಹೇಳಿದ–

ಆದಿದೆನ್ನದಖಿಳತತ್ವವನೇತಿಗಳೆದುಳಿದ ।
ಸದಮಳ ಚಿದಾನಂದ ಪೂರ್ಣತಾನೆಂದು ।
ಹೃದಯದೊಳು ನಂಬಿ ಬಹುಮತವನೆಣಿಸದೆ ಮತ್ತೆ ।
ಪದುಳದಿಂದಿರಲದೇ ಸಹಜ ಸುಜ್ಞಾನ ॥

ಈ ಜ್ಞಾನಪಥದಲ್ಲಿ ಮುಂದುವರಿದಿದ್ದಳು. ಇದರಂತೆ ನಿರಹಂಕಾರ ಪತಿದೇವರು ಅನ್ವರ್ಥಕನಾಮವುಳ್ಳವರಾಗಿದ್ದರು. ಅವರು ಅಹಂಕಾರ ಮಮಕಾರಗಳ ಸೋಂಕಿಲ್ಲದೆ ಸರ್ವಕ್ರಿಯೆಗಳನ್ನೂ ಶಿವಾರ್ಪಣ ಬುದ್ಧಿಯಿಂದ ಮಾಡುತ್ತ–

ಆದಾತೃದಾತೃದೇಯಾನಾಂ ಶಿವಭಾವಂ ವಿಚಿಂತಯನ್ ।
ಆತ್ಮನೋಽ ಕರ್ತೃಭಾವಂಚ ಯದತ್ತಂ ಸಹಜಂಭವೇತ್ ॥

ಎಂಬ ಆಚಾರ್ಯರ ಉಕ್ತಿಯಂತೆ ಸಹಜ ಮಾಟಸ್ಥಲದಲ್ಲಿ ನಿಂದು ಹುಡಿಹೊದ್ದದ ಗಾಳಿ ಯಂತೆ,ಕಾಡಿಗೆ ಸೋಂಕದ ಕನೀನಿಕೆಯಂತೆ, ನೀರಿಂದ ನೆನೆಯದ ಆಗಸದಂತೆ, ನೇಹಹತ್ತದ ನಾಲಿಗೆಯಂತೆ, ಲೋಕದೊಳಗಿದ್ದೂ ಇಲ್ಲದ ಮಹಾನುಭಾವರಾಗಿದ್ದರು. ಇಂತಹ ಆದರ್ಶ ದಂಪತಿಗಳು ಒಮ್ಮೆ ಸುದೀರ್ಘ ತಪವನ್ನು ಮಾಡುತ್ತಿರಲು ಅವರಿಗೆ ನನ್ನ ನಿಜ ಸ್ವರೂಪವೇ ಮಗುವಾಗಿ ಹುಟ್ಟಿ ಅಲ್ಲಮಪ್ರಭು ಎಂಬ ಹೆಸರಿನಿಂದ ಪರಿಶೋಭಿಸುತ್ತಿರು ವನು. ಅವನು ನಿರ್ಮಲ ಜ್ಞಾನಭಕ್ತಿ ಸಂಪನ್ನನು. ವೇದ, ಪುರಾಣ, ಶಾಸ್ತ್ರಸ್ತೋಮನು ತನು, ಘನಮಹಿಮನು, ನಾಮರೂಪಕ್ರಿಯಾ ಕಲಾವಿರಹಿತನು.ಅನುಪಮ ದಿವ್ಯತೇಜೋ ಮೂರುತಿಯು. ವ್ಯೋಮಕಾಯನು. ಕಾಲಕರ್ಮಮಾಯಾವಿರಹಿತನು. ಹುಲಿಯ ಬಳಿ ಹುಲ್ಲೆಗಳು ನಿಲ್ಲದಂತೆ, ಬೆಳಕಿನ ಬಳಿ ಕತ್ತಲೆಯು ಸುಳಿಯದಂತೆ, ಕೇಸರಿಯ ವೀರಗರ್ಜ ನೆಗೆ ವನ್ಯಪ್ರಾಣಿಗಳು ದಿಕ್ಕೆಟ್ಟುಓಡುವಂತೆ, ಜ್ಞಾನಭಾಸ್ಕರನಾದ ಮಹಾಜ್ಞಾನಿ ಅಲ್ಲಮನ ಸನ್ನಿಧಿಯಲ್ಲಿ ಅಜ್ಞಾನಾಂಧಕಾರವು ಚದುರಿಹೋಗುವದು. ಬಲ್ಲಿದನಾದ ಅಲ್ಲಮನಬಳಿ ಮಾಯೆ ನಿಲ್ಲದು, ವೇದಶಾಸ್ತ್ರ ಪುರಾಣಗಳ ತವನಿಧಿಯೆನಿಸಿದ ಅಲ್ಲಮನ ಪ್ರಸಾದ ವಾಣಿಯನ್ನು ಕೇಳಿ ಶಿಷ್ಯಕೋಟಿಯ ಕಾಯಕಾಂತಾರದಲ್ಲಿರುವ ಕಾಮ, ಕ್ರೋಧ, ಲೋಭ ಮೋಹ, ಮದ, ಮತ್ಸರ್ಯಗಳೆಂಬ ಕಾಡುಮೃಗಗಳು ಓಡಿ ಹೋಗುವವು, ಅವನ ಮಹಿಮೆಯು ಹೇಳಲಸದಳ. ಆತನು ಇದ್ದು ಬದ್ಧನಲ್ಲ, ಸುಳಿದು ಸೂತಕಿಯಲ್ಲ.

"ಹರಿವ ನದಿಗೆ ಮೈಯೆಲ್ಲ ಕಾಲು ।
ಉರಿವ ಅಗ್ನಿಗೆ ಮೈಯೆಲ್ಲ ನಾಲಿಗೆ ।
ಬೀಸುವ ಗಾಳಿಗೆ ಮೈಯೆಲ್ಲ ಕೈ ।
ಗುಹೇಶ್ವರ ನಿಮ್ಮ ಶರಣ ಸರ್ವಾಂಗ ಲಿಂಗಿ" ॥

ಆವನ ಸರ್ವಾಂಗವೂ ಲಿಂಗಮಯುವು, ಮಂತ್ರಮೂರ್ತಿಯು, ಪ್ರಸಾದ
ಚಿದಂಗನಾ ಪ್ರಭುವು, ವಿರಾಗ ವಿಭುವು, ಚಿತ್ಪ್ರಭಾಪುಂಜನು.

ನಿಜತತ್ತ್ವ ಸ್ವರೂಪ ತಿಳಿವುದು ಅತೀವ ಕಠಿಣತರವಾದದು. ತನಗೆ ತಿಳಿದ
ದನ್ನು ಅನ್ಯರಿಗೆ ತಿಳಿಸುವದು ಕಠಿಣ. ತಿಳಿಸಿದರೂ ತಿಳಿದುಕೊಳ್ಳಲಿಕ್ಕೆ ಬಾರದಷ್ಟು
ವಾದುದು. ಈ ತತ್ವಜ್ಞಾನದ ಬಗೆಗೆ ಕಠೋಪನಿಷತ್ತಿನಲ್ಲಿ ಒಂದು ರಮ್ಯವಾದ
ನಚಿಕೇತನು ಯಮನನ್ನು ಕುರಿತು ತತ್ತ್ವಜ್ಞಾನವನ್ನು ಉಪದೇಶಿಸು
ಕೊಂಡಾಗ, ಯಮನು-

"ದೇವೈರತ್ರಾಪಿ ವಿಚಿಕಿತ್ಸಿತಂ ಪುರಾನಹಿಸುವಿಜ್ಞೆಯಂ.
ಅಣುರೇಷಧರ್ಮಃ "

ಮುದ್ದು ಬಾಲಕನಾದ ನಚಿಕೇತನೇ ದೇವಾದಿದೇವತೆಗಳೂ ಈ ತತ್ತ್ವಜ್ಞಾನದ
ವನ್ನು ತಿಳಿಯುವಲ್ಲಿ ಅಸಮರ್ಥರಾಗಿರುವರು. ಇಂತಹ ಅಪ್ರತರ್ಕ್ಯ, ಅನಿರ್ವಾ
ಅತಿನಿಗೂಢವಾದ ವಿಷಯುವನ್ನು ಕೇಳುವದು ಬಿಟ್ಟು, ಬೇರೆ ಸಾರ್ವಭೌಮ
ಯನ್ನಾದರೂ ಬೇಡು ಕೊಡುವೆನು ಅನ್ನಲು; ನಚಿಕೇತನು ನನಗೆ ಉಳಿದ ಭೋಗ
ಗಳೂ ಬೇಡ, ಮಹಾಪದವಿಗಳೂ ಬೇಡ, ಉನ್ನತ ಅಧಿಕಾರವೂ ಬೇಡ, ನನಗೆ
ದೇವತೆಗಳು ಸಹ ಚಿಕಿತ್ಸೆ ಮಾಡಿ ಆವುದನ್ನು ಪಡೆದಿರುವರೋ ಅದನ್ನೇ ಹೇಳು
ಕೇಳಿದನು. ಇಂತಹ ಅತ್ಯಪೂರ್ವವಾದ ಆತ್ಮವಿದ್ಯೆಯನ್ನು ಹೇಳಲು ಸರ್ವ
ಸದ್ಗುರುವೆಂದರೆ ಅಲ್ಲಮಪ್ರಭುವೇ. ಅಲ್ಲಮನ ಘನತೆಗೌರವಗಳು ಹಿಮಾಲಯ
ಎತ್ತರ, ಸಾಗರದಷ್ಟು ಆಳ, ಆಗಸದಷ್ಟು ವ್ಯಾಪಕ. ಅಲ್ಲಮನ ಘನತೆಯು ಮಾ
ಬುದ್ಧಿಗಳಿಗೆ ನಿಲುಕದಷ್ಟು ಮೇಲಿನದು. ಆರಾರು ಆವಾವ ಪರಿಯಲ್ಲಿ ಭಕ್ತಿಯಿಂದ
ಸನೆ ಮಾಡುವರೋ ಅವರವರಿಗೆ ಆವರವರ ತೆರನಾಗಿ ಉದ್ಧರಿಸುವನು, ಈ ವಿಷ
ಎಳ್ಳಷ್ಟೂ ಸಂಶಯುಬೇಡ. ಇದು ಯಥಾರ್ಥವಾದ ಮಾತು. ನಂಬು, ನೆರೆನಂಬು
ಹೇಳಿದರೂ ಪಾರ್ವತಿಯು-

ಅಲ್ಲಮ ಪ್ರಭುವೆನಿಪನಾತನ
ಬಲ್ಲೆನಾನೀಗರಿದೆ ಬಳಿಕಿ ।
ನ್ನಲ್ಲಿ ನಿಜತತ್ತ್ವ ಸ್ವರೂಪವನರಿವೊಡೇನರಿದು ।
ಒಳ್ಳಿತಾಯಿತು ತಿಳಿಯುಬೇಕೆಂ ।
ಬೆಲ್ಲರಿಗೆ ಕರಸುಲಭವೆನುತಲಿ ।
ಭುಲ್ಲವಿಸಿ ಗಿರಿಜಾತೆ ನುಡಿಯುಲು" — — — ॥

ಇಷ್ಟು ಗಹನವಾದ ತತ್ವಜ್ಞಾನವು ಅಲ್ಲಮನಿಗೇನುಗೊತ್ತು ? ಅವನು ಬಲ್ಲಿ
ಹೇಳುತ್ತಿದ್ದರೆ ಎಲ್ಲರಿಗೂ ಈ ವಿಷಯು ಸುಲಭವಾಗಿ ತಿಳಿದು ತತ್ವಜ್ಞಾನದ
ಕಡಿಮೆಯಾಗುತ್ತದೆ. ಸೊಲ್ಲಿಗೊಮ್ಮೆ ಮ್ಮೆ ಅಲ್ಲಮನು ಬಲ್ಲಿದನೆಂದು ಅವನ ಪ್ರಾ
ಘನತೆ, ಮೇಲ್ಮೆ,ಹೆಚ್ಚಳ,ಔನ್ನತ್ಯ, ವೈಶಿಷ್ಟ್ಯಗಳನ್ನು ಹೇಳಬೇಡಿರಿ, ಅಲ್ಲಮನು ಸಾ
ಜನರಿಗೆ ಮಹಾಮಹಿಮನೆಂದೂ, ಕಾಲ, ಕರ್ಮ, ಮಾಯಾ ವಿರಹಿತನೆಂದೂ

ಹುದು. ಆದರೆ ಜಗಜ್ಜನನಿಯಾದ ನನ್ನ ಬುದ್ಧಿಚಾತುರ್ಯದ ಮುಂದೆ ಅವನ ಆಟಸಾಗದು. ಮೂಲೋಕವನ್ನು ಕಡೆಗಣ್ಣಿನಿಂದ ನೋಡಿ ಮೂದಲಿಸುವ ನನ್ನ ತಾಮಸೀಕಳೆಯಾದ ಮಾಯೆಯ ಮುಂದೆ ಅವನ ಭಕ್ತಿಜ್ಞಾನವೈರಾಗ್ಯಗಳು ಮಣ್ಣುಗೂಡಿಹೋಗುವವು. ಅವನ ಬೆಡಗು ಬಿನ್ನಾಣಗಳನ್ನು ಕೊಚ್ಚುವದು ಬೇಡ. ಸುರನರೋರಗದನುಜ ಮನು ಮುನೀಶ್ವರರನ್ನೆಲ್ಲ ಮೋಹಪಾಶದಿಂದ ಬಿಗಿದುಕಟ್ಟಿದ ನನ್ನ ಮಾಯೆಯು ಅವನನ್ನು ನಿಮಿಷಾರ್ಧದಲ್ಲಿ ವಶಮಾಡಿಕೊಳ್ಳುವಳು ಎಂದು ಶಿವೆಯು ಬಿಂಕದಿಂದ ನುಡಿಯಲು, ಶಿವನು ಮರು ಮಾತಾಡಿದನು-

ಖಾತಿಗೊಳ್ಳದಿರಾಡಿ ತೋರಿದೊ ।
ಡೀತ ನಿಷ್ಠುರನೆನ್ನದಿರು ಬರಿ ।
ಮಾತುಮಾತಿಗೆ ಸಿಕ್ಕನು——,,
ಇದು ಯಥಾರ್ಥದ ವಾಕ್ಯವದುತ ।
ಪ್ಪದು ವಿಚಾರಿಸಲುಳಿದವರಿಗಾ ।
ದುದು ಮಹಾದುಸ್ತರತೆ ——,,

ರಾಣಿಯೇ ಸುಮ್ಮಸುಮ್ಮನೆ ಏಕೆ ದುಡುಕಿ ಮಾತಾಡುವೆ? ಅವನು ಮಾಯಾವಿರಹಿತನು, ಕಾಯಜವಿರೋಧಿಯು, ಕಾಲಸಂಹರನು. ಅಂಥಹ ಮಹಾಮಹಿಮನ ಕೂಡ ಸೆಣಸುವದು ಬೇಡ, ಅವನನ್ನು ಸೋಲಿಸಿಯೇ ತೀರುವೆನೆಂದು ಪ್ರತಿಜ್ಞೆ ಮಾಡುವದು ಬುದ್ಧಿವಂತಿಕೆಯ ಲಕ್ಷಣವಲ್ಲ. ನಾನು ಹೇಳುವ ಮಾತು, ಯಥಾರ್ಥವಾದುದು ಎನ್ನಲು-ಪಾರ್ವತಿಯು ಪ್ರಭುವನ್ನು ಸೋಲಿಸುವ ಬುದ್ಧಿಯಿಂದ ತನ್ನ ತಾಮಸೀಕಳೆಯಾದ ಮಾಯಾದೇವಿಯನ್ನು ಕರೆದು ಮಾಯೆಯೇ ಈಗಿಂದೀಗಲೇ ಕರ್ಮಲೋಕವೆನಿಸಿದ ಭೂಲೋಕಕ್ಕೆ ಹೋಗು ಎನ್ನಲು-ಮಾಯೆಯು ತಮ್ಮ ಆಜ್ಞೆಯಂತೆ ಈಗಿಂದೀಗಲೇ ಕರ್ಮಲೋಕಕ್ಕೆ ಹೋಗಿ ಅಲ್ಲಮನನ್ನು ನನ್ನ ಮೋಹಪಾಶದಿಂದ ಬಿಗಿದುಕಟ್ಟಿ ಕೈವಶ ಮಾಡಿಕೊಂಡೇ ಬರುವೆ. ಅದು ಆಗದ ಪಕ್ಷದಲ್ಲಿ ಆ ವಿರಾಗವಿಭುಪ್ರಭುವಿನ ಸೇವೆಯನ್ನು ತ್ರಿಕರಣ ಶುದ್ಧಿಯಿಂದ ಮಾಡಿ ಅವನ ನಿಜಸ್ವರೂಪವನ್ನು ತಿಳಿಯುವೆ, ಎಂದು ಎರಡು ವಿಧ ಪ್ರತಿಜ್ಞೆಮಾಡಿ ತಾಮಸೀ ಮಾಯೆಯಾದ ತನ್ನ ಅಲ್ಪಸಾಮರ್ಥ್ಯವೆಷ್ಟು ? ವ್ಯೋಮಕಾಯ ನಿರ್ಮಾಯ ಅಲ್ಲಮನ ಅದ್ಭುತ ಸಾಮರ್ಥ್ಯವೆಷ್ಟು ? ಇವುಗಳ ತುಲನೆ ಮಾಡಿ ನೋಡದೇ ಉನ್ಮತ್ತಬುದ್ಧಿಯಿಂದ ಶಿವನ ಆಸ್ಥಾನದಿಂದ ಹೊರಬಿದ್ದ ಮಾಯೆಯು ಹಮ್ಮುಬಿಮ್ಮುಗಳ ಬಿಂಕದಿಂದ ಬಿಗಿದುನಿಂತು, ಅಲ್ಲಮನನ್ನು ಮೋಹಪಾಶದಿಂದ ಎಳೆಯಬೇಕು. ಅವನ ಘನತೆಯನ್ನು ಕಳೆಯಬೇಕು. ತನ್ನ ಪೌರುಷವನ್ನು ಬೆಳೆಯಿಸಬೇಕು ಎನ್ನುವ ದುರಭಿಮಾನದಿಂದ ಅಘಟಿತ ಘಟನಾಪಟಿಯಸೀ ಎನಿಸಿದ, ಪಾರ್ವತಿಯ ರಾಕ್ಷಸೀ ಕಳೆಯಾದ ಮಾಯೆಯು ತನ್ನ ಪ್ರತಿಜ್ಞೆಯನ್ನು ಪೂರೈಸುವದಕ್ಕೋಸುಗ ಇಳೆಯಲ್ಲಿ ಅವತರಿಸಿದಳು.

-೩ ನೆಯ ಗತಿ-

# ಮಾಯೆ ಹುಟ್ಟಿದ್ದು

ಚಿಕ್ಕಮಕ್ಕಳಿಗೆ ಹಟಮಾರಿತನವೆಂಬುದೊಂದು ಕೆಟ್ಟಚಟ ಅಂಟಿಕೊಂಡಿರು ಕೆಲಮಕ್ಕಳು ಅಂಗಳದಲ್ಲಿ ಹೊರಳಾಡಿ ಉರುಳಾಡಿ ಏನು ಮಾಡಿದರೂ ಸಮ ಹೊಂದದೇ ತಾಯ್ತಂದೆಗಳನ್ನು ಪೀಡಿಸುವವು. ಶ್ರೀರಾಮನು ಬಾಲ್ಯದಲ್ಲಿ ದಲ್ಲಿರುವ ಚಂದ್ರನನ್ನು ಬೇಡಿ ಕಾಡಿದಾಗ, ತಾಯಿಗೆ ಮಗುವನ್ನು ಸಮಾಧಾನ ವದು ಶಕ್ಯವಾಗದಂತಾದಾಗ ದಾಸಿಯಾದ ಮಂಥರೆಯು ಕನ್ನಡಿಯಲ್ಲಿ ಚಂದ್ರ ವನ್ನು ತೋರಿಸಿ ಸಮಾಧಾನಪಡಿಸಿದ್ದು ರಾಮಾಯಣದಲ್ಲಿ ಸುಪ್ರಸಿದ್ಧ ಪ್ರಪಂಚದಲ್ಲಿ ತಾಯಿಯು ಹಟಮಾರಿಯಾದ ಮಗುವನ್ನು ಸಮಾಧಾನಪ ದಾಳಿಂಬ, ಬಾಳೆ, ದ್ರಾಕ್ಷಿ, ಮಾವು ಮೊದಲಾದ ಹಣ್ಣುಗಳನ್ನು ಕೊಟ್ಟು ಸಮ ಪಡಿಸುವಂತೆ ಬಹುಜನ್ಮಗಳ ಹೇಯ, ತುಚ್ಛ, ಮೂಢ ಸಂಸ್ಕಾರ ಕೂಡಿದ ಜೀವಾತ್ಮನನ್ನು ಸಮಾಧಾನಪಡಿಸಲು ಉಪನಿಷನ್ಮಾತೆಯು ವಿವಿಧ ದೃಷ್ಟಾ ಗಳ, ರೂಪಕಗಳ, ರಮ್ಯಸುಮನೋಹರ ಕಥೆಗಳ ಮೂಲಕ ತತ್ತ್ವಜ್ಞಾನವನ್ನು ಸಮಾಧಾನಪಡಿಸುವಳು. ವಿಶ್ವವೆಂಬ ರಂಗಭೂಮಿಯ ಮೇಲೆ ಸಂಸಾರವೆಂಬ ಶಾಲೆಯೊಳಗೆ ಮಾಯೆಯೆಂಬ ತ್ರಿಲೋಕ ಸುಂದರಿಯಾದ ಕಾಮಿನಿಯು ಹಾವ-ಭ ವಿಲಾಸ-ವಿಭ್ರಮಗಳಿಂದ ಕುಣಿತ, ಭಣಿತ, ಮಣಿತಗಳನ್ನು ಮಾಡುತ್ತ ಅಭಿನ ವಳು, ಬಲ್ಲಿದರು, ಭಾವುಕರು ನೋಡಿರಿ ಎಂದು ನಿಜಗುಣರೂ. ಬೈಲಾಟ ಪಾ ಆಟಗಳಲ್ಲಿ ಹಾಕಿದ ಅಟ್ಟದ ಮೇಲೆ ಕೋಟಿ, ಕೋಟಿ ಜನರು ಬಾಲ್ಯ, ಯ ವಾರ್ಧಿಕ್ಯ, ಮರಣ, ಬ್ರಹ್ಮಚರ್ಯ, ಗ್ರಹಸ್ಥ, ವಾನಪ್ರಸ್ಥ, ಸನ್ಯಾಸ, ಮು ಸೋಗುಗಳನ್ನು ಹಾಕಿ ಕುಣಿಯುವರೆಂದು ಭರ್ತೃಹರಿಯೂ, ಕುಸ್ತಿಯ ಕ ಈರ್ವರು ಕುಸ್ತಿಯಾಳುಗಳು ನಾನು, ತಾನು, ಎಂದು ಅಹಮಹಮಿಕೆಯಿಂದ ಆತುರದಲ್ಲಿ ಕುಸ್ತಿಯನ್ನಾಡುವರೆಂದು ಶ್ರೀ ಬಸವೇಶ್ವರರೂ ಹೇಳಿರುವರು.

ಚಮತ್ಕಾರವೇನಂದರೆ ಇದು ಬಲಭೀಮರೆನಿಸಿದ ಈರ್ವರು ಪುರುಷರು ಕೂಡಿ ವಂತಹ ಕುಸ್ತಿಯಲ್ಲ.ಈ ಕುಸ್ತಿಯು ಗಂಡು ಹೆಣ್ಣಿನ ಕುಸ್ತಿಯು.ಅಂದರೆ ಪುರುಷವೇ ಧರಿಸಿದ ಜೀವಾತ್ಮನಿಗೂ ಸ್ತ್ರೀವೇಷ ತಾಳ್ದ ಮಾಯೆಗೂ ಈ ಕುಸ್ತಿಯು ನಿರಂತರ ಧಿದೆ. ಬ್ರಹ್ಮಾಂಡದಲ್ಲಿ ನಡೆಯುವ ಕುಸ್ತಿ ಅಥವಾ ಯುದ್ಧಕ್ಕಿಂತಲೂ ಈ ಪಿಂಡಾಂ ನಡೆದ ಕುಸ್ತಿ, ಅಥವಾ ಯುದ್ಧವು ಮಹತ್ತರವಾದುದು. ಬ್ರಹ್ಮಾಂಡದಲ್ಲಿಯ ಯು ಅನ್ಯೋನ್ಯ ಒಪ್ಪಂದದಿಂದ ಇಲ್ಲವೇ ಜಟಿಲ ಸಮಸ್ಯೆಗಳ ಪರಿಹಾರದಿಂದ ಮುಗಿಯು ಈ ಯುದ್ಧ ಮುಗಿಯದ ಯುದ್ಧ; ಬಗೆ ಹರಿಯದ ಯುದ್ಧ.

ಧನಕನಕಾದಿಗಳನ್ನು ಕಟ್ಟಿಕೊಂಡು ಪಯಣ ಮಾಡುವ ಪಯಣಿಗನನ್ನು ಹಿಡಿದು ಅವನಲ್ಲಿರುವ ಬೆಲೆಬಾಳುವ ವಸ್ತು ಒಡವೆಗಳನ್ನೆಲ್ಲ ಕಳ್ಳಕಾರರು ದೋ ಕೊಂಡು ಹೋಗುವಂತೆ, ಮುಕ್ತಿ ಮಂದಿರದತ್ತ ಸಾಗಿದ ಮುಮುಕ್ಷುವಿನ ಸಾಧನ ಸ

ಯನ್ನು ಮಾಯೆ, ಹಾಗು ಮಾಯಾಜನಿತ ಕಾಮಾದಿ ಷಡ್ರಿಪುಗಳು ಕದ್ದೊಯ್ಯುವರು. ಈ ಮಾಯೆಯ ಲಕ್ಷಣವನ್ನು ಅನೇಕ ಸಂತರು ಅನೇಕ ಬಗೆಯಾಗಿ ಮಾಡಿರುವರು.

ಸನ್ನಾಪ್ಯಸನ್ನಾಪ್ಯುಭಯಾತ್ಮಿಕಾನ ಭಿನ್ನಾಪ್ಯ ಭಿನ್ನಾಪ್ಯುಭಯಾತ್ಮಿಕಾನ ।
ಸಾಂಗಾಪ್ಯನಂಗಾಪ್ಯುಭಯಾತ್ಮಿಕಾನ ಮಹಾದ್ಭುತಾನಿರ್ವಚನೀಯರೂಪಾ ॥

ಎಂದು ಓರ್ವ ಮೇಧಾವಿಗಳು ಹೇಳಿದರೆ-

''ಯದೇವ ನಿಭೃತಂ ಸತ್ಯಂ ತನ್ನಿತ್ಯಂ ವಸ್ತುಕಥ್ಯತೇ ।
ನಾಸ್ತ್ಯೇವ ಯಾ ವಿಚಾರೇಣ ಸಾಮಾಯೇತ್ಯಭಿಧೀಯತೇ॥

ಎಂದು ಮತ್ತೋರ್ವ ಅಭಿಜ್ಞರು ಮಾಯಾಲಕ್ಷಣವನ್ನು ಹೇಳಿರುವರು. ವೇದ ವೇದಾಂತಗಳನ್ನೆಲ್ಲ ಮೃದು-ಮಧುರ ಕನ್ನಡ ಭಾಷೆಗಿಳಿಸಿದ ಶ್ರೀಮನ್ನಿಜಗುಣ ಶಿವಯೋಗಿಗಳು-

" ನಿಜದೊಳು ಸದಸತ್ವಾಗಿಹ ಶಕ್ತಿ ।
ಅಜಿಯೆನಿಸುವದದು ಮಾಯಾಶಕ್ತಿ,
ಅದುವೆ ಜಗತ್ಕಾರಣವಾಗಿಹುದು ।
ಅದರಿಂ ಪ್ರಕೃತಿಯೆನಿಸಿಕೊಳುತಿಹುದು
ನಾನಾತ್ವಕೆ ಕಾರಣವಾಗಿಹುದು ।
ಆನಂದಾಚ್ಛಾದಕ ವಾಗಿಹುದು ।
ಉಳ್ಳಬ್ರಹ್ಮವ ನಿಲ್ಲೆನಿಸುವದು ।
ಇಲ್ಲವ ಲೋಕವನುಂಟನಿಸುವದು'' — — ॥ ಎಂದು ಹೇಳಿದರೆ,

ವಚನಕಾರರು "ಜನಿತಕ್ಕೆ ತಾಯಾಗಿ ಹೆತ್ತಳು ಮಾಯೆ । ಮೋಹಕ್ಕೆ ಮಗಳಾಗಿ
ಹುಟ್ಟಿದಳು ಮಾಯೆ । ಕೂಟಕ್ಕೆ ಸ್ತ್ರೀಯಾಗಿ ಕೂಡಿದಳು ಮಾಯೆ.
ಇದಾವ ಪರಿಯಲ್ಲಿ ಕಾಡಿತ್ತು ಮಾಯೆ ಈ ಮಾಯೆಯು ಕಳೆವರೆ
ಎನ್ನಳವಲ್ಲ ನೀವೇ ಬಲ್ಲಿರಿ ಕೂಡಲಸಂಗಮದೇವಾ''

ಎಂದು ಮಾಯೆಯ ಲಕ್ಷಣವನ್ನು ಹೇಳುವದಲ್ಲದೆ ಮಾಯೆಯಿಂದಾಗುವ ಅನರ್ಥ ಪರಂಪರೆಯನ್ನೂ ಹೇಳಿರುವರು. ಮಾಯೆಯ ವಿಷಯದಲ್ಲಿ ಶೂನ್ಯಸಿಂಹಾಸನಾರೋಹಣ ಮಾಡಿದ ಪ್ರಭುವಿನ ದೃಷ್ಟಿಕೋನವೇ ಬೇರೆಯಾಗಿದೆ. ದೃಶ್ಯಮೋಹಕ ಪದಾರ್ಥಗಳಲ್ಲಿ ಆ ಮಾಯೆಯಿಲ್ಲ. ಆ ಮಾಯೆಯಿರುವದು ದ್ರಷ್ಟಾರನ ದೃಷ್ಟಿ, ಮನ, ಭಾವಗಳಲ್ಲಿ, ಸೃಷ್ಟಿಯಲ್ಲಿಲ್ಲ. ಎಂಬುದನ್ನು-

ಹೊನ್ನು ಮಾಯೆಯೆಂಬರು ಹೊನ್ನು ಮಾಯೆಯಲ್ಲ
ಹೆಣ್ಣು ಮಾಯೆಯೆಂಬರು ಹೆಣ್ಣು ಮಾಯೆಯಲ್ಲ
ಮಣ್ಣು ಮಾಯೆಯೆಂಬರು ಮಣ್ಣು ಮಾಯೆಯಲ್ಲ
ಮನದ ಮುಂದಣ ಆಶೆಯೇ ಮಾಯೆ ಕಾಣಾ ಗುಹೇಶ್ವರ''

ಮಾಯಾಮಲಿನ ಮನದಿಂದಗಲದೆ । ಕಾಯುದ ದಂದುಗ ಕಳೆಯಿಂದ
ಅರಿವು ಬರಿದೆ ಒಪ್ಪುದೇ ? ನಿಜವು ಬರಿದೆ ಸಾಧ್ಯವಪ್ಪುದೆ ಮರು
ಗುಹೇಶ್ವರಲಿಂಗವನರಿಯಬಲ್ಲಡೆ ನಿನ್ನನೀ ತಿಳಿದು ನೋಡಾ । ''

ಎಂಬ ವಚನಗಳಿಂದ ಹೇಳಿರುವರು. ಮಾಯೆ ಇರುವದು ಸೃಷ್ಟಿಯಲ್ಲಿಲ್ಲ, ಇ
ವದು ದೃಷ್ಟಿಯಲ್ಲಿ ಎಂಬುದಕ್ಕೆ ಒಂದು ಕಥೆಯಿದೆ.

ಸುದೀರ್ಘಕಾಲ ಹಿಮವತ್ಪರ್ವತದ ಏಕಾಂತದಲ್ಲಿ ತಪಸ್ಸನ್ನಾ ಚರಿಸಿದ ವೃದ್ಧ
ಯೋರ್ವನು ವಿಷಯವ್ಯಾಮೋಹದಿಂದ ದೂರಿದ್ದ ನನಗೆ ಈ ಲೌಕಿಕ ವಿಷ
ಏನು ಮಾಡುವವು ? ಎಂಬ ಬಿಂಕದಿಂದ ಭಿಕ್ಷೆಗಾಗಿ ಗ್ರಾಮ ಪ್ರವೇಶ ಮಾಡಿದಾಗ
ಲಗ್ನ ಸಮಾರಂಭ ನಡೆದಿತ್ತು.ಎಂದೂ ಲಗ್ನ ಸಮಾರಂಭವನ್ನು ನೋಡದ ಅವನು
ನೆಂದು ಓರ್ವನನ್ನು ಕೇಳಲು ಅವನು ಸನ್ಯಾಸಿಗೆ ಲಗ್ನದ ಕಿರು ಪರಿಚಯ ಮಾಡಿಕೊಟ್ಟ
ಸುಪ್ತಗುಪ್ತ ವಾಸನೆಯುಳ್ಳ ಆ ವೃದ್ಧ ಸನ್ಯಾಸಿಗೆ ಮದುವೆಯಾಗುವ ಇಚ್ಛೆಯಾ
ಲಗ್ನದ ಚಿಂತೆಯನ್ನೇ ಮಾಡುತ್ತ ಹಾಳು ಭಾವಿಯ ಮೇಲೆ ಮಲಗಿದ ಆ ಸನ್ಯಾ
ಓರ್ವರು ಕನ್ಯಾದಾನ ಮಾಡಿ ಲಗ್ನವಾದಂತಾಯಿತು. ಮಗ್ಗುಲಲ್ಲಿ ಮಲಗಿದ ಆ
ಸತಿಯು ಅತ್ತತ್ತಸರಿಯಿರಿ ಎನ್ನಲು, ಸನ್ಯಾಸಿಯು ಸರಿದು ಹಾಳು ಭಾವಿಯಲ್ಲಿ
ಎಂದು ಬಿದ್ದು ಗಾಬರಿಯಾದನು. ಲೌಕಿಕ ವೈಷಯಿಕ ವಾಸನೆ, ಆಶಾಪಾಶಗಳು
ತಪೋಭಂಗವನ್ನು ಮಾಡಿದವು. ಇನ್ನು ಈ ಲೋಕಾಂತವೇ ಬೇಡೆಂದು ವಿಚಾರಿಸಿ
ಏಕಾಂತಕ್ಕೆ ಹೋಗಿ ಗುಹೆಯಲ್ಲಿ ತಪಸ್ಸಿಗೆ ಕುಳಿತನೆಂದು ಕಥೆಯಿದೆ. ಅನರ್ಥ ಪ
ರೆಯು, ದೃಷ್ಟಾರನ ದೃಷ್ಟಿಯಲ್ಲಲ್ಲದೆ, ದುಷ್ಟವಾಸನೆಗಳಲ್ಲಲ್ಲದ, ದೃಶ್ಯವೆನಿಪ ಸೃಷ್ಟಿ
ಲ್ಲಿಲ್ಲ ಎಂಬುದೇ ಕಥೆಯ ತಾತ್ಪರ್ಯ.

ಪರಮಾತ್ಮ ಸಾಕ್ಷಾತ್ಕಾರಕ್ಕೆ ಮಾಯೆಯು ಪರಿಪರಿಯಿಂದ ವಿಘ್ನಗಳನ್ನು ತಂದು
ವಳು. ಹರಿಬ್ರಹ್ಮರ ಮೇಲೆಯೂ ತನ್ನ ಮೋಹಜಾಲವನ್ನು ಬೀಸಿ ದಿಙ್ಮೂಢರ
ಮಾಡುವಳು ಎಂಬುದನ್ನು ಶ್ರೀ ಬಸವೇಶ್ವರರು–

''ನಾನೊಂದು ನೆನೆದೊಡೆ ತಾನೊಂದು ನೆನೆವುದು,
ನಾನಿತ್ತಲೆಳೆದೊಡೆ ತಾನತ್ತಲೆಳೆವುದು,
ತಾ ಬೇರೆಯೆನ್ನನಳಲಿಸಿ ಕಾಡಿತ್ತು,
ತಾಬೇರೆಯೆನ್ನಬಳಲಿಸಿ ಕಾಡಿತ್ತು । ಕೂಡಲಸಂಗನ
ಕೂಡಿಹೆನೆಂದೊಡೆ ತಾನೆನ್ನ ಮುಂದುಗೆಡಿಸಿತ್ತುಮಾಯೆ'' ಎಂದಿದ್ದಾರೆ

ಷಣ್ಮುಖ ಸ್ವಾಮಿಗಳು –

"ಕಾಲನೆಂಬ ಜಾಲಗಾರನು ಕರ್ಮವೆಂಬ ಬಲೆಯಬೀಸಿ,
ಸಂಸಾರಶರಧಿಯಲ್ಲಿ ಸಕಲಪ್ರಾಣಿಗಳೆಂಬ ಮೀನುಗಳ
ಹಿಡಿದು ಕೊಲ್ಲುತ್ತಿದ್ದಾನೆ,
ಕಾಮನೆಂಬ ಬೇಟೆಗಾರನು ಕಂಗಳ ತೋಡಿನಲ್ಲಿನಿಂದು

ಕಳವಳದ ಬಾಣವನೆಸೆದು ಭವವೆಂಬ ಬಲೆಯಲ್ಲಿ
ಸಕಲ ಪ್ರಾಣಿಗಳ ಕೆಡಹಿ ಕೊಲ್ಲುತ್ತಿದ್ದಾನೆ,
ಮಾಯೆಯೆಂಬ ರಕ್ಕಸಿ ಸಕಲ ಪ್ರಾಣಿಗಳ ಸಾರವಹೀರಿ,
ಹಿಪ್ಪೆಯ ಮಾಡಿ ಉಃಪ್ಪೆಂದು ಊದುತ್ತಿದ್ದಾಳೆ, ಇಂತೀ ತ್ರಿವಿಧ
ಮುಖದಲ್ಲಿ ಕಾಡುವ ನಿಮ್ಮ ಮಾಯೆಯ ಗೆಲುವೊಡೆ ಅರಳವಲ್ಲ
ಅಖಂಡೇಶ್ವರ ನೀವು ಕರುಣಿಸದನ್ನಕ್ಕರ ?''

ಎಂದು ಒಂದು ವಚನದಲ್ಲಿ ಸುಂದರವಾಗಿ ಹೇಳಿರುವರು.

ಜನ್ಮತಃ ವಿರಾಗಿಯಾದ ಶುಕ್ರಮುನಿಯು ತಪೋಭಂಗಮಾಡುವುದಕ್ಕಾಗಿ ದೇವ ಲೋಕದ ಅಪ್ಸರೆಯಾದ ರಂಭೆಯು ಅವನ ಮುಂದೆ ಬಂದು, ಒನಪು ಒಯ್ಯಾರದೊಡನೆ ಹಾವಭಾವ ವಿಲಾಸ ವಿಭ್ರಮ ಮಾಡುತ್ತ ಕುಣಿದು–

"ಗೇಹೇ ಗೇಹೇ ಜಂಗಮಾ ಹೇಮವಲ್ಲೀ ವಲ್ಲ್ಯಾಂವಲ್ಲ್ಯಾಂ ಪಾರ್ವಣಶ್ಚಂದ್ರಬಿಂಬಃ ।
ಬಿಂಬೇ ಬಿಂಬೇ ದೃಶ್ಯತೇಮೀನಯುಗ್ಮಂ ಯುಗ್ಮೇಯುಗ್ಮೇ ಪಂಚಬಾಣಪ್ರಚಾರಃ ॥"

ಎಂದು ಕೇಳಲು ಶುಕಮುನಿಯು–

"ಮಾಯಾಕರಂಡೀ ನರಕಸ್ಯಹಂಡೀ ತಪೋವಿಖಂಡೀ
ಸುಕೃತಸ್ಯ ಭಂಡೀ ... ... ... " ಚಿರಸೇವಿತಾ ಚೇತ್
ವೃಥಾ ಗತಂ ತಸ್ಯನರಸ್ಯ ಜೀವಿತಂ " ಎಂದು ತಿರಸ್ಕಾರ ಮಾಡಿ
ಛೀ, ಥೂ, ಎಂದು ಹೀಗಳೆದು ತಿರುಗಿ ಕಳಿಸುವನು.

ಬಂಗಾಲದ ಆಧುನಿಕ ಸಂತ ಶಿರೋಮಣಿಯಾದ ರಾಮಕೃಷ್ಣ ಪರಮಹಂಸರು ಪರ ಮಾತ್ಮ, ಮಾಯೆ, ಜೀವಾತ್ಮ ಈ ಮೂವರ ಬಗ್ಗೆ ಸುಂದರವಾದ ದೃಷ್ಟಾಂತವನ್ನು ಕೊಟ್ಟು ಹೇಳಿರುವರು. ರಾಮಲಕ್ಷ್ಮಣರ ಸಹೋದರ ವಾತ್ಸಲ್ಯವು ಅತ್ಯಪೂರ್ವವಾ ದುದು. ದಂಡಕಾರಣ್ಯದಲ್ಲಿ ಸಂಚರಿಸುವಾಗ ಮುಂದೆ ಮುಂದೆ ರಾಮ, ರಾಮನ ಹಿಂದೆ ಸೀತೆ, ಸೀತೆಯ ಹಿಂದೆ ತಮ್ಮನಾದ ಲಕ್ಷ್ಮಣ ಹೋಗುತ್ತಿದ್ದರು. ಹೀಗಿರುವಾಗ ತಮ್ಮನಾದ ಲಕ್ಷ್ಮಣನಿಗೆ ಅಣ್ಣನಾದ ರಾಮನನ್ನು ನೋಡುವ ತವಕವುಂಟಾಗಲು ಮಧ್ಯದಲ್ಲಿ ಸೀತೆ ಮರೆಯಾಗುತ್ತಿದ್ದಳು. ಆಗ ಲಕ್ಷ್ಮಣನು ಮಧ್ಯದಲ್ಲಿರುವ ಸೀತೆಯನ್ನು ಬದಿಗೆ ಸರಿಸಿ ಅಣ್ಣನನ್ನು ನೋಡುತ್ತಿದ್ದನು. ಹೀಗೆ ಪರಮಾತ್ಮ, ಮಾಯೆ, ಜೀವಾತ್ಮ ಇವರ ಕ್ರಮವಿದ್ದು ಜೀವಾತ್ಮನು ಪರಮಾತ್ಮನನ್ನು ಕಾಣಬೇಕಾದರೆ ಮಧ್ಯದಲ್ಲಿರುವ ಮಾಯೆಯನ್ನು ಹೋಗಲಾಡಿಸಬೇಕು. ಮಾಯಾನಿವೃತ್ತಿಯಾಗದ ಹೊರತು ಪರಮಾತ್ಮ ಸಾಕ್ಷಾತ್ಕಾರವಾಗದು. ಯಾವ ಮಾಯೆಯು ತನ್ನ ಕಣ್ಸನ್ನೆಯ ಸಮ್ಮೋಹನಾಸ್ತ್ರದಿಂದಲೇ ಹರಿ, ಹರ, ಸರಸಿಜೋದ್ಭವ, ಮನು, ಮುನಿ, ಧನುಜ, ಮನುಜರನ್ನು ಕೈವಶ ಮಾಡಿ ಕೊಂಡು, ಸೂತ್ರಧಾರನು ರಂಗಭೂಮಿಯ ಮೇಲೆ ಪಾತ್ರಗಳನ್ನು ಕುಣಿಸುವಂತೆ ಕುಣಿಸು ವಳೋ, ಆ ಮಾಯೆಯು ಹುಟ್ಟಿದುದು ಭಾರಿವೈಭವದಿಂದ ಮೆರೆಯುವ ಭಾರತದಲ್ಲಿ. ಅದರಲ್ಲಿಯೂ ಮಸ್ತಕದಲ್ಲಿ ಧರಿಸಿದ ಭಾರತಮಾತೆಯ ಸುವರ್ಣ ಕಿರೀಟದಲ್ಲಿ ಕೆಚ್ಚಿದ ಅನರ್ಘ್ಯರತ್ನದಂತೆ ಒಪ್ಪುತ್ತಿರುವ ಭಾರತಾಂತರ್ಗತ ಕರ್ನಾಟಕದಲ್ಲಿ.

ಶಬ್ದಾನುಶಾಸನದ ಕರ್ತನಾದ ಅಮರಸಿಂಹನು ತನ್ನ ಕೃತಿಯಲ್ಲಿ ನಮ್ಮೀ ಭ
ಭೂಮಿಯನ್ನು "ಆರ್ಯಾವರ್ತಃ ಪುಣ್ಯಭೂಮಿಃ ಮಧ್ಯಂ ವಿಂಧ್ಯ ಹಿಮಾಗಯೋ
ವಿಂಧ್ಯ ಪರ್ವತ ಮತ್ತು ಹಿಮಾಲಯ ಪರ್ವತ ಇವುಗಳ ಮಧ್ಯದಲ್ಲಿರುವ ಪುಣ್ಯಭೂ
ಎಂದು ಕರೆದಿರುವನು. ಭಾರತ ಭೂಮಿಯ ನಿಗೂಢವಾದ ಪ್ರಗಾಢವಾದ ಅಂತಸ್ಸ
ನ್ನರಿತ ಮಹಂತರು ಭರತರಾಜನು ಆಳಿದ ದೇಶವಾದುದರಿಂದ ಭಾರತ ಎಂದು ಭ
ಶಬ್ದಕ್ಕೆ ವ್ಯುತ್ಪತ್ತಿಯನ್ನು ಮಾಡದೇ ಭಾರತ ಎಂಬ ಶಬ್ದದಲ್ಲಿರುವ ಪ್ರಥಮಾಕ್ಷರ
ಭಾ ಎಂಬ ಅಕ್ಷರವನ್ನು ಬೇರ್ಪಡಿಸಿ ಅದಕ್ಕೆ ಅರಿವು, ತಿಳಿವು, ಜ್ಞಾನ, ದಿವ್ಯಪ್ರಭೆ,
ವಿದ್ಯೆ ಎಂದು ಅರ್ಥಮಾಡಿ ಆ ವಿದ್ಯೆಯಲ್ಲಿ ಯಾವ ಭೂ ಜನರು ತಲ್ಲೀನರಾಗಿರು
ಆ ಜನರು ನೆಲಸಿದ ಭೂಮಿಯೇ ಭಾರತಭೂಮಿಯು ಎಂದು ಅರ್ಥಮಾಡುವರು. ಅ
ರಿಕೆಯ ಚಿಕಾಗೋ ಪಟ್ಟಣದಲ್ಲಿ ನಡೆದ ಸರ್ವಧರ್ಮ ಪರಿಷತ್ತಿಗೆ ಹೋದ ಸ್ವಾಮಿ ವಿ
ಕಾನಂದರು ಮರಳಿ ಭಾರತಕ್ಕೆ ಹೊರಟು ಹಡಗದಿಂದ ಇಳಿದಾಕ್ಷಣ ಆಸ್ತಿಕರು ಪ
ಪೂತವಾದ ಭಸಿತವನ್ನು ಮೈತುಂಬ ಹಚ್ಚಿಕೊಳ್ಳುವಂತೆ, ಭಾರತ ಭೂಮಿಯ ಮಣ್ಣ
ತಕ್ಕೊಂಡು ಮೈಗೆ ಹಚ್ಚಿಕೊಂಡರಂತೆ! ಹೀಗೇಕೆ ಎಂದು ಶಿಷ್ಯರು ಕೇಳಲು, ಬಿಸಿಲ್ಗು
ಯನ್ನೇ ನೀರೆಂದು ಭ್ರಮಿಸಿ ಓಡಿಯೋಡಿ ದಣಿವ ಎರಳೆಗಳಂತೆ ಆತ್ಯಂತಿಕ ಶಾ
ನ್ನೀವ ಅಧ್ಯಾತ್ಮವಾದವನ್ನು ಮರೆತು ಕೇವಲ ಭೌತಿಕವಾದಕ್ಕೇನೇ ಒಲಿದು ಬೆಂ
ಪಾಶ್ಚಿಮಾತ್ಯರ ಸಂಸ್ಕೃತಿಗಿಂತಲೂ ಆಧ್ಯಾತ್ಮವಾದವನ್ನು ನಂಬಿ ಅವ್ಯಾಹತಪ್ರ
ಪೌರ್ವಾತ್ಯರ ಸಂಸ್ಕೃತಿಯು ಅತೀವ ಮೇಲಾದುದು. ಅನೇಕಾನೇಕ ಸಂತರ, ದಿವ್ಯ ವಿ
ಗಳ, ತತ್ತ್ವಕೋವಿದರ, ಶತ್ತ್ವಾನುಭಾವಿಗಳ, ಶರಣರ, ಆತ್ಮ ಸಾಕ್ಷಾತ್ಕಾರಿಗಳ ಪ
ಪಾದಸ್ಪರ್ಶದಿಂದ ಪುನೀತವಾದ ಭಾರತ ಭೂಮಿಯ ಮಣ್ಣು ಪರಮಪವಿತ್ರವಾದು
ಈ ಮಣ್ಣಿನ ಕಣಕಣಗಳಲ್ಲಿ, ಅಣು ಅಣುಗಳಲ್ಲಿ ಪಾವಿತ್ರ್ಯತೆಯು ತುಂಬಿ ತುಳುಕು
ಅದಕ್ಕಾಗಿ ಈ ಮಣ್ಣನ್ನು ಹಚ್ಚಿಕೊಂಡೆ ಎಂದು ಹೇಳಿದರಂತೆ !!

ಭಾರತಾಂತರ್ಗತ ಬಗೆಬಗೆಯ ನಾಡುಗಳಲ್ಲಿ ಕನ್ನಡನಾಡು ಮೇಲಾದುದು. ಅಂತೆ
ಆಧುನಿಕ ಓರ್ವ ಕವಿಯು

"ಭಾರತಾಂಬೆಯಾ ಮೂಗುತಿ ನತ್ತು ನೋಡಿದೊಡೆ
ಕನ್ನಡನಾಡಿದು ವೈಭವಾನ್ವಿತಂ''

ಕನ್ನಡನಾಡು ಎಂದರೆ ಭಾರತ ಮಾತೆಯ ಮೂಗಿನೊಳಗಿರುವ ಮೂಗುತಿಯೊಳಿ
ಮುತ್ತು ಎಂದು ಹಾಡಿರುವನು,

''ಕರುನಾಡು ನಮ್ಮ ನಾಡು ಚಿನ್ನದ ನಾಡು ಹಿರಿನಾಡು ನಮ್ಮ ನಾಡು।
ಸಿರಿನಾಡು ನಮ್ಮ ನಾಡು ಸೊಬಗಿನ ಗೂಡು ವರನಾಡು ನಮ್ಮ ನಾಡು ಎಂದ

ಮತ್ತೋರ್ವ ಕವಿಯೂ–

ಕಣಕದ ಕಡಬಾಗಿ ಮಣಕೆಮ್ಮೆ ಹಯನಾಗಿ ।
ಕುಣಿಕುಣಿದು ಕಡೆವ ಸತಿಯಾಗೆ । ಕನ್ನಡದ ।
ಅಣಕ ನೋಡೆಂದ ಸರ್ವಜ್ಞ ।

ಎಂದು ಸರ್ವಜ್ಞಕವಿಯೂ ಕನ್ನಡದ ಸೊಗಸನ್ನು ಹೊಗಳಿರುವರು. ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಎಂಬ ಮತತ್ರಯಗಳನ್ನು ಸಂಸ್ಥಾಪಿಸಿದ ಮಧ್ವ, ಶಂಕರ, ರಾಮಾನುಜ ಎಂಬ ಆಚಾರ್ಯತ್ರಯರಲ್ಲಿ ಮಧ್ವಾಚಾರ್ಯರು ಶುದ್ಧ ಕನ್ನಡಿಗರು. ಶಂಕರಾಚಾರ್ಯರು ಕೇರಳದವರಾದರೂ ತಮ್ಮ ಮುಖ್ಯಪೀಠವನ್ನು ಕನ್ನಡ ನಾಡೊಳಗಿರುವ ಶೃಂಗೇರಿ ಯಲ್ಲಿಯೇ ಸಂಸ್ಥಾಪಿಸಿದರು. ರಾಮಾನುಜರು ಕನ್ನಡಿಗರಾಗದಿದ್ದರೂ ಉದಾರಿಗಳಾದ ಹೊಯ್ಸಳರಾಜರ ಆಶ್ರಯದಲ್ಲಿ ಪ್ರಸ್ಥಾನತ್ರಯಗಳ ಮೇಲೆ ವಿಶಿಷ್ಟಾದ್ವೈತ ಪರವಾಗಿ ಭಾಷ್ಯಬರೆದರೆಂದು ತಿಳಿದುಬರುವದು. ವೀರಶೈವಮತ ಸಂಸ್ಥಾಪಕರಾದ ಪಂಚಾ ಚಾರ್ಯರ ಮಹಾಪೀಠಗಳಲ್ಲಿ ಎರಡು ಪೀಠಗಳು ಅಂದರೆ ರಂಭಾಪುರೀ ಜಗದ್ಗುರು ಪೀಠ ಮತ್ತು ಉಜ್ಜಯನೀ ಜಗದ್ಗುರುಪೀಠಗಳು ಕನ್ನಡನಾಡಿನಲ್ಲಿಯೇ ರಾರಾಜಿಸುತ್ತಿವೆ. ಇವಲ್ಲದೆ ಹುಬ್ಬಳ್ಳಿಯ ಮೂರುಸಾವಿರ ಮಠದ ಜಗದ್ಗುರು ಗುರುಸಿದ್ಧೇಶ್ವರ ಪೀಠ, ಗದಗಿನ ಜಗದ್ಗುರು ತೋಂಟದಾರ್ಯರ ಪೀಠ, ಚಿತ್ರದುರ್ಗದ ಜಗದ್ಗುರು ಮುರುಘ ರಾಜೇಂದ್ರಪೀಠ ಮೊದಲಾದವು ಕನ್ನಡನಾಡಿನಲ್ಲಿಯೇ ಒಪ್ಪುತ್ತಲಿವೆ. ಪಾಂಡವರು ಒಂದು ವರ್ಷದ ಅಜ್ಞಾತವಾಸವನ್ನು ಕನ್ನಡನಾಡಿನಲ್ಲಿರುವ ಹಾನಗಲ್ಲಿನಲ್ಲಿಯೇ (ವಿರಾಟಪುರ) ಕಳೆದರೆಂದು ತಿಳಿದು ಬರುವದು. ಭಕ್ತಿಭಂಡಾರಿ ಬಸವೇಶ್ವರರ ಜನ್ಮ ಭೂಮಿಯಾದ ಇಂಗಳೇಶ್ವರ, ತಪೋಭೂಮಿಯಾದ ಸಂಗಮಕ್ಷೇತ್ರ, ಮುಖ್ಯಮಂತ್ರಿ ಯಾಗಿ ಧರ್ಮಕ್ರಾಂತಿಯನ್ನು ಮಾಡಿದ ಕಲ್ಯಾಣ ಈ ಎಲ್ಲವೂ ಕನ್ನಡ ನಾಡಿನಲ್ಲಿಯೇ ಪರಿ ಶೋಭಿಸುತ್ತಿವೆ. ಪಂಪ, ರನ್ನ, ಜನ್ನ, ಹರಿಹರ, ರಾಘವಾಂಕ, ಮಗ್ಗೆಯ ಮಾಯಿದೇವ, ವಿರೂಪಾಕ್ಷ ಪಂಡಿತ ಮುಂತಾದ ಕವಿಪುಂಗವರು ಕನ್ನಡಿಗರೇ. ಶಿಲ್ಪಕಲೆ, ಸಂಗೀತ ಕಲೆ, ಗಮಕ ಕಲೆ, ಚಿತ್ರಕಲೆ ಮುಂತಾದ ಲಲಿತಕಲೆಗಳಿಗೆ ತವರೂರು ಕನ್ನಡನಾಡು. ವಿಶ್ವಕವಿ ರವೀಂದ್ರರು ಕಾರವಾರಕ್ಕೆ ಬಂದಾಗ 'ಕನ್ನಡನಾಡು ಸೃಷ್ಟಿಸೌಂದರ್ಯದ ಗೂಡು' ಎಂದು ಹಾಡಿರುವರು ಕನ್ನಡನಾಡಿನಲ್ಲಿಯೂ ದಕ್ಷಿಣ ಕರ್ನಾಟಕದ ವೈಶಿಷ್ಟ್ಯವೇ ಬೇರೆ. ಅದನ್ನೇ ಸರ್ವಜ್ಞನು

> "ಅಲ್ಲ ಅರಿಷಣವುಂಟು ಬೆಲ್ಲ ಬಿಳಿಯೆಲೆಯುಂಟು ।
> ಒಳ್ಳೆ ಹಲಸುಂಟು ಮೆಲ್ಲಲ್ಕೆ । ಮಲೆನಾಡ ।
> ಅಲ್ಲೆನ್ನಬಹುದೆ ಸರ್ವಜ್ಞ"

ಎಂದು ಹೇಳಿರುವನು. ದಕ್ಷಿಣ ಕರ್ನಾಟಕದಲ್ಲಿಯೂ ಬನವಾಸಿಯೇ ಮೇಲು ಎಂಬುದಕ್ಕೆ "ಆರಂಕುಶವಿಟ್ಟೊಡಂ ನೆನೆವುದೆನ್ನಮನಂ ಬನವಾಸಿದೇಶಮಂ" ಎಂಬ ಪಂಪನ ಉಕ್ತಿಯೇ ಸಾಕ್ಷಿಯಾಗಿದೆ. ಆ ಬನವಸಿಯು ಸುಂದರವಾದ ವದನವೋ ಅಥವಾ ಸು ಮನೋಹರವಾದ ಶೃಂಗಾರರಸವು ಪುಟಿಪುಟಿದು ಹೊರಚಿಮ್ಮುವ ಕಾರಂಜಿಯೋ, ಸ್ತ್ರೀರತ್ನಗಳು ಹುಟ್ಟುವ ಮಹಾಸಾಗರವೋ ಎಂಬಂತೆ ಕಾಣುವದಲ್ಲದೆ ನೇರಿಲ, ಪೇರಲ, ಮಾವು, ದಾಳಿಂಬ, ಬಾಳೆ ಮೊದಲಾದ ಇನಿವಣ್ಣುಗಳ ತಿಂದು ಕಿಲಿಕಿಲಿ ಎಂದು ದನಿಗೈ ಯುವ ಶುಕಪಿಕಗಳಿಂದಲೂ, ಮಲ್ಲಿಗೆ, ಸಂಪಿಗೆ, ಸೇವಂತಿಗೆ, ಪಾರಿಜಾತ ಮೊದಲಾದ ಹೂಗಳ ಬಂಡುಂಡು ಝೇಂಕರಿಸುವ ಅಳಿಗಳಿಂದಲೂ, ಮಧುಕೇಶ್ವರನ ಪೂಜೆಮಾಡುವ

ವೈದಿಕರ ಮಂಗಲ ವೇದಘೋಷದಿಂದಲೂ ಸುಮನೋಹರವಾಗಿತ್ತು.

ಆ ಬನವಸೆಯಲ್ಲಿ ಸ್ಥೈರ್ಯ, ಧೈರ್ಯ, ಶೌರ್ಯ, ಸಾಹಸಗಳಿಂದ ಕೂಡಿ ಪ್ರತಾಪಶಾಲಿಯೆಂದು ಪ್ರಖ್ಯಾತಿಪಡೆದ ಮಮಕಾರ ಭೂಪಾಲನು, ಮತ್ತು ಸರ್ವವಿಧದಿಂದಲೂ ಅನುಕೂಲೆಯಾದ ಮೋಹಿನೀ ಎಂಬ ಮಹಾರಾಣಿಯು ಮತ್ತು ರತಿದೇವಿಯಂತೆ, ಚಂದ್ರ ಹಾಗೂ ಶಚೀದೇವಿಯಂತೆ, ಇಂದ್ರ ಮತ್ತು ರೋ ಯಂತೆ, ವಿಷ್ಣು ಮತ್ತು ಲಕ್ಷ್ಮಿಯಂತೆ ಒಪ್ಪುತ್ತಿದ್ದರು.

ತಾಮಸೀ ಕಳೆಯಾದ ಮಾಯೆಯ ತಾಯ್ತಂದೆಗಳಾದ ಮಮಕಾರಭೂಪಾಲ, ಮೋ ಎಂಬ ಹೆಸರುಗಳೇ ಅವರವರ ವ್ಯಕ್ತಿತ್ವವನ್ನು ಎತ್ತಿ ತೋರಿಸುತ್ತವೆ. ಎಲ್ಲಿ ಜೀವಾ ಮನೋಮಂದಿರದಲ್ಲಿ ಅಹಂಕಾರ, ಮಮಕಾರ, ರಾಗದ್ವೇಷಗಳೆಂಬ ಭೂತ,ಪ್ರೇತ, ಚಿಗಳು ಥೈ,ಥೈ, ಎಂದು ಕುಣಿಯುವವೋ ಅಲ್ಲಿ ತಾಮಸೀ ಶಕ್ತಿಯು, ಪಾಶವೀ ಶಕ್ತಿ ಆಸುರೀಶಕ್ತಿಯು ಉದಯವಾಗುವದು ಎಂಬುದೇ ಕವಿಯ ಆಶಯ. ಮಮಕಾ ಮಿಕ್ಕಿನ ಬಂಧವುಂಟೇ? 'ಮಮೇತಿ ಬಧ್ಯತೇಜಂತುಃ ನಿರ್ಮಮೇತಿ ವಿಮುಚ್ಯತೇ' "ಇಮೇ ಮೇದಾರಾ ಇಮೇ ಮೇ, ಗೃಹಾ ಇಮೇ ಮೇ ಪಶವಶ್ಚ ಮೇ ಮೇ ಬ್ರುವನ್ ಕಾಲವ್ಯ ಕೇನನೀತಃ'' "ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾ ಶಿವನ ಡಂಗುರ. ಮಾಡಿದೆನು ಎನ್ನದಿರಾ ಲಿಂಗಕ್ಕೆ, ಮಾಡಿದೆನು ಎನ್ನದಿರಾ ಜಂಗ ಮಾಡಿದೆನೆಂಬುದು ಮನದಲ್ಲಿಲ್ಲದಿದ್ದರೆ ಬೇಡಿದ ಪದವಿಯನೀವ ಕೂಡಲ ಸಂಗಮ

> ನಾನೀ ಎಂಬ ಅಹಂಕಾರ, ತಲೆದೋರಿದಲ್ಲಿ ಅಟಮಟ ಕುಟಿಲ ಕುಹಕವೆಂಬ ಬಿರುಗಾಳಿ ಹುಟ್ಟಿತ್ತು, ಬಿರುಗಾಳಿ ಹುಟ್ಟಲೊಡನೆ ಜ್ಞಾನಜ್ಯೋತಿ ಕೆಟ್ಟಿತ್ತು. ಜ್ಞಾನಜ್ಯೋತಿ ಕೆಡಲೊಡನೆ ನಾಬಲ್ಲೆ ಬಲ್ಲಿದರೆಂಬ ಅರುಹಿರಿಯರೆಲ್ಲರೂ ತಾಮಸಕ್ಕೊಳಗಾಗಿ ಸೀಮೆಗೆಟ್ಟು ಕೆಟ್ಟರು ಕಾಣಾ ಗುಹೇಶ್ವರ''

ಹಾಗೂ '' ನಾಸ್ತಿ ಮೋಹಸಮೋರಿಪುಃ'' ''— — — ಸಮ್ಮೋಹಾತ್ಸ್ ವಿಭ್ರಮಃ, ಸ್ಮೃತಿ ಭ್ರಂಶಾದ್ಬುದ್ಧಿನಾಶಃ, ಬುದ್ಧಿನಾಶಾತ್ ಪ್ರಣಶ್ಯತಿ" ಎಂಬ ಸೂಕ್ತಿ ಮಮಕಾರ ಮೋಹಗಳಿಂದ ಆಗುವ ಅನರ್ಥ ಪರಂಪರೆಯನ್ನು ಸ್ಫುಟವಾಗಿ ಹೇಳುತ್ತ

೮೦೦ ವರ್ಷಗಳ ಹಿಂದೆ ಮಮಕಾರಭೂಪಾಲ, ಮೋಹಿನೀರಾಣಿ ಇವ ಹುಟ್ಟಿದ ತಾಮಸೀಮಾಯೆಯನ್ನು ವೀರವಿರತಿಯುಳ್ಳ ಅಲ್ಲಮಪ್ರಭುವು ಗೆದ್ದನೆಂಬ ಹಾಸಿಕ ಘಟನೆಯನ್ನು ಹೇಳುವ ಅಭೀಪ್ಸೆಗಿಂತಲೂ, ಇಂದು ಈಗೀಗ ಮುಮುಕ್ಷು ಹೃದಯ ಭೂಮಿಯಲ್ಲಿರುವ ಅಹಂಕಾರ, ಮಮಕಾರ, ರಾಗದ್ವೇಷ, ಮೋಹ ಮೊ ದವುಗಳಿಂದ ಹುಟ್ಟಿದ ತಾಮಸೀಶಕ್ತಿಯನ್ನು ಸಾಧಕನು ಗೆದ್ದು ವಿಜಯಶೀಲ ತನಗೆ ಮನಸ್ಸು ಪ್ರಭುವಾಗದೇ ತಾನೇ ಮನಸ್ಸಿಗೆ ಪ್ರಭುವಾಗಬೇಕೆಂಬುದೇ ಚಾಮ ಹೃದ್ಗತಾಭಿಪ್ರಾಯವಿರುವದು.

ಮಮಕಾರಭೂಪಾಲ, ಮೋಹಿನೀದೇವಿ ಅಹಂಕಾರಾಚಾರ್ಯ, ನಿರ್ಮಲ, ಸುಮತಿ, ಮಹಾದೇವಿ ಮುಂತಾದ ಅರ್ಥಪೂರ್ಣವಾದ ಹೆಸರುಗಳೇ ಪಿಂಡಾಂಡದಲ್ಲಿರುವ ವಿವಿಧ ವಿರೋಧಗುಣಗಳ ಸೂಚಕಗಳೋ ಏನೋ ಎಂಬುವಂತೆ ಭಾಸವಾಗುತ್ತವೆ. ಭೂತಕಾಲ ದಲ್ಲಿ ಬನವಾಸಿಯೊಳಗೆ ಆಗಿಹೋದ ಮಮಕಾರಭೂಪಾಲ, ಮೋಹಿನೀದೇವಿ, ಮಾಯಾದೇವಿ, ಅಹಂಕಾರಾಚಾರ್ಯ, ಸುಜ್ಞಾನಿ, ನಿರಹಂಕಾರ, ಪ್ರಭು ಮುಂತಾದ ಐತಿ ಹಾಸಿಕ ವ್ಯಕ್ತಿಗಳಲ್ಲಿ ನಡೆದು ಹೋದ ಘಟನೆಗಳು ಏನೇ ಇರಲಿ ಅದು ಅಪ್ರಕೃತ ಅಪ್ರ ಸ್ತುತ. ಪಾತ್ರಗಳನ್ನು ಚಿತ್ರಿಸುವದಕ್ಕಿಂತಲೂ ತನುವಾಸಿಗಳಾದ ಮಮಕಾರ, ಮೋಹ, ಅಹಂಕಾರ, ಮಾಯೆ ಮೊದಲಾದವುಗಳನ್ನು ಚಿತ್ರಿಸಿ ಪ್ರಭುಲಿಂಗಲೀಲೆಯ ಓದುಗರನ್ನು ಅಂತರ್ಮುಖಿಗಳನ್ನಾಗಿ ಮಾಡುವ ಮಹೋದ್ದೇಶ ಚಾಮರಸನದು.

ತಮೋಗುಣ ಪ್ರಧಾನರಾದ ಮಮಕಾರಭೂಪಾಲ, ಮೋಹಿನೀದೇವಿಯರು ಮಕ್ಕಳನ್ನು ಪಡೆವ ಹಂಬಲದಿಂದ ಗೌರೀವ್ರತ, ಹದಿನಾರು ಸೋಮವಾರ ವ್ರತ, ಸಹಸ್ರ ಗಣಸಂತೃಪ್ತಿ, ತ್ರಿಕಾಲಲಿಂಗಾರ್ಚನೆ, ಮಂತ್ರಾನುಷ್ಠಾನ, ಸಹಸ್ರಬಿಲ್ವಾರ್ಚನೆ, ಮೊದ ಲಾದ ಶುದ್ಧ ಸಾತ್ವಿಕ ವ್ರತಗಳನ್ನು ಆಚರಿಸದೇ ಮಾರಯ್ಯ, ಬೀರಯ್ಯ, ಕೇಚರಗಾವಿಲ, ಅಂತರ, ಬೆಂತರ, ಮೊದಲಾದ ಕ್ಷುದ್ರದೇವತೆಗಳನ್ನು ಬೇಡಿ ದೇವದಾನವ ಮಾನವರುಗಳ ದಾವಣಿಯ ದನ ಮಾಡಿಟ್ಟುವ ಮಾಯಾದೇವಿ ಎಂಬ ಮಗಳನ್ನು ಹಡೆದರು. ರಾಜ ಕುಮಾರಿಯು ಹುಟ್ಟಿದೊಡನೆ ಜಾಗಟೆ, ಮದ್ದಳೆ, ಕಹಳೆ, ನಗಾರಿ, ನೌಬತ್ತುಗಳು ನಗರದ ತುಂಬ ಮೊಳಗಿದವು. ಮಹಾರಾಜನು ಸಂತೋಷಭರಿತನಾಗಿ ದೀನರಿಗೆ, ಪಂಡಿತರಿಗೆ, ಕಲಾವಿದರಿಗೆ, ಅನಾಥರಿಗೆ ವಿವಿಧ ವಸ್ತ್ರಭೂಷಣ ರತ್ನಾಭರಣಗಳನ್ನು ದಾನ ಮಾಡುವ ದಲ್ಲದೆ ಎಲ್ಲರನ್ನು ಮೃಷ್ಟಾನ್ನಭೋಜನದಿಂದ ಸಂತೃಪ್ತಿಗೊಳಿಸಿದನು. ಮಾಯೆ ಹುಟ್ಟಿ ದಾಕ್ಷಣ ಊರುತೊರೆದು ಗಂಗಾತೀರದಲ್ಲಿ, ಗಿರಿಗುಹೆಗಳಲ್ಲಿ, ಪಂಚಾಗ್ನಿಮಧ್ಯದಲ್ಲಿ, ತಪ ಸ್ಸನ್ನು ಮಾಡುವ ಯೋಗಿಗಳು ಚಿತ್ತಸ್ಥೈರ್ಯವನ್ನು ಕಳೆದುಕೊಂಡು ವಿಕಾರವಶರಾಗಿ ಮಮ್ಮಲಮರುಗಿ ಹೀಗೇಕಾಯಿತೆಂದು ಚಿಂತಿಸುತ್ತ ಹಾಹಾರಿಕುಳಿತಿರಲು ದುರ್ವಾಸ ಮುನಿಗಳು ಬಂದು "ಮುನಿವೃಂದವೇ ಒಂದುದಿನ ಕೈಲಾಸದಲ್ಲಿ ಶಿವಪಾರ್ವತಿಯರು ಮಾತನಾಡುತ್ತ ಕುಳಿತಾಗ ಪಾರ್ವತಿಯು ಶಿವನಿಗೆ ಪ್ರಾಣನಾಥ ನಿನ್ನ ನಿಜಸ್ವರೂಪವನ್ನು ತಿಳಿಸುವವರಾರು ? ಎಂದು ಕೇಳಲು ಶಿವನು ಪ್ರಿಯೇ ನನ್ನ ನಿಜರೂಪವನ್ನು ತಿಳಿಸಲ ಸಮರ್ಥರಾದ ಮಹಾಮಹಿಮಾಶಾಲಿ ಪ್ರಭುದೇವನು ಭೂಲೋಕದಲ್ಲಿರುವನು. ಅವ ನನ್ನು ತ್ರಿಕರಣಶುದ್ಧಿಯಿಂದ ಸೇವೆಮಾಡಿದರೆ ಅವನು ನನ್ನ ನಿಜರೂಪವನ್ನು ತಿಳಿಸುವನು ಎಂದು ಹೇಳಲು ಪಾರ್ವತಿಯು ಪತಿದೇವ, ಅಲ್ಲಮನು ಬಲ್ಲಿದನೆಂದು ಹೇಳುವದಲ್ಲದೆ, ಅವನಲ್ಲಿ ಇಲ್ಲದ ಸಲ್ಲದ ಗುಣಗಳನ್ನು ಆರೋಪಿಸಿ ಸೊಲ್ಲು ಸೊಲ್ಲಿಗೆ ಕೊಂಡಾಡುವಿರಿ. ಅವ ನಾವಬಲ್ಲಿದನು? ಅವನು ಕ್ಷುಲ್ಲಕನು. ನನ್ನ ತಾಮಸೀ ಮಾಯೆಯು ಕೈಯೊಳಗೆ ಸಿಕ್ಕರೆಅವನು ನುಚ್ಚುನೂರಾಗಿ ಮಣ್ಣು ಪಾಲಾಗುವನು ಎಂದು ವಾದವ ಮಾಡಿ ತನ್ನ ತಾಮಸೀ ಕಳೆ ಯನ್ನು ಭೂಲೋಕಕ್ಕೆ ಕಳಿಸಿರುವಳು. ಆ ಮಾಯೆಯು ಹುಟ್ಟಿದ ಕಾರಣದಿಂದಲೇ ನಿಮ್ಮ ತಪಸ್ಸಿಗೆ ಭಂಗ ಬಂದಿದೆ. ಪುನಃ ನಿಮಗೆ ಚಿತ್ತಸ್ಥೈರ್ಯ ಉಂಟಾಗಬೇಕಾದರೆ ಆ ವಿರಾಗ

ವಿಭುವಾದ ಅಲ್ಲಮಪ್ರಭುವನ್ನು ಧ್ಯಾನಿಸಿರಿ. ಅಂದರೆ ನಿಮ್ಮ ತಪಸ್ಸು ನಿರ್ವಿ
ಮುಂದುವರಿಯುವದು " ಎಂದು ದುರ್ವಾಸರು ಹೇಳಿ ಹೊರಟುಹೋದರು.

ಇತ್ತ ಮಮಕಾರಭೂಪಾಲ ಮೋಹಿನೀದೇವಿಯರು ತಮಗೆ ಹುಟ್ಟಿದ ಕ
ಕಳಿಗೆ ಮಾಯಾದೇವಿ ಎಂಬ ನೂತನ ಹೆಸರಿಟ್ಟು ನಾಮಕರಣ ಮಹೋತ್ಸ
ನೆರವೇರಿಸಿದರು.

ಮುದ್ದುಮುದ್ದಾದ ಮಾಯಾದೇವಿಯು ತೊದಲ್ನುಡಿಗಳನ್ನು ಕೇಳುವ
ಗಳಿಗೆ ಶಬ್ದಾನಂದ, ಕುಸುಮಕೋಮಲೆಯಾದ ಮಾಯಾದೇವಿಯನ್ನು ಎತ್ತಿ
ಅಪ್ಪುವ ದೇಹಕ್ಕೆ ಸ್ಪರ್ಶಾನಂದ, ತ್ರಿಲೋಕಸುಂದರಿಯಾದ ಮಾಯಾಂಗನೆಯ ದಿ
ವನ್ನು ನೋಡುವ ಕಂಗಳಿಗೆ ರೂಪಾನಂದ,ಚೆಲುವಾದ ಮೊಗವನ್ನು ಮುದ್ದಿಕ್ಕುವಾ
ಟಯಿಂದ ಬೀಳ್ವ ಲಾಲಾರಸವನ್ನು ಸವಿಯುವಾಗ ರಸನೆಗೆ ಆಗುವ ರಸಾನಂದ,
ಲೆಯ ಮುಂಗೂದಲುಗಳನ್ನು ಆಘ್ರಾಣಿಸುವಾಗ ನಾಸಿಕಕ್ಕೆ ಆಗುವ ಗಂಧಾನಂದ,
ಪಂಚೇಂದ್ರಿಯಗಳಿಗೆ ಸುಖದ ಸುಗ್ಗಿಯನ್ನು ನೀಡುತ್ತ, ತಾಯ್ತಂದೆಗಳ ತೋಳ
ಬಾಲಲೀಲೆಗಳನ್ನು ಮಾಡುತ್ತ, ದಿನದಿನಕ್ಕೆ ಬಾಲಚಂದ್ರನಂತೆ ಬೆಳೆಯಹತ್ತಿದಳು.
ಯಾದ ಮಾಯಾದೇವಿಯು ತನ್ನ ಮಂದಗಮನದಿಂದ ಹಂಸ ಪಕ್ಷಿಯನ್ನು, ಮ
ದಿಂದ ಕೋಗಿಲೆಯನ್ನು,ಮೃದುಭಾಷಣದಿಂದ ಅರಗಿಳಿಯನ್ನು ಹಿಂದೆಹಾಕಿ ಜನಮ
ಸೂರೆಗೈದಳು. ದಿನಗಳೆಯಲು ರೂಪದಿಂದಲೂ, ವಿಲಾಸ ವಿಭ್ರಮದಿಂದಲೂ,
ಜವ್ವನದಿಂದಲೂ ತುಂಬಿತುಳುಕುವ ಆನಿತಂಬಿನಿಗೆ ರಾಜನು ವಿಹಾರಕ್ಕೆಂದು ಉಪ
ನಿರ್ಮಿಸಿ ಇರಲಿಕ್ಕೆ ಮೇಲಂತಸ್ತಿನ ಮಹಡಿಯನ್ನು ಕಟ್ಟಿಸಿದನು ಇಲ್ಲದೆ
ಮಗಧ, ನೇಪಾಳ, ಗುಜ್ಜರ ಮೊದಲಾದ ರಾಜಮನೆತನಗಳ ಓರ್ವ ರಾಜಕು
ಮದುವೆ ಮಾಡಿಕೊಡಬೇಕೆಂಬ ಚಿಂತೆಯಲ್ಲಿ ಮಗ್ನನಾದನು.

''ಜಾತೇತಿ ಕನ್ಯಾ ಮಹತೀಹ ಚಿಂತಾ |
ಕಸ್ಮೈ ಪ್ರದೇಯೇತಿ ಮಹಾನ್ ವಿತರ್ಕಃ ||
ದತ್ತಾ ಸುಖಂಯಾಸ್ಯತಿ ವಾನವೇತಿ |
ಕನ್ಯಾ ಪಿತೃತ್ವಂ ಖಲು ನಾಮಕಷ್ಟಂ"||

ಚತುಶ್ಚರಣವುಳ್ಳ ಈ ಶ್ಲೋಕದಲ್ಲಿ "ಕನ್ಯಾ ಪಿತೃತ್ವಂ ಖಲು ನಾಮಕಷ್ಟಂ" ಎ
ಚತುರ್ಥಚರಣ. ''ಪುತ್ರ ಪಿತೃತ್ವಂ ಖಲು ನಾಮಸೌಖ್ಯಂ'' ಎಂಬ ಆಶ
ಹೃದಯದಲ್ಲಿಟ್ಟುಕೊಂಡು 'ಕನ್ಯಾ ಪಿತೃತ್ವಂ ಖಲು ನಾಮ ಕಷ್ಟಂ' ಎಂದು ಹೇಳ
ಕನ್ಯೆಯ ಜನನದಿಂದ ಆಗುವ ದುಃಖ ಪರಂಪರೆಯನ್ನು ಮೂರು ಚರಣಗಳಲ್ಲಿ
ರಿಸಿರುವನು. ನೂತನದಂಪತಿಗಳಿಗೆ ಪ್ರಪ್ರಥಮದಲ್ಲಿ ತಮಗೆ ಗಂಡು ಮಗು
ಬೇಕೆಂಬ ತವಕವಿರುತ್ತದೆ. ಪುತ್ರನುದಯಿಸದೇ ಪುತ್ರಿ ಜನಿಸಿದರೆ ಮಿಡುಕುವರು.
ಗುವರು. "ಹೆಣ್ಣು ಹುಟ್ಟಿದರೆ ಹುಣ್ಣು ಹುಟ್ಟಿದಂತೆ" ಎಂಬ ಲೋಕೋಕ್ತಿ ಸ
ಇದೆ. ಪುತ್ರಾಪೇಕ್ಷೆಯುಳ್ಳ ಸದ್ಗೃಹಸ್ಥನಿಗೆ ಮೊದಲು ಗಂಡು ಮಗು ಹುಟ್ಟಿದ

ಹುಟ್ಟಿದರೆ ಸಣ್ಣ ಮೋರೆ ಮಾಡುವರು. ಅದೇ ಗಂಡು ಹುಟ್ಟಿದರೆ ಸಂತೋಷ ಭರಿತರಾಗಿ ಬಂಧು ಬಾಂಧವರಿಗೂ, ಗೆಳೆಯರಿಗೂ, ಅಕ್ಕಪಕ್ಕದವರಿಗೂ ಸಿಹಿಸವಿಯತ್ತಿನಸು ಹಂಚುವರು. 'ಪುಮ್ ನಾಮ್ನಃ ನರಕಾತ್ ತ್ರಾಯತೇ ಇತಿ ಪುತ್ರಃ" ದುಃಖಪ್ರದವಾದ ಪುಮ್ ಎಂಬ ವಿಧಾನವುಳ್ಳ ನರಕದಿಂದ ಮೇಲಕ್ಕೆತ್ತಿ ಯಾವನು ರಕ್ಷಿಸುವನೋ ಅವನೇ ಪುತ್ರನು ಎಂದು ಪುತ್ರ ಶಬ್ದದ ನಿರ್ವಚನ ಮಾಡುವರು.

"ಅವಶ್ಯಮನುಭೋಕ್ತವ್ಯಂ ಕೃತಂಕರ್ಮ, ಶುಭಾಶುಭಂ"
"ಸ್ವಕರ್ಮ ಸೂತ್ರ ಗ್ರಥಿ ತೋ ಹಿಲ್ಲೋಕಃ"
''ಪ್ರಾಚೀನ ಕರ್ಮವು ಬಿಡಲರಿಯದು।
ಯೋಚನೆಯ ಮಾಡಿ ನೀ ಬಳಲದಿರು ಮನುಜ"
''ಹಿಂದಿನ ಕರ್ಮವನು ಇಂದುಂಡುಬೇಕು।
ಇಂದಿನ ಕರ್ಮವನು ಮುಂದುಂಡಬೇಕು''

ಮುಂತಾದ ಶಾಸ್ತ್ರಪ್ರಮಾಣಗಳೂ, ಅನುಭಾವಿಗಳ ಉಕ್ತಿಗಳೂ, ಪ್ರತಿಯೊಬ್ಬರೂ ತಮ್ಮ ತಮ್ಮ ಕರ್ಮಾನುಸಾರವಾಗಿ ಸುಖದುಃಖಗಳನ್ನು ಅನುಭವಿಸಿಯೇ ತೀರಬೇಕು ಎಂದು ಹೇಳುತ್ತವೆ, ತಾನು ಮಾಡಿದ ಸುಕೃತ ದುಷ್ಕೃತಗಳ ಫಲವೆನಿಸಿದ ಸುಖ–ದುಃಖಗಳನ್ನು ಅನುಭವಿಸಲೇಬೇಕು. ತಂದೆಯ ದುಃಖವನ್ನು ಕಳೆಯಲು ಮಗನಿಗೆ ಬರಲಾರದು

ಮಸ್ತಕನ್ಯಸ್ತ ಭಾರಾದೇರ್ದುಃಖ ಮನ್ಯೈರ್ನಿವಾರ್ಯತೇ।
ಕ್ಷುಧಾದಿಕೃತದುಃಖಂತು ವಿನಾಸ್ವೇನ ನಕೇನಚಿತ್''

ಕಟ್ಟಿಗೆಯ ಹೊರೆಯನ್ನು ಹೊತ್ತು ದಣಿವಾಗಿದ್ದರೆ ಆ ಹೊರೆಯನ್ನು ಇಳಿಸಿಕೊಂಡು ಆ ಹೊತ್ತವನ ಭಾರಜನ್ಯ ದುಃಖವನ್ನು ಕಳೆಯಬಹುದು. ಹೊಲದಲ್ಲಿ ನೇಗಿಲ ಹೊಡೆದು ದುಡಿದುಡಿದು ಬೇಸತ್ತ ರೈತನ ಕೆಲಸವನ್ನು ತಾನು ಮಾಡಿ ಅವನಿಗೆ ವಿಶ್ರಾಂತಿಯನ್ನು ಕೊಡಬಹುದು. ಹೀಗೆ ಹೊರಗಣ ಒಬ್ಬರ ಕೆಲಸಗಳನ್ನು ಮತ್ತೊಬ್ಬರು ಮಾಡುವಂತೆ ತನಗೆ ಹಸಿವಾದಾಗ ತನ್ನ ಪಾಲಿನ ಊಟವನ್ನು ಬೇರೊಬ್ಬರು ಮಾಡಿದರೆ ನಡೆದೀತೇ ? ನೀರಡಿಕೆಯಾದಾಗ ಬೇರೊಬ್ಬರು ನೀರು ಕುಡಿದರೆ ನಡೆದೀತೇ ? ಹಸಿವು ತೃಷೆಯುಳ್ಳವನು ತಾನೇ ಉಂಡು ನೀರ್ಗುಡಿದು ಸಂತೃಪ್ತಿ ಹೊಂದಬೇಕಲ್ಲದೆ ಬೇರೊಬ್ಬರು ಮಾಡಿದರೆ ಪಡೆಯಲಾರನು. ತಾನು ಮಾಡಿದ ಕರ್ಮಫಲವನ್ನು ತಾನೇ ಅನುಭವಿಸಬೇಕು. ತಂದೆಯು ಮಾಡಿದ ಕರ್ಮಜನ್ಯ ಸುಖದುಃಖಾದಿಗಳಿಗೆ ಮಗನು ಭಾಗಿಯಾಗಲಾರನು. ಭಾಗಿಯಾಗಲು ಅದೇನು ಲೌಕಿಕ ಆಸ್ತಿಯೇ ? "ಅಪುತ್ರಸ್ಯ ಗತಿರ್ನಾಸ್ತಿ" ಯಾರಿಗೆ ಮಕ್ಕಳಿಲ್ಲವೋ ಅವರಿಗೆ ಸದ್ಗತಿಯು ದೊರಕಲಾರದು. ಅವರು ಮೋಕ್ಷಕ್ಕೆ ಅನಧಿಕಾರಿಗಳು. ಇದು ಆ ಶ್ರುತಿವಾಕ್ಯದ ಸಾಮಾನ್ಯಾರ್ಥ. ಸದ್ಗೃಹಸ್ಥನಿಗೆ ಮಕ್ಕಳಿರಬೇಕು.

ಮಕ್ಕಳಿಲ್ಲದ ಮನೆಯು ಶೊಕ್ಕವಿಲ್ಲದ ಬಾಳ್ವೆ।
ಅಕ್ಕರವು ಇರದ ತವರೂರು। ಇವು ಮೂರು।
ದುಃಖ ಕಾಣಯ್ಯ ಸರ್ವಜ್ಞ"

ಮಕ್ಕಳಿಲ್ಲದ ತಾಯಿ ಕೊಳೆತ ತೆಂಗಿನಕಾಯಿ ಎಂದು ಹೇಳುವರು. ಬಳ್ಳಿಗೆ ಹೂ, ಹಣ್ಣು, ಮನೆಗೆ ದೀಪ ಬೇಕಲ್ಲವೇ ? ಸಂತಾನ ಪ್ರಾಪ್ತಿಗೋಸುಗವೇ ದಶರಥ ರಾಜನು ಪುತ್ರಕಾಮೇಷ್ಟಿಯಜ್ಞವನ್ನು ಮಾಡಿದನೆಂಬುದು ಸುಪ್ರಸಿದ್ಧವಿದೆ.ಸಂತತಿ ಯಿಲ್ಲದಿರೆ ಮನೆಯಲ್ಲಿ ಅತಿಥಿ ಅಭ್ಯಾಗತರ ಸೇವೆ,ದೇವತಾರ್ಚನೆ, ಅನ್ನದಾನ, ಪಿತೃ ಮುಂತಾದ ಪುಣ್ಯಕಾರ್ಯಗಳು ಅವಿಚ್ಛಿನ್ನವಾಗಿ ನಡೆಯಲಾರವು. ಮೇಗಣ ವ್ಯ ರ್ಮಗಳು ವಂಶಪರಂಪರೆಯಾಗಿ ನಡೆಯಲೆಂಬ ಸದುದ್ದೇಶದಿಂದ ಮನೆಗೆ ಮಕ್ಕಳು ಗತ್ಯ ಬೇಕು. ಮೇಗಣ ಮಾತನ್ನು ಒಪ್ಪಿಕೊಂಡರೂ ಸಹ ಅಪುತ್ರಸ್ಯ ಗತಿರ್ನಾಸ್ತಿ, ಉಕ್ತಿಗೆ ಅದುವೇ ನಿಜಾರ್ಥವಲ್ಲ. ಮಕ್ಕಳಿದ್ದವರಿಗೆ ಸದ್ಗತಿಯೆಂದು ಒಪ್ಪಿದರೆ ಮಕ್ಕ ಎಷ್ಟೋ ಜನರು ದುರಾಚಾರಿಗಳು, ದುಷ್ಟಬುದ್ಧಿಯುಳ್ಳವರಾಗಿ ಹೀನಕೃತ್ಯ ಮಾಡುತ್ತಿರುವರು. ಅವರೆಲ್ಲರಿಗೂ ಸದ್ಗತಿಯಾಗಬೇಕಾದೀತು. ಮಕ್ಕಳಿಲ್ಲದ ಮಹಾನುಭಾವರು ಶೀಲಸಚ್ಚಾರಿತ್ರ್ಯಗಳಿಗೆ ತವನಿಧಿಯಾಗಿ, ಭಕ್ತಿ, ವೈರಾ ತವರು ಮನೆಯಾಗಿ, ಸದ್ಭಕ್ತಶಿರೋಮಣಿಗಳೆಂದು ರಾರಾಜಿಸುವರು. ಮೇಗಣ ಒಂದು ಅರ್ಥವನ್ನು ಗ್ರಹಿಸಿದರೆ ಅವರೆಲ್ಲರೂ ಶಿವಸನ್ನಿಧಿಗೆ ಎರವಾಗಬೇಕಾ "ಅಪುತ್ರಸ್ಯ ಗತಿರ್ನಾಸ್ತಿ" ಎಂಬ ವಾಕ್ಯದಲ್ಲಿರುವ ಅಪುತ್ರಸ್ಯ ಎಂಬ ಶಬ್ದಕ್ಕೆ ಮಕ್ಕಳಿಲ್ಲವೋ ಅವರಿಗೆ ಎಂದು ಅರ್ಥಮಾಡದೇ ಯಾರು ಗುರುವಿನ ಮಕ್ಕಳಾ ಲ್ಲವೋ ಅವರಿಗೆ ಎಂದೂ, ಮಕ್ಕಳಂತಹ ಪರಿಶುದ್ಧವಾದ ಮನಸ್ಸುಳ್ಳವರು ಆಗುವದಿಲ್ಲವೋ ಅವರಿಗೆ ಎಂದೂ ಅರ್ಥಮಾಡಿದಲ್ಲಿ ಸುಸಂಗತವಾಗಿ ಸರ್ವಸ ವಾಗುವದು.

ದೂರದೃಷ್ಟಿಯಿಂದ ವಿಚಾರ ಮಾಡಿದರೆ ಸದ್ಗೃಹಸ್ಥನಿಗೆ ಹುಟ್ಟಿದ ಹೆಣ್ಣೇ ಆ ಗಂಡೇ ಆಗಲಿ ಎರಡೂ ಅಷ್ಟೇ. ಆದರೂ ಮಾನವನು ಸ್ವಾರ್ಥದೃಷ್ಟಿಯಿಂದ ಹೆ ಹೆಣ್ಣು ಒಂದಿಲ್ಲ ಒಂದು ದಿನ ಹೆರವರ ಮನೆಗೆ ಹೋಗತಕ್ಕದ್ದೆಂದು ಭಾವಿಸಿ, ಹಾಗು ದಕ್ಷಿಣೆಯ ಪಿಡುಗು ಕಾಳ್ಗಿಚ್ಚಿನಂತೆ ಹಬ್ಬಿರುವ ಈ ಕಾಲದಲ್ಲಿ ಹೆಣ್ಣಿನ ಸಲುವಾಗಿ ಹಣ ತೆತ್ತಬೇಕಾಗುವದೆಂದು ವಿಚಾರಿಸಿ ದಿಙ್ಮೂಢನಾಗಿ ಹೌಹಾರಿ ಹೋಗುವನು. ಹೆ ಹೆಣ್ಣು ವಯಸ್ಸಿಗೆ ಬರಲು ಯೋಗ್ಯನಾದ ವರಾನ್ವೇಷಣೆಯ ಚಿಂತೆ, ಸುಶಿಕ್ಷಿತ, ಸುಸ ಸುಶೀಲ, ಪದವೀಧರ ವರನು ಸಿಕ್ಕರೆ ಅವನಿಗೆ ಲಕ್ಷಗಟ್ಟಲೆ ವರದಕ್ಷಿಣೆ ಕೊಡುವ ಪ್ರಾಚೀನ ಗುರುಕುಲದಲ್ಲಿರುವ ಕಟ್ಟುನಿಟ್ಟುಗಳಿಗೆ ಒಳಪಡದ ಸ್ವೈರವೃತ್ತಿಯ ಕಾಲೇಜುಗಳಿಗೆ ವಿದ್ಯಾಭ್ಯಾಸಕ್ಕಾಗಿ ಕಳಿಸಿದರೆ ಕನ್ಯೆಯ ಶೀಲಸಂರಕ್ಷಣೆಯ ಬಗೆಗಿನ ಹೊಸತಾಗಿ ಅಳಿಯತನಕ್ಕೆ ಬರುವವನು ಎಲ್ಲಿ ಕಾಡುವನೋ ಬೇಡುವನೋ ಚಿಂತೆ, ಅತ್ತೆಮಾವಂದಿರು ಸರಿಯಾಗಿ ನಡೆಯಿಸಿಕೊಳ್ಳುವರೋ ಇಲ್ಲವೋ ದೊಂದು ಚಿಂತೆ, ಹೀಗೆ ಚಿಂತೆಗಳ ಸರಪಳಿಯಿಂದ ಬಿಗಿಯಲ್ಪಟ್ಟ ಮಾನವನು ಸೊ ವನು, ಕೊರಗುವನು, ಮರುಗುವನು. ಅದಕ್ಕಾಗಿಯೇ "ಕನ್ಯಾಪಿತೃತ್ವಂ ಖಲು ಕಷ್ಟಂ" ಹೆಣ್ಣುಮಗುವಿಗೆ ತಂದೆಯಾಗುವದು ಬಹಳ ಕಷ್ಟಕರವಾದದು ಎಂದು ಹೇಳುವರು. ವಾಸ್ತವಿಕವಾಗಿ ವಿಚಾರಿಸಿದರೆ ಹುಟ್ಟಿದ ಮನೆಯನ್ನಷ್ಟೇ ಉದ್ಧ

ಸತ್ಪುತ್ರನಿಗಿಂತಲೂ ಹುಟ್ಟಿದ ಮನೆಯನ್ನು ಹಾಗೂ ಕೊಟ್ಟ ಮನೆಯನ್ನು ಉದ್ಧರಿಸಿ ಉಭಯ ಮನೆತನಕ್ಕೂ ಕೀರ್ತಿಯ ಕಳಸವನ್ನಿಡುವ ಸತ್ಪುತ್ರಿಯೇ ಮೇಲು.

'ಮಾತೃದೇವೋಭವ', 'ಪಿತೃದೇವೋಭವ', 'ಆಚಾರ್ಯದೇವೋಭವ' 'ಅತಿಥಿ ದೇವೋಭವ'.ದೇವರಲ್ಲಿ ಭಕ್ತಿಯನ್ನಿಟ್ಟು ಹೇಗೆಆರಾಧಿಸುವಿಯೋ ಹಾಗೆಯೇ ಆಚಾರ್ಯ, ಅತಿಥಿ, ಪಿತೃ, ಮಾತೃ ಮೊದಲಾದವರಲ್ಲಿ ಶ್ರದ್ಧೆಯನ್ನಿಟ್ಟು ಉಪಾಸನೆ ಮಾಡು ಎಂದು ಹೇಳುವ ಪ್ರಸಂಗದಲ್ಲಿ ಮಾತೃವಿಗೇನೇ ಪ್ರಥಮ ಸ್ಥಾನಕೊಟ್ಟು ತೈತ್ತರೀಯೋಪನಿಷತ್ತಿನ ಪ್ರಥಮ ಶಿಕ್ಷಾದಲ್ಲಿ ಹೇಳಲಾಗಿದೆ. ಪಿತೃ, ಆಚಾರ್ಯ, ಅತಿಥಿಗಳೆಲ್ಲರಿಗಿಂತಲೂ ಮಾತೃ ಸ್ಥಾನವೇ ಮೇಲೆಂದು ತಿಳಿದು ಬರುವದು.

"ನಮಾತುರ್ದೈವತಂ ಪರಂ"
''ಸಹಸ್ರಂತು ಪಿತೃನ್ಮಾತಾ ಗೌರವೇಣಾತಿರಿಚ್ಯತೇ"

ಹೆತ್ತು, ಹೊತ್ತು ಎತ್ತಿ ಮುದ್ದಾಡಿಸುವ ಹೆತ್ತಮ್ಮನಿಗಿಂತಲೂ ಮಿಗಿಲಾದ ದೇವರಿಲ್ಲ. ಸಾವಿರ ತಂದೆಗಳಿಗಿಂತಲೂ ಓರ್ವತಾಯಿಯೇ ಮೇಲು ಎಂದು ಮುಂತಾಗಿ ಶ್ರುತ್ಯುಕ್ತಿಗಳು ಹೆತ್ತಮ್ಮನ ಉತ್ತಮಿಕೆಯನ್ನು ಸಾರಿಹೇಳುತ್ತಲಿವೆ.

ಉಪನಿಷತ್ತಿನಲ್ಲಿ ಇಂದ್ರಸೇನಾ, ಸುಧಾ, ಅಗಸ್ತ್ಯಭಗಿನಿ, ಅಪಾಲಾ, ಅದಿತಿ,ಮುಂತಾದ ೨೬ ಮಹಿಳೆಯರು ಬ್ರಹ್ಮವಾದಿನಿಯರಿದ್ದರೆಂದು ಉದಹರಿಸಲ್ಪಟ್ಟಿದೆ. ದಿವ್ಯಜ್ಞಾನಿಗಳಾದ ಯಾಜ್ಞವಲ್ಕ್ಯರು ಐಹಿಕಸಂಪತ್ತನ್ನು ತನ್ನ ಈರ್ವರು ಸತಿಯರಿಗೆ ಹಂಚಿಕೊಟ್ಟು ಮನೆಯಿಂದ ಹೊರಹೊರಟು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸುವ ಪ್ರಸಂಗದಲ್ಲಿ ಆಧ್ಯಾತ್ಮದತ್ತ ಒಲವುಳ್ಳ ಸತಿ ಮೈತ್ರೇಯಿಯು ಪತಿದೇವನನ್ನು ಕುರಿತು, ಪ್ರಾಣನಾಥ, ಐಹಿಕ ಸಂಪತ್ತನ್ನು ಸಹೋದರಿಗೆ ಹಂಚಿಕೊಡಿರಿ. ಆಧ್ಯಾತ್ಮಿಕ ಸಂಪತ್ತನ್ನು ನನಗೆ ದಯಪಾಲಿಸಿರಿ ಎಂದು ಪ್ರಾರ್ಥಿಸಿ ಮುಮುಕ್ಷುವಾಗಿ, ಶಿಷ್ಯಳಾಗಿ ಪತಿಯ ಬೆಂಬತ್ತಿ ಹೋದುದು ಮನನೀಯ ಸಂಗತಿಯಾಗಿದೆ.

ಹೆಣ್ಣಿನಿಂದಲೆ ಇಹವು ಹೆಣ್ಣಿನಿಂದಲೆ ಪರವು ।
ಹೆಣ್ಣಿನಿಂ ಸಕಲ ಸಂಪದವು । ಜಗದಲ್ಲಿ ।
ಹೆಣ್ಣೊಲ್ಲದಣ್ಣಗಳು ಯಾರು ಸರ್ವಜ್ಞ ॥

ಹರನ ಶಿರವನು ಮೆಟ್ಟಿ ಹರಿಯ ಉರವನು ಏರಿ ।
ಸರಸಿಜೋದ್ಭವನ ಮೊಗಗೆಡಿಸಿ । ಮೀರಿದಳು ।
ಹಿರಿಯರಿನ್ನಾರು ಸರ್ವಜ್ಞ ॥

ಇವೇ ಮುಂತಾದ ಸರ್ವಜ್ಞನ ಸಿಡಿಲ್ನುಡಿಗಳು ಹೆಣ್ಣಿನ ಆಧಿಕ್ಯವನ್ನು ಸಾರುತ್ತವೆ.

ಶುದ್ಧ ಸತ್ವಗುಣ ಸಂಪನ್ನರಾದ ಓಂಕಾರಶೆಟ್ಟಿ, ಲಿಂಗಮ್ಮನವರ ಮನೆಗೆ ಗುರು ಲಿಂಗ ಶಿವಾಚಾರ್ಯರು ದಯಮಾಡಿಸಿದರೆ ತಮೋಗುಣಪ್ರಧಾನರಾದ ಮಮಕಾರ

ಭೂಪಾಲ ಮೋಹಿನೀದೇವಿಯರ ಮನೆಗೆ ವಂಶಗುರುಗಳಾದ ಅಹಂಕಾರಾಚಾರ್ಯ
ಮಿಸುವರು. ಆಗ ಮಹಾರಾಜ ಮಹಾರಾಣಿಯರು ತಮ್ಮ ಮಗಳೊಡನೆ ಬಂದು
ಳಿಗೆ ಕೈಮುಗಿದು ಮಾಯಾದೇವಿಗೆ ತಕ್ಕ ವರನು ಸಿಕ್ಕುವ ಬಗೆಗೆ ವಿಚಾರಿಸಲು
ದ್ರಿಕ ಶಾಸ್ತ್ರದಲ್ಲಿ ತಜ್ಞರಾದ ಗುರುಗಳು ಮಾಯಾದೇವಿಯ ಹಸ್ತರೇಖೆಯನ್ನು
ಇವಳು ಕಾರಣಕನ್ಯೆಯು. ಇವಳಿಗೆ ಸುರರು ನರರು, ವರವಾಗುವದಿಲ್ಲ, ಇವಳ
ಹರನೇ ! ಮಾಮರದ ಚಿಗಿತ್ತ ತಳಿರು ಕೋಗಿಲೆಗೆ ಸಲ್ಲುವದಲ್ಲದೇ ಕಾಗೆಗೆ ಸಲ್ಲು
ಪಾವನ ಕ್ಷೀರವು ನೀರಕ್ಷೀರಗಳನ್ನು ಬೇರ್ಪಡಿಸುವ ರಾಜಹಂಸಕ್ಕೆ ಯೋಗ್ಯವಲ್ಲ
ಮೇಲಣ ಹೊಲಸು ತಿನ್ನುವ ನೀರಗೋಳಿಗೆ ಯೋಗ್ಯವೇ? ಪೂಗಳ ಕಂಪು ಗಗನ
ದಲ್ಲಿ ಹಾರಾಡಿ ಝೇಂಕರಿಸುವ ಆರಡಿಗೆ ಯೋಗ್ಯವಲ್ಲದೇ ಕಡಜೇರಿಗೆಯು
ಯೋಗ್ಯವೇ? ಎಂದು ಹೇಳಲು, ಸದ್ಗುರುವೇ ನನ್ನ ಮಗಳಿಗೆ ಶಿವನೇ ಪತಿಯಾಗು
ಹೇಳಿದಿರಿ, ಆ ಶಿವನು ಮಾನವರಾದ ನಮಗೆ ಒಲಿಯುವ ಪರಿಯೆಂತು? ಎಂದು
ಶಿವನು ಭಕ್ತಿಪ್ರಿಯನು. ''ಭಕ್ತೇರಸಾಧ್ಯಂ ನಹಿಕಿಂಚಿದಸ್ತಿ" "ಭಕ್ತಿಃ ಕಿಂ ಕನ
ಹೋ ವನಚರೋ ಭಕ್ತ್ಯಾವತಂಸಾಯತೇ'' ಕಾಡು ಮೃಗಗಳ ಬೇಟೆಯಾಡುವ
ಭಕ್ತಿಯ ಮಹಿಮೆಯಿಂದ ಸದ್ಭಕ್ತ ಶಿರೋಮಣಿಯಾಗಿ ಕೈಲಾಸ ಪಡೆದಿರುವನು.
ಭಕ್ತಿಯಿಂದ ಶಿವನ ಪೂಜೆ ಮಾಡಿದರೆ ಶಿವನು ನಿಮ್ಮ ಅಭೀಪ್ಸೆಗಳನ್ನು ದಯಪಾಲಿಸು
ಎಂದು ಅಪ್ಪಣೆ ಮಾಡಿದರು.

ಇತ್ತ ಮಾಯಾದೇವಿಯು ಗುರ್ವಾಜ್ಞೆಯ ಪ್ರಕಾರ ತನಗೆ ಅನುರೂಪನಾದ
ಬಂದು ಪಾಣಿಗ್ರಹಣ ಮಾಡಬೇಕೆಂದು ಬಯಸಿ ಸಕಾಮಭಕ್ತಿಯಿಂದ ಸಕಲಸಿ
ಸಾಪ ಮಧುಕೇಶ್ವರನನ್ನು ಅಷ್ಟವಿಧಾರ್ಚನೆ, ಷೋಡಶೋಪಚಾರಗಳಿಂದ ಪ್ರ
ಪೂಜೆ ಮಾಡಹತ್ತಿದಳು.

ಮತ್ತು ೫ನೆಯ ಗತಿ
೪ ನೆಯ ಗತಿ

## ಮಾಯೆ ಮಧುಕನಾಥನ ಪೂಜಿಸಿದುದು

ಮನಸಿಜನ ಮನೆದೇವಿ, ಕುಸುಮಾಸ್ತ್ರನ ಕುಲೋತ್ತಮೆ, ಕಾಮನ ಭುಜಾಗ್ರದ ವಿಜಯಲಕ್ಷ್ಮೀ, ಅನಂಗನ ಅಧಿದೈವ, ಕಂದರ್ಪನ ಕರಾಸಿಯ ವೀರಸಿರಿಯೆನಿಪ ಮಾಯಾದೇವಿಯನ್ನು ಕಾಮರೇಖೆ, ಮದಮಾನಿ, ಭೋಗಿ, ಲೋಭಿಣಿ, ರಾಗಿ, ಪ್ರೇಮಕಾರಿಣಿ, ಕಳಾವಿಳಾಸಿನಿ ಮೊದಲಾದ ಸಖಿಯರೆಲ್ಲರೂ ಕೂಡಿ ನವರತ್ನ ಖಚಿತ ಓಲೆಗಳು, ವಜ್ರ ದುಂಗುರ, ಕನಕಕಂಕಣ, ಮುತ್ತಿನ ಹಾರ, ಮೂಗುತಿ ಮುಂತಾದ ಅತ್ಯಮೂಲ್ಯ ಅಲಂಕಾರಗಳಿಂದ ಸಿಂಗರಿಸಿದನಂತರ ಆಕೆಯು ಪಾದ್ಯ, ಅರ್ಘ್ಯ, ಆಚಮನ, ಪಂಚಾಮೃತ, ಧೂಪ ದೀಪ, ದರ್ಪಣ, ಛತ್ರ, ಚಾಮರ, ಪಾರಿಜಾತಾದಿ ಸುಗಂಧ ಕುಸುಮ, ಷಡ್ರಸನೈವೇದ್ಯ, ತಾಂಬೂಲ ಮುಂತಾದ ವಿವಿಧ ಪೂಜಾ ಸಾಹಿತ್ಯದೊಡಗೂಡಿ ಹೊಂಗಳಸದಿಂದ ಕಂಗೊಳಿಸುವ ಮಧುಕೇಶ್ವರ ದೇವಾಲಯಕ್ಕೆ ಬಂದಳು. ಕಾಮಿತಾರ್ಥ ಪ್ರದನಾದ ಮಧುಕೇಶ್ವರನಿಗೆ ಮೈಯಿಕ್ಕಿ ಭಕ್ತಿರಸವುಕ್ಕಿ, ಷೋಡಶೋಪಚಾರಗಳಿಂದ ಸಾಂಗೋಪಾಂಗವಾಗಿ ಪೂಜಿಸಿ ಪ್ರದಕ್ಷಿಣೆ ಮಾಡಿ, ನೋಡಿ, ನಲಿದಾಡಿ, ಕುಣಿದಾಡಿದಳು. ವಿಧಿಪೂರ್ವಕ ಮಧುಕೇಶ್ವರನ ಪೂಜೆಯಾದ ನಂತರ ಮಾಯಾದೇವಿಯು ಮಧುಕೇಶ್ವರನು ತಲೆದೂಗುವಂತೆ ಕೋಕಿಲ ಕಂಠದಿಂದ ಮಧುರಗಾನವನ್ನು ಮಾಡಿದಳು.

ಮಾಯದೇವಿ, ತನಗೆ ಅನುರೂಪನಾದ ಇನಿಯನು ದೊರೆಯಬೇಕೆಂಬ ಸಕಾಮ ಭಕ್ತಿಯಿಂದ ಪ್ರತಿದಿನವೂ ಘನಮಹಿಮನಾದ ಮಧುಕೇಶ್ವರನನ್ನು ಪೂಜಿಸುತ್ತಿರಲು ಇತ್ತ ನಿರ್ಗುಣ, ನಿರುಪಮ, ನಿರವಯವ, ನಿರಂಜನನೆನಿಸಿದ ಅಲ್ಲಮಪ್ರಭುವು–

ಕಂಗಳಲಿ ನಡೆನೋಡಿದೊಡೆ ಹೆರೆ
ಹಿಂಗಬಾರದ ಚೆಲುವ ಮುಖದ ಸು ।
ರಂಗಸೂಸುವ ದಂತಪಂಕ್ತಿಯ ತೊಳಪ ಕಣ್ಣಿಗಳಾ ।
ಅಂಗವಟ್ಟದ ಸರಳಿಕೆಯ ಹ ।
ಸ್ತಂಗಳಂಘ್ರಿಯ ಕೋಮಳದ ಸ ।
ರ್ವಾಂಗ ಭಂಗಿಯ ಸೌಮ್ಯತೆಯ ಧರಿಸಿದನು ಪ್ರಭುರಾಯಾ ॥

ಕಾಮಿತಾರ್ಥವನೀಯ ಬೇಹುದು ।
ಕಾಮಿನಿಗೆ ತಾನವಳು ಕಾಮ ।
ಪ್ರೇಮಭಕ್ತಿಯ ಮಾಡಿದುದು ಕಾರಣದಲೆಂದೆನುತ ।
ಆ ಮಹಾಮಹಿಮ ಸ್ವರೂಪ ಸ ।
ನಾಮವನು ಮರೆಮಾಡಿಯಭಿನವ ।
ಕಾಮರೂಪಿನ ಪರಿಯನಲ್ಲಮಲಿಂಗ ಧರಿಸಿದನು ॥

ಸಕಾಮ ಭಕ್ತಿಯಿಂದ ಪೂಜೆಮಾಡುವ ಕಾಮಿನಿಗೆ ಕಾಮಿತಾರ್ಥವನೀಯಬೇಕು ಬಯಸಿ ತಾನು ಸಂಗಿಯಾಗಿರ್ದು ನಿಸ್ಸಂಗಿಯಾಗಿರ್ಪ ಪರಿಯನು ಅಂಗನೆಗೆ ತೋರ್ಪ ಕೆಂದು ವಿಚಾರಿಸಿ ಅಲ್ಲಮನು ಅಭಿನವ ಕಾಮನೋ ಎನ್ನುವಂತಹ ಸುಂದರ ರೂಪ ಧರಿಸಿ ಮಧುಕೇಶ್ವರನ ಮಂದಿರದ ಮುಂದೆ ನಿಂತು ಕೇಳುವವರೆಲ್ಲ ಬೆರಗಾಗು ಹಲವಂದದಲಿ ಮದ್ದಳೆಯನ್ನು ಬಾರಿಸಿದನು.

ಅದೇ ತಾನೇ ಮಧುಕೇಶ್ವರನ ಪೂಜೆಮಾಡಿ ಶಿವಪ್ರಸಾದವ ಕೈಕೊಂಡು ಗು ಗುಡಿಯಲ್ಲಿ ಕುಳಿತ ಮಾಯಾದೇವಿಯು ಗುಡಿಯ ಮುಂಬದಿಯಲ್ಲಿ ಚೆನ್ನಿಗನಾದ ಮನು ನುಡಿಸುವ ಮದ್ದಳೆಯ ದನಿಯನ್ನು ಕೇಳಿ–

ಕಾರಮುಗಿಲಿನ ಗರ್ಜನೆಯು ಕಿವಿಯಾರೆ ಕೇಳುವ ನವಿಲಿನಂತಾಯ್ತು ಮಾಯಾಂಗನೆ ಸ್ಥಿತಿ. ಮದ್ದಳೆಯ ಇಂಪಾದ ಸೊಂಪಾದ ದನಿಗೆ ಮನಸೋತಳವಳು. ಸಖಿಯರ ಕಳಿಸಿ ಅಲ್ಲಮನನ್ನು ರಂಗಮಂಟಪಕ್ಕೆ ಬರಮಾಡಿಕೊಂಡಳು. ಅಭಿನವ ಕಾಮನಂತಿ ಅಲ್ಲಮನ ರೂಪಲಾವಣ್ಯಗಳನ್ನು ನೋಡಿ ಮೋಹಿಸಿ ಮಾಯಾಂಗನೆಯು ಕಾಮ ಪೀಡಿತಳಾಗಿ ಕಂಗೆಟ್ಟಳು.

ಆವದೇಶದ ಪುರುಷನೈ ನಿನ ।
ಗಾವ ಹೆಸರೈ ನೀನು ನೆಲೆಗ್ಗೊಂ ।
ಡಾವ ಠಾವಿನಲಿಪ್ಪೆಯೈಯೆಂದೆನುತ ವಿನಯದಲಿ ।

ಚೆನ್ನಿಗನೇ ನೀನಿರುವ ದೇಶವಾವುದು ? ನಿನ್ನ ಹೆಸರೇನು ? ನೀನು ಯಾವ ಠಾ ಠುವೆ ? ಎಂದು ಕೇಳಲು ಅಲ್ಲಮನು -

ದೇಶವೆಮ್ಮದು ಹೇಳುವೊಡೆ ಪರ ।
ದೇಶ ಬಿರಿದಿನ ಬಿಂಕಕಾರರ ।
ವಾಸಿಗರ ನಲ್ಲೆ ನಿಸುವಲ್ಲಮನೆಂಬ ಪೆಸರೆನಗೆ ॥
ಲೇಸು ಮಾಡುವಠಾವುಗಳಲಬ್ಧಿ ।
ಲಾಷೆಯಿಲ್ಲದೆ ಹೊದ್ದುವೆವು ಸುಖ ।
ವಾಸಿಗಳು ನಾವೆಂದನಲ್ಲಮನೊಲಿದು ಸತಿಯರಿಗೆ ॥

ಮಾನಿನಿಯರೇ ನಾವಿರುವದು ಪರದೇಶದಲ್ಲಿ; ಅಂದರೆ ಇಂಗ್ಲಂಡ, ಅಮೇರಿಕಾ ದೇಶ ಅಲ್ಲ; ಇಲ್ಲಿ ಪರದೇಶವೆಂದರೆ–

" – – – – ತಸ್ಯಾಃ ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ ।
ಸಬ್ರಹ್ಮಾ ಸಶ್ಶಿವಸ್ಸಹರಿಃ ಸಃ ಅಕ್ಷರಃ ಪರಮಸ್ಸ್ವರಾಟ್"

"ಪಶ್ಚಿಮಗಿರಿಯಲ್ಲಿ ಚಿತ್ಸೂರ್ಯನುದಯವಾದುದ ಕಂಡೆ" — — – ಮುಂತಾಗಿ ಉಪನಿಷತ್ಕಾರರ ಹಾಗು ವಚನಕಾರರ ಅಮೃತೋಕ್ತಿಯಂತೆ ನಿರಂಜನ, ನಿರ್ಗುಣ

ವಸ್ತುವು ಇರುವ ಸ್ಥಾನವು ಆ ಶಿಖಾಚಕ್ರವೇ ಪರದೇಶವು. ಭಾರತದೇಶ, ಭಾರತಾಂತರ್ಗತ ಕರ್ನಾಟಕ,ಆಂಧ್ರ ಮೊದಲಾದ ನಾಡುಗಳಾಗಲಿ ಇಂಗ್ಲಂಡ ಅಮೇರಿಕಾ ವಿದೇಶಗಳಾಗಲಿ ನನ್ನವಾಗಿರದೇ ಆ ಶಿಖಾಚಕ್ರವೇ ನನ್ನದೇಶವು. ಆ ದೇಶದಲ್ಲಿರುವದರಿಂದಲೇ ನನಗೆ ಪರದೇಶಿ ಎಂದು ಕರೆಯುವರು. ನನ್ನ ದೇಶವು ಪರದೇಶವಾದರೂ ಸಹ ಲೇಸಾದ ಭಕ್ತರ ಲೇಸಾದ ಭಕ್ತಿಯ ಕೈಕೊಳ್ಳುತ್ತ ಲವಲೇಶವೂ ಅಭಿಲಾಷೆಯಿಲ್ಲದೆ ಅವರಲ್ಲಿ ವಾಸ ಮಾಡಿ ಅವರಿಗೆ ಲೇಸನೇ ಮಾಡುತ್ತಲಿರುವೆನು. ಯಾರು ದುರಭಿಮಾನ ದುರಹಂಕಾರಗಳಿಂದ ನನಗಾರು ಸರಿಯೆಂದು ಎದೆಯನ್ನುಬ್ಬಿಸಿ ಸೆಟೆದು ನಿಲ್ಲುವರೋ ಅವರ ದುರಭಿಮಾನ ದುರಹಂಕಾರಗಳನ್ನು ಅಲ್ಲಗಳೆಯುವದರಿಂದ ನನ್ನನ್ನು ಅಲ್ಲಮನೆಂಬ ಹೆಸರಿನಿಂದ ಕರೆಯುವರು ಎಂದು ಹೇಳಲು ಕಾಮರೇಖೆ ಮೊದಲಾದ ಗೆಳತಿಯರು ಬಲ್ಲಿದನಾದ ಅಲ್ಲಮನೇ ನೀನು ಹೇಳಿದ ಮಾತುಕೇಳಿ ಪರಮ ಸಂತೋಷವಾಯಿತು. ಅಲ್ಲಲ್ಲಿಗೆ ಎಲ್ಲಿಗೂ ಹೋಗದೇ ಇಲ್ಲಿಯೇ ಮನಬಂದ ಪರಿಯಲ್ಲಿ ಸುಖವಾಗಿದ್ದು ಮಾಯಾದೇವಿಗೆ ಎಲ್ಲ ನಾಟ್ಯವಿದ್ಯೆಯನ್ನು ಕಲಿಸು ಎಂದು ಹೇಳಿ ಹೊಂಬಟ್ಟಲಲ್ಲಿಟ್ಟ ತಾಂಬೂಲವನ್ನು ಮಾಯಾದೇವಿಯ ಕೈಯಿಂದ ಅಲ್ಲಮನಿಗೆ ಕೊಡಿಸಿದರು. ಅಲ್ಲಮನು ವೀಳೆಯವ ತಕ್ಕೊಂಡು ಈ ಮಾಯೆಯು ಏನು ಮಾಡುವಳೋ ನೋಡಬೇಕೆಂಬ ತವಕದಿಂದ ಪ್ರೀತಿಯನ್ನು ಮಾಡುವ ಹೋ ಏನೋ ಎಂಬುವಂತೆ ನಟಿಸುತ್ತಿರಲು ಮಾಯೆಯು ಮಧುಕೇಶ್ವರನಿಗೆ ಶರಣು ಮಾಡಿ ಅರಸನಪ್ಪಣೆಯಂತೆ ಅಲ್ಲಮನನ್ನು ಕರೆದುಕೊಂಡು ನಾಟ್ಯಶಾಲೆಯಲ್ಲಿ ಒಂದು ಸ್ಥಾನವನ್ನು ಏರ್ಪಡಿಸಿ ಅವನ ಹಿರಿಯತನದಲ್ಲಿ ನಾಟ್ಯವಿದ್ಯೆಯನ್ನು ಕಲಿಯಲಾರಂಭಿಸಿದಳು.

> ಎನಲು ಕನ್ಯಾಭಾವಭಂಗಿಯ ।
> ಘನದ ನಾಚಿಕೆಯೊಂದು ನೆಟ್ಟನೆ ।
> ಜನಪತಿಯ ಮಗಳೆಂಬ ಹೆಕ್ಕಳ ಹೆಮ್ಮೆ ತಾನೆರಡು ।
> ತನಗೆ ಸಮ ಸಂಪ್ರಾಪ್ತನಲ್ಲದ ।
> ಮನುಜಗಳುಪಿದೆನೆಂಬ ಮರವೆಯ ।
> ಘನತೆ ಮೂರಿವಕಳುಕಿ ನಾಚುತಲಿರ್ದಳಾಮಾಯೆ ॥

ತಾನು ಕನ್ನೆಯಾದುದರಿಂದ ಮನದಲ್ಲಿದ್ದುದನ್ನು ಹೊರಗೆ ಬಾಯಿಬಿಚ್ಚಿ ಹೇಳದೇ ಮುಚ್ಚಿಕೊಂಡಿರುವ ನಾಚಿಕೆಯ ಸ್ವಭಾವ ಒಂದು, ಅಷ್ಟೈಶ್ವರ್ಯದಲ್ಲಿ ಮೆರೆಯುವ ರಾಜಕುಮಾರಿಯು ಎಂಬ ಹೆಮ್ಮೆಯೊಂದು. ನಂತರ ಎಲ್ಲ ವಿಧದಿಂದಲೂ ನನ್ನಗೆ ಸರಿಸಮಾನನಲ್ಲದ ಓರ್ವ ಸಾಮಾನ್ಯ ಮದ್ದಳೆಗಮನುಜನಿಗೆ ಮೋಹಿಸಿದೆನೆಂಬುದು ಮತ್ತೊಂದು ಹೀಗೆ ಮೂರಕ್ಕೆ ಅಳುಕಿ ಕೊರಗಿ ಮರುಗಿದಳು. "ಕಾಮಾತುರಾಣಾಂನ ಭಯಂನಲಜ್ಜಾ" ಎಂಬಂತೆ ಮಾಯೆಯು ಎಲ್ಲವನ್ನು ಮರೆತು ಅಲ್ಲಮನಲ್ಲಿ ಅನುರಕ್ತಳಾದಳು.

ಮಾಯೆಯು ಅಲ್ಲಮನ ರೂಪಲಾವಣ್ಯಕ್ಕೆ ಮೋಹಿಸಿ ಕಾಮುವಶಳಾದುದನ್ನು ಕಾಮರೇಖೆ, ಕಲಾವಿಲಾಸಿನಿ ಮೊದಲಾದ ಗೆಳತಿಯರು ಊಹಿಸಿದ್ದರು, ಬಲ್ಲಿದನಾದ ಅಲ್ಲಮನ ಸಲ್ಲೀಲೆ

ಯನ್ನರಿಯದ ಮಾಯೆಯು ಕ್ಷುಲ್ಲಕತನದಿಂದ ಅವನನ್ನು ವಶಮಾಡಿಕೊಳ್ಳ
ಹವಣಿಸಿದಳು. ಅವಳ ಬಯಕೆ ಕೈಗೂಡದೆ ಬಯಲಾಗಿ ಹೋಯಿತು.

ಸುಧೆಯ ಸೋನೆಯ ಸುರಿಯುತಿಹಕಾ ।
ಲದಲಿ ತೃಪ್ತಿಯ ನೆಯ್ದಲರಿಯದೆ ।
ಕ್ಷುಧೆಗೆ ತೃಷೆಗಳ ಮಾಡಿ ಕೋಟಲೆಗೊಂಬ ಮರುಳಂತೆ ।
ಮುದವನಲ್ಲಮ ಕರುಣಿಸಿದ ಕಾ ।
ಲದಲಿ ನಿತ್ಯವನರಿಯಲರಿಯದೆ ।
ಕುದಿದು ಕೋಟಲೆಗೊಳುತಲಿರ್ದಳು ಮಾಯೆ ಬೇಟದಲಿ ।

ನಿತ್ಯ ಸಂತೃಪ್ತಿಯನ್ನೇ ಕೊಡುವ ಅಮೃತಧಾರೆ ಇರುತ್ತಿರಲು ಅದನ್ನು ಬಿಟ್ಟು
ನೀರನ್ನು ಕುಡಿಯುವ ಬೆಪ್ಪನಂತೆ ನಿತ್ಯಾನಂದವನ್ನೇ ಅನುಗ್ರಹಿಸುವ ಅಲ್ಲಮನನ್ನ
ಭಂಗುರದ ಸುಖಕ್ಕಾಗಿ ಹಾತೊರೆದಳು. ಕಾಮಾತುರಳಾದ ಮಾಯೆಯ ಮನದ
ವನ್ನರಿತ ಗೆಳತಿಯರು–

ಅಂದಿನಿರುಳಿನಲಾರುವರಿಯದ ।
ಛಂದದಿಂದಲಿ ಬಳಿಕ ಸಜ್ಜಾ ।
ಮಂದಿರಕೆ ಸಡಗರಿಸಿ ಮಾಯೆಯನಲ್ಲಮನನೊಲಿದು ।
ತಂದು ಬಿಜಯಂಗೈಸಿದರು ಬಳಿ ।
ಕಿಂದು ಮುಖಿಯರು ತಮವ ತರಣಿಯ ।
ನೊಂದು ಮಾಡುವೆವೆಂಬ ಭಾವಭ್ರಮಿತ ಬುದ್ಧಿಯಲಿ ॥

ವರ್ಣ, ಗುಣ, ಕ್ರಿಯಾದಿಗಳಿಂದ ಕತ್ತಲೆ ಬೆಳಕುಗಳು ಬೇರೆ ಬೇರೆಯಾಗಿದ್ದು
ಒಂದೆಡೆ ಕೂಡುವದು ಸಾಧ್ಯವಿಲ್ಲದಿದ್ದರೂ ಅವನ್ನು ಒಂದು ಮಾಡುವ
ಮರುಳರಂತೆ ತಾಮಸೀ ಮಾಯೆಯನ್ನು ಮತ್ತು ಚಿತ್ಪ್ರಭೆಯುಳ್ಳ ಪ್ರಭುವನ್ನು
ದಲ್ಲಿ ಕೂಡಿಸಿದರು.

" ಸಾಮಾನಾಧಿಕರಣ್ಯಂಹಿ ತೇಜಸ್ತಿಮಿರಯೋಃ ಕುತಃ "
ಎಂಬುಕ್ತಿಯಂತೆ ಅನ್ಯೋನ್ಯ ಭಿನ್ನ ಭಿನ್ನ ಧರ್ಮವುಳ್ಳ ಕತ್ತಲೆ ಬೆಳಕುಗಳು ಎಂದಿಗಾ
ಒಂದೆಡೆಗೆ ಹೊಂದಿಕೊಂಡಿರುವವೇ ?

ದೇವದಾನವ ಮಾನವರುಗಳ ಡಾವಣಿಯ ದನಮಾಡಿ ಕಟ್ಟುವ, ಸಕಲ
ಗಳ ಸಾರವ ಹೀರಿ ಹಿಪ್ಪೆಯಮಾಡಿ ಉಪ್ಪೆಂದು ಊದುವ ಮಾಯೆಯು ವಿರಾಗಿ
ಅಲ್ಲಮಪ್ರಭುವನ್ನು ಒಲಿಸಿಕೊಳ್ಳಲು ಬಗೆಬಗೆಯ ಹಾವಭಾವಗಳಿಂದ
ಚೇಷ್ಟೆಯನ್ನು ಮಾಡಿದಳು. ಕಾಮುಕ ದೃಷ್ಟಿಯಿಂದ ನೋಡಿದಳು. ಇಂಪಾದ
ಹಾಡಿದಳು, ಯಾವ ಆಟ ಹೂಡಿದರೂ ತಾನು ಕೊಡುವ ಆಶೆ ಕೈಗೂಡಲಿಲ್ಲ.

"ಎಸೆಯದಿರು ಎಸೆಯದಿರು ಕಾಮ ನಿನ್ನ ಬಾಣ, ಹುಸಿಯಲೇಕೋ
ಕಾಮ ಕ್ರೋಧ ಲೋಭ ಮೋಹ ಮದ ಮತ್ಸರ ಇವು ಸಾಲವೇ
ನಿನಗೆ ? ಗುಹೇಶ್ವರ ಲಿಂಗದ ಬರಹದಲ್ಲಿ ಬೆಂದವರ
ಮರಳಿಸುಡುವದುಂಟೇ ಮರುಳ ಕಾಮಾ ? "

ಲಿಂಗದವಿರಹದಲ್ಲಿ ಬೆಂದ ಅಲ್ಲಮನು ಅನಂಗನ ವಿರಹದಲ್ಲಿ ಕಂಗೆಟ್ಟ ಅಂಗನೆಯ ಸುಖಕ್ಕೆ ಎಳಸುವನೇ ?

ಬಯಲು ಬಯಲನೆ ಬಿತ್ತಿ, ಬಯಲು ಬಯಲನೆ ಬೆಳೆದು,
ಬಯಲು ಬಯಲಾಗಿ ಬಯಲಾಯಿತಯ್ಯ,
ಬಯಲ ಜೀವನ, ಬಯಲ ಭಾವನೆ,
ಬಯಲು ಬಯಲಾದ ಗುಹೇಶ್ವರ "

" ಇದ್ದು ಬದ್ಧನಲ್ಲ, ಸುಳಿದು ಸೂತಕಿಯಲ್ಲ " " ನಡೆದು ನಿರ್ಗಮನ, ನುಡಿದು ನಿಶ್ಶಬ್ದ " ಕಾಲಿಲ್ಲದ ಗಮನ, 'ಕೈಯಿಲ್ಲದ ಸೋಂಕು. ಬಾಯಿಯಿಲ್ಲದರುಚಿ" ಮೊದಲಾದ ಮುತ್ತಿನಂತಹ ಮಾತುಗಳ ಪ್ರಕಾರ ಅಲ್ಲಮಪ್ರಭುವು ಮಾಯೆಯ ಸನಿಹದೊಳಿದ್ದಂತೆ ಕಂಡರೂ ನೇಹಹತ್ತದ ನಾಲಗೆಯಂತೆ, ಹುಡಿಹೊದ್ದದ ಗಾಳಿಯಂತೆ, ಕಾಡಿಗೆ ಸೋಂಕದ ಕನೀನಿಕೆಯಂತೆ, ಮಳೆಗರೆದರೆ ನೆನೆಯದ, ಗಾಳಿ ಬೀಸಿದರೆ ಹಾರದ, ಕಿಚ್ಚು ಹಚ್ಚಿದರೆ ಸುಡದ ಆಕಾಶದಂತೆ ನಿರ್ಲಿಪ್ತನಾಗಿದ್ದನು. ಇದ್ದೂ ಇಲ್ಲದಂತಿರುವ, ನುಡಿದೂ ನಿಶ್ಶಬ್ದವಾಗಿರುವ, ನಡೆದೂ ನಿರ್ಗಮನನಾಗಿರುವ, ಒಡಲುವಿಡಿದೂ ಒಡಲುವಿಡಿಯದಂತಿರುವ ಅಲ್ಲಮನೆತ್ತ ? ಇಲ್ಲದಿದ್ದರೂ ಇದ್ದಂತೆ ತೋರುವ, ನಡೆ-ನುಡಿ ಒಡಲುಗಳ ಬೆಡಗಿನಿಂದ ಕ್ಷಣಕಾಲ ರಮಣೀಯವೆನಿಸಿ ತೋರುವ ಮಾಯೆಯೆತ್ತ ?

ಮದ್ದಳೆಯ ಬಾರಿಸುವ ಓರ್ವ ಸಾಮಾನ್ಯ ವೇಷಧಾರಿಗೆ ಮಾಯೆಯು ಮೋಹಿಸಿ ವಿರಹದಿಂದ ಕೊರಗುತ್ತಿರುವಳು ಎಂಬ ವಾರ್ತೆಯು ಊರತುಂಬ ನಿಮಿಷಾರ್ಧದಲ್ಲಿ ಹಬ್ಬಿತು. ಮಾಯಾದೇವಿಯೇ,ನಿನಗೆ ಪರಮಾತ್ಮನೇ ಪತಿಯಾಗುವನೆಂದು ರಾಜಮನೆತನದ ಗುರುಗಳಾದ ಅಹಂಕಾರಾಚಾರ್ಯರು ಹೇಳಿಲ್ಲವೇ ? ಸುಮ್ಮಸುಮ್ಮನೇ ಬೂಟಾಟಿಕೆಯ ಮಾಡುವ ಈ ವೇಷಧಾರಿಗೆ ಏಕೆ ಮನಸ್ಸುಮಾಡಿರುವೆ ? ಎಂದು ಸಕಲೆಮೊದಲಾದ ಗೆಳತಿಯರು ಹೇಳಿ – ನಾಟ್ಯಾಚಾರ್ಯನಾದ ಅಲ್ಲಮನಿಗೆ ನರ್ತಕಿಯರ ಸ್ಥಾನದಿಂದ ಮತ್ತೊಂದು ಸ್ಥಾನದಲ್ಲಿ ಇರಹೇಳಿ ಆಪ್ರಕಾರ ವ್ಯವಸ್ಥೆಮಾಡಿದರು. ಆಗ ಅಲ್ಲಮ ಪ್ರಭುವು–

''ಮಾಯೆಯುಗಲಿದ ಬಳಿಕ ಭಾವಿಸೆ ।
ಕಾಯವುಂಟೇ ಪೂರ್ಣವಾಗಿಹ ।
ವಾಯು ನಡೆವುದೆ ಕಾಲು ಕೈ ಕಣ್ಣುಗಳು ಮಿಡುಕುವವೇ ।
ಬಾಯನುಡಿ ಬೆವಹಾರ ಬೆಸನಗ ।
ಛಾಯತವು ಬಳಿಕುಂಟೆ ಕೇಳೌ ।
ಸಾಯದಂತಿರೆ ಸತ್ತೆ ನಾನಕಟೆಂದನಲ್ಲಮನು" ॥

"ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ ।
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ''
"ಆದಿ ಅನಾದಿ ಇಲ್ಲದಂದು, ಹಮ್ಮು ಬಿಮ್ಮುಗಳಿಲ್ಲದಂದು,
ಸುರಾಳನಿರಾಳವಿಲ್ಲದಂದು, ಶೂನ್ಯನಿಶ್ಶೂನ್ಯವಿಲ್ಲದಂದು
ಸಚರಾಚರವೆಲ್ಲ ರಚನೆಗೆ ಬಾರದಂದು
ಗುಹೇಶ್ವರನೊಬ್ಬನೇ ಇದ್ದೆಯಲ್ಲ ಇಲ್ಲದಂತೆ''

ಎಂಬ ಉಪನಿಷತ್ಪ್ರಮಾಣದಂತೆ ಪರಿಪೂರ್ಣನಾದ ನನಗೆ ಕಾಯ ಬಂದಿದೆ. ಕಾಯ ಬೆಂಬತ್ತಿ ಪಂಚಪ್ರಾಣವಾಯುಗಳು ಬಂದಿವೆ. ಅಂತಃಕರಣ ಚತುಷ್ಟಯ, ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೆಲ್ಲವೂ ಬಂದಿವೆ. ದೃಗ್ಗೋಚರವಾದೀ ಸಮುಸ್ತ ಜಗದ್ವ್ಯವಹಾರವೆಲ್ಲವೂ ಮಾಯೆಯಿಂದಲೇ ನಡೆಯುವದು. ''ಮಾಯಾಶಕ್ತಿವಶಾದೀಶಃ ನಾನಾ ಮೂರ್ತಿಧರಃ ಪ್ರಭುಃ'' ।

"ಅವಿದ್ಯಾಶಕ್ತಿ ಭೇದೇನ ಜೀವಾಬಹುವಿಧಾಃ ಸ್ಮೃತಾಃ ''
"ಶಕ್ತಿ ವೈಚಿತ್ರ್ಯತೋಭಾತಿ ನೀರೂಪಮಪಿ ರೂಪತಾಂ''

ನಿರಂಜನ, ನಿರಾಕಾರ, ನಿರವಯುವ, ಪರಾತ್ಪರವಸ್ತು; ಸಾಕಾರ, ಸಾವಯುವ, ಸಗುಣವಾ ಬೇಕಾದರೆ ಶಕ್ತಿಸಾನ್ನಿಧ್ಯದೀದಲೇ. ಮಾಯೆಯಿಲ್ಲದೆ ನಾನು ಹೇಗೆ ಬದುಕಲಿ ? ''ಸಾಯದಂತೆ ಸತ್ತೆ ನಾನಕಟ'' ಅಂದರೆ ನಾನು ಬದುಕಿಯೂ ಸತ್ತಂತೆ. ಇದಕ್ಕಿಂತ ಸಾಯುವದು ಲೇಸು. ಬದುಕಿ ಸತ್ತಂತೆ ಇರುವದು ಕರಕಷ್ಟ ಎಂದು ಹೇಳಿದನು. ನಿರಂಜನ ನಿಃ ಯವ ಪರವಸ್ತುವಿಗೆ ಬೆಲೆಯು ಶಕ್ತಿಸಾನಿಧ್ಯದಿಂದಲೇ ಬರುವದೆಂಬುದನ್ನು–

"ಪಾಲಿಸೆನ್ನನು ಪದುಳವೆರಸಿ ಪರಶಿವನಿಗತಿ । ಮೇಲೆನಿಪ ಸುಗುಣಸಂಪನ್ನೆಶರ್ವಾಣಿ"।
ಹೇಳಹೆಸರಿಲ್ಲದಭವನು ನಿನ್ನ ದೆಸೆಯಿಂದ ।
ಫಾಳಲೋಚನನೆನಿಸಿ ನಿಖಿಳ ನಿರ್ಜರರ ॥
ಮೇಳಕಧಿಪತಿಯಾದನೆಂದೊಡಾಗಮನಿಗಮ ।
ಜಾಲವೈದುವವೆ ನಿಜನುತಿಗೆ ನಗಜಾತೆ ॥"

''ಶರ್ವಂಗೆ ಸರ್ವಜ್ಞ ಸರ್ವೇಶ ಸರ್ವಾತ್ಮ ಸರ್ವಶಕ್ತಿತ್ವವಹುದಾರ ಬಲದಿನಾಸ ಮಂಗಳೆಗೆನತನಪ್ಪೆ'' ಎಂಬ ಪದ್ಯಗಳಲ್ಲಿ ಶ್ರೀಮನ್ನಿಜಗುಣ ಶಿವಯೋಗಿಗಳು ಸುಂದರವಾಗಿ ಹೇಳಿರುವರು.

ಇದ್ದೂಬದ್ಧನಲ್ಲದ, ಸುಳಿದೂ ಸೂತಕಿಯಲ್ಲದ ಬಲ್ಲಿದನಾದ ಅಲ್ಲಮನು ಹೇಳಿದ ಶಿವ ತತ್ವವನ್ನು ಗರ್ಭೀಕರಿಸಿಕೊಂಡಿರುವ '' ಮಾಯೆಯುಗಲಿದ ಬಳಿಕ ಕಾಯವುಂಟೆ! 'ಸಾಯದಂತಿರೆ ಸತ್ತೆನಾ, ಎಂಬ ಮಾತುಗಳ ಮರ್ಮವನ್ನರಿಯದೇ ಕೇವಲ ಸ್ಥೂಲಾರ್ಥವನ್ನೇಗ್ರಹಿಸಿ ಅಲ್ಲಮನು ಮಾಯೆಗೆಸೋತಿರುವನು ಎಂದು ಭ್ರಮಿಸಿ,ಅಲ್ಲಮನೇ ನಾಗವಾ ದಹೊರಭಾಗದಲ್ಲಿ ಬಿಡಾರವನ್ನು ಮಾಡಿಕೊಂಡು ಮಾಯೆಗೆ ನಾಟ್ಯವಿದ್ಯೆಯನ್ನು ಕಲಿಸ ಎಂದರೇನಾಯ್ತು, ಸೀವೀರ್ವರೂ ಕೂಡುವ ವಿಧಿಲಿಖಿತವಿದ್ದರೆ ಅದನ್ನು ತಪ್ಪಿಸುವದು ಯಾರಿಂದಲೂ ಸಾಧ್ಯವಿಲ್ಲ, ಎಂದು ಸಕಳೆಯು ಹೇಳಿ ಯುಕುತಿಯಿಂದ ಜಾರಿ ಕಡೆಗಾದರು ಅಲ್ಲಮನು ಮಧುಕೇಶ್ವರನ ಮುಂಭಾಗದಲ್ಲಿ ದಿನದಿನವೂ ಮದ್ದಳೆಯ ಸೇವೆಮಾಡುತ್ತ ಸಕಳೆ ಮೊದಲಾದಸತಿಯರ ಹೇಳಿಕೆಯಂತೆ ಮಾಯಾಂಗನೆಗೆ ನಾಟ್ಯವಿದ್ಯೆಯನ್ನು ಕಲಿಸಹತ್ತಿದನು

## ೬ ನೆಯ ಗತಿ

# ವಿಮುಳೆ ಬಂದದು

ಪ್ರಜಾಕೋಟಿಯ ಹಿತಚಿಂತನೆ ಮಾಡುವ ಮುಖ್ಯಮಂತ್ರಿ, ಸಚಿವ ಸಂಪುಟ, ಜನತೆಯಿಂದ ಆಯ್ಕೆಯಾಗಿ ಹೋದ ಶಾಸಕರು, ವಿರೋಧಿಪಕ್ಷದ ನಾಯಕರಿಂದಲೂ, ಪ್ರೇಕ್ಷಕರಿಂದಲೂ ಇಂದಿನ ಲೋಕಸಭೆ, ವಿಧಾನ ಸಭೆಗಳು ತುಂಬಿ ತುಳುಕುವಂತೆ, ಮನು, ಮುನಿ ದನುಜ, ಕಿನ್ನರ ಕಿಂಪುರುಷರಿಂದಲೂ, ಏಕಾದಶರುದ್ರರಿಂದಲೂ. ಏಳುನೂರೆಪ್ಪತ್ತು ಅಮರ ಗಣಾಧೀಶರಿಂದಲೂ, ಸನಕ ಸನಂದಾದಿ ಮಹರ್ಷಿಗಳಿಂದಲೂ, ಶಿವನ ಸಭೆಯು ತುಂಬಿ ತುಳುಕುತ್ತಿತ್ತು. ಇಂತಹ ಸಭೆಯಲ್ಲಿ ಜಗಜ್ಜನನಿಯಾದ ಪಾರ್ವತಿಯು ಪತಿಯಾದ ಶಿವನನ್ನು ಕುರಿತು ಶಿವನೇ ದುಃಖವೆಂಸದ ಸುಖವು ದೊರೆಯುವ ಬಗೆಯಾವುದು ? ಆ ಸತ್ಯ ನಿತ್ಯ ಸುಖದ ಮಾರ್ಗವನ್ನು ತಿಳಿಸುವವರಾರು ? ಎಂದು ಕೇಳಲು–ಪ್ರಿಯೆ, ಆ ಸನ್ಮಾರ್ಗವನ್ನು ತೋರಿಸುವ ಓರ್ವ ಮಹಾಗುರುವು ಭೂಲೋಕದಲ್ಲಿರುವನು. ಅವನು ನಿರ್ವಾಣಿಯನು, ಮಾಯಾವಿರಹಿತನು. ಭಾಸ್ಕರನ ಬಳಿ ಕತ್ತಲೆ ಸುಳಿಯದಂತೆ ಅವನ ಸನಿಹದಲ್ಲಿ ಮಾಯೆ ಸುಳಿಯದು, ಅದನ್ನು ಕೇಳಿ ಸಹಿಸದ ಗಿರಿಜೆಯು ಹರಿಬ್ರಹ್ಮಾದಿಗಳು ಮಹಾಮಹಾ ಯತೀಶ್ವರರು ಮಾಯೆಯ ಹೆಸರು ಕೇಳಿದರೆ ಥರಥರ ನಡುಗುವಾಗ ಈ ಹುಲ್ಲು ಮನುಜ ಅಲ್ಲಮನ ಪೌರುಷವನ್ನೆಷ್ಟು ಹೇಳುವಿರಿ, ಅವನ ಸೊಲ್ಲನ್ನು ಅಡಗಿಸಿ ಅರೆಕ್ಷಣದಲ್ಲಿ ವಶಮಾಡಿಕೊಳ್ಳುವೆನು, ನನ್ನ ಮುಂದೆ ಅವನಾಟ ಸಾಗದು ಎಂದು ಮುಂತಾಗಿ ಜಂಬದ ಮಾತನ್ನಾಡಿದ ಮಾಯೆಯು ಭೂಲೋಕಕ್ಕೆ ಇಳಿದಾಕ್ಷಣ ತಾನು ಹೇಳಿದ ಪ್ರತಿಜ್ಞಾ ವಾಕ್ಯವನ್ನೇ ಮರೆತುಬಿಟ್ಟಳು.

ಪೌರಾಣಿಕ ದೃಷ್ಟಿಯಿಂದ ಕೆಳಗೆ ಪಾತಾಳಲೋಕವು, ಮಧ್ಯದಲ್ಲಿರುವದರಿಂದ ಮಧ್ಯಮ ಲೋಕವೆಂದೂ ಅವತಾರಿಗಳೇ ಅವತರಿಸಲಿ, ಪ್ರವಾದಿಗಳೇ ಬರಲಿ, ಪ್ರತ್ಯಕ್ಷ ಮೃತ್ಯುಂಜಯನೇ ಬಂದರೂ ಸಹ ಅವರೆಲ್ಲರೂ ಸಾವನ್ನಪ್ಪಲೇ ಬೇಕಾದುದರಿಂದ ಈ ಲೋಕಕ್ಕೆ ಮೃತ್ಯುಲೋಕವೆಂದೂ, ಭೋಗಲೋಕದಲ್ಲಿ ಸುಮ್ಮನೆ ಕುಳಿತು ಭೋಗಿಸುವಂತೆ ಈ ಲೋಕದಲ್ಲಿ ಸುಮ್ಮನೇ ಕುಳಿತುಕೊಳ್ಳದೇ ಏನಾದರೊಂದು ಕರ್ತವ್ಯ ಕರ್ಮವನ್ನು ಮಾಡಲೇ ಬೇಕಾದುದರಿಂದ ಇದಕ್ಕೆ ಕರ್ಮಲೋಕವೆಂದೂ ಕರೆಯುವರು. ಅಂತೆಯೇ ಗೀತೋಪನಿಷತ್ತುಗಳು;

" ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್‌ಶತಂಸಮಾಃ "
" ನಹಿಕಶ್ಚಿತ್ ಕ್ಷಣಮಪಿ ಜಾತುತಿಷ್ಠತ್ಯಕರ್ಮಕೃತ್ ॥ "

ಎಂದು ಹೇಳುವದಲ್ಲದೆ ಶ್ರೀಬಸವೇಶ್ವರರು " ಮೃತ್ಯುಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ " ಎಂದು ಹೇಳಿರುವರು.

ಭೀಮಕವಿಕೃತ ಬಸವ ಪುರಾಣದ ಪ್ರಾರಂಭದಲ್ಲಿ ಲೋಕಸಂಚಾರಿಗಳಾದ ನಾರದರು ಜಗದಾಧಾರವಾದ, ಸರ್ವಶ್ರೇಯೋಭಿವೃದ್ಧಿಗಳಿಗೆ ಮೂಲಾಧಾರವಾದ ಧರ್ಮವು ದಿಶೆ

ದಿನೇ ಕ್ಷೀಣವಾಗುತ್ತಿರುವದು ಎಂದು ಶಿವನಿಗೆ ವಿನಂತಿಸಲು ಶಿವನು ನಂದೀಶ್ವರ
ಧರ್ಮೋದ್ಧಾರಕಾರ್ಯಕ್ಕಾಗಿ ಭೂಲೋಕಕ್ಕೆ ಹೋಗಲು ಅಪ್ಪಣೆ ಮಾಡುವ
ಹರಿಹರನ ರಗಳೆಯಲ್ಲಿಯೂ ಇದೇ ತೆರನಾದ ಸನ್ನಿವೇಶ ಬಂದು ಶಿವನು ನಂದೀಶ
ಭೂಲೋಕಕ್ಕೆ ಹೋಗಲು ಅಪ್ಪಣೆ ಮಾಡಿದಾಗ ನಂದಿಯು-

"ಹುಸಿದಂಭ ಹಿಂಸೆ ಮೂರ್ಖತೆಯುಂಟು ಧರೆಯೊಳಗೆ।
ಪಶುವಲ್ಲದಾಲೀಢವನ್ಯಾಯವಿಳೆಯೊಳಗೆ।
ಅಲ್ಲಿ ಜನಿಯಿಸಿ ಬಳಿಕ್ಕೆಂದು ಬಪ್ಪೆಂ ದೇವ॥"

ದೇವಾಧಿದೇವನಾದ ಮಹಾದೇವನೇ; ಭೂಲೋಕದಲ್ಲಿ ಅನ್ಯಾಯ, ಅನೀತಿ, ಅನಾಚಾ
ದುರಾಚಾರ, ಭ್ರಷ್ಟಾಚಾರಗಳು ತಾಂಡವವಾಡುತ್ತಿರುವವು. ಅಲ್ಲಿಗೆ ಹೋಗಿ ಆ
ಕಾಳಿಗಿಚ್ಚಿನಲ್ಲಿ ಇರಲಾರೆನೆನ್ನುವನು. ಶ್ರೀಬಸವೇಶ್ವರರು ಹುಟ್ಟಿದ ಮೇಲೆ
ವಿವಿಧ ಧಾರ್ಮಿಕ, ಜಾತೀಯತೆಯ ವರ್ಣವಿಭಾಗದ ಜಟಿಲ ಕುಟಿಲ ವಾಮಪಂಥ
ಸಿಲುಕಿ-

"ಅಟಕಟಕ ಶಿವ ನಿನಗಿನಿತು ಕೃಪೆಯಿಲ್ಲ ಕರುಣೆಯಿಲ್ಲ,
ಯಾಕೆ ಹುಟ್ಟಿಸಿದೆ ಇಹಲೋಕ ದುಃಖಿಯ
ಯಾಕೆ ಹುಟ್ಟಿಸಿದೆ ಪರಲೋಕ ದೂರನ
ಏನಗಾಗಿ ಮತ್ತೊಂದು ತರುಮರಾದಿಗಳು ಇದ್ದಿಲ್ಲವೆ।"

ಎಂದು ನಿಟ್ಟುಸಿರ್ಗರೆದು ದೇವಾ ನಿನ್ನಿಂದ ದೂರಿರಿಸಿ ದುಃಖದಾಗರವೆನಿಪ ಮರ್ತ್ಯ
ಏಕೆ ತಂದೆ ? ಸಂವೇದನಾಶಕ್ತಿಯುಳ್ಳ ಮಾನವ ಜನ್ಮವೀಯುವದಕ್ಕಿಂತಲೂ ಸಂವೇದ
ಶಕ್ತಿಯಿಲ್ಲದ ತರುಮರಾದಿಗಳ ಜನ್ಮವೀಯಬಾರದಿತ್ತೇ ? ಎಂದು ಚೀರಿಸಿರುವ
ಮತ್ತೊಂದೆಡೆಯಲ್ಲಿ ಶ್ರೀ ಬಸವೇಶ್ವರರೇ "ಕೊಲುವೆನೆಂಬ ಭಾಷೆ ದೇವನದು; ಗೆಲು
ನೆಂಬ ಭಾಷೆ ಭಕ್ತನದು" ಷಡೂರ್ಮಿ, ಷಡ್ಭ್ರಮೆ, ಷಡ್ವಿಕಾರ, ಷಡ್ರಿಪುಗಳ ಕೈಗೆ ಕೊಟ್ಟು
ಜೀವನವನ್ನು ಸೋಲುವಂತೆ ಮಾಡುವ ಛಲವನ್ನು ದೇವ ತಾಳಿದ್ದರೆ, ಧ್ಯೇಯ ಸಾಕ್ಷಾತ್ಕಾ
ಕ್ಕಾಗಿ ಜೀವನವನ್ನೇ ಮುಡಿಪಿಟ್ಟ ಭಕ್ತನು ಸತ್ಯ, ಸದಾಚಾರ, ಸದ್ಭಕ್ತಿ, ಸಮ್ಯಗ್ಜ್ಞಾ
ಎಂಬನಿಶಿತಾಸ್ತ್ರಗಳನ್ನು ಹಿಡಿದು ಹೋರಾಡಿ, ಎದುರಾಳಿಗಳನ್ನೆಲ್ಲ ಗೆಲುವೆನೆಂಬ ಛಲವ
ತಾಳಿರುವನು ಎಂದಿದ್ದಾರೆ.

ವ್ಯಾಸಪುತ್ರನಾದಶುಕನು ಹಸಿವು, ತೃಷೆ, ವ್ಯಸನ, ಕುಸುಮಾಸ್ತ್ರಬಾಧೆ ಮೊದಲಾ
ನೂರು ಸಾಸಿರಕೋಟಿ ಬಾಧೆಯುಳ್ಳ ಈ ಭೂಲೋಕಕ್ಕೆ ಬರಲು ಅಂಜಿ ಮಾತೃಗರ್ಭ
ದಲ್ಲಿಯೇ ಇರುತ್ತಿರಲು, ಸ್ವಯಂ ವಿಷ್ಣುವೇ ಶುಕನಿಗೆ ದರ್ಶನವಿತ್ತು ಶುಕನೇ ನಿನ
ಮಾಯೆ ಮುಸುಕಿ ಸ್ವಸ್ವರೂಪಕ್ಕೆ ಚ್ಯುತಿಬಾರದಂತೆ ನೋಡಿಕೊಳ್ಳುವ ಹೊಣೆ ನನ್ನದು
ನೀನು ಎಳ್ಳಷ್ಟೂ ಅಂಜದೇ ಮಾತೃಗರ್ಭದಿಂದ ಹೊರಗೆಬಾ ಎಂದು ಅಭಯವಿತ್ತು
ಕರೆದಾಗ ಶುಕನು ಭೂಲೋಕಕ್ಕೆ ಅವತರಿಸಿದನಂತೆ!

ದಶಾವತಾರಗಳಲ್ಲಿ ಓರ್ವನೆನಿಸಿ, ಅಸಾಮಾನ್ಯ ಲೋಕೋತ್ತರ ಮಹಾಪುರು

ಸೆನಿಸಿದ ಶ್ರೀ ರಾಮನೇ ಮಾಯಾವಿಯಾದ ಮಾರೀಚ ಚಿನ್ನದ ಚಿಗರೆಯಾಗಿ ಓಡುತ್ತಿರಲು ಅದು ಹೇಮಮೃಗವೆಂದು ಭ್ರಮಿಸಿ ಬೆಂಬತ್ತುವದು ಮುಂತಾದ ವಿಪತ್ಪರಂಪರೆಗಳಿಗೆ ಈಡಾದಾಗ ರಾಮನ ದುಃಖ ಕಳೆಯಲು ವಶಿಷ್ಠರು ಬಗೆಬಗೆಯಾಗಿ ಉಪದೇಶಮಾಡಿ ಸ್ವಸ್ವರೂಪವನ್ನು ತಿಳಿಸಿದ ಯೋಗವಾಶಿಷ್ಠ ಎಂಬ ಬೃಹದ್ಗ್ರಂಥವು ಸುಪ್ರಸಿದ್ಧವಿರು ವದು.ಶಿವನಿಂದೆಯನ್ನು ಕೇಳಿದ ಈ ಅಪವಿತ್ರ ದೇಹವೇ ಬೇಡ. ಎದುರಿಗಿರುವ ಈ ಅಗ್ನಿ ಕುಂಡದಲ್ಲಿ ಈ ಹೇಯವಾದ ದೇಹವನ್ನು ಬಿಟ್ಟು ಮತ್ತೊಮ್ಮೆ ಜನ್ಮತಳೆದು ಉಗ್ರ ತಪಸ್ಸನ್ನು ಮಾಡಿ ಶಿವನನ್ನೇ ಪತಿಯನ್ನಾಗಿ ಮಾಡಿಕೊಳ್ಳುವೆನು ಎಂದು ವೀರಪ್ರತಿಜ್ಞೆ ಮಾಡಿದ ದಾಕ್ಷಾಯಣಿಯು ಭೂಲೋಕದಲ್ಲಿ ಪರ್ವತರಾಜನ ಮಗಳಾಗಿ ಹುಟ್ಟಿದಾಕ್ಷಣ ತಪಸ್ಸು ಮಾಡುವದನ್ನೇ ಮರೆತುಬಿಟ್ಟಳು. ಆಗ ನಾರದರು ಬಂದು ಎಚ್ಚರಿಸಿದಾಗ ಪಾರ್ವತಿಯು ಉಗ್ರ ತಪಸ್ಸನ್ನುಮಾಡಿ ಶಿವನನ್ನು ಒಲಿಸಿಕೊಂಡಳೆಂಬುದು ಪುರಾಣ ಪ್ರಸಿದ್ಧವಿದೆ.

ಗುಲಬರ್ಗಾ ಜಿಲ್ಲಾ ಯಾದಗಿರಿ ತಾಲೂಕು ಕೂಡಲೂರ ಎಂಬ ಗ್ರಾಮದ ಬಸವಲಿಂಗ ಶರಣರು ಓರ್ವಸದ್ಗೃಹಸ್ಥರ ಮನೆಯೊಳಗೆ ತೊಟ್ಟಿಲಲ್ಲಿ ಕೂಸುಅಳುತ್ತಿರಲು ಆಸ ತೊಟ್ಟಿಲ ತೂಗುತ್ತ—

ಅಳುತಿದ್ಯಾಕಂದ ಅಳುತಿದ್ಯಾ ನೀನು ।<br>
ತಿಳಿಯದೆ ಮರ್ತ್ಯಕ್ಕೆ ಮರೆತು ಬಂದೆನೆಂದು ॥ ಪ ॥<br>
ಮಾಯದ ತೊಟ್ಟಿಲೊಳು ಮಲಗಿ ಮೈ ಒತ್ತುತ ।<br>
ಮೋಹದ ಸಿಂಬಿಯೊಳು ಹೊರಳಾಡುತ ।<br>
ಜೀವ ಮನಸು ಎಂಬ ತಗಣಿ ಅಂಗುಷ್ಠಕ್ಕೆ ।<br>
ಹತ್ತಿ ದೇಹಕ್ಕೆ ಸುಖವಿಲ್ಲೆಂದು ॥ ೧ ॥

ತಂದೆತಾಯಿಯಿಂದ ಬಂಧನದೊಳು ಬಿದ್ದು ।<br>
ಮುಂದೇನು ಗತಿಯೆಂದು ಕೆಡುತೇನೆಂದು ॥<br>
ಅಂದಚಂದದಿಬಂದು ಮೊಲೆಕೊಟ್ಟು ಹಾಲೆರೆದು ।<br>
ಬಂದಂಥ ವಿಷಯಕ್ಕೆ ಬಲೆಯು ಹಾಕುವರೆಂದು ॥ ೨ ॥

ತಾವು ಬಿದ್ದ ಕುಣಿಯಲಿ ಎನ್ನ ನೂಕುವರೆಂದು ॥<br>
ತಾವು ಮಗನಿಗೆ ಮದುವೆ ಮಾಡುವರೆಂದು ।<br>
ಜಾವಜಾವಕೆ ಒಮ್ಮೆ ನೋಡಿ ಹಿಗ್ಗುತಲಿ ।<br>
ದೇವ ಕೂಡಲೂರೇಶ ಕೂಡಿಕೋ ಎನುತಲಿ ॥ ೩ ॥

ಎಂದು ಹಾಡಿದ ಪದ್ಯ ಬಹಳೇ ಮಾರ್ಮಿಕವಾಗಿದೆ. ಮಾಯಾ ಮೋಹದ ಹಾಸಿಗೆಯಲ್ಲಿ ಕಾಮಾದಿ ದುರ್ಗುಣಗಳೆಂಬ ತಗಣಿ, ಚಿಕ್ಕಾಡು ಸೊಳ್ಳೆಗಳು ಕಡಿಯುವವು. ಹಿಂದೆ ಅನಂತಾನಂತ ಜನ್ಮಗಳಲ್ಲಿ ಬಂದೆ, ಬಂದು ನೊಂದೆ, ನೊಂದು ಬೆಂದೆ. ನನ್ನ ಹಡೆದ

ತಾಯಿತಂದೆಗಳು ಮತ್ತೆ ಮತ್ತೆ ಈ ಭವದ ಕುಣಿಯಲ್ಲಿಯೇ ನೂಕುವರಲ್ಲ! ಇದಕ್ಕೆ
ಮಾಡಲಿ ! ಮುಂದೆ ಹೇಗೆ ಮಾಡಲಿ ಎಂದು ಅಳುವಿಯಲ್ಲವೇ ? ಸಾಮಾನ್ಯ ಜ
ಏನೇನೋ ಭಾವಿಸಿ ನೀನಳುವದಕ್ಕೆ ಕಾರಣ ಹೇಳುವರು. ನಿಜವಾಗಿ ನೀನಳು
" ತಿಳಿಯದೇ ಈ ಮರ್ತ್ಯಕ್ಕೆ ಬಂದುದಕ್ಕಾಗಿ, ನನ್ನ ನಿಜವನ್ನು ತಿಳಿಸುವವರಾರು
ಹಂಬಲದಿಂದ, " ಎಂದು ಶರಣರು ಹೇಳಿದರಂತೆ.

ವೇಳೆವೇಳೆಗೆ ಸರಿಯಾಗಿ ಕೂಗಿ ಕಾಲಸೂಚನೆ ಮಾಡುವ ಸಜೀವಕಾಲದರ್ಶಕ ಯ
ದಂತಿದ್ದ ಕೋಳಿಯೊಂದು ಸೂರ್ಯನ ಹೊಂಬಿಸಿಲಲ್ಲಿ ಹಚ್ಚಹಸುರಾದ ಮೃದು ಹು
ಹಾಸಿಗೆಯ ಮೇಲೆ ಅಡ್ಡಾಡುತ್ತ ತತ್ತಿಯೊಳಗಿದ್ದು ಅರನಿಮಿಷದಲ್ಲಿ ತತ್ತಿಯೊಡೆ
ಹೊರಬರುವ ತನ್ನ ಮರಿಯನ್ನು ಕುರಿತು, ಮಗು ! ಅರೆನಿಮಿಷದಲ್ಲಿ ನಿನ್ನ ಸು
ಆವರಿಸಿದ ತತ್ತಿಯ ಆವರಣದಿಂದ ಹೊರಬಂದು ಪ್ರಭಾಪುಂಜದಿಂದ ಬ್ರಹ್ಮಾಂಡವನ್ನ
ಬೆಳಗುವ ಭಾಸ್ಕರನನ್ನು ನೋಡುವಿ. ಮಂದ ಮಂದವಾಗಿ ಬೀಸುವ ತಂಗಾಳಿಯ ಸ್ಪ
ಪಡೆಯುವಿ, ಕೋಮಲ ತೃಣಶಯ್ಯೆಯ ಮೇಲೆ ಅಡ್ಡಾಡುವಿ ಎಂದು ಹೇಳಲು, ತತ್ತಿ
ಹೊದಿಕೆಯಲ್ಲಿದ್ದ ಕೋಳಿಯ ಸುಳ್ಳು, ಎಲ್ಲವೂ ಸುಳ್ಳು ಎಂದಿತಂತೆ.ಹೀಗೆ ಮುಂವೆಗೊಳ
ಜೀವನಿಗೆ ಶ್ರೀ ಗುರುರಾಯನು ಪರಿಪರಿಯಾಗಿ ಹೇಳಿದರೂ ಅದು ಅವನಿಗೆ ನಿಜವೆನಿಸ

ಜೀವನು ಅಜ್ಞಾನ ತತ್ಕಾರ್ಯವಾದ ಆವರಣ ವಿಕ್ಷೇಪಗಳಿಂದ ದುಃಖಪಡುತ್ತಿರ
ಶ್ರೀಗುರುವು ಸದುಪದೇಶದಿಂದ ಅವನಿಗೆ ಪರೋಕ್ಷಜ್ಞಾನ ಅಪರೋಕ್ಷಜ್ಞಾ
ಮೂಲಕ ಶೋಕ ನಿವೃತ್ತಿಯನ್ನುಂಟುಮಾಡಿ ಸಹಜಾನಂದ ಸ್ಥಿತಿಯಲ್ಲಿ ನಿಬ್ಬೆರಗಾ
ನಿಲ್ಲುವಂತೆ ಮಾಡುವನು ಎಂದು ನಿಜಗುಣರು ವಿವೇಕಚಿಂತಾಮಣಿಯಲ್ಲಿ ಹೇಳಿರುವ
ಇದನ್ನೇ ಅಲ್ಲಮ ಪ್ರಭುವು-

> ಅಜ್ಞಾನವೆಂಬ ತೊಟ್ಟಿಲೊಳಗೆ ಜ್ಞಾನವೆಂಬ ಶಿಶುವ ಮಲಗಿಸಿ।
> ಸಕಲ ವೇದಶಾಸ್ತ್ರವೆಂಬ ನೇಣಕಟ್ಟಿ ಹಿಡಿದು ತೂಗಿ !
> ಜೋಗುಳವಾಡುತ್ತಿದ್ದಾಳೆ ಭ್ರಾಂತಿಯೆಂಬ ತಾಯಿ।
> ತೊಟ್ಟಿಲು ಮುರಿದು। ನೇಣು ಹರಿದು ಜೋಗುಳನಿಂದಲ್ಲದೆ।
> ಗುಹೇಶ್ವರನೆಂಬ ಲಿಂಗವ ಕಾಣಬಾರದು — — — "

ಎಂಬ ವಚನದಿಂದ ಸುಂದರವಾಗಿ ಹೇಳಿರುವರು.

ಬ್ರಹ್ಮಾಂಡದಲ್ಲಿ ಕೋಟಿಕೋಟಿ ತಾಯಂದಿರು ಕೋಟಿಕೋಟಿ ತೊಟ್ಟಿಲಗಳ
ತೂಗುವರು. ಇಲ್ಲಿ ಹಾಗಲ್ಲ. ತೂಗುವ ತಾಯಿಯು ಓರ್ವಳೆ, ಆಕೆಯೇ ಮಾಯಾದೇವಿ
ತೊಟ್ಟಿಲವೂ ಒಂದೇ. ಅದುವೇ ಅಜ್ಞಾನವೆಂಬ ತೊಟ್ಟಿಲು. ಕೋಟಿ ಕೋಟಿ ಕೂಸುಗಳ
ಒಂದೇ ಒಂದು ತೊಟ್ಟಿಲಲ್ಲಿ ಆಡುತ್ತಿರುವವು. ತತ್ತ್ವತಃ ಜೀವಾತ್ಮನು ಸಚ್ಚಿದಾನಂದ
ಸ್ವರೂಪನು. ಅಜ್ಞಾನವಶದಿಂದ ವಿವಿಧ ಕಷ್ಟಕೋಟಲೆಗಳಿಗೆ ಒಳಗಾಗಿ ಕಷ್ಟಪಡುತ್ತಿ
ವನು.ಅವಿದ್ಯೆಯ ಉಪಾಧಿಯಿಂದ ಬಂದ ಬಂಧನಗಳೆಲ್ಲ ಕಳಚಿ ಹೋದರೆ ಅವನು ಸು
ರೂಪವೇ ಆಗಿಹೋಗುವನು.

ಈ ಲೋಕವೇ ಮರವೆಯ ಲೋಕ. ಎಂತೆಂತಹ ಅರಿವುಳ್ಳವರೂ ಸಹ ಮರವೆಗೆ ಒಳಗಾಗಿ ಗೊತ್ತುಗುರಿಗಾಣದೇ ಹೋಗುವರು. ಇಲ್ಲಿ ಹೇಳಿದವಳು ಜಗಜ್ಜನನಿಯಾದ ಗಿರಿಜೆಯ ಮಗಳು ಮಾಯಾದೇವಿ. ಹೇಳಿದ ಸ್ಥಾನ ದೇವಾದಿದೇವತೆಗಳಿಂದ ತುಂಬಿದ ಶಿವಸಭೆ, ಹೇಳಿದಮಾತು ಬಲ್ಲಿದರಲ್ಲಿ ಬಲ್ಲಿದನಾದ ಅಲ್ಲಮನನ್ನು ಸೋಲಿಸುವೆನೆಂಬುದು. ಅದೂ ಸಾಮಾನ್ಯವಾಗಿ ಹೇಳಿದ ಮಾತಲ್ಲ. ಸೋಲಿಸಿಯೇ ತೀರುವೆ,ಸೋಲಿಸದಿದ್ದರೆ ನಿನಗೆ ಮುಖವನ್ನೇ ತೋರಿಸುವದಿಲ್ಲ, ಎಂದು ಎದೆ ತಟ್ಟಿ ಹೇಳಿದ ವೀರಪ್ರತಿಜ್ಞೆಯ ಮಾತು. ತುಂಬಿದ ಶಿವ ಸಭೆಯಲ್ಲಿ ಹೇಳಿದ ಸ್ಪರ್ಧಾತ್ಮಕ ಮಾತನ್ನು ಪೂರೈಸುವದಕ್ಕಾಗಿ ಮಾಯಾದೇವಿ ಹೆಣಗಾಡಬೇಕಾಗಿತ್ತು. ಮರವೆಯ ಲೋಕಕ್ಕೆ ಬಂದುದರಿಂದ ತಾನು ಹೇಳಿದ ಮಾತನ್ನು ಪೂರ್ತಿಯಾಗಿ ಮರತೇಬಿಟ್ಟಳು.

ಶಿವಾವತಾರಿಗಳೆನಿಸಿದ ಆದ್ಯಶಂಕರಾಚಾರ್ಯರು, ದ್ವಿತೀಯಶಂಭು ಎನಿಸಿದ ಶ್ರೀ ಬಸವೇಶ್ವರರು, ಅಷ್ಟಾದಶ ಪುರಾಣಕರ್ತನಾದ ವ್ಯಾಸ, ಸ್ಮೃತಿಕಾರನಾದ ಪರಾಶರ ಮುಂತಾದ ಮಹಾನುಭಾವರೆಲ್ಲರೂ ಈ ಅಜ್ಞಾನ ಪಾಶದಲ್ಲಿ ಸಿಲುಕಿ ತೊಳಲಿಬಳಲಿ ದಿಙ್ಮೂಢರಾದರು. ಈಮರವೆಗೆ ಅಜ್ಞಾನ, ಮಾಯೆ, ತಮಸ್ಸು, ಅವಿದ್ಯೆ ಎಂದು ಮುಂತಾಗಿ ಕರೆಯುವರು.

ಬೂದಿಯಿಂದ ಕೆಂಡವು ಮುಚ್ಚಲ್ಪಡುವಂತೆ, ಹೊಗೆಯಿಂದ ಬೆಂಕಿಯು ಮುಸುಕಲ್ಪಡುವಂತೆ, ಮಾಲಿನ್ಯದಿಂದ ದರ್ಪಣದಲ್ಲಿ ಮುಖವು ಕಾಣಿಸದಿರುವಂತೆ, ಸೂರ್ಯಮಂಡಲ ಚಂದ್ರಮಂಡಲಗಳು ಮೇಘಮಂಡಲದಿಂದ ಕಾಣದ ಹಾಗಾಗುವಂತೆ, ಗರ್ಭಸ್ಥಶಿಶುವು ಚರ್ಮದ ಹೊದಿಕೆಯಿಂದ ಸುತ್ತುವರಿಯಲ್ಪಡುವಂತೆ ಸ್ವ ಸ್ವರೂಪಜ್ಞಾನವು ಅಜ್ಞಾನದ ಆವರಣದಿಂದ ಮುಚ್ಚಿದ ಕಾರಣ ಸ್ವಸ್ವರೂಪ ಸಾಕ್ಷಾತ್ಕಾರ ವಾಗುವದಿಲ್ಲ.

ಅಲ್ಲಮನ ಸೊಲ್ಲನ್ನು ಅಡಗಿಸಿಯೇ ಬಿಡುವೆನೆಂದು ಪ್ರತಿಜ್ಞೆಮಾಡಿ ಧರೆಗಿಳಿದ ಗಿರಿಜೆಯು ಆ ಮಾತನ್ನೇ ಮರೆತು ಕಾಮಾತುರತೆಯಿಂದ ಮಧುಕೇಶ್ವರನನ್ನು ಪೂಜಿಸುತ್ತ ಬಹುದಿನ ಕಳೆಯಲು ಅತ್ತ ಕೈಲಾಸದಲ್ಲಿ ಪಾರ್ವತಿಯು ವಿಮಳೆಯನ್ನು ಕರೆಯಿಸಿ ವಿಮಳೆಯೇ! ಮಾಯಾಂಗನೆಯನ್ನು ಯಾವ ಕೆಲಸಕ್ಕಾಗಿ ಭೂಲೋಕಕ್ಕೆ ಕಳುಹಿಸಿದ್ದೆವೋ ಆ ಕೆಲಸವನ್ನೇ ಮರೆತುಬಿಟ್ಟಿರುವಳು. ಕಾರಣ ನೀನು ಭೂಲೋಕಕ್ಕೆ ಹೋಗಿ ಮಾಯಾಂಗನೆಯನ್ನು ಎಚ್ಚರಿಸಿ ಬರಬೇಕೆಂದು ಹೇಳಲು,ವಿಮಳೆಯು ಧರೆಗಿಳಿದು ಬಂದು ಮಾಯಾಂಗನೆಗೆ ಭೆಟ್ಟಿಯಾಗಲು ನೀವಾರು ? ಎಲ್ಲಿಂದ ಬಂದಿರಿ ? ನಿಮ್ಮ ಹೆಸರೇನು ? ಬಂದ ಕಾರಣವೇನು ? ಎಂದು ಕೇಳಲು ವಿಮಳೆಯು, ಜಗಜ್ಜನನಿಯಾದ ಪಾರ್ವತಿಯ ಅಪ್ಪಣೆಯ ಮೇರೆಗೆ ಕೈಲಾಸದಿಂದ ಇಲ್ಲಿಗೆ ಬಂದಿರುವೆನು. ನನ್ನ ಹೆಸರು ವಿಮಳೆ. ನೀನು ಇಳೆಗೆ ಇಳಿದು ಯಾವ ಕೆಲಸ ಮಾಡಬೇಕಾಗಿತ್ತೋ ಅದನ್ನು ಮರೆತಿರುವದರಿಂದ ನೆನಪಿಸಲು ಬಂದಿರುವೆನು, ಎಂದು ಹೇಳಲು ಮಾಯಾಂಗನೆಯು ನಾನು ಹುಟ್ಟಿ ಬಂದ ಕಾರಣವೇನು ? ನನ್ನನ್ನು ಯಾವ ಕೆಲಸಕ್ಕಾಗಿ ಕಳಿಸಿರುವಳು ಅದನ್ನು ಸವಿಸ್ತಾರವಾಗಿ

ಹೇಳೆನ್ನಲು ವಿಮಳೆಯು–ಮಾಯೆಯೇ ಕೇಳು–ತುಂಬಿದ ಸಭೆಯಲ್ಲಿ ಪಾರ್ವತಿಯು ಪ
ಶಿವನ ನಿಷ್ಕಳರೂಪನಾದ ಅಲ್ಲಮನನ್ನು ಸೋಲಿಸಿ ಬರಬೇಕೆನ್ನಲು, ನೀನು ಆ ಮಾ
ಒಪ್ಪಿ, ಸೋಲಿಸಿಯೇತೀರುವೆನೆಂದು ಪ್ರತಿಜ್ಞೆಮಾಡಿ ಧರೆಗೆಬಂದಿರುವಿ. ಈಗ
ಮಾತನ್ನೇ ಮರೆತು ಕುಳಿತಿರುವಿ. ಆದ್ದರಿಂದ ನಿನ್ನನ್ನೀಗ ರಜತಾದ್ರಿಗೆ ಕರೆತರಲು ಪಾ
ಯು ಕಳಿಸಿರುವಳು ಎಂದಾಕ್ಷಣ, ಮಾಯೆಗೆ ತನ್ನ ಪೂರ್ವ ಜನ್ಮದ ವೃತ್ತಾಂತವೆಲ್ಲ ಘ
ಸ್ಮೃತಿಪಥಕ್ಕೆ ಬಂದು ಹರಿಹರಬ್ರಹ್ಮಾದಿಗಳೂ, ದೇವಾಸುರರೂ ಈ ಮತ್ಸ
ಅವತರಿಸಿದಾಕ್ಷಣ ತಮ್ಮ ನಿಜರೂಪವನ್ನು ಮರೆತು ಬಿಡುವರೆಂದಮೇಲೆ ಸ್ತ್ರೀಯ
ನಮ್ಮ ಪಾಡೇನು ? ವಿಮಳೆಯೇ ನಿನಗಿಟ್ಟ ಹೆಸರು ರೂಢನಾಮವಾಗಿರದೇ ಅನ್ವ
ನಾಮವಾಗಿರುವದು. ವಿಮಳೆಯೆಂದರೆ ಮಲರಹಿತಳು, ನಿರ್ಮಲಳು, ಪರಿಶುದ್ಧ ಹೃ
ವುಳ್ಳವಳು. ನಿರ್ಮಲಳಾದ ನಿನ್ನ ಸಂಗವು ನನ್ನ ಮನೋಮಾಲಿನ್ಯವನ್ನು ತೊಳೆ
ಬಿಟ್ಟೀತೇ? ಅಲ್ಲಮನ ನಿಜವಾದ ನಿಲುವನ್ನು ಹೇಳೆನ್ನಲು,ವಿಮಳೆಯು ಶಿವನು ಪಾ
ಹೇಳಿದ ಅಲ್ಲಮನ ವೃತ್ತಾಂತವನ್ನೇ ಹೇಳುವೆ ಕೇಳು. ಎಂದು ಹೇಳಿ ಅಲ್ಲಮನ ಜ
ಯನ್ನು ತಿಳಿಸಿದಳು.

ಬನವಾಸಿಯ ಬಳಿ ಬಳ್ಳಿಗಾವಿಯೊಳಗೆ ಸಮಸ್ತ ಭಾಗ್ಯನಿಧಿಯೆನಿಪ ನಿರಹಂಕಾರ
ಮಹಾನುಭಾವನಿದ್ದನು. ಸತ್ಪಾತ್ರ ದಾನವಿಲ್ಲದ ವ್ರತಪರಿಪಾಲನ, ಆತ್ಮಾನುಸ
ವಿಲ್ಲದ ಯೋಗ, ಧ್ಯೇಯ ವಸ್ತು ಚಿಂತನೆಯಿಲ್ಲದ ತಪ ಹೇಗೆ ವ್ಯರ್ಥವೋ
ಸಂತಾನವಿಲ್ಲದ ನನ್ನ ಬಾಳು ಹಾಳು ಎಂದು ಕೊರಗುತ್ತಿದ್ದನು. ದುರಾಚಾರ ದುರಹ
ಗಳ ಸೋಂಕಿಲ್ಲದೆ ಸದಾ ನಿರಹಂಭಾವ, ನಿರೀಹಂಭಾವಗಳ ಸಹಜ ಮಾಟಸ್ಥಲದಲ್ಲಿ
ಆ ಮಹಾನುಭಾವನು ಲೌಕಿಕರು ಐಹಿಕ ಆಮುಷ್ಮಿಕ ಸುಖಕೊಡುವ ಪುತ್ರನಿಗ
ಹಂಬಲಿಸುವರೋ ಹಾಗೆ ಹಂಬಲಿಸದೆ ನಿತ್ಯ ಸತ್ಯ ಸುಖವನ್ನೀಯುವ ಪುತ್ರ
ಬಯಸುತ್ತಿದ್ದನು. ಸತಿಯು ರತಿ ಸುಖಕ್ಕೆಳಸದಮತಿಯು, ತಪೋವೃತ್ತಿ ಪ್ರಧಾನ
ಮಾಯಾಪ್ರಪಂಚದಲ್ಲಿ ನಿರ್ಗತಿಯು, ಲಿಂಗಮಯವಾದ ಮಂಗಲಕೃತಿಯ, ಚಿತ್ತ
ನಿರೋಧದಿಂದ ನಾದಬಿಂದು ಕಲಾತೀತನಾಗಿ ಎಮಗೆ ಅಪರಿಮಿತ ಸುಖವನೀವ,ಪ್ರಪಂ
ಯಸುಖವನತಿಗಳೆವ ಸುಂದರ ನಂದನನ ಪಡೆವ ತವಕದಿಂದ ನಿರಹಂಕಾರ ಸುಜ್ಞಾನಿ
ದಂಪತಿಗಳು ಸಂತೆಯೊಳಗೆ ಎಂದಾದರೂ ಸಮಾಧಿ ಹತ್ತುವದುಂಟೇ ಎಂದು ವಿ
ಲೋಕಾಂತವ ತೊರೆದು ಏಕಾಂತದಲ್ಲಿ ಪದ್ಮಾಸನವ ಹಾಕಿ ಹಸ್ತನ್ಯಸ್ತಲಿಂಗದಲ್ಲಿ ದೃ
ಮನಭಾವಂಗಳನ್ನಿಟ್ಟು " – – – – ಇಷ್ಟಲಿಂಗವ ದೃಷ್ಟಿಯಿಂದಗ್ರಹಿಸಿ, ಪ್ರಾಣಲಿಂ
ಮನಜಾನದಿಂದ ಗ್ರಹಿಸಿ, ತೃಪ್ತಿಲಿಂಗವ ಭಾವ ಜ್ಞಾನದಿಂದ ಗ್ರಹಿಸಿ ಈ ಲಿಂಗತ್ರಯವಿ
ಆಚರಿಸಿ ಲಿಂಗದೊಡನೆ ಕೂಡಿ ಲಿಂಗವೇ ತಾನುತಾನಾಗಿ ವಿರಾಜಿಸುತ್ತಿರ್ಪುದೀಗ
ಯೋಗ ನೋಡಾ ಮಹಾಗುರು ಶಿವಸಿದ್ಧೇಶ್ವರ ಪ್ರಭುವೇ ಎಂಬ ತೋಂಟದ ಸಿದ್ಧ
ಶಿವಯೋಗಿಗಳ ಉಕ್ತಿಯಂತೆ ತಾವೇ ತಾವಾಗಿ ಶಿವಯೋಗದಲ್ಲಿ ಕುಳಿತರು. ಅ
ಹಸಿವು ತೃಷೆಗಳು ಅಡಗಿದವು, ಅವಸ್ಥಾತ್ರಯಗಳು ಉಡುಗಿದವು, ಕರಣವೃತ್ತಿಗ
ಕಡೆಗಾದವು. ಹೀಗೆ ನವಮಾಸ ಕಳೆಯುತ್ತಿರಲು ಕೋಟಿಭಾನು ಪ್ರಕಾಶವುಳ್ಳ ಶಿವತೇ

ನಿಧಿಯಾದ ಶಿಶುವನ್ನು ಅಂತರಂಗದಲ್ಲಿ ಕಂಡು ಆ ದಂಪತಿಗಳು ಆನಂದಪರವಶರಾದರು. ಬಿಸಿಲ ಬಿಟ್ಟು ಧರೆಗಿಳಿದ ಭಾಸ್ಕರನೋ, ತಂಗಿರಣಗಳಿಲ್ಲದ ಸುಧಾಕರನೋ, ಸುಡುವಗುಣ ವಿಲ್ಲದ ಅಗ್ನಿದೇವತೆಯೋ ಎಂಬಂತೆ ತೇಜೋರಾಶಿಯಾಗಿ ಥಳಥಳಿಸುವ ಆ ಬಾಲಕನ ಮೇಲೆ ಸುರರು ಹೂಮಳೆಗರೆದು ಜಯಜಯಕಾರ ಮಾಡಿದರು, ದೇವದುಂದುಭಿಗಳು ಮೊಳಗಿದವು, ಮಹಾಮಹಾಯೋಗೀಶ್ವರರು ಆನಂದ ಸಾಗರದಲ್ಲಿ ಈಜಾಡಿದರು, ಕೊರಡು ಕೊನರಿದವು, ಬರಡು ಆಕಳುಗಳು ಕರೆದವು.

ಒಂದು ದಿನ ತಾಯಿ ಸುಜ್ಞಾನಿದೇವಿಯು ತೇಜಃಪುಂಜ ತನುವುಳ್ಳ ಆ ಶಿಶುವನ್ನು ಎತ್ತಿ ಕೊಂಡು ಮುದ್ದಾಡಲು ಕೈಯೊಳಗೆ ತಕ್ಕೊಂಡರೆ ಅದು ಇದ್ದೂ ಇಲ್ಲದಂತಿತ್ತು. ಈ ಅಚ್ಚ ರಿಯ ಸಂಗತಿಯನ್ನು ಪತಿಗೆ ಹೇಳಲು, ನಿರಹಂಕಾರನು ಸತಿಯೇ ಇದ್ದು ಬದ್ಧನಲ್ಲ.ಸುಳಿದು ಸೂತಕಿಯಲ್ಲ, ಜಾತನಲ್ಲ ಅಜಾತನಲ್ಲ, ಪಂಚಭೌತಿಕಶರೀರ ಹೊದ್ದಿದವನಲ್ಲ, ಷಡೂರ್ಮಿ; ಷಡ್ಭ್ರಮೆ; ಷಡ್ವಿಕಾರಗಳೊಳಗೆ ಇರುವವನಲ್ಲ; ವಿಧಿನಿಷೇಧಗಳ ಕಟ್ಟಿಗೆ ಒಳಗಾದವನಲ್ಲ ದೈಹಿಕ; ಬೌದ್ಧಿಕ, ಮಾನಸಿಕ ಜಾಡ್ಯಗಳನ್ನು ಅಲ್ಲಗಳೆದು ಬಲ್ಲಿದರಲ್ಲಿ ಬಲ್ಲಿದನಾಗಿ ಇರುವ ನವನು, ಆದಕಾರಣ ದೇಹವಿದ್ದೂ ನಿರ್ದೇಹಿಯಾದ ಆ ಶಿಶುವಿಗೆ ಅಲ್ಲಮನೆಂಬ ಸಲ್ಲುವ ಹೆಸರಿಟ್ಟರು. ಓದದೇ ಆತನ ನಾಲಗೆಯಮೇಲೆ ವೇದಶಾಸ್ತ್ರ ಪುರಾಣಗಳು ಕುಣಿ ದಾಡಿದವು. ಮುದ್ದುಮುದ್ದಾದ ಆ ನಿರುಪಮ ನಿರವಯ ನಿರಂಜನ ಶಿಶುವಿಗೆ ಹೆರವರ ದೃಷ್ಟಿದೋಷ ತಾಕಬಾರದೆಂದು ಬೂದಿ ಮಂತಾದುದನ್ನು ಮಂತ್ರಿಸಿ ಹಚ್ಚಿದರು. ಕೋಟಿ ಕೋಟಿ ಸದ್ಭಕ್ತರ ಸಹೃದಯದಲ್ಲಿ ಸದಾ ಬೆಳಗುವ ಚಿಜ್ಯೋತಿಯೇ ಬಾ ! ದೇವಾ ಧಿದೇವತೆಗಳಿಗೂ ನಿಲುಕದಿಹ ಪರಂಜ್ಯೋತಿಯೇ ಬಾ ! ತನ್ನಲ್ಲಿ ತಾನೇ ಪಳಗುವ ಸ್ವಯಂಜ್ಯೋತಿಯೇ ಬಾ ಎಂದು ಹಾಡಿ ನಲಿದಾಡಿದರು.

ಅಲ್ಲಮನು ಒಂದು ದಿನ ತಾಯ್ತಂದೆಗಳನ್ನು ಕುರಿತು ನಿಮ್ಮ ಭಕುತಿ ಭಾವಕೊಲಿದು ಇಲ್ಲಿಯ ತನಕ ಬಾಲಭಾವದಲ್ಲಿ ಆಡಿದೆನು, ಇನ್ನು ನಾನು ನನ್ನ ನಿಜನಿರಾಳದಲ್ಲಿ ನಿಂದು ನಿತ್ಯಸುಖದಲ್ಲಿ ಲೋಲಾಡುತ್ತ ಲೋಕೋದ್ಧಾರಕ್ಕಾಗಿ ತೆರಳುವೆನು ಎನ್ನಲುತಾಯಂದೆಗಳು ಹೇಗೇ ಆಗಲಿ ನಮ್ಮ ಭಕುತಿ ಭಾವಕ್ಕೊಲಿದು ಶಿಶುವಾಗಿ ಬಂದು ಈಗ ಬಿಟ್ಟು ಹೋಗು ವರೇ ? ಎಂದು ದುಃಖಿಸಲು, ಅಲ್ಲಮನು ಎಲ್ಲಿ ಸುಜ್ಞಾನ:,ಸದಾಚಾರ:, ಸದ್ಭಕ್ತಿ,ನಿರಹಂ ಕಾರಗಳಿರುವವೋ ಅಲ್ಲಿ ಅಲ್ಲಮನು ಇದ್ದೇ ಇರುವನು ಎಂದು ವೇದಶಾಸ್ತ್ರ ಪುರಾಣಗಳು ಅನುಭಾವಿಗಳ ಅಮೃತೋಕ್ತಿಗಳು ಡಂಗುರ ಹೊಯ್ದು ಹೇಳುವಾಗ ನಾನು ನಿಮ್ಮನ್ನು ಅಗಲಿ ಹೋಗುವೆನೇ ? ಎಂದು ಸಮಾಧಾನ ಹೇಳಿದನು. ಮಾಯೆಯೇ ಅಲ್ಲಮನ ನಿಲವು ಬಿತ್ತರಿಸಲು ಬಾರದಷ್ಟು ಎತ್ತರವಾದುದು. ಎಳ್ಳಿನೊಳಗೆಣ್ಣೆ ಕಟ್ಟಿಗೆಯಲ್ಲಿ ಬೆಂಕಿ, ಹಾಲಿ ನೊಳು ಬೆಣ್ಣೆ ಗುಪ್ತವಾಗಿರುವಂತೆ ಎಲ್ಲರ ಹೃದಯದಲ್ಲಿಯೂ ಅಲ್ಲಮನಿರುವನು.ಇಂತಹ ಅಲ್ಲಮನ ಕರುಣೆಯನ್ನು ಪಡೆಯಬೇಕು ಎಂದು ಸ್ವತಃ ಶಿವನೇ ಪಾರ್ವತಿಗೆ ಹೇಳಿರುವನು. ಅದು ಕಾರಣ ಮಾಯೆಯೇ ಅಲ್ಲಮನ ಅನುಗ್ರಹವನ್ನು ಪಡೆದುಕೊಂಡು ಬರಲು ಪಾರ್ವ- ತಿಯು ಹೇಳಿರುವಳು. ಅದಕ್ಕಾಗಿಯೇ ಬಂದಿರುವೆ ಎಂದು ವಿಮಳೆಯು ಮಾಯೆಗೆ ಪಾರ್ವತಿಯ ನಿರೂಪವನ್ನು ಮುಟ್ಟಿಸಿದಳು.

## ೭ ನೆಯ ಗತಿ

# ಪ್ರಭು ಮಾಯೆಗೆ ಸಿಕ್ಕದೇ ಹೋದುದು

ಮಾಯೆಯು ವಿಮಳೆಯನ್ನು ಕುರಿತು ವಿಮಳೆಯೇ ! ಅಲ್ಲಮನು ಒಲಿಯಬೇಕಾದ ಏನುಮಾಡಬೇಕೆಂದು ಕೇಳಲು ನಿಷ್ಕಾಮ ಭಕ್ತಿಯಿಂದ ಅಲ್ಲಮನ ಸೇವೆ ಮಾಡಿದರೆ ಅವ ಒಲಿದು ಕರುಣೆಯಿಂದ ಬೇಡಿದ ಮನೋರಥಗಳನ್ನು ಕೊಡುವನು ಎನ್ನಲು; ವಿಮಳೆಯು ದಿನದಿನದಲ್ಲಿಯೂ ತಪ್ಪದೇ ಮಧುಕೇಶ್ವರನ ಪೂಜೆ ಮಾಡಿ ಬೇಸತ್ತು ಹೋಗಿರುವ ವೇದಶಾಸ್ತ್ರ ಪುರಾಣಗಳು–

" ಭಕ್ತೇರಸಾಧ್ಯಂ ನಹಿಕಿಂಚಿದಸ್ತಿ "
" ಭಕ್ತ್ಯಾ ಸರ್ವಸಿದ್ಧಯಃ ಸಿಧ್ಯಂತಿ "

ಅಂದರೆ ಭಕ್ತಿಯಿಂದ ಎಲ್ಲ ಸಿದ್ಧಿಗಳು ಆಗುದವು. ಭಕ್ತಿಗೆ ಅಸಾಧ್ಯವಾದುದು ಯಾವುದೂ ಇಲ್ಲ ಎಂದು ಹೇಳುತ್ತವೆ. ಆದರ ನಾನು ಮಾತ್ರ ಇಷ್ಟು ದಿನ ಮಧುಕೇಶ್ವರನ ಪೂಜೆ ಮಾಡಿದರೂ ಒಂದೂ ಫಲವನ್ನು ಕಾಣದೇ ಸುಮ್ಮನೇ ಕುಳಿತಿರುವೆನು, ನೀನಾದರೋ ಪ ನನ್ನು ಭಕ್ತಿಯಿಂದ ಪೂಜಿಸಿದರೆ ಸರ್ವಸುಖಗಳೂ ದೊರೆಯುತ್ತವೆ ಎನ್ನುವಿ.ಪ್ರಯೋಜ ವಿಲ್ಲದೆ ಹರನ ಪೂಜೆ ಏಕೆ ಮಾಡಬೇಕು? ಎಂದು ವಿಚಾರಿಸಲು ಶಿವಭಕ್ತಿಯೇ ಮೈವೆತ್ತು ನಿಂತಿರುವ ವಿಮಳೆಯು ಶಿವಶಿವ, ವೇದಶಾಸ್ತ್ರ ಪುರಾಣಗಳು ಶಿವನ ಮಹಿಮೆಯನ್ನು ಪುರಸ್ಕರಿಸುವಾಗ ಈ ಮಾಯೆಯು ಆ ಶಿವಾರ್ಚನೆಯನ್ನು ತಿರಸ್ಕರಿಸುವಳು. ಭಕ್ತಿಯಿಂ ಶಿವನ ಪೂಜಿಸುವ ರಹಸ್ಯವನ್ನರಿಯದೇ ಮಧುಕೇಶ್ವರನ ಪೂಜೆಮಾಡಿ ಬೇಸತ್ತು ಹೋದೆನು,ಎಂದು ಹೇಳುವಳು. ಬೇಸರ ಬಂದು ಮಾಡಿದರೆ ಅದು ಪೂಜೆಯೇ ? ಅದು ಶೂನ್ಯವು.

ಅತ್ತೆಯ ಕೈಯಲ್ಲಿ ಸೊಸೆಯು ಕೆಲಸ ಮಾಡಿಮಾಡಿ ಬೇಸತ್ತು ತವರು ಮನೆ ಹೋಗಲು ಹಂಬಲಿಸುವಳು.ಮೇಲಾಧಿಕಾರಿಗಳ ಕೈಯಲ್ಲಿಕರಣಿಕರು ಬರೆಬರೆದು ಬೇಸತ್ತು ಬಿಡುವು ತಕ್ಕೊಳ್ಳಲು ಆತುರರಾಗುವರು.ಜಮೀನದಾರರ ಆಧಿಪತ್ಯದೊಳಗೆ ಜೀತದಾಳು ಗಳು ದುಡಿದುಡಿದು ಬೇಸತ್ತು ಬಿಟ್ಟು ಹೋಗುವರು. ಅಧಿಕಾರದ ಒತ್ತಡಕ್ಕೋ, ಧನದ ಆಮಿಷಕ್ಕೋ, ಮತ್ತಾವುದಾದರೊಂದು ಕಾರ್ಯಸಾಧನೆಗೆ ಬೇಕಾದ ಒಂದು ಲಕ್ಷ ವೃತ್ತಿಯು ಇರದೆ ಪೂಜ್ಯವಸ್ತುವಿನ ಪೂಜೆಗೈಯುವವೇ ಸ್ವಕರ್ತವ್ಯವೆಂಬ ಸದ್ಭಾವನೆಯು ಇದ್ದಲ್ಲಿ ಆಸರಿಕೆ ಬೇಸರಕೆಳಿಗೆ ಅವಕಾಶವಿರುವದಿಲ್ಲ.

ಪತಿಭಕ್ತಿ ಸಂಪನ್ನೆಯಾದ ಪತಿವ್ರತೆಯು ಪತಿಸೇವೆ ಮಾಡುವಲ್ಲಿ ಬೇಸರಗೊಳ್ಳುವಳೇ! ನಿಜವನರಿಯಲು ತವಕಿಸುವ ಶಿಷ್ಯನೆಂದಾದರೂ ಸದ್ಗುರು ಸೇವೆ ಮಾಡುವಲ್ಲಿ ಬೇಸರ ಪಡುವನೇ ? ಅಂತಃಕರಣದ ಸಾಕಾರ ಮೂರ್ತಿಯಂತಿರುವ ಮಾತೃದೇಯು ಮೊಮ್ಮ ಕ್ಕಳ ಸೇವೆ ಮಾಡುವಲ್ಲಿ ಬೇಸರಿಯುವಳೇ ? ಹಾಗೆ ಸಹಜ ಭಕ್ತನು ದೇವತೋಪಾಸನೆ ಮಾಡುವಲ್ಲಿ ಬೇಸರ ಪಡಲಾರನು.

" ಹೆದರದಿರು ಮನವೇ ಬೆದರದಿರು ಮನವೇ,
ನಿಜವನರಿದು ನಿಶ್ಚಿಂತನಾಗಿರು ।
ಫಲವಾದ ಮರನ ಕಲ್ಲಲ್ಲಿ ಇಡುವವದೊಂದು ಕೋಟಿ-
ಎಲುವವದಮರನ ಇಡುವುರೊಬ್ಬರ ಕಾಣೆ
ಭಕ್ತಿಯುಳ್ಳವರ ಬೈಯುವವರೊಂದು ಕೋಟಿ
ಭಕ್ತಿಯಿಲ್ಲದವರ ಬೈವರೊಬ್ಬರ ಕಾಣೆ "

ಸವಿಸವಿಯಾದ ಹಣ್ಣುಗಳ ಮರಕ್ಕೆ ಹಣ್ಣು ತಿನ್ನುವಾಸೆಯಿಂದ ಹಲವಾರು ಜನರು ಕಲ್ಲುಗಳಿಂದ ಹೊಡೆಯುವವರೇ ! ಹಣ್ಣಿಲ್ಲದ ಗೊಡ್ಡು ಮರಕ್ಕೆ ಯಾರಾದರೂ ಕಲ್ಲಿನಿಂದ ಹೊಡೆಯುವರೇ? ಇಲ್ಲಿಲ್ಲ ಹಾಗೆಯೇ ಮೃದು ಭಕ್ತಿ, ಸದುವಿನಯ, ಸದಾಚಾರ, ಮೃದು ಭಾಷಣದಿಂದ ಕೂಡಿದ ಸದ್ಭಕ್ತರನ್ನು ಎಲ್ಲರೂ ಕಾಡುವವರೇ ! ವಿಷಮದೃಷ್ಟಿಯಿಂದ ನೋಡುವವರೇ ! ಪೀಡಿಸುವವರೇ ! ಅಂತಹ ಪ್ರಸಂಗದಲ್ಲಿ ಭಕ್ತನು ಹೊಗಳಿಕೆಗೆ ಹಿಗ್ಗದೇ ತೆಗಳಿಕೆಗೆ ಕುಗ್ಗದೇ ಸಮಪ್ರಜ್ಞೆಯುಳ್ಳವನಾಗಿರಬೇಕು. ಈ ಹಿಗ್ಗುಕುಗ್ಗುಗಳ ತಗ್ಗಿನಲ್ಲಿ ಬೀಳದೇ ಹೆದರದೇ ಬೆದರದೇ ಬೇಸರಪಡದೇ ಹರುಷಭರಿತಚಿತ್ತನಾಗಿರಬೇಕು. ಅದುವೇ ನಿಜವಾದ ಭಕ್ತನ ಲಕ್ಷಣ ಎಂದು ಮಹಾದೇವಿಯಕ್ಕ ಹೇಳಿರುವಳು.

" ಆಡಿ ಕಾಲು ದಣಿಯವು ನೋಡಿ ಕಣ್ಣು ದಣಿಯವು ।
ಹಾಡಿ ನಾಲಗೆ ದಣಿಯದು ಇನ್ನೇವೆನಿನ್ನೇವೆ ।
ನಿಮ್ಮ ಕೈಯಾರೆ ಪೂಜಿಸಿ ಮನದಣಿಯಲೊಲ್ಲದಿನ್ನೇವೆನಿನ್ನೇವೆ ।
ಕೂಡಲ ಸಂಗಮದೇವ ಕೇಳಯ್ಯ ನಿಮ್ಮ ಉದರವ ಬಗಿದಾನು ।
ಹೊಗುವ ಭರವೆನಗೆ ॥
" ವಾರವೆಂದರಿಯೆ ದಿನವೆಂದರಿಯೆ । ಏನೆಂದರಿಯೆನಯ್ಯ ॥
ಇರುಳೆಂದರಿಯೆ ಹಗಲೆಂದರಿಯೆ । ಏನೆಂದರಿಯೆನಯ್ಯ ॥
ನಿಮ್ಮ ಪೂಜಿಸಿ ಎನ್ನುವ ಮರೆವೆ ।
ಕೂಡಲಸಂಗಮದೇವ " ।

ಎಂದು ಹೇಳಿದ ಬಸವಣ್ಣನವರ ವಚನಗಳೇ ಅವರು ಲಿಂಗಪೂಜೆಯನ್ನು ಮಾಡುವಲ್ಲಿ ಸ್ವಲ್ಪು ಬೇಸರ ಪಡುತ್ತಿದ್ದಿಲ್ಲ ಎಂಬುದನ್ನು ಸೂಚಿಸುತ್ತದೆ, ಕವಿಸಾರ್ವಭೌಮನಾದ ಹರಿಹರನು—

ಜಲಚರಂ ಸೋಂಕದಗ್ಘವಣಿ ಬೇಕೆಂದೊಡಂ ।
ಸಲೆವತ್ಸನುಣ್ಣದ ಪಯಂ ನೇಮವೆಂದೊಡಂ ।
ದೇವಲೋಕದ ಕಮಲವೆಮಗೆ ಬೇಕೆಂದಿದನೆ ॥
ಕೋಡಿದನೆ ಕೊಂಕಿದನೆ ಕುಂದಿದನೆ ।
ಬಾಡಿದ್ದನೆ ಬಳ್ಕಿದನೆ ಬೆದರಿದನೆ ಬೆಚ್ಚಿದನೆ ? ॥

ಎಂದು ತನ್ನ ರಗಳೆಯಲ್ಲಿ ಶ್ರೀ ಬಸವೇಶ್ವರರು ಶಿವಲಿಂಗಾರ್ಚಕರಿಗೆ ಬೇಡಿಬೇಡಿದುದನ್ನೆಲ್ಲ ಬೇಸರ್ಗೊಳ್ಳದೇ ಕೊಡುತ್ತಿದ್ದರೆಂದು ಬಣ್ಣಿಸಿರುವನು.

ಕರುಪ್ಪ ಕುಡಿದು ಎಂಜಲಾದ ಹಾಲು ಅಭಿಷೇಕಕ್ಕೆ ಬೇಡ. ಕುಡಿಯದ ಮೀ
ಹಾಲೇ ಬೇಕು. ಜಲಚರಗಳಾದ ಮೀನ:ಮೊಸಳೆಗಳ ಎಂಜಲಾದ ಸಲಿಲಬೇಡ,
ಗಳಿಲ್ಲದ ನೀರೇ ಬೇಕು. ದೇವಲೋಕದ ಕಮಲವೇ ಪೂಜೆಗೆ ಬೇಕು. ಹೀಗೆ ಬಗೆ ಬಗೆ
ಬೇಡಿದರೂ ಶಿವಲಿಂಗ ಪೂಜೆಯ ವಿಷಯ:ದಲ್ಲಿ ಬೇಸರಪಡದೇ ಮತ್ತಷ್ಟೂ ಆನಂದ
ನಾಗಿ ಆನಂದ ಸಾಗರದಲ್ಲಿ ಈಜಾಡಿದನು.

ಇಲ್ಲಿ ಮಾಯೆಯ ಭಕ್ತಿಯು ಸಹಜ ಭಕ್ತಿಯಲ್ಲ. ಆಕೆಯು ಆರಂಭದಲ್ಲಿ ಅಮೃ
ಪಮ,ಪರಿಣಾಮದಲ್ಲಿ ವಿಷೋಪಮ ಎನಿಸಿದ ವೈಷಯಿಕ ಸುಖಕ್ಕಾಗಿ ಪೂಜೆ ಮಾಡು
ವಳು. ದೇವರಸ್ನು ಭಕ್ತಿಯಿಂದ ಪೂಜೆಮಾಡಿ ನಿತ್ಯನಿರತಿಶಯ ಸುಖವನ್ನು ಪಡ
ದೇವರನ್ನೇ ದೂಷಿಸುವ ಮಾಯೆಯನ್ನು ಕಂಡು ವಿಮಲೆಯು ಮನದಲ್ಲಿ ನೊ
ಕೊಂಡಳು.

ಮಾಯೆಯೇ ದೇವರಪೂಜೆಯನ್ನು ಮಾಡುವ ವಿಧಿವಿಧಾನಗಳನ್ನರಿಯದೆ ಸು
ದೇವರನ್ನೇಕೆ ನಿಂದಿಸುವಿ ? ಶಿವಾಗಮಗಳು-

ಶುದ್ಧಸ್ಪಟಿಕ ಸಂಕಾಶ ಶುದ್ಧ ಚಾಮೀಕರದ್ಯುತಿಃ ।
ಶುದ್ಧದೇಹೋ ಭವೇದ್ದೇವಿ ನರೋ ಲಿಂಗಾರ್ಚನೇರತಃ ॥
ಮೂರ್ಖೋವಾ ಪಂಡಿತೋವಾಪಿ ಬ್ರಾಹ್ಮಣೋಽಪ್ಯನ್ಯವಾ
ಶಿವಲಿಂಗಾರ್ಚನಾನಿಷ್ಠಶ್ಚವನ್ಮಾನ್ಯ ಏವಸಃ ॥

ಎಂದು ಶಿವಪೂಜೆಯ ಮಹತ್ವವನ್ನು ಸಾರಿ ಹೇಳುವದಲ್ಲದೆ ಶಿವಸಿದ್ಧಾಂತವು.

'ತಸ್ಮಾದ್ಗುರುಃಉಪಾಯಃ' 'ನಗುರೋರಧಿಕಂ'
'ಅಂತಸ್ತಿಮಿರ ನಿರ್ಭೇದ ಭಾನವೇ ಕಾಮಧೇನವೇ ।
ಪದಂತೇವಾಸಿನಾಂ ಕಲ್ಪತರವೇ ಗುರವೇನಮಃ ।।
ಗುರುಃಸ್ಪೃಶತಿ ಹಸ್ತೇನ ಯಂಯಂ ಪಶ್ಯತಿ ಚಕ್ಷುಷಾ ।
ಶಿವಂ ಭವತಿ ತತ್ಸರ್ವಂ ಗುರೋರೇವಪ್ರಸಾದತಃ ।।

ಗುರೂಪದೇಶವಿಲ್ಲದೆ ಮುಕ್ತಿ ಸಮನಿಸದು ಎಂದು ಹೇಳುವದು.

"ಶ್ರೀ ಗುರು ವಚನುಪದೇಶವನಾಲಿಸಿದಾಗಳಹುದು ನರರಿಗೆ ಮುಕುತಿ" ಎಂ
ನಿಜಗುಣಶಿವಯೋಗಿಗಳು-

ಮಡಿಕೆಯ ಮಾಡುವಡೆ ಮಣ್ಣೇ ಮೊದಲು,
ತೊಡಿಗೆಯ ಮಾಡುವಡೆ ಹೊನ್ನೇ ಮೊದಲು
ಶಿವಪಥವನರಿವೊಡೆ ಗುರು ಪಥವೇ ಮೊದಲು. "

ಎಂದು ಶ್ರೀ ಬಸವಣ್ಣನವರು ಶಿವಪಥವನ್ನರಿಯಬೇಕಾದರೆ ಗುರು ಪಥವು ಪ್ರ
ಬೇಕೆಂದು ಹೇಳಿರುವರು, ಗಣಿಕೆ ಗಣಿಕೆಗಳಲ್ಲಿಯೂ ಇನಿರಸ ಹೊರಚೆಮ್ಮುವಂತೆ
ಬೆಳೆದ ಕಬ್ಬನ್ನು ಸವಿಯದೇ ರಸವಿಲ್ಲದ ... ಬಿದಿರನ್ನು ಮೆಲ್ಲುವ ಮೂಢ

ಶಿವಭಕ್ತಿಯ ಮಹಿಮೆಯನ್ನರಿಯದ ನಿನ್ನಪಾಡಾಗಿರುವದು. ರೂಪಲಾವಣ್ಯವನ್ನು ಕಾಣುವ ಕಣ್ಣಿಲ್ಲದ ಹುಟ್ಟುಗುರುಡನು ಮುಖಸೌಂದರ್ಯವನ್ನು ನೋಡುವೆನೆಂದು ಕೈಯಲ್ಲಿ ದರ್ಪಣವನ್ನು ಹಿಡಿದರೆ ಹೇಗೆ ಅಪಹಾಸ್ಯಕ್ಕೆ ಗುರಿಯಾಗುವನೋ ಹಾಗೆಯೇ ದೀಕ್ಷೆಮಾಡಿ ಒಳಗಣ್ಣನ್ನು ತೆರೆಯಿಸುವ ಸದ್ಗುರುವಿನ ಉಪದೇಶವಿಲ್ಲದ ನಿನ್ನ ಪರಿಸ್ಥಿತಿಯಾಗಿದೆ.

ಹೂಗಳ ಕಂಪನ್ನು ಮೂಗಿನಿಂದ ಮೂಸಿ ನೋಡುವರಲ್ಲದೆ ಯಾರಾದರೂ ದನಿಯನ್ನು ಆಲಿಸುವ ಕಿವಿಯಿಂದ ಮೂಸುವರೇ ? ವಸ್ತು ಸೌಂದರ್ಯವನ್ನು ಕಣ್ಣಿನಿಂದಲೇ ನೋಡ್ವು ವರಲ್ಲದೆ ಸ್ಪರ್ಶಜ್ಞಾನವುಳ್ಳತ್ವಗಿಂದ್ರಿಯದಿಂದ ನೋಡುವರೆ? ಮಧುರಾದಿ ಷಡ್ರಸಗಳನ್ನು ನಾಲಗೆಯಿಂದ ರುಚಿ ನೋಡುವರಲ್ಲದೇ ಯಾರಾದರೂ ಕಣ್ಣಿನಿಂದ ರುಚಿನೋಡುವರೇ ಮೃದು ಮಧುರ ಶಬ್ದವನ್ನು ಕಿವಿಯಿಂದ ಕೇಳ್ವರಲ್ಲದೇ ಮೂಗಿನಿಂದ ಕೇಳುವರೇ ? ಶ್ರೋತ್ರಾದಿ ಇಂದ್ರಿಯಗಳಿಂದಲೇನೇ ಶಬ್ದಾದಿ ವಿಷಯಗಳನ್ನು ಗ್ರಹಿಸುವದು ಸೂಕ್ತ ವಾದುದು, ಅಪ್ರಾಕೃತ ವೀರಶೈವನು ಪ್ರಾಕೃತ ಜನರಂತೆ ವಿಷಯಗಳನ್ನು ಭೋಗಿಸದೇ ಆಯಾಯ ವಿಷಯಗಳನ್ನು ಲಿಂಗಮುಖಕ್ಕೆ ಅರ್ಪಿಸಿ ಪ್ರಸಾದ ರೂಪದಿಂದ ಸ್ವೀಕರಿಸು ವನು. ಶ್ರೀಗುರುವಿನ ಕರಕಮಲಸಂಜಾತನಾದ ಶಿಷ್ಯನು ನರಸುತನೆನಿಸದೇ ಗುರುಸುತ-ನಾಗುವನು. ನರಸುತ ಗುರುಸುತ ಈ ಈರ್ವರ ಪರಿಯೇ ಬೇರೆ. ಈ ಈರ್ವರಲ್ಲಿಯ ತಾರ ತಮ್ಯವನ್ನು ವೈಲಾರದ ಬಸವಲಿಂಗ ಶರಣರು-

" ನರಸುತ ಗುರುಸುತರೀರ್ವರಚರಿತೆಯ ।
ನರಿದು ಜನರು ವಿಚಾರಿಪುದು ॥
ಸಪ್ತವ್ಯಸನಗಳ ಚಿತ್ತದಿ ಕಾಮಿಸಿ ।
ಗುಪ್ತ ಪಾತಕನಹ ನರಸುತನು ।
ಸಪ್ತವಿಧದ ಸದುಭಕ್ತಿಯೊಳಗೆಲೋ ।
ಲುಪ್ತನೆನಿಸುತಿಹ ಗುರುಸುತನು ।
ಧರೆಯೊಳಹಂಕಾರ ಮಮಕಾರಗಳೆಂ ।
ಬೆರಡರೊಳಿರುತಿಹ ನರಸುತನು,
ಶರಣನೆ ಸತಿ ಶಿವಲಿಂಗವೆ ಪತಿ ಎಂ ।
ಬೆರಡರೊಳಿರುತಿಹ ಗುರುಸುತನು ॥

ಎಂಬ ಪದ್ಯದಿಂದ ನರಸುತ ಗುರುಸುತರಲ್ಲಿಯ ವೈಲಕ್ಷಣ್ಯವನ್ನು ಬಹಳಹೃದಯಂಗಮ ವಾಗಿ ಹೇಳಿರುವರು. ಶ್ರೀಗುರುವಿನುಪದೇಶವಂ ಪಡೆದ ಶಿಷ್ಯನು ಮಾಂಸಪಿಂಡವನ್ನು ಕಳೆದುಕೊಂಡು ಮಂತ್ರಶರೀರಿಯಾಗುವನು. ಮಾನವನು ಮಹಾಮಾನವನಾಗುವನು,ದೇವ ಮಾನವನಾಗುವನು, ದಿವ್ಯಮಾನವನಾಗುವನು.

ಹೀಗೆ ಮಾಂಸಪಿಂಡವಳಿದು ಮಂತ್ರಮಯ ಶರೀರಿಯಾದ ವೀರಶೈವನು ಪಂಚೇಂದ್ರಿ-ಗಳಿಂದ ಅನುಭವಿಸುವ ಶಬ್ದಾದಿವಿಷಯಗಳನ್ನು ಪ್ರಸಾದರೂಪವಾಗಿಯೇ ಅನುಭವಿಸು

ವನು. ಶಬ್ದವು ಶ್ರವಣೇಂದ್ರಿಯಗತ, ಪ್ರಸಾದಲಿಂಗಕ್ಕರ್ಪಿತವಾಗಿ ಶಬ್ದ ಪ್ರಸಾದ ವದು. ಸ್ಪರ್ಶವಿಷಯವು ತ್ವಗಿಂದ್ರಿಯಗತ ಜಂಗಮಲಿಂಗಕ್ಕರ್ಪಿತವಾಗಿ ಸ್ಪರ್ಶ ಪ್ರ ವಾಗುವದು.ಹೀಗೆ ಪಂಚ ವಿಷಯಗಳು ಪ್ರಸಾದಪೂಜಕವಾಗಿ ಜೀವನನ್ನು ದೇವ ಮಾಡುವ ಶ್ರೇಯೋಮಾರ್ಗದತ್ತ ಒಯ್ಯುವವು. ಈ ಅವಧಾನವನ್ನರಿಯದೇ ಮಾ ಪೂಜೆಯು ಜೀವಕಳೆಯಿಲ್ಲದ ದೇಹಕ್ಕೆ ಅಂದರೆ ಹೆಣಕ್ಕೆ ಶೃಂಗಾರ ಮಾಡಿದಂತೆ ವಾದುದು.

ಮಾಯೆಯೇ ನೀನು ಸದ್ಗುರುಸೇವೆ ಮಾಡಿಲ್ಲ. ವಿಧ್ಯುಕ್ತವಾಗಿ ನಿನಗೆ ಶ್ರೀಗು ನಿಂದ ಮಂತ್ರೋಪದೇಶವಿಲ್ಲ, ಅರಿದುಮಾಡುವ ಸಹಜಮಾಟಸ್ಥಲದ ಮರ್ಮ ಗೊತ್ತಿ ಮಂತ್ರ ತಂತ್ರಗಳ ಸಕೀಲಗೊತ್ತಿಲ್ಲ, ಅಂಗೇಂದ್ರಿಯಗಳನ್ನು ಲಿಂಗೇಂದ್ರಿಯ ಮಾಡುವ ಹದವನ್ನರಿತಿಲ್ಲ.ಭಕ್ತಾದಿ ಐಕ್ಯಾಂತ ಸ್ಥಲದಲ್ಲಿರುವ ಷಟ್‌ಶಕ್ತಿಯುಕ್ತ ಆ ಲಿಂಗಗಳನ್ನು ಶ್ರದ್ಧೆ ಅವಧಾನಾದಿಭಕ್ತಿಗಳ ಮುಖಾಂತರ, ಪೂಜಿಸಿ ' ತನಗವಸಾ ಽವಲಿಂಗಂ ಅದಕ್ಕವಸಾನ ಘೂಮಿತಾ, ' ಎನಿಸುವಂತಹ ಶಿವಾದ್ವೈತಸ್ಥಿತಿಗೆ ಮು ರಹಸ್ಯ ಗೊತ್ತಿಲ್ಲ. ಈ ಎಲ್ಲವನ್ನು ಮಾಡಿ ಸಕಲ ದುಃಖ ನಿವೃತ್ತಿ ನಿತ್ಯಾನಂದಪದಪ್ರಾ ಯನ್ನು ಪಡೆಯಬೇಕು. ಎಂದು ಮೊದಲಾಗಿ ವಿಮಳೆಯು ಮಾಯಾದೇವಿಗೆ ಯಾಗಿ ತಿಳಿಹೇಳಿದರೂ ಆ ಮಾತಿನ ಪರಿಣಾಮವೇನೂ ಆಗದೇ ಬೋರ್ಗಲ್ಲ ಮೇಲೆ ಗರೆದಂತೆ, ಸಮುದ್ರದ ಮೇಲೆ ಮಳೆಗರೆದಂತೆ ನಿಷ್ಪ್ರಯೋಜನವಾಯಿತು. ಬುದ್ಧಿಯ ಕಾಮವಾಸನೆಯಿಂದ ಬಳಲುವ ಆಕಾಮಿನಿಗೆ ವಿಮಳೆಯ ನಿರ್ಮಲ ನುಡಿಗ ಏನೂ ಪ್ರಯೋಜನವಾಗದೆ ನೀರಲ್ಲಿ ಹೋಮ ಮಾಡಿದಂತೆ ವ್ಯರ್ಥವಾಯಿತು, ವಿಮಳೆಯು ಮಾಯಾದೇವಿಯ ಅಂತರಂಗದಲ್ಲಿ ಏನಿದೆ ಎಂಬುದನ್ನು ತಿಳಿಯುವ ದಿಂದ ಅವಳನ್ನು ಕುರಿತು ಮಾಯಾದೇವಿಯೇ— ಅಲ್ಲಮನ ಸೊಲ್ಲನ್ನು ಅಡಗಿ ಬಿಡುವೆನೆಂದು ಹೊರಹೊರಗೆ ಬಿಂಕದ ಬಡಿವಾರದ ಮಾತುಗಳನ್ನಾಡುವಿ, ಆದರೆ ಸೂಕ್ಷ್ಮವಾಗಿ, ಆಳವಾಗಿ ವಿಚಾರ ಮಾಡಿದರೆ ನೀನು ಅಲ್ಲಮನಿಗೆ ಸೋತಂತೆ ಕಂಡು ವದು. ನೀನು ಕಾಮನ ಬಾಣಗಳಿಗೆ ತುತ್ತಾಗಿ ಸತ್ವಗೆಟ್ಟಂತೆ ತೋರುವದು. ಕಾಮವಿ ವಿವಿಧ ವಿನ್ಯಾಸಗಳು ನಿನ್ನಲ್ಲಿ ಸ್ಪಷ್ಟವಾಗಿ ಎದ್ದುಕಾಣುತ್ತಿವೆ. ನನ್ನೆದುರಿಗೆ ಅವು ಮುಚ್ಚಿಡದೇ ಬಚ್ಚಿಡದೇ ಬಿಚ್ಚಿಹೇಳು.ಇಲ್ಲವಾದರೆ ನಿನಗೆ ಪಾರ್ವತಿಯ ಆಣೆ ಎಂದು ಇಕ್ಕಲು ಮಾಯೆಯು ಹವ್ವನೇ ಹಾರಿ ಆಣೆಗೆ ಅಂಜಿ ಮೆತ್ತಗಾಗಿ ವಾದ್ಯವಿದ್ಯೆ ಬಲ್ಲಿದನಾದ ಅಲ್ಲಮನೆಂಬ ಚೆಲುವನನ್ನು ಕಾಣುತ್ತಲೇ ನಿಜವಾಗಿ ನಾನು ಕಾಮಾ ಯಿಂದ ದಶಾವಸ್ಥೆಗಳಿಗೀಡಾಗಿ ಪ್ರಾಣಾಂತಿಕ ಕಾಮಬಾಧೆಯಿಂದ ಕಂಗೆಟ್ಟು ಕೊರಗುತ್ತಿರುವೆನು ಎಂದು ದಿಟವಾದ ಮಾತನ್ನು ಹೇಳಿದಳು.

ನಿರ್ವಿಕಾರ ನಿರಂಜನ ಅಲ್ಲಮನು ಬೇರೆ, ಮದ್ದಳೆಯ ಬಾರಿಸುವ ಅಲ್ಲಮನು ಬೇರೆ ವಾದವನ್ನು ಹೂಡುವದು ಬೇಡ. ನೋಟಮಾತ್ರದಿಂದಲೇ ಸಕಲಪ್ರಾಣಿಗಳ ಸಾರವ ಹಿಪ್ಪೆಯ ಮಾಡಿ ಊಃಫೆಂದು ಊದುವ ಮಾಯೆಯ ಬಲೆಗೆ ಸಿಲುಕದೇ ಬಯಲೊ ಬಯಲಿಗನಾಗಿ ಇರುವ ಅಲ್ಲಮನೂ ಮೃದಂಗ ಬಾರಿಸುವ ಅಲ್ಲಮನೂ ಒಂದೇ.

ತಾಮಸ ಬುದ್ಧಿಯನ್ನು ಬಿಟ್ಟು ಸಾತ್ವಿಕ ಬುದ್ಧಿಯಿಂದ ವಿಚಾರಿಸಿದರೆ ಎಲ್ಲವೂ ನಿನಗೆ ತಿಳಿಯುವದು ಎಂದು ಹೇಳಲು, ಒಳ್ಳೇದು, ಆಗಲಿ ಎಂದುಒಪ್ಪಿ ಮೊದಲು ತಾಯಿಗೆ ಮಾತುಕೊಟ್ಟ ಪ್ರಕಾರ ಮದ್ದಳೆಯ ಅಲ್ಲಮನನ್ನು ಸೋಲಿಸುವ ಪ್ರತಿಜ್ಞೆಯನ್ನು ಪೂರೈಸುವೆನೆಂದು ಹೇಳಿ ವಿಮಳೆಯನ್ನು ಕರೆದುಕೊಂಡೇ ಮಧುಕೇಶ್ವರನ ದೇವಸ್ಥಾನಕ್ಕೆ ಬಂದು ವಂದನೆ ಮಾಡಿ ನೃತ್ಯರಂಗದಲ್ಲಿ ನಿಲ್ಲಲು,ಅತ್ತ ಮದ್ದಳೆಯ ಅಲ್ಲಮನು ಮದ್ದಳೆ ಬಾರಿಸುತ್ತ ಮಧುಕೇಶ್ವರನ ಹೊರವಲಯದಲ್ಲಿ ನಿಂತುಕೊಂಡನು.

ಮೂಜಗದ ಜೀವರೆಂಬ ಬೊಂಬೆಗಳನ್ನು ಆತ್ಮವೆಂಬ ಸೂತ್ರವನ್ನು ಹವಣಿಸಿ, ಮೋಹದೊಡನೆ ಮೇಳೈಸಿ ಕುಣಿಸುವ ಮಾಯಾಂಗನೆಯನ್ನು ಹೀಗೆಯೇ ಕುಣಿಸುವೆನು ನೋಡಿರೋ ಎಂದು ಪ್ರತ್ಯಕ್ಷತೋರಿಸುವನೋ ಎಂಬಂತೆಮಾಯಾಂಗನೆಯನ್ನು ಅಲ್ಲಮನು ತಾನು ಹೇಳಿದಂತೆ ಕುಣಿಯಹಚ್ಚಿದನು. ನೋಡುವ ನೋಟಕರಿಗೇನೋ ಅಲ್ಲಮನು ಮಾಯೆಯ ಮಾಟಕ್ಕೆಮರುಳಾಗಿ ನೋಡುವವನಂತೆ ಕಂಡರೂ ಅವನ ಮನದ ಕೂಟವೆಲ್ಲ ಲಿಂಗದಲ್ಲಿತ್ತು.

ಕಾಯಕರಣಂಗಳ ಆಟವೆಲ್ಲ ಲಿಂಗದ ಮಾಟದಲ್ಲಿ ನಡೆಯುತ್ತಿತ್ತು. ಅವನ ತನುಮನ ಭಾವಂಗಳೆಲ್ಲ ಮಹಾತನು, ಸುಮನ, ಸದ್ಭಾವಂಗಳಾಗಿದ್ದವು. ಅಮಾವಾಸ್ಯೆಯ ಒಂದೇ ಒಂದು ದಿನ ಬ್ರಹ್ಮಾಂಡದ ತುಂಬೆಲ್ಲ ಕಗ್ಗತ್ತಲೆಯು ಮುಸುಕಿದರೆ ಈ ಪಿಂಡಾಂಡದಲ್ಲಿ ಕೋಟಿ ಕೋಟಿ ಸೂರ್ಯರು ಉದಯಿಸಿದರೂ ಚದುರಿಹೋಗದಂತಹ ಒಂದು ಅದ್ಭುತ ಕತ್ತಲೆಯು ಯಾವಾಗಲೂ ಮುಸುಕಿಕೊಂಡಿದೆ. ಅದೇ ಅಜ್ಞಾನವೆಂಬ ಕತ್ತಲೆ, ಇದನ್ನೇ ಉಪನಿಷತ್ಕಾರರು–

" ಅಂಧಂ ತಮಃ ಪ್ರವಿಶಂತಿಯೇಽವಿದ್ಯಾಮುಪಾಸತೇ "

ಎಂದು ಹೇಳಿರುವರು.

" ಹಿಡಿವಕೈಯ ಮೇಲೆ ಕತ್ತಲೆಯಯ್ಯ । ನೋಡುವ ಕಂಗಳ ಮೇಲೆ ಕತ್ತಲೆಯಯ್ಯ ।
ನೆನೆವ ಮನದ ಮೇಲೆ ಕತ್ತಲೆಯಯ್ಯ । ಕತ್ತಲೆಯೆಂಬುದು ಇತ್ತಲೆಯಯ್ಯ ।
ಗುಹೇಶ್ವರನೆಂಬುದು ಅತ್ತಲೆಯಯ್ಯ ॥ "

ಕೈ ಅಷ್ಟವಿಧಾರ್ಚನೆ, ಷೋಡಶೋಪಚಾರಗಳಿಂದ ಲಿಂಗವನ್ನು ಪೂಜಿಸಲು ಒಲ್ಲದೇ ಪರಧನ , ಪರಸ್ತ್ರೀಯನ್ನು ಮುಟ್ಟಲೆಳಸುವದು; ಕಣ್ಣು ಗುರುದರ್ಶನಕ್ಕೆಳಸದೇ, ಲಿಂಗ ನಿರೀಕ್ಷಣೆ ಮಾಡದೇ ಅಲ್ಲದ ಸಲ್ಲದ, ಮನೋವಿಕಾರವನ್ನುಂಟುಮಾಡುವ ರೂಪಲಾವಣ್ಯಗಳನ್ನು ನೋಡಬಯಸುವದು; ಮನವು ಶಿವಮಂತ್ರಜಪವನ್ನು ಮಾಡದೇ ಅನಿಷ್ಟಚಿಂತನೆ ಮಾಡುವದು, ಒಳಿತಿನ ಕಡೆಗೆ ಎಳಸದೇ ಕೆಡುಕಿನಕಡೆಗೆ ಎಳಸುವದೇ ಒಂದುಕತ್ತಲೆಯಿದ್ದಂತೆ. ಈ ತಾಮಸೀ ಪ್ರವೃತ್ತಿಯು ಹಾಗೂ ತಾಮಸೀ ಪ್ರವೃತ್ತಿಯಿಂದುಂಟಾಗುವ ವಿವಿಧ ವಿಕಾರಗಳುದೂರಾಗಿ ಸಾತ್ವಿಕವೃತ್ತಿಯು ಉದಯವಾಗದಿದ್ದರೆ ಆತ್ಮ ಸಾಕ್ಷಾತ್ಕಾರವಾಗದು ಎಂಬುದನ್ನೇ ಅಲ್ಲಮಪ್ರಭುವು ಮೇಲಿನ ವಚನದಲ್ಲಿ ಹೇಳಿರುವನು.

" ಪಶ್ಚಿಮದಗಿರಿಯಲ್ಲಿ ಚಿತ್ಸೂರ್ಯನುದಯವಾದುದಕಂಡೆ।
ಸುತ್ತುಮುತ್ತಿದಕತ್ತಲೆಯೆಲ್ಲ ಅತ್ತಿತ್ತ ಹರಿದು ಹೋದುದಕಂಡೆ
ಹತ್ತು ದಿಕ್ಕಿನ ಒಳಹೊರಗೆಲ್ಲ ಬೆಳಗಿನವೊತ್ತವೇ ತುಂಬಿದುದಕಂ
ಮುಚ್ಚಿದಕಮಲಂಗಳೆಲ್ಲ ಬಿಚ್ಚಿ ಅರಳಾಗಿ ಹೊಚ್ಚಹೊಸ ಗಂಧವ
ಎಸೆದುದಕಂಡೆ, ಇಂತದರ ಕುಶಲವ ಕಂಡು ಬೆರಗಾದೆನಯ್ಯ
ಅಖಂಡೇಶ್ವರ "

ಬ್ರಹ್ಮಾಂಡದಲ್ಲಿ ಭಾಸ್ಕರನು ಪೂರ್ವದಿಕ್ಕಿನಲ್ಲಿ ಮೂಡಿದರೆ ಪಿಂಡಾಂಡದಲ್ಲಿ ಚಿತ್ಸೂ ಪಶ್ಚಿಮ ದಿಕ್ಕಿನಲ್ಲಿ ಮೂಡುವನು. ಪಶ್ಚಿಮ ಶಿಖಾಚಕ್ರದಲ್ಲಿರುವ ಚಿತ್ಕಳೆಯನ್ನೇ ಗುರುವು ಶಿವದೀಕ್ಷಾಪ್ರಸಂಗದಲ್ಲಿರುವ ನಿರ್ಗುಣ,ನಿರಾಕಾರ, ನಿರಂಜನ ಪರಾತ್ಪರ ವನ್ನೇ ಘೃತಕಾಠಿನ್ಯನ್ಯಾಯದಂತೆ ಸಾಕಾರವನ್ನಾಗಿ ಮಾಡಿ-

" ಪ್ರಾಣವದ್ಧಾರಣೀಯಂ ಪ್ರಾಣಲಿಂಗಮಿದಂತವ
ಕದಾಚಿತ್ ಕುತ್ರಚಿದ್ವಾಪಿ ಮಾವಿಯೋಜಯದೇಹತಃ "

ಎಂದು ಅಪ್ಪಣೆ ಮಾಡಿ ಕರಸ್ಥಲಕ್ಕೀಯುವನು, ಸೂರ್ಯೋದಯವಾದಾಕ್ಷಣ ಸರೋ ದಲ್ಲಿರುವ ಕಮಲಗಳು ಅರಳುವಂತೆ ಎನ್ನದೇಹವೆಂಬ ಸರೋವರದಲ್ಲಿರುವ ಆಧಾ ಸವಚಕ್ರಗಳು ಅರಳಿ ಅಲ್ಲಿರುವ ಆಚಾರಾದಿನವಲಿಂಗಗಳ ಮಂಗಲ ಶುಭವಾಸನೆಯು ತುಂಬೆಲ್ಲ ಪಸರಿಸಿ ಹೊರಸೂಸುತ್ತದೆ.

ನೋಡಲಾಗದೇ ದೇವ ನೋಡಲಾಗದೇ । ಕೂಡೆನಿನ್ನ ದಿಟ್ಟಿ
ನಾಡಲೇಸು ಮಾಡಲೆನ್ನ ॥ ಪ ॥
ಕಲುಷತಿಮಿರ ಮುಸುಕಿ ಮುಗಿಯೆ । ನಲಿಯದೆನ್ನಹೃದಯನಳಿ
ನಲರೆ ದಿವ್ಯರೂಪು ನಿನ್ನ । ಒಲದ ಭಾನುನಯನದಿಂದ ॥ ೧ ॥

ದೇವಾಧಿದೇವ ಎನ್ನ ತನುಮನಭಾವಗಳಲ್ಲಿ ಕಲುಷ, ಪಾಪ, ದುರ್ಗುಣ,ದುರಾಚಾರಗ ಪಾಪರಾಶಿಯ ಕಗ್ಗತ್ತಲೆಯು ಮುಸುಕಿ ಹೋದಾಗ ನನ್ನಹೃದಯ ಕಮಲವು ಅರಳ ಲ್ಲದು, ಅರಳಿ ಸುಗಂಧವನ್ನು ಬೀರಲೊಲ್ಲದು, ಕಾರಣ ನೀನು ಜ್ಞಾನನೇತ್ರದಿಂದೆ ನೋ ದರೆ,ಮುಸುಕಿದ ಅಜ್ಞಾನದ ಕತ್ತಲೆಯು ಚದುರಿಹೋಗುವದು. ನನ್ನ ಹೃದಯಕಮ ಳುವದು. ದೇವಾ ಕೃಪೆಮಾಡಿ ಕರುಣೆಯಿಂದ ನೋಡಲಾಗದೇ ದೇವ ನೋಡಲಾ ಎಂದು ಶ್ರೀಮನ್ನಿಜಗುಣಶಿವಯೋಗಿಗಳು ಬೇಡಿಕೊಂಡಿರುವರು.

" ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂಮುಖಂ ।
ತತ್ತ್ವಂ ಪೂಷನ್ನಪಾವೃಣು ಸತ್ಯಧರ್ಮಾಯದೃಷ್ಟಯೇ ॥ "

ಬುದ್ಧಿಗೆ ಭ್ರಮೆಯನ್ನುಂಟುಮಾಡುವ ಹೇಮ, ಭೂಮಿ, ಕಾಮಿನಿ ಮೊದಲಾದ ಮೋ ವಸ್ತುಗಳಿಂದ ಸತ್ಯದ ಮುಖವು ಮುಚ್ಚಲ್ಪಡುತ್ತದೆ. ಆ ಮೋಹಕ ವಸ್ತುಗಳು

ಸುಂದರವಾಗಿದ್ದರೂ ನಿನ್ನ ಪ್ರತ್ಯಕ್ಷ ದರ್ಶನವನ್ನು ನಾವು ಎಂದಿಗೂ ಮರೆಯಲಾರೆವು. ಓ! ಜ್ಞಾನ ಸೂರ್ಯನೇ ಆ ಮೋಹಕ ವಸ್ತುಗಳನ್ನು ದೂರಸರಿಸಿ, ಸತ್ಯದ ಸಾಕ್ಷಾತ್ಕಾರ ವನ್ನು ಮಾಡಿಸು ಎಂದು ಉಪನಿಷತ್ತಿನಲ್ಲಿ ಋಷಿಗಳು ಬೇಡಿಕೊಂಡಿರುವರು.

ಅಲ್ಲಮನು ಜ್ಞಾನಪ್ರಭಾಪುಂಜರಂಜಿತ ನಿರಂಜನನು ಮನೋರಂಜಕ ವಿಷಯ ಭಂಜ ಕನು. ಚಿದಂಗನಾಲೋಲನು, ಮೃದಂಗನಾ (ಮೃತ್ + ಅಂಗನಾ) ಶೂಲನು, ಮೃದಂಗ ನಾದದ ತರಂಗಗಳಲ್ಲಿ ತೇಲಿ ಲೋಲಾಡುತ್ತಿದ್ದರೂ ಮೃದುವಾದ ಅಂಗನೆಯ ಮೋಹ ತರಂಗಗಳಲ್ಲಿ ತೇಲಿಲೋಲಾಡುವವನಲ್ಲ, ಸೂರ್ಯಕಾಂತಶಿಲೆಗೆ ಸೂರ್ಯನ ಹೊಂಗಿರಣಗಳು ಸ್ಪರ್ಶವಾಗಲು ಸೂರ್ಯಕಾಂತಶಿಲೆಯೊಳಗಿರುವ ಉರಿಯು ಕೊರಹೊಮ್ಮಿ ಹೊರಬರು ವದು. ಚಂದ್ರಕಾಂತಶಿಲೆಗೆ ಚಂದ್ರನ ತಂಗಿರಣಗಳು ಸೋಂಕಲು ಚಂದ್ರಕಾಂತಶಿಲೆಯೊಳ ಗಿರುವ ಅಮೃತಧಾರೆಯು ಹೊರಚಿಮ್ಮುವದು. ಇಂತಹ ಒಂದು ಥಳಥಳಹೊಳೆವ ಧವಳ ವರ್ಣದ ಚಂದ್ರಕಾಂತಶಿಲೆಯ ಬಳಿಯಲ್ಲಿ ಒಳ್ಳೇ ರಭಸದಿಂದ ಬೆಳೆದ ಬಳ್ಳಿಯೊಂದು ಒಮ್ಮಿಂದೊಮ್ಮೆ ಕಾಳ್ಗಿಚ್ಚಿಗೆ ಆಹುತಿಯಾಗಿ ಧಗಧಗ ಉರಿಯುವ ಪ್ರಸಂಗದಲ್ಲಿ ಸುಡುವ ಆ ಬಳ್ಳಿಯ ಉರಿಯೆಲ್ಲವೂ ಚಂದ್ರಕಾಂತ ಶಿಲೆಯಲ್ಲಿಪ್ರತಿಬಿಂಬಿತವಾಗಿ ತೋರಲು ಉರಿವ ಅಗ್ನಿಯ ಲವಲೇಶ ಸಂಪರ್ಕವಿಲ್ಲದ ಚಂದ್ರಕಾಂತಶಿಲೆಯೇ ಬೆಂಕಿಯಿಂದ ಸುಡಲ್ಪಡುವಂತೆ ಹೇಗೆತೋರುವದೋ ಹಾಗೆ ಕಾಮಬಾಣದಿಂದ ಪೀಡಿತಳಾದ ಮಾಯೆಯ ಕಾಮಾಗ್ನಿಯ ಉಜ್ವಲ ಜ್ವಾಲೆಯು ಅಲ್ಲಮನಲ್ಲಿ ಇದ್ದಂತೆ ತೋರುತ್ತಿತ್ತು. ಅಲ್ಲಮನು ನಿರ್ವಿಕಾರನು, ನಿರಾಕಾರನು, ನಿರಂಜನನು, ನಿರ್ಗುಣನು. ಕಾಮಜ್ವಾಲೆಯಿಂದ ಸುಟ್ಟು ಬೂದಿಯಾಗುತ್ತಿ ದ್ದವಳು ಮಾಯೆಯು. ಕಾಮನನ್ನೇ ಸುಟ್ಟು ಬೂದಿ ಮಾಡಿದವನು ನಿಷ್ಕಾಮಿಯಾದ ಅಲ್ಲಮನು. ಮಾಯೆಯಲ್ಲಿ ಕಾಮಜ್ವಾಲೆಯು ನಿಜವಾಗಿ ತೋರುತ್ತಿತ್ತು, ಅಲ್ಲಮಪ್ರಭು ವಿನಲ್ಲಿ ಅದು ಇದ್ದಂತೆ ತೋರುತ್ತಿತ್ತು. ನಿಜವಾಗಿ ತೋರುವದು ಬೇರೆ, ಇದ್ದಂತೆ ತೋ ರುವದು ಬೇರೆ.

" ಎಸೆಯದಿರು ಎಸೆಯದಿರು ಕಾಮ ನಿನ್ನ ಬಾಣವ ಹುಸಿಯಲೇಕೋ ?
ಕಾಮಕ್ರೋಧಲೋಭ ಮೋಹಮದ ಮತ್ಸರ ಇವು ಸಾಲವೆ ನಿನಗೆ ?
ಗುಹೇಶ್ವರಲಿಂಗದ ವಿರಹದಲ್ಲಿ ಬೆಂದವರ ಮರಳಿ ಸುಡಲುಂಟೇ ?
ಮರುಳಕಾಮ "

ಅಸಮಬಾಣನು ಎಸೆವ ಕುಸುಮ ಬಾಣಗಳನ್ನು ಕಸಿದು ಚೆಲ್ಲುವ ಅಲ್ಲಮಪ್ರಭುವಿನ ಅಸಮ ಸಾಹಸವನ್ನು ಈ ವಚನದಲ್ಲಿ ಕಾಣುತ್ತೇವೆ. ಅಲ್ಲಮನು ಮಾಯೆಯ ಅಂತಸ್ಥವನ್ನರಿತು ಇನ್ನು ಈಕೆಗೆ ನಾಟ್ಯಶಿಕ್ಷಕನಾಗಿ ಶಿಕ್ಷಣಕೊಡುವದು ಬೇಡ ಎಂದು ಮದ್ದಳೆಯನ್ನು ತೆಗೆದಿ ರಿಸಿ ಅಡವಿಯತ್ತ ಹೊರಡಲು ಅಲ್ಲಿರುವ ಗೆಳತಿಯರು, ಮೇಳದವರು, ಪ್ರೇಕ್ಷಕರೆಲ್ಲರೂ ಆಶ್ಚರ್ಯಚಕಿತರಾಗಿ ಅಲ್ಲಮನಿಗೆ ನಾವೇನೂ ಬಿರುನುಡಿಗಳನ್ನಾಡಿಲ್ಲ. ಆವ ವಿಧವಾದ ತಿರ ಸ್ಕಾರವನ್ನೂ ಮಾಡಿಲ್ಲ. ಅವನ ಸೇವೆಮಾಡುವಲ್ಲಿಯೂ ಹಿಂದೆಗೆದಿಲ್ಲ. ಹೀಗಿದ್ದರೂ ಸುಮ್ಮ ಸುಮ್ಮನೆ ನಮ್ಮನ್ನು ಬಿಟ್ಟು ಅಡವಿಯತ್ತ ಏಕೆ ಹೊರಟನೆಂದು ಚಿಂತೆಗೀಡಾದರು.

ಆಗ ಮಾಯೆಯು ಅಲ್ಲಮನೇ ಇಲ್ಲಿಯವರೆಗೆ ನನ್ನ ಕಣ್ಮನಗಳು ತಣಿಯುವಂತೆ ದಿವ್ಯಸೌಂದರ್ಯರೂಪವನ್ನು ತೋರಿಸಿ, ಕಿವಿಗಿಂಪಾಗುವಂತೆ ಮೃದಂಗವನ್ನು ಮಧುರವಾಗಿ ನುಡಿಸಿ, ನಿನಗಾಗಿಯೇ ಎಲ್ಲವನ್ನು ಸೂರೆಮಾಡಲು ಹಾರೈಸಿ ಕಾಮನ ಕೂರಲಗಿಗೆ ಗುರಿಯಾದ ಈ ಮಾಯಾಂಗನೆಯನ್ನು ಬಿಟ್ಟುಹೋಗುವದು ಉಚಿತವೇ ? ಎಂದು ಕಾಮಾತುರಳಾದ ಮಾಯೆಯು " ಕಾಮಾತುರಾಣಾಂ ನಭಯಂ ನಲಜ್ಜಾ " ಎಂಬಂತೆ ವಿವಶಳಾಗಿ ಅಲ್ಲಮನನ್ನು ಬೆಂಬತ್ತಿದಳು. ರಾಜಕುಮಾರಿಯಾದ ಮಾಯೆಯು ಕಾಮನ ಕೈಗೊಂಬೆಯಾಗಿ ಹುಚ್ಚಿಯಂತೆ ಅಲ್ಲಮನೆಂಬ ಮದ್ದಳೆಗನನ್ನು ಮೋಹಿಸಿ ಬೆನ್ನಟ್ಟಿ ಹೋದಳು ನೋಡಿರೇ ನೋಡಿರೇ ಎಂದು ಪುರಜನರು, ಪರಿಜನರು, ಪರಿಪರಿಯಿಂದ ಪುರದ ಬೀದಿಗಳಲ್ಲಿ ಢಣಾಡಂಗುರವಾಗಿ ಮಾತಾಡಹತ್ತಿದರು.

ಮಾಯೆಯು ಕಲ್ಲು ಮುಳ್ಳೆನ್ನದೆ, ಹಳ್ಳಕೊಳ್ಳಗಳೆನ್ನದೆ, ದರಿಗಿರಿಗಳೆನ್ನದೆ, ಹುಲಿ ಕರಡಿಕಾಡಾನೆಗಳೆನ್ನದೆ, ಹಸಿವು, ತೃಷೆ, ಬಿಸಿಲು, ಸುಂಟರಗಾಳಿ, ಕಾಳ್ಗಿಚ್ಚುಗಳಪರಿವೆಯಿಲ್ಲದೆ, ನಟ್ಟಡವಿಯಲ್ಲಿ ಕಾಲುಸುಟ್ಟುಕೊಳ್ಳುತ್ತ ಬೀಳುತ್ತ ಏಳುತ್ತ ಕಾಡಿನಲ್ಲಿ ಅಲೆದಾಡುತ್ತಿರಲು ನಿಡುಜಡೆಗಳನ್ನು ಬಿಟ್ಟ ಕಡವಸವನುಟ್ಟ, ಮೃಡನಲ್ಲಿ ಮನಸ್ಸಿಟ್ಟ ಮಹಾಯೋಗೀಶ್ವರರು ಜಪತಪಾದಿಗಳನ್ನು ಬಿಟ್ಟು ಹುಲಿಯನ್ನುಕಂಡ ಚಿಗರೆಗಳು ಓಡುವಂತೆ ದಿಕ್ಕೆಟ್ಟು ಸಿಕ್ಕಸಿಕ್ಕತ್ತ ಓಡಿಹೋದರು, ಸಮಾಧಿಯಿಂದ ಚ್ಯುತರಾದರು.

" ನೆನೆನೆನೆಯೆಂದೊಡೆ ಏನ ನೆನೆವೆನಯ್ಯ ।
ಎನ್ನ ಕಾಯವೇ ಕೈಲಾಸವಾಯಿತ್ತು,
ಮನವೇ ಲಿಂಗವಾಯಿತ್ತು, ತನುವೇ ಸಜ್ಜೆಯಾಯಿತ್ತು,
ನೆನೆವಡೆದೇವನುಂಟೇ ? ನೋಡುವಡೆ ಭಕ್ತರುಂಟೇ ।
ಗುಹೇಶ್ವರಲಿಂಗ ಲೀಯ್ಯವಾಯಿತ್ತು "
" ನಿರ್ವಿಕಲ್ಪಕವೆಂಬ ನಿಜೈಕ್ಯದೊಳಗಯ್ಯ ।
ನಿರಹಂಭಾವದಲ್ಲಿ ನಾನಿರ್ದನು ।
ನೋಡಿಹೆನೆಂದರೆ ನೋಡಲಿಲ್ಲ, ಕೇಳಿಹೆನೆಂದರೆ ಕೇಳಲಿಲ್ಲ,
ಘನನಿರಂಜನ ಬೆಳಗು ಇಂತಾದುದೇನೆಂಬೆ ಗುಹೇಶ್ವರ "

ಮಾತು ಮನಂಗಳಿಂದತ್ತತ್ತ ಮೀರಿದ ನಿಜದ ನಿಬ್ಬೆರಗಿನಲ್ಲಿ ನಿಂದ ಅಲ್ಲಮನು ಪೂರ್ವ ರೂಪವನ್ನು, ಬಿಟ್ಟು ಬೆಂಬತ್ತಿ ಬರ್ಪ ಮಾಯೆಯುನ್ನು, ಸಖಿಯರನ್ನು, ಹಾಗೂ ವಿಭೂತಿ ರುದ್ರಾಕ್ಷಿಗಳ ಗಂಟುಕಟ್ಟಿಕೊಂಡು, ಕೃಷ್ಣಾಜಿನವನ್ನು ಉಟ್ಟುಕೊಂಡು ಯೋಗದಂಡಗಳನ್ನು ಬೀಸಾಟಿ ಓಡುತ್ತಿದ್ದ ಮುನಿಗಳನ್ನು ಕರುಣಿಸಬೇಕೆಂದು ಓರ್ವ ತಪಸ್ವಿಯರೂಪವನ್ನು ಧರಿಸಿ, ಓ! ಮುನಿಗಳಿರಾ ಚಿತ್ತಸ್ಥೈರ್ಯವನ್ನು ಕಳೆದುಕೊಳ್ಳಬೇಡಿರಿ, ಸ್ವಸ್ವರೂಪಾನುಸಂಧಾನದಿಂದ ಹಿಂದೆಗೆಯಬೇಡಿರಿ, ಭಯಪಡಬೇಡಿರಿ, ಎಂದು ಅಭಯವಿತ್ತು ಆಶೀರ್ವದಿಸುವಷ್ಟರಲ್ಲಿ ಮಾಯೆಯುಗೆಳತಿಯರು ಬಂದು ಅಲ್ಲಮನನ್ನು ಸುತ್ತುವರಿದರು. ಅಲ್ಲಮನು ನಿನ್ನ ನೋಡಿದಾಕ್ಷಣ ಹಸಿವುಹಿಂಗಿ, ತೃಷೆಯಡಗಿ, ಅಡವಿಯಲ್ಲಿ ಕಲ್ಲು ಮುಳ್ಳು ತುಳಿದು

ಹಳ್ಳಕೊಳ್ಳಗಳನ್ನೂ ದಾಟಿ ಉಂಟಾದ ದಣಿವೆಲ್ಲ ಹೋಗಿಬಿಟ್ಟಿತು ಎಂದು ವಿನಂತಿಸುತ್ತ- ಮಾಯೆ– ಅಲ್ಲಮನೇ, ಈಸುದಿನ ಮಾಯೆಗೆ ಒಲಿದಂತೆ ನಟಿಸಿ, ಲೇಸುಮಾಡಿ ಕಡೆಗೆ ಹೀಗೆ ಘಾಸಿಮಾಡುವದುಚಿತವೇ ?

ಅಲ್ಲಮ – ಮಾಯೆಯೇ ನನ್ನನ್ನು ಬಯಸಬೇಕೆಂದು ನಿನಗೆ ಹೇಳಿದೆನೇ ? ನನ್ನನ್ನು ಕರೆಯಿಸಬೇಕೆಂದಾದರೂ ಹೇಳಿದ್ದೆನೇ ? ಕರೆಯಿಸಿ ನಾಟ್ಯಶಾಲೆಯ ಹೊರಭಾಗದಲ್ಲಿರಬೇಕೆಂದು ಹೇಳಿದಿರಲ್ಲ? ಹೀಗೆ ಉದಾಸೀನ ಮಾಡಲು ಹೇಳಿದ್ದೆನೇ? ಇಂತಹ ಕುಟಿಲ ಕುಹಕಗುಣಗಳು ನಾರಿಯರಿಗೆ ಸಹಜವಾಗಿರುವವು ಎಂದು ಕುಪಿತನಾಗಿ ನುಡಿದನು.

ಮಾಯೆ – ಈಶಸೇವೆಯಲ್ಲಿದ್ದ ಮುಗುದೆಗೆ ಮೋಹದ ಬಲೆಯುಬೀಸಿ ಕಾಮಪಾಶದಲ್ಲಿ ಕೆಡವಿದ ನೀನು ಚಪಲಿಗ, ಕುತ್ಸಿತ. ಮೋಸ ಮಾಡಿದವರಾರು? ನೀನು ಧೂರ್ತನಲ್ಲವೇ ?

ಅಲ್ಲಮ – ಮಾಯೆಯೇ ನನಗೆ ಧೂರ್ತನೆಂದೂ, ಕುಟಿಲ, ಕುಹಕ, ಚಪಲಿಗನೆಂದೂ ಕರೆಯುವಿ. ನಾನು ಧೂರ್ತನೋ ನೀನು ಧೂರ್ತೆಯೋ ? ಎಂಬುದನ್ನು ಹರಿಬ್ರಹ್ಮಾದಿಗಳನ್ನು ಕೇಳಿ ನೋಡು, ತಾನೇ ತಿಳಿವುದು. ವಂಚನೆ. ಮೋಸ, ಕುಟಿಲ, ನೀಚತನ, ಕುತಂತ್ರ ಸುಳ್ಳು ಮೊದಲಾದ ತಾಮಸ ಗುಣಗಳು ಮಾಯೆಯವೇ ಎಂಬುದನ್ನು ಹರಿಬ್ರಹ್ಮಾದಿಗಳೂ; ಸಿದ್ಧರೂ ಸಾಧ್ಯರೂ ಮನುಮುನಿಗಳೂ ಬಲ್ಲರು. ಮಾಯೆಯೇ ! ನಿನ್ನಲ್ಲಿರುವ ದುರ್ಗುಣಗಳ ಸಮೂಹವನ್ನೇ ನನ್ನಲ್ಲಿ ಆರೋಪಿಸಿ ಮಾತಾಡುವಿ. ಇದು ನೀನು ಧೂರ್ತೆಯೆಂಬುದಕ್ಕೆ ನಿದರ್ಶನವಾಗಿರುವದು.

ಮಾಯೆ – ಅಲ್ಲಮನೇ ನೀನು ಯಾರನ್ನು ಕೇಳಬೇಕೆಂದು ಹೇಳುವಿಯೋ ಅವರೆಲ್ಲರು ನನ್ನ ಆಧೀನದಲ್ಲಿರುವರು. ಅವರ ಪತಾಕೃಮವು ನನ್ನೆದುರುನಡೆಯದು, ನನ್ನ ಹೆಸರು ಕೇಳಿದರೂ ಅವರೆಲ್ಲ ಥರಥರ ನಡುಗುವರು. ನನ್ನ ಮುಂದೆ ಅವರೆಲ್ಲರೂ ಹತವೀರ್ಯರಾಗಿ ಮೂಲೆಗೆ ಕೂಡುವರು. ವಿಷ್ಣುವಿನ ಎದೆಯ ಮೇಲೆ ಲಕ್ಷ್ಮಿಯಾಗಿ ನಾನೇ ಕುಳಿತಿರುವೆನು. ಶಿವನ ಅರ್ಧಾಂಗವನ್ನು ವ್ಯಾಪಿಸಿ ಬಿಟ್ಟಿರುವೆನು, ಸೃಷ್ಟಿಕರ್ತನಾದ ಬ್ರಹ್ಮನ ನಾಲಗೆಯ ಮೇಲೆ ಸರಸ್ವತಿಯಾಗಿ ಕುಳಿತಿರುವೆನು. ಇಂತಿಂತಹರ ಪಾಡೇ ಹೀಗಿರುವಾಗ ಸಾಮಾನ್ಯರನ್ನು ಕೇಳುವವರಾರು? ಸುರ, ನರ, ನಾಗ, ದನುಜ, ಮನುಜರೆಂಬ ಹುಚ್ಚರ ಗುಂಪನ್ನು ಸೇವಕರ ಕೈಯಲ್ಲಿ ಸೇವಕರನ್ನಾಗಿ ಮಾಡಿರುವೆನು. ಅವರನ್ನೆಲ್ಲ ನನ್ನ ಕೈಸನ್ನೆಯಿಂದಲೇ ಹೇಳಿದಂತೆ ಕೇಳುವ ಹಾಗೆ ಮಾಡಿರುವೆನು.

ಅಲ್ಲಮ – ಮಾಯೆಯೇ ಹೆಡ್ಡರಂತೆ ದೊಡ್ಡದೊಡ್ಡ ಮಾತುಗಳನ್ನಾಡಬೇಡ. ಹರಿಹರಬ್ರಹ್ಮಾದಿಗಳನ್ನು ಸೋಲಿಸಿರುವೆನೆಂದು ಬಡಿವಾರದ ಮಾತುಗಳನ್ನಾಡುವೆ. ಈಗ ನನ್ನನ್ನು ಯಾರು ಕುಣಿಸಿರುವರು ? ಯಾರು ದಣಿಸಿರುವರು ? ಇದನ್ನೇನಾದರೂ ಅರಿತಿರುವೆಯಾ ? ಇದಾವುದನ್ನೂ ಲೆಕ್ಕಿಸದ ಸೊಕ್ಕಿನಿಂದಲೇ ಮಾತಾಡುವಿಯಲ್ಲ !

ಮಾಯೆ – ಅಲ್ಲಮನೇ ಸೋಲಿಸುವ, ಸೋಲುವ ಮಾತು ಈಗ ಬೇಡ. ನಿನ್ನಲ್ಲಿ ಅನುರಾಗವುಳ್ಳ ಮಾಯೆಯ ಮನದಾಸೆಯನ್ನು ಈಡೇರಿಸು ಕೃಪೆಮಾಡು.

ಅಲ್ಲಮ - ಮಾಯೆಯೇ ! " ಅವಶ್ಯ ಮನುಭೋಕ್ತವ್ಯಂ ಕೃತಂಕರ್ಮಶುಭಾ
ನಾವು ಯಾವ ವಿಧವಾದ ಕರ್ಮವನ್ನು ಮಾಡುವೆವೋ ಆ ವಿಧವಾದ ಫ
ಪಡೆಯುತ್ತೇವೆ. ಶುಭಕರ್ಮವನ್ನು ಮಾಡಿದರೆ ಸುಖವನ್ನು, ಅಶುಭಕರ್ಮವನ್ನು
ದುಃಖವನ್ನು ಅನುಭವಿಸಲೇಬೇಕು ಹಾಗೆ ನೀನಾದರೂ ಮಾಡಿದಷ್ಟು ಕರ್ಮದ ಫ
ಉಣ್ಣಲೇಬೇಕಲ್ಲವೇ ? ಕೈಗೆ ನಿಲುಕದ ಫಲಕ್ಕಾಗಿ ಆಸೆಮಾಡಿ ಗಾಸಿಯಾಗಬೇ
ಯನ್ನು ಗುದ್ದಿ ಮೈನೋಯಿಸಿಕೊಂಡವನ ಪಾಡು ನಿನ್ನದಾಗುವದು. ಸುಮ್ಮನೇ
ರೊಡಗೂಡಿ ತಿರುಗಿ ನಿನ್ನಮನೆಗೆ ಹೋಗುವದುಚಿತ.

ಮಾಯೆ - ಅಲ್ಲಮನನ್ನು ಸೋಲಿಸಿಯೇ ಬರುವೆನೆಂದು ಕೈಲಾಸದಲ್ಲಿ ಮಾಡಿದ
ಯು ಹುಸಿಯಾಗುವ ಪ್ರಸಂಗ ಬಂದಿತೇ ? ನಾನು ನನ್ನ ಪ್ರತಿಜ್ಞೆಯನ್ನು ಪೂ
ತಿರುಗಿ ಹಾಗೇ ಹೋದರೆ ಕೈಲಾಸದವರೆಲ್ಲ ನನ್ನನ್ನು ಕೈಲಾಗದ ಹೇಡಿಯೆಂದು
ನಗುತ್ತ ಚಪ್ಪಾಳೆ ಬಾರಿಸುವರಲ್ಲವೇ ! ಅಲ್ಲಮನೇ ಕೊಳೆತು ಸೋರುವ ಹಣ್ಣ
ಕಾದ ಕಬ್ಬಿಣದ ಹಾರಿಯಿಂದ ಎಳೆಯುವರೇ ?

ಅಲ್ಲಮ - ಮಾಯೆ, ನಿನಗೆ ಏನು ಹೇಳಿದರೂ ಬುದ್ಧಿ ಬರಲೊಲ್ಲದು. ಕ
ತುಳಿದು ನೂರಾರು ಜೀಲ ಸಾಸಿವೆಯ ಕಾಳಿನ, ಜೋಳದ, ಗೋಧಿಯ, ರಾ
ಕಡೆಗೆ ಮಾಡಿದ ಎತ್ತು ತಿನ್ನುವದು ಹೊಟ್ಟು ಕಣಿಕೆಯನ್ನಲ್ಲದೇ ಸತ್ವಯುತ ಕಾ
ನಿನಗೆ ಹೇಳಿದ ಉಪದೇಶವೆಲ್ಲವೂ ಕಿವುಡನ ಮುಂದೆ ಕಿನ್ನರಿ ಬಾರಿಸಿದಂತೆ ವ್ಯರ್ಥ
ಹೊಸಕುರೆಯದ ಹೋರಿಗೆ ಗೆಜ್ಜೆಯಸರ ಕಟ್ಟುವರಲ್ಲದೇ ಗಾಣದಸುತ್ತು
ಎತ್ತಿಗೆ ಕಟ್ಟುವರೇ? ಕುತನಿಯ ಗಾದಿಗೆ ಶುಭ್ರವಸ್ತ್ರದ ಗವಸಣಿಗೆಯನ್ನು ಹೊ
ಲ್ಲದೆ ಗೋಣಿಯ ಚೀಲಕ್ಕೆ ಗವಸಣಿಗೆಯನ್ನು ಹೊಲಿಸುವರೇ ? ಹಾಗೆ ಕಾಮವಾಸ
ದೂಷಿತವಾದ ತಾಮಸ ಬುದ್ಧಿಯುಳ್ಳ ನಿನಗೆ ಹೇಳಿದುದೆಲ್ಲವೂ ವ್ಯರ್ಥವಾಗಿದೆ.
ಲಿಗನ ಬಳಿಗೆ ಬಂಗಾರವನ್ನು ಒಯ್ದರೆ ಅವನ್ನನವನು ಒರೆಗೆ ಹಚ್ಚಿ, ತಿಕ್ಕಿ ನೋಡಿ,
ಚಿನ್ನವಿದ್ದರೆ ಚೊಕ್ಕ ಚಿನ್ನವೆಂದೂ, ಖೊಟ್ಟಿಬಂಗಾರವಿದ್ದರೆ ಖೊಟ್ಟಿಬಂಗಾರ
ಹೇಳುವನು. ಚೊಕ್ಕ ಚಿನ್ನಕ್ಕೆ ಖೊಟ್ಟಿ ಬಂಗಾರವೆಂದೂ, ಖೊಟ್ಟಿ ಬಂಗಾರಕ್ಕೆ
ಬಂಗಾರವೆಂದೂ ಹೇಳಿದರೆ ಅಕ್ಕಸಾಲಿಗನದು ನೂರಕ್ಕೆನೂರರಷ್ಟು ತಪ್ಪು. ಇ
ಇದ್ದಂತೆ ಹೇಳಿದರೆ ಅವನದೇನು ತಪ್ಪು ? ಓರ್ವಸದ್ಗೃಹಸ್ಥನು ಅಕ್ಕಸಾಲಿಗ
ಖೊಟ್ಟಿ ಚಿನ್ನವನ್ನು ಒಯ್ದಾಗ ಅದು ಖೊಟ್ಟಿಯೆಂದು ಹೇಳಿದರೆ ಅಕ್ಕಸಾಲಿಗನದು
ತಪ್ಪಿಲ್ಲ. ತನ್ನಬಂಗಾರ ಖೊಟ್ಟಿ ಇರುವದೆಂಬ ವಿಚಾರವನ್ನೇ ಮರೆತು ಬಂಗಾರ
ಇದೆ ಎಂದು ನಿಜಸಂಗತಿಯನ್ನೇ ಮರೆತು, ಬಯ್ಯುವ ಮೂರ್ಖನ ಪಾಡು ನಿನ್ನದಾ

ಮಾಯೆಯೇ ನೀನು ಷಡಂಗ,ಷಡ್ಲಿಂಗ, ಷಡ್‌ಭಕ್ತಿ, ಷಡ್‌ಶಕ್ತಿಗಳ ವಿ
ತಿಳಿಯದೇ, ಷಟ್‌ಸ್ಥಲಸಿದ್ಧಾಂತದ ಪಥವನ್ನು ತುಳಿಯದೇ ಕೇವಲ ಡಾಂಭಿಕ ಭಕ್ತಿ
ಶಿವಾರ್ಚನೆ ಮಾಡಿ ಫಲದೊರೆಯದಿದ್ದಾಗ ಶಿವಪೂಜೆಯಿಂದ ಫಲವಿಲ್ಲ ಎಂದು ತೆಗ
ಒಳಿತಲ್ಲ. ಊರಿಗೆ ಹೋಗುವ ನಿರ್ದಿಷ್ಟ ಹಾದಿಯನ್ನೇ ಬಿಟ್ಟು ಬೇರೊಂದು ಹಾ
ನಡೆದು ಊರು ಸಿಗಲಿಲ್ಲವೆಂದರೆ ಹಾದಿನಡೆದವನ ತಪ್ಪೋ ! ಊರತಪ್ಪೋ ?

ಮಾಯೆ – ಅಲ್ಲಮನೇ ನಿನ್ನಿಂದ ಸುಖವನ್ನು ಹೊಂದಿ, ನನ್ನ ಪ್ರತಿಜ್ಞೆಯನ್ನು ಪೂರೈಸಿ ಶಿವನ ಸಭೆಯಲ್ಲಿ ಮೆರೆಯಬೇಕೆಂಬ ಹಂಬಲವು ನನ್ನ ಮನದಲ್ಲಿತ್ತು. ಆದರೆ ಅದು ಕೈಗೂಡು ವಂತೆ ಕಾಣುವದಿಲ್ಲ ಎಂದು ನಿಟ್ಟುಸಿರ್ಗರೆದಳು. ಆಕೆಯ ಮುಖವು ಬಾಡಿಬತ್ತಿಹೋಯಿತು. ಆಗ ವಿಮಳೆಯು ಹಾಗೂ ಗೆಳತಿಯರು ಮಾಯೆಯನ್ನು ಕಂಡು ಮರುಗಿ ಅಲ್ಲಮನೇ ! ಮಾಯೆಯನ್ನು ಪರೀಕ್ಷಿಸಿದರೆ ಅವಳಲ್ಲಿ ಏನೂ ಹುರುಳಿಲ್ಲ, ತಿರುಳಿಲ್ಲ. ಆಕೆಗೆ ಗತಿಯಿಲ್ಲ ಮತಿಯಿಲ್ಲ. ಅವಳಿಗೆ ನೀನೇ ಗತಿ, ನೀನೇ ಮತಿ. ನಿನ್ನ ಕರುಣೆಯೇ ಆಕೆಗೆ ಪ್ರಾಣ. ನಿನ್ನ ಕರುಣೆಯಿಲ್ಲದಿದ್ದರೆ ಆಕೆಗೆ ಮರಣ ಖಂಡಿತ, ಆಕೆಯ ಹರಣ ಉಳಿಯಬೇಕಾದರೆ ನಿನ್ನ ಕರುಣೆಯೇಬೇಕು.

ಅಲ್ಲಮ – ಮಾಯೆಯೇ, ಸಖಿಯರೇ, ನಿಮಗೆಲ್ಲ ಎಷ್ಟು ಬುದ್ಧಿವಾದ ಹೇಳಿದರೂ ಬುದ್ಧಿ ಬರಲೊಲ್ಲದು. ಗಡಿಗೆಯ ತುಂಬ ಹಾಲು ಕಾಸಿದಾಗ ಹೆಪ್ಪ ಹಾಕಿ ಅದು ಕೆನೆಮೊಸ ರಾದಾಗ ಕಡೆದರೆ ಬೆಣ್ಣೆ ಬಂದು ಕಾಸಿದಾಗ ತುಪ್ಪವಾಗಿ ಊಟಕ್ಕೆ ಬಂದೀತಲ್ಲದೆ ಗಡಿಗೆಯ ತುಂಬ ನೀರುತುಂಬಿ ನೀರಿಗೇನೇ ಹೆಪ್ಪ ಹಾಕಿದರೆ ಮೊಸರಾದೀತೇ ! ಕಡೆದರೆ ಬೆಣ್ಣೆ ಬಂದೀತೇ ? ಕೀಳುಮತಿಯುಳ್ಳ ಮಾಯೆಗೆ ಎಷ್ಟು ಬುದ್ಧಿವಾದ ಹೇಳಿದರೂ ಅದೆಲ್ಲವೂ ನೀರಿಗೆ ಹೆಪ್ಪುಹಾಕಿದಂತೆ ವ್ಯರ್ಥವಾಗುತ್ತದೆ. ವಿಮಳೆಯೇ ಈ ಮಾಯೆಗೆ ಸದ್ಬುದ್ಧಿ ಬರ ಬೇಕಾದರೆ ಏನು ಮಾಡಬೇಕೋ ತಿಳಿಯದಾಗಿದೆ.

ಕೀಳುಕಬ್ಬುನ ವೆಣ್ಣ ಕೋಪಿಸಿ ।
ಕಾಲಲೊದೆದೊಡೆ ವೇಣುಕರುಣಿಸಿ ।
ತೋಳಲಪ್ಪಿದೊಡೇನು ಪರುಷದ ಗಂಡನದರಂತೆ ।
ಬಾಲೆಗೆಂತಾದೊಡೆಯು ನಿನ್ನಸ ।
ವೇಳಘಟಿಸಿದ ಬಳಿಕಮಾಯೆಯ ।
ಪಾಲಿಸಲುಬೇಕೆನುತ ನುಡಿದಳು ವಿಮಳೆಯಲ್ಲಮಗೆ ॥

ವಿಮಳೆ – ಅಲ್ಲಮನೇ ಮಾಯೆಯು ಕೀಳುಕಬ್ಬಿಣದಿಂದ ಮಾಡಿದ ಗೊಂಬೆಯಂತಿರು ವಳು, ನೀನಾದರೋ ಪರುಷಮಣಿಯಿಂದ ಮಾಡಿದ ಪುತ್ಥಳಿಯಂತಿರುವಿ. ಪ್ರೇಮಾತಿಶಯ ದಿಂದ ಅವಳನ್ನು ಅಪ್ಪಿಕೋ ಅಪ್ಪಿಕೊಳ್ಳದಿದ್ದರೆ ಕೋಪಾತಿಶಯದಿಂದ ಅವಳನ್ನು ಒದೆ ಕೀಳುಕಬ್ಬಿಣದ ಗೊಂಬೆಯಂತಿರುವ ಅವಳು ನಿನ್ನ ದಿವ್ಯಪಾದದ ಪರುಷ ಸ್ಪರ್ಶಪ್ರಭಾವ ದಿಂದ ಚಿನ್ನವಾಗಿಯೇ ಬಿಡುವಳು.

ವನಿತೆ ನಿನ್ನಯ ಮಾತಹುದು ಕ ।
ಬ್ಬುನವದಾದೊಡೆ ಪರುಷ ಮುಟ್ಟಲು ।
ಕನಕವಹುದಲ್ಲದೆ ವೃಥಾ ಹಳೆಹಂಚು ಹೊನ್ನಹುದೆ ॥
ಮನಸು ಸಂಚಲವಾದಮಾಯಾಂ ।
ಗನೆಯದೇನನು ಮುಟ್ಟಿ ಮಾಡಿದೊ ।
ಡನಿತು ಸೂಫಲವಾಗಲರಿಯದು ವಿಮಳೆ ಕೇಳೆಂದ ॥

ಅಲ್ಲಮ — ವಿಮಳೆಯೇ ನಿನ್ನ ಮಾತುನಿಜ. ಮಾಯೆಯು ಕೀಳು ಕಬ್ಬಿಣದಿಂದ ಮಾ ಗೊಂಬೆಯಂತಿದ್ದರೆ ಪರುಷಮಣಿಯಿಂದ ಮಾಡಿದ ಪುತ್ಥಳಿಯಂತಿರುವ ನಾನು ಮು ಬಂಗಾರವಾಗುತ್ತಿದ್ದಳು.ಆದರೆ ಆಕೆಯು ಕೀಳು ಕಬ್ಬಿಣದಿಂದ ಮಾಡಿದ ಗೊಂಬೆಯಂತ ಇರದೆ ಹಳೆಯ ಹಂಚಿನಂತೆ, ಒಡೆದ ಮಡಕೆಯಂತೆ ಇರುವಳು. ಎಂದಿಗಾದರೂ ಹ ಹಂಚು, ಒಡೆದ ಕಾಜು ಪರುಷಮಣಿಯ ಸೋಂಕಿನಿಂದ ಚಿನ್ನವಾಗಬಲ್ಲವೇ ?

ಜೋಳ ಬಿತ್ತಿ ಜೋಳದ ರಾಶಿಯನ್ನೇ ಮಾಡಬೇಕಲ್ಲದೆ, ಜೋಳಬಿತ್ತಿ ಯ ದರೂ ಗೋದಿಯ ರಾಶಿಯನ್ನು ಮಾಡುವರೇ ? ತಾಮಸವೃತ್ತಿಯಿಂದ, ಕಾಮ ಯಿಂದ, ಹಮ್ಮುಬಿಮ್ಮುಗಳಿಂದ ಚಂಚಲವಾದ ಮನಸ್ಸಿನಿಂದ ದೃಢನಿಷ್ಠೆಯಿಲ್ಲದೆ ದೇ ರ್ಚನೆಯನ್ನು ಮಾಡಿದರೆ ಎಂದಿಗಾದರೂ ನಿತ್ಯ ಸುಖವು ದೊರೆತೀತೇ ?

ವಿಮಳೆ — ಅಲ್ಲಮನೇ ನೀನು ಘನಮಹಿಮನು. ಮಾಯೆಯು ನಿನ್ನ ಮಹಾಪಾ ಬಂದು ಬಿದ್ದಿರುವಳು. ಎದ್ದವರನ್ನು ಯಾರಾದರೂ ಎತ್ತಿಕೊಳ್ಳುವರೇ ? ಬಿದ್ದವ ಉದ್ಧರಿಸುವದೇ ಸಿದ್ಧಪುರುಷರ ಆದ್ಯಕರ್ತವ್ಯ. ಹಾಲಲ್ಲದ್ದು ನೀರಲ್ಲದ್ದು. ಕುಂಬಳ ಮತ್ತು ಕುಡಗೋಲು ನಿನ್ನ ಕೈಯಲ್ಲಿದೆ. ಬೇಕಾದರೆ ಕಾಯಿ, ಸಾಕಾದರೆ ಕೊಲ್ಲು, ಎ ನಿನ್ನನ್ನೇ ಕೂಡಿದೆ ಎಂದು ವಿಮಳೆಯು ಸುಧಾಧಾರೆಯನ್ನೇ ಸುರಿಸುವಂತಹ, ಮ ಮಧುರವಾದ ಮಾತು ಹೇಳಲು ಅಲ್ಲಮನು ಆಕೆಯ ಈನಿವಾತು ಕೇಳಿ—

ಅಲ್ಲಮ — ವಿಮಳೆಯೇ ನೀನು ಹೆಸರಿಗೆ ತಕ್ಕಂತೆ ವಿಮಳೆಯೇ ಆಗಿರುವಿ. ಪರಿ ಬುದ್ಧಿಯುಳ್ಳ ಬ್ರಹ್ಮದೇವರು ನಿನಗೆ ವಿಮಳೆ ಎಂದು ಹೆಸರಿಟ್ಟದ್ದು ಸಾರ್ಥಕವಾ ಸಮಾನ ಗುಣಧರ್ಮ ಸ್ವಭಾವಗಳುಳ್ಳ ವಸ್ತುಗಳು ಎಂದಾದರೂ ಕೂಡಬಲ್ಲವೇ ?ಜೀ ಭವಬಂಧನ ಭವ ಪಾಶಗಳನ್ನು ಕಳೆದು ಊರ್ಧ್ವಗತಿಗೊಯ್ಯುವ ಶಮ ದಮಾದಿಗಳೆ ಜೀವನನ್ನು ಭವಕೂಪದಲ್ಲಿ ನೂಕಿ ಅಧಃಪತನವನ್ನುಂಟು ಮಾಡುವ ಕಾಮಾದಿ ಷಡ್ರಿ ಳೆತ್ತ ? ತೇಜಃಪುಂಜನಾದ ಭಾಸ್ಕರನ ಬೆಳಗೆತ್ತ ? ವಸ್ತುವಿನ ಪ್ರತ್ಯಕ್ಷ ದರ್ಶನಕ್ಕೆ ಸ ನೀಭೂತವಾದ ಕಣ್ಣಿಗೆ ಕವಿದ ಕಾರ್ಗತ್ತಲೆಯೆತ್ತ ? ನೀನು ಕ್ಷೇಮದಿಂಥ ಇರಬಯಸ ಬಂದ ಹಾದಿಯಿಂದ ಸುಮ್ಮನೇ ಹಿಂದಿರುಗಿ ಹೋಗು. ತಲೆಕೆಟ್ಟವರಂತೆ ಅಸಂಗತ ವಾ ನಾಡುತ್ತ ನಿಲ್ಲಬೇಡ, ಹಂಚ್ಚೀ ಸುಮ್ಮನೇ ಹೋಗು ಎಂದು ಮಾಯೆಗೆ ಹೂಂಕ ನುಡಿದನು.

ಮಾಯೆ — ಅಲ್ಲಮನೇ ಇಲ್ಲಿಯವರೆಗೆ ನನ್ನ ಕನಸು ಮನಸುಗಳಲ್ಲಿ ಸುಳಿದಾಡಿ, ದಾಡಿ, ಬೆಂಬತ್ತಿಬರುವಂತೆ ಮೋಹವ ಮಾಡಿ ಈಗ ನಿಷ್ಕರುಣೆಯಿಂದ ಕನಲಿ ನನ್ನ ಬಿಟ್ಟು ಹೋಗೆಂದರೆ ಬಿಡುವೆನೇ? ನೀನು ನನ್ನನ್ನು ಬಿಟ್ಟರೂ, ನಾನು ನಿನ್ನನ್ನು ಬಿಡ ಸಾವು ಸಂಭವಿಸಿದರೂ ಬಿಡಲಾರೆನು. ತೋಳ ತೆಕ್ಕೆಯಲ್ಲಿ ಬಿಗಿದಪ್ಪಿ ಕಟ್ಟಿ ಕೆಡಹುವೆ.

ಅಲ್ಲಮ — ಮಾಯೆಯೇ ಕನಸಿನೊಳಗೊಂದು ಚೇಳುಕಡಿಯಲು ವಿಷವೇರಿ ಆ ವಿಷದಬಾ ಯಿಂದ ಯಾರಾದರೂ ನರಳುವರೇ ? ಮಾಯೆಯೇ ವಿವಿಧ ವಿಕಾರಗಳು ವ್ಯೆ ನಿನ್ನನ್ನೇ ಕಾಡಿ ಪೀಡಿಸುವವಲ್ಲದೆ ನಿರ್ವಿಕಾರಿಯಾದ ನನ್ನನ್ನೇನೂ ಕಾಡಲಾರವು.

ಮಾಯೆ – ಅಲ್ಲಮನೇ ನಾನು ಮರ್ತ್ಯಕ್ಕೆ ಬಂದು ನನ್ನ ಪ್ರತಿಜ್ಞೆಯನ್ನು ಪೂರೈಸದೇ ಎಷ್ಟುದಿನ ಬಾಳಿದರೂ ಅದು ಬದುಕಿಯೂ ಸತ್ತಂತೆ. ಪ್ರತಿಜ್ಞೆಯನ್ನು ಪೂರೈಸದೇ ತಿರುಗ ಹೋಗಿ ತಾಯಿಗೆ ನಾನು ಹೇಗೆ ಮುಖವನ್ನು ತೋರಿಸಲಿ. ನನಗದು ಅಪಮಾನ, ಈ ಜನ್ಮಕ್ಕೆ ಧಿಕ್ಕಾರವಿರಲಿ; ಹಾಯ್, ಹಾಯ್, ಸಾಕು.

ಅಲ್ಲಮ – ಸಮುದ್ರದ ಉಪ್ಪುನೀರೆಲ್ಲ ಸಿಹಿಯಾಗಬಹುದು; ಮೇರುಪರ್ವತವೇ ಗಿಡದಂತೆ ಕೊನರಿ ಎಲ್ಲೆಡೆಗೆ ಹಬ್ಬಬಹುದು. ಕಾಡುಮರಗಳೆಲ್ಲ ಕಲ್ಪತರುಗಳಾಗಬಹುದು, ಮಾಯೆಗೆ ಎನಿತು ಹೇಳಿದರೂ, ತತ್ತ್ವೋಪದೇಶಮಾಡಿದರೂ ಬುದ್ಧಿಬರಲೊಲ್ಲದು ಎಂದು ಪ್ರಭುವು ನುಡಿದು ತಟಸ್ಥನಾಗಿರಲು–

ಮಾಯೆ – ಅಲ್ಲಮನೇ, ಯುಕ್ತಿ ಪ್ರಯುಕ್ತಿಗಳಿಂದ ಘಾತನಾಡ್ತಿ ಈಗ ಮೆಲ್ಲನೆ ಜಾರಿ ಹೋಗುವೆನೆಂದರೆ ಬಿಡುವೆನೇ? ನಾನು ಹೇಳಿಬಂದ ಪ್ರತಿಜ್ಞೆಯನ್ನು ಸುಳ್ಳು ಮಾಡಲೇ? ನಾನು ಮಾಡಿದ ಪ್ರತಿಜ್ಞೆ ಪೂರೈಸುವತನಕ ನಿನ್ನನ್ನು ಬಿಡಲಾರೆ, ನನಗೆ ಒಡಲಿಲ್ಲೆಂಬ ಬಿಂಕದ ನುಡಿಯನ್ನು ಬಿಟ್ಟು ಬಿಡು. ಏನಾದರೂ ಮಾಡಿ ನಿನ್ನನ್ನು ತುಡುಕಿ ದುಡುಕಿ, ಹಿಡಿದುಕೊಂಡೇ ಬಿಡುವೆನು ಎಂದು ದಿಟ್ಟತನದಿಂದ ಅಲ್ಲಮನನ್ನು ಬಾಹುಬಂಧನದಲ್ಲಿ ಹಿಡಿಯ ಹೋಗಲು–

ಅಲ್ಲಮ – ಬಯಲು ಬಯಲನೆ ಬಿತ್ತಿ, ಬಯಲು ಬಯಲನೆ ಬೆಳೆದು ।
ಬಯಲು ಬಯಲಾಗಿ ಬಯಲಾಯಿತಯ್ಯ ।
ಬಯಲ ಜೀವನ, ಬಯಲ ಭಾವನೆ,
ಬಯಲು ಬಯಲಾದೆ ಗುಹೇಶ್ವರ ॥

ಇಂತಹ ಬಯಲಿಗನಾದ ನನ್ನನ್ನು ಬಂಧಿಸುವಿಯಾ ಮಾಯೆ ? ಬ್ರಹ್ಮವಿಷ್ಣುಗಳ ಮಾಯೆ ತೊತ್ತಳದುಳಿವಂಥ, ದೇವದಾನವರ ಮಾಯೆ ಅಗಿದಗಿದು ತಿಂಬಂದು, ರುದ್ರಗಣ ಪ್ರಮಥಗಣಗಳೆಂಬವರ ಮಾಯೆ ಮರುಳ್ಮಾಡಿ ಕಾಡುವಂದು, ನೊಸಲಕಣ್ಣು ಪಂಚಮುಖದವರಿಗೆ ಮಾಯೆ ಅರ್ಧಾಂಗಿಯಾದಂದು, ಅಷ್ಟಾಶೀತಿ ಸಹಸ್ರಋಷಿಗಳ ಮಾಯೆ ತಪೋವ್ರತದಲಿ ಕೆಡಹುವಂದು, ನಾನು ಮಾಯಾ ಕೋಲಾಹಳನಾಗಿರ್ದೆ ಕಾಣಾ ಗುಹೇಶ್ವರ, ಎಂದು ಉಸುರಿ ಹೊರಟುಹೋದನು. ಆಗ ಮಾಯೆಗೆ ಹೇಳಲು ಬಾರದಷ್ಟು ದುಃಖವಾವರಿಸಿತು. ಗೆಳತಿಯರೆಲ್ಲರೂ ಕೂಡಿ ಮಾಯೆಯನ್ನು ಬಹುವಿಧವಾಗಿ ಸಮಾಧಾನ ಮಾಡಿದರು.

ವಿವರಣೆ :

ಚಾಮರಸಕೃತ ಪ್ರಭುಲಿಂಗಲೀಲೆಯಲ್ಲಿ ಒಟ್ಟು ೨೫ ಗತಿಗಳಿದ್ದು ೧ ನೆಯ ಗತಿಯಲ್ಲಿ ೨೧ ಪದ್ಯ, ೨ ನೆಯ ಗತಿಯಲ್ಲಿ ೪೨ ಪದ್ಯ, ೩ ನೆಯ ಗತಿಯಲ್ಲಿ ೪೬ ಹೀಗೆ ಪದ್ಯಗಳಿವೆ. ಗತಿ ೫ ಮತ್ತು ಗತಿ ೧೩ ರಲ್ಲಿ ಪದ್ಯಗಳು ಹೆಚ್ಚಾಗಿದ್ದರೂ ಈ ಎರಡು ಗತಿಗಳಲ್ಲಿರುವ ಪದ್ಯಗಳಿಗಿಂತಲೂ ೭ ನೆಯ ಗತಿಯಲ್ಲಿಯೇ ಹೆಚ್ಚು ಪದ್ಯಗಳು ಅಂದರೆ ೮೭ ಪದ್ಯಗಳು ಇರು

ತ್ರವೆ. ಚಾಮರಸನು ಈ ಗತಿಗೆ, " ಪ್ರಭು ಮಾಯೆಗೆ ಸಿಕ್ಕದೇ ಹೋದ ಗತಿ,
ಕರೆದಿರುವನು.

ಅಲ್ಲಮನ ಸೊಲ್ಲನ್ನು ಅಡಗಿಸಿಯೇ ಬಿಡುವೆನೆಂದು ಪ್ರತಿಜ್ಞೆಗೈದು ಬಂದ
ದೇವಿಗೂ; ಪಾರ್ವತಿಯಿಂದ ಮಾಯೆಯನ್ನು ಎಚ್ಚರಿಸಲು ನಿಯೋಜಿತಳಾ
ವಿಮಲೆಗೂ, ನಿಷ್ಕಲ ನಿರಂಜನ ಅಲ್ಲಮನಿಗೂ, ಪಾರ್ವತಿಯ ತಾಮಸೀಕಳೆಯಾದ
ಗೂ ಸುದೀರ್ಘ ಸಂವಾದನಡೆದು, ಆನುಷಂಗಿಕವಾಗಿ ಮಾಯೆಗೂ, ವಿಮಳೆಗೂ,
ರಿಗೂ ಅಲ್ಲಮನಿಗೂ, ಸಂವಾದ ನಡೆದು ಕೊನೆಗೆ ಮಾಯೆಯು ದಿಟ್ಟತನದಿಂದ
ನನ್ನು ಮುಟ್ಟಹೋಗಲು ಅಲ್ಲಮನು ಬಟ್ಟಬಯಲಂತೆ ಬಯಲಾಗಿ ಹೋಗಿ
ಅದಕ್ಕಾಗಿಯೇ ಈ ಗತಿಗೆ '' ಪ್ರಭು ಮಾಯೆಗೆ ಸಿಕ್ಕದೇ ಹೋದುದು " ಎಂದು
ಬಂದಿದೆ.

ಇಲ್ಲಿ ಕೇಂದ್ರ ವ್ಯಕ್ತಿಯೆಂದರೆ ಅಲ್ಲಮನೇ. ಈ ವ್ಯಕ್ತಿಯನ್ನು ಪ್ರಧಾನ
ಕೊಂಡೇ ಇನ್ನುಳಿದ ಪಾತ್ರಗಳು ಸುತ್ತು ಮುತ್ತು ಅಭಿನಯಿಸುವವು. ಮ
ದೇವತಾ ಭಕ್ತಿಗೇನೇ ತಿಲಾಂಜಲಿಯನ್ನು ಕೊಡುವ ಪ್ರಸಂಗದಲ್ಲಿ ವಿಮಳೆಯು
ಸ್ವಚ್ಛಂದ ಪ್ರವೃತ್ತಿಗೆ ವಿವೇಕದ ಕಡಿವಾಣಹಾಕಿ ಶ್ರೀಗುರುವಿನಿಂದ ದೀಕ್ಷೆಯನ್ನು
ಭಕ್ತಿಯಿಂದ ಶಿವನ ಆರಾಧನೆ ಮಾಡಿದರೆ ಸಕಲಶ್ರೇಯೋಭಿವೃದ್ಧಿಗಳು ದೊ
ಈ ಬಗ್ಗೆ ಶಿವಾಗಮಗಳಲ್ಲಿ ಸಾಕಷ್ಟು ಪ್ರಮಾಣಗಳುಂಟು. ಅವುಗಳ ಅವಹೇಳ
ವದು ಸೂಕ್ತವಲ್ಲ ಎಂದು ವಿವೇಕವಾಣಿಯಿಂದ ಹೇಳಿ ಅವಳಲ್ಲಿ ಆಸ್ತಿಕ್ಯ ಭಾ
ಹುಟ್ಟಿಸುವಳು.

ಅಲ್ಲಮ ವಿಮಳೆಯರಲ್ಲಿ, ಮಾಯೆ ವಿಮಳೆಯ-ರಲ್ಲಿ, ಮಾಯೆ ಅಲ್ಲಮರಲ್ಲಿ,
ಸಖಿಯರಲ್ಲಿ ನಡೆದ ಸಂವಾದಗಳೆಲ್ಲವೂ " ವಾದೇವಾದೇ ಜಾಯತೇ ತತ್ವ
ಎಂಬೂಕ್ತಿಯಂತೆ ಉಚ್ಚಮಟ್ಟದ ಸಂವೇದನೆಯನ್ನೇ ನೀಡುತ್ತವೆ.

ಹೆಸರಿಗೆ ತಕ್ಕಂತೆ ಸುಪಥದಲ್ಲಿ ಅಡಿಯಿಡದ ಮಾಯೆಯು .... ವಿಮಳೆಯೇ !
ಭಕ್ತಿಯಿಂದ ಶಿವನ ಪೂಜೆ ಮಾಡಿದರೂ ಅದರಿಂದ ನಾನು ಏನೂ ಫಲವನ್ನು
ಪೂಜೆಮಾಡಿ ಬೇಸತ್ತಿರುವೆನು ಅನ್ನಲು ಹೆಸರಿಗೆ ತಕ್ಕಂತೆ ನಿರ್ಮಲಮತಿಯು
ಳೆಯು ಶ್ರೀಗುರುಪದೇಶವಲ್ಲದೆ ಮಾಡುವ ಮಾಟ, ಉಬ್ಬಿ ಕೊಬ್ಬಿ ದುರಹಂ
ಮಾಡುವ ಮಾಟ, ಅರಿವಿನ ಕಣ್ಣರೆಯದೇ ಮಾಡುವ ಮಾಟ ಮೀಸಲುಗೆಟ್ಟ
ಳಿಂದ ಮಾಡುವ ಮಾಟಗಳಿಂದ ಶಿವನ ಒಲುಮೆ ಸಾಧ್ಯವಿಲ್ಲವೆಂದ. ಹೇಳಿ ತನು
ಗುರೂಚರಮೂರ್ತಿಗಳ ಸೇವೆಯಿಂದ ಮಹಾತನುವಾಗಬೇಕು. ಮನ ಶಿವಶಾ
ತತ್ವಶಾಸ್ತ್ರ ಮಂಥನ, ಧ್ಯಾನ ಜಪಾದಿಗಳಿಂದ ಸುಮನವಾಗಬೇಕು. ಭಾವವು
ವನೆ, ದುರ್ವಿಚಾರ, ದುರ್ವಿಕಾರ, ದುರಹಂಕಾರಗಳಿಂದ ದೂರಾಗಿ ಶಿವಭಾವ
ಸದ್ಭಾವವಾಗಬೇಕು. ಹೀಗೆ ಪ್ರವೃತ್ತಿಮಾರ್ಗದಲ್ಲಿರುವ. ತನು. ಮನ,ಭಾವ
ನಿವೃತ್ತಮಾರ್ಗದತ್ತ ತಿರುಗಿಸಿ ಮಹಾತನು, ಸುಮನ, ಸದ್ಭಾವಂಗಳನ್ನಾಗಿ ಮಾ
ಲಿಂಗಪೂಜೆ ಮಾಡಿದರೆ ಐಹಿಕಾಮುಷ್ಮಿಕ ಸುಖಗಳು ದೊರೆಯುವವು. ಸಮ್ಯಗ್

ಸತ್ಕರ್ಮಕ್ರಿಯೆ; ಸದ್ಭಕ್ತಿಗಳಿಲ್ಲದೆ ಮಾಡುವ ಪೂಜೆಯು ನೀರಲ್ಲಿಹೋಮಮಾಡಿದಂತೆ, ಬಧಿರನ ಮುಂದೆ ಮಧುರ ಗಾನ ಮಾಡಿದಂತೆ, ಕುರುಡನಿಗೆ ನೋಡಲು ದರ್ಪಣವಿತ್ತಂತೆ ನಿಷ್ಫಲ ಎಂಬುದನ್ನು ೭ ಪದ್ಯಗಳಲ್ಲಿ ನಿಷ್ಫಲ ನಿಷ್ಫಲ ಎಂದು ಮಾಯೆಗೆ ವಿಮಳೆಯು ಉಪದೇಶಿಸುತ್ತಾಳೆ.

ಅಲ್ಲಮನಿಗೂ ಮಾಯೆಗೂ ನಡೆದ ಸಂವಾದದಲ್ಲಿ ಮೊದಮೊದಲು ಮಾಯೆಯು ತನ್ನ ಪರಾಕ್ರಮವನ್ನು ಹೇಳಿಕೊಳ್ಳಲು ಅಲ್ಲಮನು ಅದನ್ನು ಆಗಿಂದಾಗಲೇ ಖಂಡಿಸಿ ನಿರುತ್ತರಳನ್ನಾಗಿ ಮಾಡುವನು. ಮಧ್ಯದಲ್ಲಿ ವಿಮಳೆಯು ಅಲ್ಲಮನನ್ನು ಕುರಿತು ಶರಣಜನರ ರಕ್ಷಾ ಮಣಿಯೇ ಭಾಸುರದಯಾಂಭೋನಿಧಿಯೇ ! ಅವುದನ್ನು ನೋಡದೇ ಮಾಯೆಯ ಮೇಲೆ ಕೃಪೆಮಾಡು ಎಂದು ಸೆರಗೊಡ್ಡಿ ಬೇಡಿಕೊಳ್ಳಲು ಮತ್ತೂ ಪ್ರಭುವು ವಿಮಳೆಗೆ ವಿವಿಧ ದೃಷ್ಟಾಂತ ಕೊಟ್ಟು ಹೇಳಿ ಸಮಾಧಾನಪಡಿಸುವನು. ಧೂರ್ತಳಾದ ಮಾಯೆಗೆ ಅಲ್ಲಮನು ಎಷ್ಟು ಬುದ್ಧಿ ಹೇಳಿದರೂ ಸಹ ಅದರ ನಿಜಾರ್ಥವನ್ನರಿಯದೇ ಅಲ್ಲಮನನ್ನು ಮುಟ್ಟಹೋಗಲು ನಿರ್ವಿಕಾರಿಯಾದ ಅಲ್ಲಮನು ಬಟ್ಟಬಯಲಾದನು. ಪ್ರಭುಲಿಂಗ ಲೀಲೆಯ ೨೫ ಗತಿಗಳಲ್ಲಿ ಈ ಗತಿಯೇ ಬಹಳದೊಡ್ಡದು. ಈ ಗತಿಯಲ್ಲಿರುವ ವಾದ, ವಿವಾದ, ಸಂವಾದಗಳು ಓದುಗರಲ್ಲಿ ಕುತೂಹಲವನ್ನು ಕೆರಳಿಸಿ ಹೃದಯವನ್ನು ಅರಳಿಸುತ್ತವೆ. ತತ್ವಸಾಹಿತ್ಯದಲ್ಲಿ, ವಚನಸಾಹಿತ್ಯದಲ್ಲಿ, ಪುರಾಣಸಾಹಿತ್ಯದಲ್ಲಿ, ಆಧುನಿಕ ಸಂತರ ಜೀವನೇತಿಹಾಸದಲ್ಲಿ ಅನೇಕ ಸಂಭಾಷಣೆಗಳು ಕಂಡುಬರುತ್ತವೆ.

ಕಠೋಪನಿಷತ್ತಿನಲ್ಲಿ ಯಮ ನಚಿಕೇತರ ಸಂವಾದವು, ಬೃಹದಾರಣ್ಯಕೋಪನಿಷತ್ತಿನಲ್ಲಿ ಯಾಜ್ಞವಲ್ಕ್ಯ ಮೈತ್ರೇಯೀ ಸಂವಾದವು, ವಚನಸಾಹಿತ್ಯದಲ್ಲಿ ಪ್ರಭು ಮುಕ್ತಾಯಿ ಸಂವಾದವು, ಆಧುನಿಕ ಸಂತರ ಜೀವನೇತಿಹಾಸದಲ್ಲಿ ವಿವೇಕಾನಂದ ವೇಶ್ಯಾಸಂವಾದವು ಸುಪ್ರಸಿದ್ಧವಿರುವವು. ನಚಿಕೇತ ಎಂಬ ಚಿಕ್ಕ ಮಗುವು ತನ್ನ ತಂದೆಯು ಕಣ್ಣಿಲ್ಲದ, ಕಾಲಿಲ್ಲದ, ಹಲ್ಲಿಲ್ಲದ, ಮುದುಕ ಆಕಳುಗಳ ದಾನಮಾಡುವದನ್ನು ನೋಡಿ ಬೇಸತ್ತು ತಂದೆಯೇ – ದಾನಮಾಡುವದೇ ಆದರೆ ಒಳ್ಳೇಆಕಳನ್ನು ದಾನಮಾಡು. ಇಂತಹ ನಿರುಪಯೋಗಿ ಆಕಳುಗಳನ್ನು ದಾನಮಾಡಬೇಡ. ಅನ್ನಲು ತಂದೆಯು ಸಿಟ್ಟಿಗೆದ್ದು ಮಗನೇ ನನ್ನ ಮುಂದೆ ಹುಟ್ಟಿ ನನಗೇ ಬುದ್ಧಿ ಹೇಳಲು ಬರುವೆಯಾ ಎಂದು ಬೆದರಿಸಿ, ಇನ್ನೊಮ್ಮೆ ಹೀಗೆಂದು ನುಡಿದರೆ ನಿನ್ನನ್ನು ಯಮನಿಗೆ ಕೊಡುವೆನೆಂದೆನ್ನಲು ತಂದೆಯ ಮಾತನ್ನು ದಿಟಮಾಡುವದಕ್ಕಾಗಿ ಯಮನ ಬಳಿಗೆ ಹೋದನು. ಕಠೋಪನಿಷತ್ತಿನಲ್ಲಿ ಯಮ ನಚಿಕೇತರ ಸಂವಾದ ವಿದೆ. ಸತಿಯಾದರೂ ಶಿಷ್ಯೆಯಾಗಿ ಬೆಂಬತ್ತಿದ ಮೈತ್ರೇಯಿಗೂ, ಪತಿಯಾದರೂ ಯತಿಯೊದ ಯಾಜ್ಞವಲ್ಕ್ಯರಿಗೂ ನಡೆದ ಸಂವಾದವು ನಿಜಗುಣರ ಪರಮಾನುಭವಬೋಧೆಯಲ್ಲಿ ಬರುತ್ತದೆ. ಅಣ್ಣ ಅಜಗಣ್ಣ ಲಿಂಗೈಕ್ಯನಾದಾಗ ಮಹಾಜ್ಞಾನಿಯಾದ ಮುಕ್ತಾಯಿಗೂ, ದಿವ್ಯವಿಭೂತಿಯಾದ ವಿರಾಗವಿಭು ಪ್ರಭುವಿಗೂ ನಡೆದ ತಾತ್ವಿಕಸಂಭಾಷಣೆಯು ಶೂನ್ಯಸಂಪಾದನೆಯಲ್ಲಿದೆ.

ಜನ್ಮತಃ ಸಿದ್ಧಪುರುಷನೂ, ಮಹಾಜ್ಞಾನಿಯೂ ಆದ ಶುಕಮುನಿಯು ಗಂಗಾತೀರದಲ್ಲಿ ತಪಸ್ಸನ್ನು ಆಚರಿಸುವಾಗ ಅವನ ತಪೋಭಂಗ ಮಾಡುವದಕ್ಕಾಗಿ ಸ್ವರ್ಗಲೋಕದ ಅಪ್ಸರೆ

ಯಾದ ರಂಭೆಯು ಆವನ ಮುಂದೆಬಂದು ವಿವಿಧ ಹಾವಭಾವಗಳನ್ನು ಮಾಡುತ್ತ ಲಾವಣ್ಯಗಳನ್ನು ತೋರಿಸುತ್ತ, ಕೈಗಳನ್ನು ಅತ್ತಿತ್ತ ತಿರುವುತ್ತ, ಕಣ್ಸನ್ನೆ ಮಾಡುತ್ತ ಮಾಡುವಳು. ಆ ಪ್ರಸಂಗದಲ್ಲಿ ರಂಭೆಗೂ, ಶುಕನಿಗೂ ಆದಸಂವಾದವು 'ರಂಭಾ ವಾದ' ಎಂಬ ಒಂದು ಚಿಕ್ಕ ಹೊತ್ತಿಗೆಯಲ್ಲಿ ಮಾರ್ಮಿಕವಾಗಿ ಬರೆಯಲ್ಪಟ್ಟಿದೆ.

ವೀರ ಸನ್ಯಾಸಿಗಳಾದ ಸ್ವಾಮಿವಿವೇಕಾನಂದರು ಒಮ್ಮೆ ಬಡೋದಾಸ ಆಮಂತ್ರಣವನ್ನು ಸ್ವೀಕರಿಸಿ ಅಲ್ಲಿಗೆ ಹೋದಾಗ ಅವರಿಗೆಇಳಿದುಕೊಳ್ಳಲು ಕರು ಊರಹೊರಗೆ ಒಂದು ಮನೆಯ ವ್ಯವಸ್ಥೆ ಮಾಡಿದರು. ಮಹಾತ್ಮರ ದಿಂದ ಜನ್ಮೋದ್ಧಾರ ಮಾಡಿಕೊಳ್ಳುವ ಸದುದ್ದೇಶದಿಂದ ಸಾವಿರಾರು ಜನರು ಶ್ರೀ ವಿವೇಕಾನಂದರ ಕಡೆಗೆ ಹೋಗುವಂತೆ ಹೀನಕೃತ್ಯದಿಂದ ಪ್ರಾಯಶ್ಚಿತ್ತಹೊಂದಿ ನೊಂದ ಓರ್ವ ವೇಶ್ಯಾಂಗನೆಯು ಸ್ವಾಮೀಜಿಯವರಕಡೆಗೆ ಹೋದಳು. ಉಳಿ ನೋಡಿದಂತೆ ವೇಶ್ಯಾಂಗನೆಯನ್ನು ಹೇಗೆ ನೋಡುವದು ಎಂದು ಸ್ವಾಮೀಜಿ ಕಣ್ಣು ಮುಚ್ಚಿಕೊಂಡು ಕುಳಿತಾಗ ವೇಶ್ಯಾಂಗನೆಯು—

" ನೋಡದಿರೆನ್ನಯ ದೋಷವ ದೊರೆಯೇ । ಸಮದರ್ಶಿಯು ನೀನಲ್ಲವ ಪ
ಜಗುನೆಯೊಳಿರುವದು ನೀರ್ಪನಿಯೊಂದು । ಕೊಚ್ಚೆಯೊಳಿರುವದು ಮತ್ತು
ಆಹನಿ ಎರಡೂ ಮಂಗಳವಾಗವೆ । ಗಂಗೆಯ ಸೇರಲು ತೀರ್ಥದಲಿ ॥ "

ಎಂಬ ಪದ್ಯವನ್ನುಹೇಳಿ ಅವರನ್ನು ಎಚ್ಚರಿಸಿದಳು.

ಪರುಷಮಣಿಯು ಸಾವಿರಾರು ಜನರಿಂದ ಪೂಜೆಗೊಳ್ಳುವ ಲೋಹದಿಂದ ಮಾಡಿದ ತಾ ಪ್ರತಿಮೆಯನ್ನು ಮುಟ್ಟಿ ಅದನ್ನು ಬಂಗಾರವನ್ನಾಗಿ ಮಾಡುವಂತೆ ದಿನಾಲು ಕುರಿಕೋಳಿಗಳನ್ನು ಕೊಯ್ವ ಕಟುಕನ ಕೈಯೊಳಗಿನ ಕತ್ತಿಯನ್ನುಮುಟ್ಟಿದರೂ ನ್ನಾಗಿ ಮಾಡುವದಿಲ್ಲವೇ ? ಪರುಷಮಣಿಗೆ ಪೂಜೆಗೊಂಬ ದೇವತಾಪ್ರತಿಮೆಯೂ ಕುರಿಕೋಳಿಗಳನ್ನು ಕೊಯ್ವ ಕತ್ತಿಯೂ ಅಷ್ಟೇ. ಪರುಷಮಣಿಗೆ ಅದು ಮೇಲು ಕೀಳು ಎಂಬ ವಿಷಮಭಾವನೆ ಇರುವದಿಲ್ಲ.

ಮಂಗಲವಾದ ಗಂಗಾಪ್ರವಾಹವು ಜುಳುಜುಳು ಎಂದು ಮಂಜುಳವಾಗಿ ಯಮುನಾ ನದಿಯ ನೀರನ್ನಷ್ಟೇ ಬರಮಾಡಿಕೊಂಡು ಕೊಚ್ಚೆಯಾದ ಬಚ್ಚಲ ಹರಿದುಬಂದರೆ ಅದಕ್ಕೆ ಬೇಡೆನ್ನುವದೇ ? ಪಾವನ ಗಂಗಾನದಿಗೆ ಯಮುನಾ ನೀರೂ ಅಷ್ಟೇ. ಹೊಲಸು ನಾರುವ ಬಚ್ಚಲ ನೀರೂ ಅಷ್ಟೆ ! ಸ್ವಾಮೀಜಿಯವರು ಪರುಷಮಣಿಯಂತೆ, ಗಂಗಾಪ್ರವಾಹದಂತೆ, ಎಲ್ಲರನ್ನೂ ಉದ್ಧರಿಸುವವರು. ಹೆಚ್ಚಿನವರು, ತುಚ್ಛರು ಎಂಬ ಭಾವನೆ ಸರಿಯಲ್ಲ ಎಂದು ಪ್ರಾರ್ಥನೆ ಮಾಡಲು ನಂದರು ಕಣ್ದೆರೆದು ಆಕೆಗೆ ತತ್ತ್ವೋಪದೇಶ ಮಾಡಿ ಪುನೀತಳನ್ನಾಗಿ ಮಾಡಿದರು.

ಇಲ್ಲಿ ಬರುವ ವಿವಿಧ ಸಂವಾದಗಳಲ್ಲಿ " ರಂಭಾಶುಕಸಂವಾದ " ದಲ್ಲಿ, ರಂಭೆಯು ಶುಕನನ್ನು ಸೋಲಿಸುವ ವಿಷಯವು ಉಳಿದಪ್ರಸಂಗ

ಸೋಲುವ ಸೋಲಿಸುವ, ಬೀಳುವ ಏಳುವ, ಗೆದ್ದರೆ ಮೆರೆಯುವ, ಬಿದ್ದರೆ ಮರುಗುವ ಯಾವ ಹಮ್ಮುಬಿಮ್ಮುಗಳ ಲವಲೇಶವೂ ಕಂಡುಬಾರದೇ ಗಂಗಾಪ್ರವಾಹದಂತೆ ಹರಿಗಡಿಯುದೇ ಜ್ಞಾನಗಂಗಾಪ್ರವಾಹವು ಯಾವ ಅಡಿತಡೆಗಳಿಲ್ಲದೆ ನಿರರ್ಗಳವಾಗಿ ಹರಿಯುವದು.

ಪ್ರಭುಲಿಂಗಲೀಲೆಯಲ್ಲಿ ಬರುವ ಸಂವಾದದಲ್ಲಿ ಪಾತ್ರವಹಿಸಿದ ಮಾಯೆಯು ಅಲ್ಲಮನನ್ನು ಸೋಲಿಸಿಯೇ ಬಿಡುವೆನೆಂದು ಶಿವನಸಭೆಯಲ್ಲಿ ಪ್ರತಿಜ್ಞೆಮಾಡಿ ಹೇಳಿಬಂದವಳು. ಅಲ್ಲಮನನ್ನು ಸೋಲಿಸುವ ವಿಷಯದಲ್ಲಿ ಬಗೆಬಗೆಯ ಹೋರಾಟ ಮಾಡಿದಳು. ಅವನ ಸಲುವಾಗಿ ಕೊರಗಿದಳು, ಮರುಗಿದಳು. ಅಲ್ಲಮನನ್ನು ಸೋಲಿಸಲು ಮಾಯೆಯು ಪ್ರಯತ್ನ ಮಾಡಿದಂತೆ ಮಾಯೆಯನ್ನು ಗೆಲ್ಲಲು ಅಲ್ಲಮನು ಪ್ರಯತ್ನ ಮಾಡಿದ್ದು ಕಂಡುಬರುವದಿಲ್ಲ. ಅವನು ಸ್ವಯಂಸಿದ್ಧ ವಿರಾಗವಿಭುವು, ಮಹಾಪ್ರಭುವು–

"ಭಾವಗೆಟ್ಟನು ಭವಗೆಟ್ಟನು, ಒಡಹುಟ್ಟಿದರೈವರ ಕೈ ಬಿಟ್ಟನು,
ಭಂಡನು ಲಜ್ಜ ಭಂಡನು, ಕಂಡರೆ ನುಡಿಸದಿರಾ ಮಾಯಾದೇವಿ,
ಅರಿವೆಯನುಟ್ಟನು, ನೆರೆಮರುಳಾದನು, ಹುಟ್ಟಮುರಿದನು,ಮಡಕೆಯನೊಡೆದನು.
ಆದಿಪುರಾತನು ಅಚಲ ಲಿಂಗೈಕ್ಯನು, ಗುಹೇಶ್ವರಲ್ಲಯ್ಯಂಗೆ ಮಾಗಿಲ್ಲ ಮಗಳೇ ॥"

ಈ ವಚನವನ್ನು ಓದಿದರೆ, ನೆನೆಸಿಕೊಂಡರೆ, ಪ್ರಭುವಿನ ಆಧ್ಯಾತ್ಮಿಕಜೀವನವು ಗೌರೀಶಂಕರ ಶಿಖರದಷ್ಟು ಎತ್ತರವಿತ್ತೆಂಬುದು ಕಂಡುಬರುವದು. ಅಲ್ಲಮಪ್ರಭು ಮೀಸಲನು ಅಂದರೆ ಪರಿಶುದ್ಧನೂ, ಪರಮಪವಿತ್ರನೂ ಆಗಿದ್ದನು ಅವನು ಮಾಯೆಗೆ ಸಿಲುಕದೆ ಜಾರಿಹೋದನು ಎಂದು ೭ನೆಯ ಗತಿಯ ಕೊನೆಯಪದ್ಯದಲ್ಲಿ ಬರುವದು. ಅಲ್ಲಮನ ತನುಮನ ಭಾವಂಗಳೆಲ್ಲ ಮೀಸಲಾಗಿದ್ದವು.

"ಕಣ್ಣುಮೀಸಲು ಶಿವನ, ಕೈಮೀಸಲು ಶಿವನ, ಕಾಲುಮೀಸಲು ಶಿವನ, ನಾಲಗೆ ಮೀಸಲು ಶಿವನ, ಕಿವಿ ಮೀಸಲು ಶಿವನ, ನಾಸಿಕ ಮೀಸಲು ಶಿವನ, ತನುಮೀಸಲು ಮನವೆಲ್ಲ
ಮೀಸಲು ಶಿವನ.
ಈ ಮೀಸಲು ಬೀಸರವೋಗದಿದ್ದರೆ ಆತನೇ ಜಗದೀಶ ಕಾಣಾರಾಮನಾಥ" ಎಂಬ ದೇವರ ದಾಸಿಮಯ್ಯನ ಉಕ್ತಿಯಂತೆ, ಶಿವನಿಗಾಗಿಯೇ ಎಲ್ಲವನ್ನು ಮೀಸಲಿಟ್ಟು ತಾನೇ ಶಿವನಾಗಿದ್ದನು.

"ಎನಗೊಂದು ಲಿಂಗ ನಿನಗೊಂದು ಲಿಂಗ, ಮನೆಗೊಂದು ಲಿಂಗ, ಉಳಿ ಮುಟ್ಟಿದ
ಲಿಂಗವ ಮನಮುಟ್ಟಬಲ್ಲುದೇ ಗುಹೇಶ್ವರ"

ಇಂತಹ ದೈವೀಶಕ್ತಿಯ ಪರಾಕಾಷ್ಠತೆಯನ್ನು ಮುಟ್ಟಿದ ಪ್ರಭುವು ದೋಷದೂಷಿತಳಾದ ಮಾಯಾಂಗನೆಯ ಕೈಗೆಸಿಲುಕದೇ ಜಾರಿಹೋದನು, ಮೀರಿಹೋದನು. ಚಿತ್ಪ್ರಭೆಯುಳ್ಳ ಪ್ರಭುವು ಚಿತ್ತಚಾಂಚಲ್ಯದ ದುಷ್ಪ್ರಭಾವಕ್ಕೊಳಗಾಗದೇ ಚಿದಾನಂದಸಾಗರದಲ್ಲಿಯೇ ಲೋಲಾಡಹತ್ತಿದನು.

ಬ್ರಹ್ಮಾಂಡದೊಳಗೆ ರಶಿಯಾ, ಅಮೇರಿಕನ್ನರಲ್ಲಿ, ಚೀನ ಜಪಾನೀಯರಲ್ಲಿ, ಭಾ ಪಾಕಿಸ್ತಾನಗಳಲ್ಲಿ ಯುದ್ಧ ನಡೆದು ಒಮ್ಮೆಲ್ಲೊಮ್ಮೆ ಶಾಂತವಾಗಿನಿಲ್ಲುವವು. ಪಿಂಡಾಂಡದಲ್ಲಿ ಹಗಲಿರುಳೂ ನಡೆದ ಈ ದುಷ್ಟಶಕ್ತಿ ಶಿಷ್ಟಶಕ್ತಿಗಳ ಯುದ್ಧಕ್ಕೆ ವಿರಾ ಇಲ್ಲ. ಹಿಂದೆ ಎಂದೋಒಮ್ಮೆ ಕೌರವಪಾಂಡವರಲ್ಲಿ, ರಾಮರಾವಣರಲ್ಲಿ ನ ಹೋದ ಯುದ್ಧಗಳು ಮಹಾಭಾರತಯುದ್ಧ, ರಾಮಾಯಣ ಎಂದು ಸುಪ್ರಸಿದ್ಧ ರುವವು. ಆ ಯುದ್ಧಗಳು ನಡೆದು ಮುಗಿದು ಎಷ್ಟೋಶತಮಾನಗಳು ಉ ಹೋಗಿವೆ. ಈ ಪಿಂಡಾಂಡದಲ್ಲಿಯ ಯುದ್ಧವು ಭೂತಕಾಲದಲ್ಲಿ ನಡೆದಿದೆ, ವರ್ತ ಕಾಲದಲ್ಲಿ ನಡೆಯುತ್ತಿದೆ, ಭವಿಷ್ಯತ್ಕಾಲದಲ್ಲ ನಡೆಯುವದು. ಈ ವಿಷಯವೇ ಅಧ ಭಾರತದಲ್ಲಿ ಹಾಗೂ ಅಧ್ಯಾತ್ಮ ರಾಮಾಯಣದಲ್ಲಿ ವಿವರವಾಗಿ ಬರುತ್ತದೆ. ಈ ದೇ ಒಂದು ಅಯೋಧ್ಯಾನಗರ. ಕಾಮಾದಿ ಷಡ್ರಿಪುಗಳು, ಸಪ್ತವ್ಯಸನಗಳು, ಅಷ್ಟಮದ ದಶೇಂದ್ರಿಯಗಳು ನಡಯಿಸುವ ಯುದ್ಧದ ದಾಳಿಗೆ ಈ ದೇಹವು ಸಿಲುಕಬಾ ತುತ್ತಾಗಬಾರದು. ಆಗ ಈ ದೇಹವೇ ಒಂದು ನಿಜವಾದ ಅ-ಯೋಧ್ಯಾ ನಗ ವದು. ಇಲ್ಲಿ ರಾಮನೆಂದರೆ ದಶರಥ ಕುಮಾರ, ಸೀತಾಪತಿಯಾದ ರಾಮನಲ್ಲ. ಋಷಿ ಮಹಾವಾಕ್ಯದಿಂದ ಹೇಳಿಸಿ ಕೊಳ್ಳಲ್ಪಡುವ, ದೇವಾಂಶನೆನಿಸಿದ ಜೀವಾತ್ಮ ರಾಮನು. ಇಲ್ಲಿ ಸೀತೆಯೆಂದರೆ ಜನಕ ಮಹಾರಾಜನ ಮ ಳಾಗಿ ಶ್ರೀರಾಮಚಂದ್ರ ವಿಡಿದ ಸೀತೆಯಲ್ಲ. ಇಲ್ಲಿ ಸೀತೆಯೆಂದರೆ ಜೀವಾತ್ಮನಲ್ಲಿ ಸುಪ್ತವಾಗಿ ಗುಪ್ತವಾಗಿ ಗಿರುವ ದಿವ್ಯಶಕ್ತಿ. ಈ ಸೀತೆಯನ್ನು ಕದ್ದೊಯ್ಯುವ ರಾವಣನೆಂದರೆ ದಶಕಂಠ ರಾವ ದಶೇಂದ್ರಿಯ ಮುಖದಿಂದ ದೆಸೆದೆಸಗೆ ತಿರುಗಾಡಿ ವಿಷಯಗಳನ್ನು ಸೇವಿಸುವ ಓರ್ವ ರಾವಣನಿದ್ದಂತೆ. ರಾವಣನು ಸೀತೆಯನ್ನು ಅಪಹರಿಸಿಕೊಂಡು ಹೋ ಸೇವನೆಯಿಂದ ಚಂಚಲವಾದ, ವಿಕೃತವಾದ, ಪುರುಷಾರ್ಥ ಪಥದಿಂದ ವಿಮುಖ ದುಷ್ಟಮನಸ್ಸು ಎಂತಹ ಧೀರೋದಾತ್ತನಿದ್ದರೂ ಆ ಮುಮುಕ್ಷುವಿನ ದಿವ್ಯಶಕ್ತಿಯ ಪ್ರತಿಭೆಯನ್ನು ಹಾಳುಮಾಡಿಬಿಡುವದು.

ಹೃದಯವೆಂಬ ಕುರುಕ್ಷೇತ್ರದಲ್ಲಿ ದುಷ್ಟಶಕ್ತಿ, ಶಿಷ್ಟಶಕ್ತಿಗಳೆಂಬ, ಕೌರವ-ಪಾ ರಿಗೆ ತುಮುಲಯುದ್ಧವು ನಡೆದಿರುವದು. ಅರ್ಜುನನು ಶ್ರೀಕೃಷ್ಣನಿಗೆ–

"ಶಿಷ್ಯಸ್ತೇಹಂ ಶಾಧಿ ಮಾಂ ತ್ವಾಂ ಪ್ರಸನ್ನಂ" ಎಂದು ಮೊರೆಹೊ ಸತ್ವಗುಣಪ್ರಧಾನನಾಗಿ ಜೀವಾತ್ಮನೂ ಹೃದಯಸ್ಥ ಪರಮಾತ್ಮನಿಗೆ ಶರಣುಹೋಗ ಆಗ ಜೀವಾತ್ಮನು ಜೀವನದ ಸಮರಾಂಗಣದಲ್ಲಿ ವಿಜಯ ಶ್ರೀಯನ್ನು ಪಡೆಯುವನು.

ಅಲ್ಲಮಪ್ರಭುವು ಮಾಯಾಂಗನೆಗೆ ನಾಟ್ಯಾಚಾರ್ಯನಾದರೂ ಅವಳ ಆಟ ವನ್ನು, ಆಟಾಟೋಪವನ್ನು ಕೇಳಿಯೂ ಕೇಳದಂತೆ, ನೋಡಿಯೂ ನೋಡದಂತೆ, ಮಾಡಿಯೂ ಮಾತನಾಡದಂತೆ ಪುಷ್ಕರಪಲಾಶವನ್ನಿರ್ಲೇಪಕ, ಎಂಬಂತೆ ನಿರ್ಲಿಪ್ತನಾಗಿ ಮನದಲ್ಲಿಯ ಕಾಮವಾಸನೆಯನ್ನೇ ಸುಟ್ಟುರುಹಿದ ಪ್ರಭುವಿಗೆ ಹೊರಗಣ ಮಾಯೆಯು ಮಾಡೀತು ? ಆದಕ್ಕಾಗಿಯೇ ಪ್ರಭುವು

"ಹೊನ್ನು ಮಾಯೆಯೆಂಬುರು ಹೊನ್ನು ಮಾಯೆಯಲ್ಲ,
ಹೆಣ್ಣು ಮಾಯೆಯೆಂಬರು ಹೆಣ್ಣು ಮಾಯೆಯಲ್ಲ,
ಮಣ್ಣು ಮಾಯೆಯೆಂಬುರು ಮಣ್ಣು ಮಾಯೆಯಲ್ಲ,
ಮನದ ಮುಂದಣ ಆಶೆಯೇ ಮಾಯೆ ಕಾಣಾ ಗುಹೇಶ್ವರ''

ಎಂದು ಸಾರಿ ಹೇಳಿದ್ದಾನೆ. ಹೊನ್ನು, ಹೆಣ್ಣು, ಮಣ್ಣುಗಳು ಮಾಯೆಯಲ್ಲ. ಮನದೊಳಗಿರುವ ದುರಾಶೆ, ಕಾಮವಾಸನೆಗಳೇ ಮಾಯೆ ಎಂಬುದು ಅಲ್ಲಮಪ್ರಭುವಿನ ಸತ್ಯ ಸಿದ್ಧಾಂತ–

"ಮಹಾದ್ಭುತಾ ಅನಿರ್ವಚನೀಯ ರೂಪಾ'' ''ನಾಸ್ತ್ಯೇವ ಯಾ ವಿಚಾರೇಣ ಸಾ ಮಾಯಾ ಇತ್ಯಭಿಧೀಯತೇ" ''ಮಾಯಾಮಾಪೇಶಲಾಸ್ಯಾದಘಟಿತ ಘಟನಾಪಾಟವಿ...'' ಎಂದು ಮುಂತಾಗಿ ಪಂಡಿತರು ಲಕ್ಷಣಮಾಡಿದರೆ ಶ್ರೀಮನ್ನಿಜಗುಣಶಿವಯೋಗಿಗಳು–

''ನಿಜದೊಳುಸದಸತ್ತಾಗಿಹಶಕ್ತಿ। ಅಜೆಯೆನಿಸುವದು ಮಾಯಾಶಕ್ತಿ।
ಅದುವೆ ಜಗತ್ಕಾರಣಮಾಗಿಹುದು। ಆದರಿಂ ಪ್ರಕೃತಿ ಎನಿಸಿಕೊಳುತಿಹುದು।
ನಾಸಾತ್ವಕೆ ಕಾರಣಮಾಗಿಹುದು। ಆನಂದಾಚ್ಛಾದಕಮಾಗಿಹುದು।
ಉಳ್ಳ ಬ್ರಹ್ಮವನಿಲ್ಲೆನಿಸುವದು। ಇಲ್ಲದ ಲೋಕವನುಂಟೆನಿಸುವದು।

ಎಂದು ಮಾಯೆಯ ಸ್ವರೂಪ, ಲಕ್ಷಣ, ಗುಣಾದಿಗಳನ್ನು ಹೇಳಿರುವರು.

ಮಾಯೆಯೇ ಮಕ್ಕಳನ್ನು ಹಡೆದು ಹೆತ್ತತಾಯಿಯೆನಿಸುವಳು. ಮಾಯೆಯೇ ಮುದ್ದು ಮಕ್ಕಳಾಗಿ ಹುಟ್ಟಿ ಮೋಹವನ್ನುಂಟು ಮಾಡುವಳು. ಮಾಯೆಯೇ ಮೋಹದ ಮಡದಿಯಾಗಿ ಕೂಡುವಳು. ಈ ಮಾಯೆಯ ಕಾಡಾಟವನ್ನು ತಾಳಲಾರೆ ಎಂದು ಶ್ರೀ ಬಸವೇಶ್ವರರು ತಮ್ಮ ಅಸಹಾಯಕಸ್ಥಿತಿಯನ್ನು ಸಂಗಮನಾಥನಲ್ಲಿ ತೋಡಿಕೊಂಡಿರುವರು. ಸರ್ಪಭೂಷಣರಂತೂ ಹೆಣ್ಣಿನ ಮೇಲೆ ರೇಗಿಕೊಂಡರೇನೋ ಎಂಬುವಂತೆ–

"ಧರೆಯೊಳೀ ಹೆಣ್ಣುರಕ್ಕಸಿಯಲ್ಲದಿನ್ನುಂಟೆ।
ನರರು ಬೇರಿಹುದೆಂದು ಪೇಳುವದು ಪುಸಿಯು॥
ನೋಡಿದರೆ ಮನವ ಮಾತಾಡಿದರೆ ಧನವ।
ನೊಡಗೂಡಿದರೆ ಪ್ರಾಣಗಳ ಸೆಳೆದುಕೊಳ್ಳುವದು।
ಮಾಡಬಾರದುದನೆ ಮಾಡಿಸಿ ಕಡೆಗೆ ಯಮಭಟರ।
ತಾಡನೆಗೆ ಹಿಡಿಕೊಟ್ಟು ಕೊಲ್ಲಿಪುದರಿಂದ॥

ಹೆಣ್ಣು ರಕ್ಕಸಿ,ಹುಲಿ, ಕರಡಿ,ಪಿಶಾಚಿಗಳಿಗಿಂತಲೂ ಕೀಳಾದುದು, ಈ ಮಾಯೆ ನೋಡಬಾರದು, ಮಾತಾಡಬಾರದು, ಮುಟ್ಟಬಾರದು, ನೆನೆಯಬಾರದು ಎಂದು ಹೇಳಿರುವರು.

ಹೆಣ್ಣಿಗೂ ಮಣ್ಣಿಗೂ ಉಣ್ಣದುರಿಯಲು ಬೇಡ
ಹೆಣ್ಣಿಂದ ಕೆಟ್ಟ ದಶಕಂಠ। ಕೌರವನು
ಮಣ್ಣಿಂದ ಕೆಡನೆ ಸರ್ವಜ್ಞ।

ಮಣ್ಣು ಬಿಟ್ಟವ ದೈವ ಹೊನ್ನು ಬಿಟ್ಟವ ದೈವ ।
ಹೆಣ್ಣನೆರಬಿಟ್ಟರವ ದೈವ ... " ಎಂದು ಸರ್ವಜ್ಞನೂ,

" ಆರು ಹಿತವರು ನಿನಗೆ ಈ ಮೂವರೊಳಗೆ ।
ನಾರಿಯೋ ಧಾರುಣಿಯೋ ಬಲುಧನದ ಸಿರಿಯೋ ॥"

ಎಂದು ದಾಸಕೂಟದವರೂ ಹಾಡಿರುವರು. ಆದರೆ ಕರ್ಮಯೋಗಿ ಸಿದ್ಧರಾಮ
ಇವೆಲ್ಲವನ್ನು ತೊಡೆದು ಹಾಕಿ–

" ಭಕ್ತನ ಮನ ಹೆಣ್ಣಿನೊಳಗಾದರೆ ವಿವಾಹವಾಗಿ ಕೊಡುವದು,
ಭಕ್ತನ ಮನ ಮಣ್ಣಿನೊಳಗಾದರೆ ಕೊಂಡು ಆಲಯುವ ಮಾಡುವದು,
ಭಕ್ತನ ಮನ ಹೊನ್ನಿನೊಳಗಾದರೆ ಬಳಲಿ ದೊರಕಿಸುವದು ನೋಡಾ,
ಕಪಿಲಸಿದ್ಧ ಮಲ್ಲಿಕಾರ್ಜುನ"

ಹೊನ್ನು ಹೆಣ್ಣು ಮಣ್ಣುಗಳು ತುಚ್ಛವೆಂದು ತಿಳಿ
ಅವನ್ನು ಹಳಿಯಬೇಡ. ನಿನಗೆ ಇಷ್ಟವೆನಿಸಿದರೆ ತುಷ್ಟಿ ಪುಷ್ಟಿ ಕೊಡುವ ಅ
ಕಷ್ಟಪಟ್ಟು ಗಳಿಸು, ಸತ್ಪಾತ್ರದಲ್ಲಿ ಬಳಸು, ಬಡವರಿಗಾಗಿ ಉಳಿಸು, ಹೊನ್ನು
ಮಣ್ಣುಗಳು ಕಾಡುವವೆಂದು ಹೇಳುವದು ಶುದ್ಧ ತಪ್ಪು. ಅವು ತಾವಿರುವಂತೆ ಇ
ನಿನ್ನಮನದಲ್ಲಿರುವ ದುಷ್ಟವಾಸನೆಗಳು ಸುಟ್ಟುಹೋದರೆ ಅವೇನು ಮಾಡು
ಅಲ್ಲದ ಸಲ್ಲದ ಭ್ರಮೆಯಿಂದ ನೀನೇ ಕಳವಳಕ್ಕೊಳಗಾಗಿ ದುಃಖಸಾಗರದಲ್ಲಿ ಮು
ಅವುಗಳಲ್ಲಿ ಏನೇನೂ ತಪ್ಪಿಲ್ಲ. ತಪ್ಪು ಇರುವದು ನಿನ್ನಲ್ಲಿ. ನಿನ್ನ ತಪ್ಪನ್ನೊಯ್ದು
ಮೇಲೆ ಹೇರುವದು ಶುದ್ಧ ತಪ್ಪು ಎಂದು ಹೇಳಿರುವರು.

ಓರ್ವ ಮಗನು ತಂದೆಯನ್ನು ಕುರಿತು ಸೀಸಪೆನ್ಸಿಲ್ ಕೆತ್ತಲು ಚಾಕು
ಬೇಡಲಾಗಿ ತಂದೆಯು ಕೊಡಿಸಿಕೊಟ್ಟನು. ಶತಮೂರ್ಖನಾದ ಮಗನು ಹರಿತವಾದ
ಚಾಕುವಿನಿಂದ ಪೆನ್ಸಿಲ್ ಕೆತ್ತದೇ ತನ್ನ ಮೂಗನ್ನೇ ಕೊಯ್ದುಕೊಂಡನಂತೆ. ಈ ಮೂ
ತನದ ಕೆಲಸದಲ್ಲಿ ಚಾಕುವನ್ನು ಕೊಡಿಸಿದ ತಂದೆಯ ತಪ್ಪೋ ? ಕೊಯ್ದುಕೊಂಡ ಮ
ತಪ್ಪೋ ? ಅಥವಾ ಕೊಯ್ಸಿಕೊಂಡ ಮೂಗಿನ ತಪ್ಪೋ ? ಎಲ್ಲ ತಪ್ಪು ಕೊಯ್ದು
ವನದೇ ಅಲ್ಲವೇ ! ಓರ್ವ ಗುರುವಿಗೆ ನಾಲ್ಕು ಜನ ಶಿಷ್ಯರಿದ್ದರು, ಗುರುವು
ಬುದ್ಧಿಯನ್ನು ಪರೀಕ್ಷಿಸುವದಕ್ಕಾಗಿ ನಾಲ್ಕುನಾಲ್ಕು ಮೊಳದಷ್ಟು ಉದ್ದ ನೂಲಿನ
ಗಳನ್ನು ಕೊಟ್ಟನು. ಓರ್ವ ಶಿಷ್ಯನು ಗುರುಕೊಟ್ಟ ಹಗ್ಗದಿಂದ ಒಂದು ಜೋಕಾ
ಕೇಕಿ ಹಾಕುತ್ತ ಜೀಕಿಜೀಕಿ ನಲಿದಾಡಿದನು. ಮತ್ತೋರ್ವ ಶಿಷ್ಯನು ಅದೇಹಗ್ಗ
ಕೊಡಕ್ಕೆ ಕಟ್ಟಿ ಬಾವಿಯಲ್ಲಿರುವ ಸಿಹಿನೀರು ಸೇದಲು ಉಪಯೋಗಿಸಿದನು. ಇ
ಶಿಷ್ಯನು ಹೊಸ ನೂಲಿನ ಹಗ್ಗಕ್ಕೆ ಬಣ್ಣ ಎದ್ದಿ ಕಾರಹುಣ್ಣಿವೆಯ ದಿನ ಹೊಸಹ
ಹೋರಿಗೆ ಕಟ್ಟಿ ಓಡಾಡಿಸಲು ಉಪಯೋಗಿಸಿದನು. ಕೊನೆಯ ಶಿಷ್ಯನು ಇದಾ
ಮಾಡದೇ ಆ ನೂಲಿನ ಹಗ್ಗದಿಂದ ಉರುಲುಹಾಕಿಕೊಂಡು ಸತ್ತನಂತೆ. ಶಿಷ್ಯರ
ಯನ್ನು ಪರೀಕ್ಷೆ ಮಾಡುವದಕ್ಕಾಗಿ ಹಗ್ಗವನ್ನು ಕೊಟ್ಟ ಗುರುವಿನ ತಪ್ಪೋ? ಉ

ಹಾಕಿಕೊಂಡ ಶಿಷ್ಯನ ತಪ್ಪೋ ! ಸಾಧನಗಳೆಲ್ಲವೂ ಒಳಿತಾಗಿಯೇ ಇದ್ದರೂ ಸಹ ಸಾಧಕನ ಬುದ್ಧಿ ನೈಪುಣ್ಯದಿಂದ ಆ ಸಾಧನಗಳು ಉನ್ನತಸಿದ್ಧಿ ಪಡೆಯಲು ಸಾಧಕಗಳಾಗಿಯೂ ಸಾಧಕನ ಬುದ್ಧಿ ಮೌಢ್ಯದಿಂದ ಅವೇ ಸಾಧನಗಳು ಬಾಧಕಗಳಾಗಿಯೂ ಪರಿಣಮಿಸುವವು.

ಹೊನ್ನು, ಹೆಣ್ಣು, ಮಣ್ಣುಗಳು ಮಾಯೆಯಲ್ಲ. ಇವುಗಳ ಮೇಲಿರುವ ವ್ಯಾಮೋಹವೇ ಮಾಯೆ, ಮನದೊಳಗಿರುವ ದುಷ್ಟವಾಸನೆಯೇ ಮಾಯೆ ಎಂದು ಪ್ರಭುದೇವರು ಹೇಳಿರುವರು.

''ಆಶೆಯೆಂಬ ಶೂಲದ ಮೇಲೆ, ವೇಷವೆಂಬ ಹೆಣನ ಕುಳ್ಳಿರಿಸಿದರೆ,
ಮೇಲುಳ್ಳ ಹಿರಿಯರು ಹೀಗೆ ಸವೆದರು ನೋಡಾ ।
ಆಶೆಯ ಮುಂದಿಟ್ಟುಕೊಂಡು ಸುಳಿವ ಹಿರಿಯರಕಂಡು ।
ಗುಹೇಶ್ವರ ಲಿಂಗಕ್ಕೆ ಹೇಸಿಕೆಯಾಯಿತ್ತು''
ಆಶೆ ಎಂಬ ಸ್ತ್ರೀಗೆ ಮನಸೋತವರೆಲ್ಲ ಕೆಟ್ಟಕೇಡನೇನೆಂಬೆನಯ್ಯ
ಯತಿಗಳಾಗಲಿ ವೇದಾಧ್ಯಾಯಿಗಳಾಗಲೀ
ವ್ರತಿಗಳಾಗಲೀ ಸರ್ವವಿದ್ಯಾಕಲಾವಂತರಾಗಲಿ
ನರರೊಳಗಾಗಲೀ ಸುರರೊಳಗಾಗಲೀ ಇವರೆಲ್ಲರೂ
ಧನವುಳ್ಳವರ ಬಾಗಿಲ ಕಾಯಿಸಿದಳು ನೋಡಾ
ಇವಳಿಗಾರು ಮರುಳಾಗರು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ
ಶರಣರಲ್ಲದವರ ಕಿವಿಯ ಹಿಡಿದು ಕುಣಿಸಿದಳು ನೋಡಾ"

ಈ ದುರಾಶೆ ದುರ್ವಾಸನೆಗಳಿಂದಲೇ ಜಗವೆಲ್ಲ ತತ್ತರಿಸಿ ಹೋಗಿರುವದು.

ಭುಸ್ಸೆಂದು ಹೆಡೆದೆಗೆದು ಬಂದು ಕಚ್ಚಿ ಪ್ರಾಣವನ್ನೇ ತಕ್ಕೊಳ್ಳುವ ಹಾವಿನ ವಿಷದ ಹಲ್ಲನ್ನೇ ಕಿತ್ತಿ ಬುಟ್ಟಿಯಲ್ಲಿ ಹಾಕಿ ಆ ಹಾವನ್ನೇ ಆಡಿಸಿ ಹಾವಾಡಿಗನು ತನ್ನ ಜೀವನವನ್ನು ಸಾಗಿಸುವದಿಲ್ಲವೇ ? ವಿಷದಕೋಡಿಯನ್ನೇ ತೆಗೆದಚೇಳು ಮೈತುಂಬ ಹರಿದಾಡಿದರೂ ಅದೇನು ಮಾಡುವದು ? ಹಾಗೆ ಮನದಲ್ಲಿ ದುರಾಶೆ, ದುರ್ಭಾವನೆ, ದುರ್ವಿಕಾರ, ದುರ್ವಿಚಾರ, ದುರ್ವಾಸನೆಗಳೆಂಬ ಭಯಂಕರ ವಿಷವಿದ್ದರೆ ಹೊನ್ನು, ಹೆಣ್ಣುಗಳು ಮುಕ್ತಿಗೆ ಸಾಧಕಗಳಾಗದೇ ಬಾಧಕಗಳಾಗುವವು. ಅಶಕ್ತನಿಗೆ ಹಾಲು ಬಾಧಕವಲ್ಲದೆ ಸಶಕ್ತನಿಗೆ ಹಾಲು ಬಾಧಕವಾದೀತೇ ? ಯಾವ ಸಾಧನಗಳಲ್ಲಿಯೂ ದೋಷವಿಲ್ಲ. ಸಾಧ್ಯವನ್ನು ಸಾಧಿಸುವ ಸಾಧಕನ ಮನದಲ್ಲಿಯೇ ದೋಷವಿದೆ.

ಬ್ರಹ್ಮಾಂಡದಲ್ಲಿ ಗಂಗಾ, ಯಮುನಾ, ಕೃಷ್ಣಾ ಮೊದಲಾದ ಮಹಾಮಹಾ ನದಿಗಳು ಹರಿಯುವಂತೆ ಪಿಂಡಾಂಡದಲ್ಲಿಯೂ ಒಂದು ಮಹಾನದಿಯು ಹರಿಯುತ್ತಿದೆ. ಅದೇ ವಾಸನಾನದಿಯು "ಶುಭಾಶುಭಾಭ್ಯಾಂ ಮಾರ್ಗಾಭ್ಯಾಂ ವಹಂತೀವಾಸನಾಸರಿತ್ ।
ಪೌರುಷೇಣ ಪ್ರಯತ್ನೇನ ಯೋಜನೀಯಾತ್ ಶುಭೇಪಥಿ '

ಯಾವುದೇ ಒಂದು ಕರ್ಮವನ್ನು ಮಾಡಿದಾಗ ಅದರಿಂದ ಮನಸ್ಸಿನಲ್ಲಿ ಉಳಿಯುವ ಸೂಕ್ಷ್ಮ ಅನುಭವವೇ ವಾಸನೆ ಎನಿಸುವದು. ಒಂದು ಡಬ್ಬಿಯಲ್ಲಿದ್ದ ಕರ್ಪೂರವನ್ನು ತೆಗೆದರೂ

ಆ ಕರ್ಪೂರದ ವಾಸನೆಯು ಇದ್ದೇಇರುವದು. ಒಂದು ಗಂಧದಎಣ್ಣೆಯ ಬು
ಲ್ಲಿಯ ಎಣ್ಣೆಯೆಲ್ಲ ತೀರಿಹೋದರೂ ಸಹ ಆ ಗಂಧದ ಎಣ್ಣೆಯ ವಾಸನೆಯು
ವದು. ಹಾಗೆ ನಾವು ಅನ್ಯವಿತ್ತಾಪಹರಣ, ಪರವಧುವಿನ ಕೂಟ, ಅಭಕ್ಷ
ಹಿಂಸೆ ಮೊದಲಾದ ಪಾಪಕರ್ಮಗಳನ್ನು ಮಾಡಿದಲ್ಲಿ ತಜ್ಜನಿತ ಸಂಸ್ಕಾರವು
ಮನಸ್ಸಿನಲ್ಲಿ ಉಳಿದರೆ ಅದು ಪಾಪವಾಸನೆಯೆಂದು ಹೇಳಲ್ಪಡುವದು. ಯಜ್ಞ
ಶಿವಮಂತ್ರಪಠನ, ತತ್ತ್ವಶಾಸ್ತ್ರಚಿಂತನ ಮುಂತಾದ ಶುಭಕರ್ಮಗಳನ್ನು
ನಂತರ ಮನದಲ್ಲಿ ಉಳಿಯುವ ಸಂಸ್ಕಾರವೇ ಶುಭವಾಸನೆ ಎನಿಸುವದು.

ಎಷ್ಟೇ ಶಕ್ತಿಯಿಂದ ಕಲ್ಲನ್ನು ಮೇಲೆಎಸೆದರೂ ಅದು ನೇರವಾಗಿ
ಬೀಳುವಂತೆ,ನೀರು ಕೆಳಮುಖವಾಗಿಯೇ ಹರಿಯುವಂತೆ: ಬೆಂಕಿಯು ಮೇಲ್ಮುಖ
ಉರಿಯುವಂತೆ, ಗಾಳಿಯು ಒಂದೆಡೆಗೆ ನಿಲ್ಲದೇ ಎಲ್ಲೆಡೆಗೆ ಬೀಸುವಂತೆ ದೋಷಪ
ಮನಸ್ಸು ಊರ್ಧ್ವಮಾರ್ಗದತ್ತ ಅಂದರೆ ನಿವೃತ್ತಿಮಾರ್ಗದತ್ತ ಹರಿಯದೇ
ಮಾರ್ಗದತ್ತ ಅಂದರೆ ಐಹಿಕ ಕ್ಷಣಭಂಗುರ ವಿಷಯಗಳತ್ತ ಹರಿಯುವದು. ನ
ಶುದ್ಧವಾಗಿ ಭಗವಚ್ಚಿಂತನೆ ಮಾಡದೇ ಅದು ಲೌಕಿಕ ವಾಸನೆಗಳಿಂದ ತುಂ
ಮುಕ್ತಿ ದೊರಕಲಾರದು ಎಂಬುದಕ್ಕೆ ಅನೇಕ ದೃಷ್ಟಾಂತಗಳಿವೆ.

ಭರತನು ಯುವರಾಜನಿಗೆ ಪಟ್ಟಾಭಿಷೇಕ ಮಾಡಿ ವಾನಪ್ರಸ್ಥಾಶ್ರಮವನ್ನು
ತೀರದಲ್ಲಿ ಅನುಷ್ಠಾನಕ್ಕೆ ಕುಳಿತಾಗ ಅಕಸ್ಮಾತ್ ಧನುರ್ಬಾಣಗಳನ್ನು ಹಿಡಿದು
ಬೆಂಬತ್ತಿದ ಬೇಡನಿಂದ ತಪ್ಪಿಸಿಕೊಳ್ಳಲು ಗರ್ಭಿಣಿಯಾದ ಚಿಗರೆಯೊಂದು
ಮುಂದೆಯೇ ಹಾಯ್ದು ನದಿಯಲ್ಲಿ ಧುಮುಕಿತು. ಅಂಬು ಗರ್ಭಿಣಿಯಾದ ಆ
ಹೊಟ್ಟೆಯೊಳಗಿನ ಮರಿಯೊಂದು ಅದರ ಜಿಗಿತಕ್ಕೆ ಕಡೆಗಾಗಿ ಭರತನ ಮ
ಬಿದ್ದಿತು. ಭರತನು ಆತ್ಮಾನುಸಂಧಾನವನ್ನು ಬಿಟ್ಟು ಜಿಂಕೆಯನ್ನು ಜೋಪಾ
ವ್ಯಾಮೋಹದಲ್ಲಿ ಮಗ್ನನಾದನು. ಆತ್ಮಾನುಸಂಧಾನ ವಿಮುಖನಾದ ಭರತನು
ಸಾನದಲ್ಲಿ ಮೃಗ, ಮೃಗ ಎಂದೇ ಕನವರಿಸಿ ಪ್ರಾಣವನ್ನು ಬಿಟ್ಟ ಮೂಲಕ
ದು ಜನ್ಮದಲ್ಲಿ ಚಿಗರೆಯಾಗಿ ಜನ್ಮತಳೆದು ಮುಂದೆ ಮುಕ್ತನಾಗಬೇಕಾಯಿತು.
ಯನ್ನು ಅತಿಸ್ನೇಹದಿಂದ, ಅತೀವ ಮೋಹದಿಂದ ಜೋಪಾನಮಾಡಿದುದೇ
ಸೂಕ್ಷ್ಮವಾಸನೆಯಾಗಿ ಉಳಿದು ಆ ವಾಸನೆಯೇ ಪುನರ್ಜನ್ಮಕ್ಕೆ ಕಾರಣವಾಯಿತು.

ಓರ್ವ ವಯೋವೃದ್ಧಳಾದ ಮಾತೆಯು ರಾಮಕೃಷ್ಣ ಪರಮಹಂಸರ ಬಳಿಗೆಬಂ
ರುಗಳೇ ಈಶ್ವರ ಸಾಕ್ಷಾತ್ಕಾರವಾಗುವಂತಹ ಮಂತ್ರವನ್ನು ಉಪದೇಶಿಸಿರಿ
ದಳು.ಪರಮಹಂಸರು ತಾಯಿನಿನ್ನ ಮನದಲ್ಲಿ ಅಪಾಪ ಸಾಂಸಾರಿಕ ಭಾವನೆ
ಇದ್ದರೆ ಈಶ್ವರ ಸಾಕ್ಷಾತ್ಕಾರವಾಗುವದಿಲ್ಲ ಎನ್ನಲು ಆ ಮಾತೆಯು ಏನೇನೂ
ಜಂಜಡವಿಲ್ಲ, ಎಲ್ಲವನ್ನೂ ಬಿಟ್ಟೇ ಬಂದಿರುವೆನೆನ್ನಲು ಪರಮಹಂಸರು ಆ ವಯೋ
ಮಾತೆಗೆ ಮಂತ್ರೋಪದೇಶ ಮಾಡಿದರು. ಆ ಮಾತೆಯು ಎಷ್ಟುದಿನ ಜಪ ಮ
ಈಶ್ವರ ಸಾಕ್ಷಾತ್ಕಾರವಾಗಲಿಲ್ಲ. ಆಗ ಬೇಸತ್ತ ಮುದುಕಿಯು ಪರಮಹಂಸರ ಬಳಿ

ಗುರುವೇ ಎಷ್ಟು ದಿನ ಜಪಮಾಡಿದರೂ ದೇವ ಸಾಕ್ಷಾತ್ಕಾರವಾಗಲೊಲ್ಲದು ಎಂದು ಹೇಳಲು ಪರಮಹಂಸರು ತಾಯೀ, ನಿನ್ನ ಮನದಲ್ಲಿ ಆವುದೋ ಒಂದು ಪ್ರಾಪಂಚಿಕ ವಾಸನೆಯು ತುಂಬಿತುಳುಕುತ್ತಿದೆ. ಆ ವಾಸನೆಯೇ ಈಶ್ವರ ಸಾಕ್ಷಾತ್ಕಾರಕ್ಕೆ ಅಡ್ಡಿಯನ್ನು ತಂದೊಡ್ಡಿದೆ. ನಿಜಸಂಗತಿಯನ್ನು ಹೇಳವ್ವ, ಎಂದು ಕೇಳಲು ಮುದುಕಿಯು ಹೌದು ಗುರುವೇ ಹೌದು, ನಿಜವಾಗಿ ಮನದಲ್ಲಿ ಒಂದು ವಾಸನೆಯಿದೆ. ನಾನು ತಮ್ಮ ಸನ್ನಿಧಿಗೆ ಬರುವಾಗ ಎಮ್ಮೆಯೊಂದು ಈಯುವದರಲ್ಲಿತ್ತು. ಅದು ಕೋಣವನ್ನು ಈದಿದೆಯೋ ಅಥವಾ ಹೆಣ್ಣು ಕರುವನ್ನು ಈದಿದೆಯೋ ಎಂಬುದೊಂದು ವಿಚಾರವು ಕೋಲ್ಮಿಂಚಿನಂತೆ ಆಗಾಗ ಮನದಲ್ಲಿಮೂಡಿ ಮಾಯವಾಗುತ್ತದೆ ಎನ್ನಲು ಪರಮಹಂಸರು–ತಾಯೀ ಆ ಸಾಂಸಾರಿಕ ವಾಸನೆಯೇ ಈಶ್ವರ ಸಾಕ್ಷಾತ್ಕಾರಕ್ಕೆ ತೊಂದರೆಯನ್ನುಂಟು ಮಾಡಿದೆ ಎಂದು ಹೇಳಿದರಂತೆ.

ಬೀದಿಗಳ್ಳರು ಸಿರಿವಂತ ಹಾದಿಕಾರನ ಕೈಕಾಲುಕಟ್ಟಿ ಅವನಲ್ಲಿರುವ ಹಣವನ್ನೆಲ್ಲ ದೋಚಿ ಕೊಂಡು ಹೋಗುವಂತೆ ದುರಾಶೆ, ದುರ್ಭಾವನೆ, ದುರ್ವಾಸನೆಗಳು ವೀರಸಾಧಕನಲ್ಲಿರುವ ಭಕ್ತಿ, ಜ್ಞಾನ, ವೈರಾಗ್ಯಗಳನ್ನು ಹಾಳುಮಾಡುವವು. ವೀರನಾದ ಸವಾರನು ಕುದುರೆಗೆ ಕಡಿವಾಣವನ್ನು ಹಾಕಿ ಜಾಗರೂಕತೆಯಿಂದ ನಡೆಯಿಸಿ ತನ್ನಊರು ಸೇರುವಂತೆ ವೀರಸಾಧಕನೂ ತನ್ನ ಮನಸ್ಸೆಂಬ ಕುದುರೆಗೆ ಸಂಯಮವೆಂಬ ಕಡಿವಾಣಹಾಕಿ ಸತ್ಯಪಥದಲ್ಲಿ ನಡೆಯಿಸಿ ಮುಕ್ತಿಮಂದಿರವನ್ನು ಮುಟ್ಟಬೇಕು.

ಮಾನವನು ಮಾಡುವ ಯಾತ್ರೆಗಳಲ್ಲಿ ಮುಖ್ಯಯಾತ್ರೆಗಳೆಂದರೆ ಮೂರೇ ಮೂರು. ಒಂದು ಜೀವನ ಯಾತ್ರೆ, ಇನ್ನೊಂದು ಕ್ಷೇತ್ರಯಾತ್ರೆ, ಮತ್ತೊಂದು ಶ್ಮಶಾನಯಾತ್ರೆ, " ನಂದಾಮಶರದಃ ಶತಂ " 'ಮೋದಾಮಶರದಃ ಶತಂ ' ಎಂಬ ಉಪನಿಷದುಕ್ತಿಯಂತೆ-

" ಮನಬಂದ ಹೆಣ್ಣನ್ನು ವಿನಯದಿಂ ಕರೆದಿಪ್ಪ ।
ಮನವಂಟ್ಟಿ ಬಾಳ್ವೆ ಮಾಡಿದರೆ । ಅಮೃತದ ।
ಕೆನೆಯ ಸವಿದಂತೆ ಸರ್ವಜ್ಞ "

ಎಂಬ ಕವಿವಾಣಿಯಂತೆ ನೂರಾರುವರುಷ ಹರುಷದಿಂದ ಬಾಳಿಬದುಕುವದು ಜೀವನ ಯಾತ್ರೆಯು. ನಂತರ ಇಳಿವಯದಲ್ಲಿ ಜೀವನವನ್ನು ಸಾರ್ಥಕ ಮಾಡಿಕೊಳ್ಳುವ ಸದುದ್ದೇಶ ದಿಂದ ದ್ವಾದಶ ಜ್ಯೋತಿರ್ಲಿಂಗದರ್ಶನ, ಗಂಗಾಸ್ನಾನ, ಹಿಮಾಲಯಯಾತ್ರೆ, ಮೊದಲಾದ ಪುಣ್ಯಕಾರ್ಯಗಳನ್ನು ಮಾಡುವದು ಕ್ಷೇತ್ರಯಾತ್ರೆಯು, ಕೊನೆಯ ಯಾತ್ರೆಯೇ ಶ್ಮಶಾನ ಯಾತ್ರೆಯು–

''ಶತಾಯುರ್ವೈ ಪುರುಷಃ'' ಎಂಬುಕ್ತಿಯಂತೆ ಬದುಕಿ ಆಯುಷ್ಯ ಮುಗಿದಾಕ್ಷಣ ವುದೋ ರೋಗಕ್ಕೆ ತುತ್ತಾಗಿ ಕೊನೆಯುಸಿರೆಳೆದು ವಿಮಾನದಲ್ಲಿ ಕುಳಿತು ಬಂಧು ಬಾಂಧವರ ಶೋಕಾಲಾಪದೊಡನೆ ಹೋಗುವದೇ ಶ್ಮಶಾನಯಾತ್ರೆಯು. ಉಳಿವಿ ಗೋಕರ್ಣ ಮೊದಲಾದ ಜಾತ್ರೆಗಳು ನಾಲ್ಕಾರು ದಿನ ನಡೆದುಮುಗಿಯುತ್ತಿದ್ದರೆ, ಈ ಜಾತ್ರೆಯು

ನಡೆಯುವದು ನೂರು ವರುಷ. ಉಳವಿ, ಗೋಕರ್ಣ ಮೊದಲಾದ ಕ್ಷೇತ್ರಗಳಲ್ಲಿ
ತೇರು ಇರುವಂತೆ ನೂರುವರುಷದ ಈ ಜಾತ್ರೆಯಲ್ಲಿಯೂ ಒಂದು ತೇರು
ಯುವ ತೇರು, ನುಡಿಯುವ ತೇರು, ಮೃಡನು ನೆಲೆಸಿದ ತೇರು. ಆ ಜಾತ್ರೆಗಳಲ್ಲಿ
ಮುಂಭಾಗದ ಬಳೆಗಳಿಗೆ ಹಗ್ಗವನ್ನು ಕಟ್ಟಿ ಸಾವಿರಾರು ಜನರು ಜಯಘೋಷ
ಎಳೆದೆಳೆದು ಪಾದಗಟ್ಟಿಗೆ ಮುಟ್ಟಿಸಿ ಮತ್ತೆ ತಿರುಗಿ ಎಳೆದುತಂದು ತೇರಿನ
ಇಡುವರು. ಈ ತೇರು ಹಾಗಲ್ಲ ಒಮ್ಮೆ ಪಾದಗಟ್ಟಿಯನ್ನು ಮುಟ್ಟಿದತೇರು
ಬಾರದು, ತಿರುಗಿ ತೋರದು. ಯಾರಿಗೂ ತೋರದಂತೆ ಕಣ್ಮರೆಯಾಗಿ ಹೋ
ಆ ತೇರನ್ನು ಹಲವಾರು ಜನರು ಒಂದೇ ಕಡೆಯಿಂದ ಎಳೆದರೆ ಈ ತೇರನ್ನು ಇಬ್ಬ
ಕೂಡಿ ಒಬ್ಬರು ಅತ್ತ ಒಬ್ಬರು ಇತ್ತ, ಹೀಗೆ ಎತ್ತೆತ್ತಲೋ ಎಳೆದು ಏನೇನೋ
ಬಿಡುವರು. ಪಾದಗಟ್ಟಿಯನ್ನು ಮುಟ್ಟಿದ ಕೋಟ್ಯಂತರ ತೇರುಗಳಲ್ಲಿ ಒಂದೂ
ಮರಳಿ ಬಂದಿಲ್ಲ. ಅತ್ಯದ್ಭುತವಾದ ಅಚ್ಚರಿಯನ್ನುಂಟು ಮಾಡುವ ಈ ತೇರನ್ನೇ
ಶ್ರೀಸರ್ಪಭೂಷಣ ಶಿವಯೋಗಿಗಳು –

"ತೇರುಸಾಗಿತಮ್ಮ ನೋಡಿರೆ ಈ ದೇಹವೆಂಬ ತೇರು ಸಾಗಿತ
ನೋಡಿರೇ ತೇರು ಸಾಗಿತಮ್ಮ ನೋಡಿ ಸಾರಮುಕುತಿ
ಸತಿಯರೆಲ್ಲ ಪಾರಮಾರ್ಥತತ್ವದೊಳು ವಿಚಾರವೆಂಬ
ಬೀದಿಯಲ್ಲಿ " ಎಂದು ಹಾಡಿರುವರು.
"ನೋಡಿರಮ್ಮ ಮೈಲಾರಲಿಂಗನ ಜಾತ್ರೆಯಾಗುತಿದೆ।
ನಾಡ ಜನರಿಗೆ ತಿಳಿಯದು ಇದರ ಮರ್ಮಬೇರಿದೆ।
ಹುರಿಗೂಡಿದ ಮಿಣಿ ಹತ್ತರಿಂದ ಬಿಗಿದೊಪ್ಪಿ ತೋರುತಿದೆ।
ಗೊರವಮಂಡಲದತ್ತ ನೋಡಲುರೆ ಕಳಸವೆಸೆಯುತಿದೆ॥

ಎಂದು ಮಹಾನುಭಾವಿಗಳಾದ ಮೈಲಾರದಬಸವಲಿಂಗಶರಣರು ಆ ತೇರಿನ
ಸಂಭ್ರಮವನ್ನೇ ಕಂಡು ಬಾಯ್ದೆರೆವ ಮಂದಜನರನ್ನು ಮುಂದೆಕರೆದು ಆ ತೇ
ನೋಡುವಿರಿ ? ಈ ತೇರನ್ನು ನೋಡಲು ಬನ್ನಿರಿ ಎಂದು ಕೈಮಾಡಿ ಕರೆದು
ತೋರಿಸಿ ಜನರನ್ನುದ್ಧರಿಸುತ್ತಿದ್ದರು. ವಿವೇಕಿಯಾದ ಮುಮುಕ್ಷುವು ಈ
ಶಮ, ದಮ, ಭಕ್ತಿ, ಜ್ಞಾನ, ವೈರಾಗ್ಯಗಳೆಂಬ ಪ್ರಜೆಗಳ ಕೈಯಲ್ಲಿ ಕೊಟ್ಟರೆ ಅವರು
ತೇರನ್ನು ಮುಕ್ತಿಮಂದಿರಕ್ಕೆ ಒಯ್ದು ಮುಟ್ಟಿಸುವರು. ಒಂದು ವೇಳೆ ಕೈಮೀರಿ
ಷಡ್ರಿಪುಗಳು, ಸಪ್ತವ್ಯಸನಗಳು, ಷಡ್ಭ್ರಮೆಗಳು ಇವರ ಕೈಯಲ್ಲಿ ಈ ತೇರು
ಅದನ್ನವರು ನರಕಕೂಪಕ್ಕೆ ಎಳೆದು ಹಾಕುವರು. ಜಾತ್ರೆಕ್ಷೇತ್ರಗಳಲ್ಲಿ ಎಳೆಯುವ ತೇರು
ಮಧ್ಯದಲ್ಲಿ ಮೂರ್ತಿಯೊಂದನ್ನು ಕೂಡ್ರಿಸಿ ಅದನ್ನೋರ್ವ ಪೂಜಾರಿಯು ಪೂಜೆ ಮಾ
ವನಲ್ಲವೇ !

" ತತ್ಸೃಷ್ಟ್ವಾ ತದೇವಾನುಪ್ರಾವಿಶತ್", "ಹೃದಿಹ್ಯೇಷಆತ್ಮಾ" ಮು
"ನಾಹಂವಸಾಮಿ ಕೈಲಾಸೇ ನಮೇಕಾನಚಮಂದಿರೇ।
ಮದ್ಭಕ್ತಾಯತ್ರ ತಿಷ್ಠಂತಿ ತತ್ರತಿಷ್ಠಾಮಿ ಪಾರ್ವತಿ"
"ಶರಣ ಜನರ ಸದುಹೃದಯ ನಳಿನದೊಳು ಪರಿಶೋಭಿಸುತ್ತಿಹುದು ನಿನ್ನ ಪಾದ"

"ಮಿಸುಪ ಹೃದಯಕಮಲವೆಂಬ । ಕನಕಪೀಠದಗ್ರದಲ್ಲಿ । ಚಿನುಮಯಾತ್ಮ !
ಶ್ರೀ ಗುರುಸಿದ್ಧನನುವಿನಿಂದೆ ಮೂರ್ತಿಗೊಳ್ಳಲು" .... ॥

ಎಂಬ ಉಪನಿಷದೃಷಿಗಳ, ಆಗಮಕಾರರ, ಶಿವಯೋಗಿಗಳ ಶಿವಾನುಭಾವಿಗಳ ವಚನದಂತೆ ಈ ದೇಹವೆಂಬ ತೇರಿನ ಮಧ್ಯದಲ್ಲಿ ನೆಲೆಸಿರುವ ಪರಾತ್ಪರ ವಸ್ತುವನ್ನು–

" ಅಮಿತಿ ಬ್ರಹ್ಮಸನ್ಮಾತ್ರಂ ಗಚ್ಛತೀತಿ ಗಮುಚ್ಯತೇ ।
ರೂಪ್ಯತ್ವೇಂಗಮಿತಿಪ್ರಾಜ್ಞೈರಂಗತತ್ತ್ವವಿಶಾರದೈಃ " ॥

ಎಂಬ ಜಗದ್ಗುರು ರೇಣುಕಾಚಾರ್ಯರ ಮಹದುಕ್ತಿಯಂತೆ, ಲಿಂಗವನ್ನು ಕಾಣುವ ಉತ್ಕಟೇಚ್ಛೆಯಿದ್ದುದರಿಂದಲೇ ಅಂಗನೆಂದು ಹೇಳಿಸಿಕೊಳ್ಳುವ ಪರಿಶುದ್ಧ ಜೀವನು ಪೂಜಿಸುವನು.

ಸರ್ಪಭೂಷಣ ಶಿವಯೋಗಿ, ಮೈಲಾರದ ಬಸವಲಿಂಗ ಶರಣರು ಮುಂತಾದವರು ಈ ದೇಹವನ್ನು ತೇರು ಎಂದು ಬಣ್ಣಿಸಿದರೆ, ಮುಪ್ಪಿನಷಡಕ್ಷರಿ, ಶಿಶುನಾಳಶರೀಫ ಮುಂತಾದವರು–

"ಎನ್ನ ಕಾಯವು ನಿನಗೆ ಉನ್ನತಾಲಯವಾಯ್ತು ಇನ್ನೆನಗೆ ಭಯವುಂಟೆ ಎಲೆ ಲಿಂಗವೇ —
" ಗುಡಿಯನೋಡಿರಣ್ಣ ದೇಹದ ಗುಡಿಯ ನೋಡಿರಣ್ಣ" ಎಂದು ಹಾಡಿರುವರು.

ಗುಡಿಯೊಳಗಿನ ದೇವರಪೂಜೆ ಮಾಡುವ ಪೂಜಾರಿಗೆ ಧೂಪ, ದೀಪಾದಿಗಳು ಇರುವಂತೆ ದೇಹದ ಗುಡಿಯಲ್ಲಿರುವ ದೇವರಪೂಜಾರಿಗೂ ಎಲ್ಲ ಸಾಮಗ್ರಿಗಳು ಇರುತ್ತವೆ. ಎರಡು ಕಣ್ಣುಗಳೇ ದೀಪಗಳು, ನಾಸಾಪುಟವೇ ಧೂಪಾರತಿಯು, ನಾಲಗೆಯೇ ಗಂಟೆಯು, ಕಿರುನಾಲಗೆಯೇ ಸಣ್ಣ ಗಂಟೆಯು, ಕಿವಿಗಳೇ ನಗಾರಿಯು, ದಾಳಿಂಬ ಬೀಜದಂತಹ ದಂತಪಂಕ್ತಿಯೇ ಮುತ್ತಿನ ಹಾರ,ಶಾಂತಿಯೇ ಜಲ, ವಿರತಿಯೇ ಗಂಧ, ತ್ರಿಗುಣಗಳೇ ತಾಂಬೂಲ; ಈ ಅಪೂರ್ವ ಸಾಮಗ್ರಿಗಳಿಂದ ಈ ದೇವನ ಪೂಜೆಯನ್ನು ಮಾಡಬೇಕೆಂದು ಅನುಭಾವಿಗಳ ಅಭಿಮತ. ಅನೇಕ ಮಹಾನುಭಾವರು ಈ ತೇರನ್ನೇ ನೂರು ವರುಷದ ಪರ್ಯಂತರ ಶಿವಪಥದಲ್ಲಿ ನಡೆಯಿಸಿ ಕೊನೆಗವರು ಈ ಸುಂದರ ತೇರಿನಲ್ಲೇಕುಳಿತು ಸುಂದರ ಹಾಡುಗಳನ್ನು ಹಾಡಿ ಶಿವಸನ್ನಿಧಿಗೆ ಹೋಗಿರುವರು. ಸರ್ಪಭೂಷಣ ಶಿವಯೋಗಿಗಳು–

" ಮುನ್ನ ನಾನೇನು ಪುಣ್ಯಗಳ ಮಾಡಿರ್ದನೋ ।
ನನ್ನ ನಿಜವ ನಾನೆ ತಿಳಕೊಂಡೆನಲ್ಲ ॥
ಶರೀರವೇ ನಾನೆಂದು ದೃಢದಿಂದೆ ನೆರೆನಂಬಿ ।
ಪರವಸ್ತುವನು ಮುನ್ನ ಮರೆದಿರ್ದ ತೆರದಿ ॥
ಶರೀರವ ಮರೆದೀಗ ಕರಣತ್ರಯದೆ ನಾನೆ ।
ಪರವೆಂಬ ನಂಬುಗೆ ಕರಿಗೊಂಡಿತಲ್ಲಾ ॥ " ಎಂದೂ,

ಮಧುರಭಕ್ತಿಯ ಮುಪ್ಪಿನ ಷಡಕ್ಷರಿಗಳು —

" ನಮ್ಮ ದೇಶಕೆ ಹೋದ ದಿನ ಬಂತು ಮುಂದೆ ॥
ಬಿಡು ತನುವಿನ ಮೇಲಣಾಶೆಯನು ಮುಂದೆ ।

ಹಿಡಿ ಶಿವಶರಣರ ಭಾಷೆಯನು ... ... ಎಂದೂ,
ಮೈಲಾರ ಬಸವಲಿಂಗ ಶರಣರು —

ತಾನೆ ಬೆಳಗುತಿದೆ ಸ್ವಯಂಜ್ಯೋತಿ ತಾನೆ ಬೆಳಗುತಿದೆ, ।
ಮಾನಸ ವಾಚಕ ಕಾಯದೊಳು ತನ್ನ ॥ ಪ ॥ ಎಂದೂ,

ಅನುಭಾವಿಗಳಾದ ಕಡಕೋಳ ಮಡಿವಾಳಪ್ಪನವರು —

" ನಾವು ನಡೆದೇವು ನಮ್ಮ ತವರೂರಿಗೆ । ಹೇಳಿಕೇಳಿ ಇವರಿಗೆ,
ನೀವು ನಡಿರಿ ಅಂಜಿ ನಿಮ್ಮ ಹಿರಿಯರಿಗೆ । ಶಿವಶರಣರಿಗೆ ॥

ಎಂದೂ ಹಾಡಿ ತೇರಿನಿಂದಿಳಿದು ತಮ್ಮ ಮೂಲ ಸ್ಥಾನಕ್ಕೆ ಹೋದರು.

ಶರಣನ ದೇಹವು ನೆಲ, ನೀರು, ಬೆಂಕಿ, ಗಾಳಿ, ಆಕಾಶ ಎಂಬ ಪಂಚಭೂ[ತ] ನಿರ್ಮಿತವಾಗಿರಬಹುದು. ಇಲ್ಲವೇ ಕೇವಲ ಒಂದೇ ತತ್ವದಿಂದ ನಿರ್ಮಿತವಾಗಿರ[ಬಹುದು]. ಕರಚರಣಾದ್ಯವಯವಗಳಿಲ್ಲದ, ಮುಟ್ಟಿದರೆ ಕೈಗೆ ಸಿಲುಕದ, ನಿಂದರೆ ನೆಳಲಿಲ್ಲದ, [ಕ]ಕಂಡರೂ ಹಿಡಿಯಲುಬಾರದ ತೆರದಲ್ಲಿ ಶರಣನದೇಹವು ಇರುವದು, ಇದನ್ನೇ [ರಾಘವಾಂಕ]ದೇವನು ಶತಕತ್ರಯದಲ್ಲಿ—

"ಅನಿಮಿಷನಸ್ಥಿಮಾತ್ರ ತನುವಾಗಿರನೇ ?
ಬಸವಂತ್ವಗಾದಿಸಂಜನಿತವಪುಷ್ಕನಾಗಿರನೇ ?
ಅಲ್ಲಮಂ ಅಂಶಕವರ್ಜಕಾಯನಾಗಿ ನೆಳಲು ಹೆಜ್ಜೆಯಿಲ್ಲದಿರ[ನೇ]!
ಶಿವಯೋಗ ಸುಖ ಪ್ರಪೂರ್ಣ ವಾಸನೆಯು ಶರೀರವೊಂದೆ"

ಶರಣನ ದೇಹವು ಧಾತುಮಯವೂ ಇರಬಹುದು, ಅಧಾತುಮಯವೂ ಇರ[ಬಹುದು]. ಅನಿಮಿಷನೆಂಬ ಶಿವಯೋಗಿಯು ಕೇವಲ ಮೂಳೆಮಾತ್ರದ ಶರೀರವುಳ್ಳವನಾಗಿರ[ಲಿಲ್ಲವೇ ?] ಬಸವೇಶ್ವರನು ತ್ವಚೆ ಮಾಂಸರಕ್ತಾದಿ ಸಪ್ತವಿಧ ಧಾತುವಿಕಾರದ ಶರೀರವುಳ್ಳ[ವನಾಗಿರ]ಲ್ಲವೇ ? ಅಲ್ಲಮಪ್ರಭುವು ಕರಚರಣಾದ್ಯವಯವಗಳಿಲ್ಲದ ಕಾಮನಬಿಲ್ಲಿನಂತೆ [ಕ]ಕಂಡರೂ ಸಹ ಹಿಡಿಯಲು ಬಾರದ, ನೆಳಲಿಲ್ಲದ ಶರೀರವುಳ್ಳವನಾಗಿರಲಿಲ್ಲವೇ ? ಶಿವ[ಯೋಗದ] ಸಾಮರಸ್ಯಾನಂದದಿಂದ ಪರಿಪೂರ್ಣನಾದ ಶರಣನ ದೇಹವು ಧಾತು ವಿಕಾರವಾಗಿ[ದ್ದರೂ] ಅಷ್ಟೇ ! ಇಲ್ಲದಿದ್ದರೂ ಅಷ್ಟೇ ! ಎಂದು ದೃಷ್ಟಾಂತ ಪೂರ್ವಕವಾಗಿ ಹೇಳಿ[ರುವರು]. ಶರಣರು ಪಂಚಭೂತಾತ್ಮಕ ದೇಹದಲ್ಲಿದ್ದರೂ ದೈಹಿಕ, ಮಾನಸಿಕ, ಬೌದ್ಧಿಕ [ಬಾಧೆ]ಗಳಿಗಂಟಿಕೊಳ್ಳದೇ, ಹುಡಿಹೊದ್ದದ ಗಾಳಿಯಂತೆ, ನೇಹಹತ್ತದ ನಾಲಿಗೆಯಂತೆ, [ಮಳೆ]ಯಿಂದ ನೆನೆಯದ ಆಗಸದಂತೆ, ನೀರಿನಿಂದ ನೆನೆಯದ ನೀರಜದಂತೆ ನಿರ್ಲಿಪ್ತರಾ[ಗಿ] ಇರುವರು. ಇದನ್ನೇ ಜಗದ್ಗುರು ರೇಣುಕರು ಆಕಾಯಸ್ಥಲವೆಂದು ಸಿದ್ಧಾಂತ ಶಿಖಾ[ಮಣಿ]ಯಲ್ಲಿ ಹೇಳಿರುವರು. ಪ್ರಭುವು ಸಾಕಾರ ಮೂರ್ತಿಯೂ ಆಹುದು, ನಿರಾಕಾರ ಮೂ[ರ್ತಿ]ಯೂ ಆಹುದು. ಭಕ್ತೋದ್ಧಾರಕ್ಕಾಗಿ ದೇಶಸಂಚಾರ ಕೈಕೊಂಡ ಪ್ರಭುವು ಸೊನ್ನ[ಲಿಗೆ]ರಕ್ಕೆ ಬಂದಾಗ, ಶ್ರೀ ಸಿದ್ಧರಾಮನೊಡನೆ ಸೆಣಸಾಟನಡೆದು ಸಿದ್ಧರಾಮೇಶ್ವರರು [ಕೋಪದಿ]ನಿಂದ ತಮ್ಮ ಹಣೆಗಣ್ಣನ್ನು ತೆಗೆಯಲು ಪ್ರಭುವು ಅವನ ಹುಮ್ಮುಬಿಮ್ಮುಗಳನ್ನು ...

ಅಂಗಾಲಲ್ಲಿಯ ಕಣ್ಣು ತೆಗೆದರೆಂಬ ಪ್ರಸಂಗದಲ್ಲಿ ಮತ್ತು ಶ್ರೀ ಮಧುಕೇಶ್ವರನ ದೇವಾಲಯದ ಮುಂಭಾಗದಲ್ಲಿ ಮದ್ದಳೆಯನ್ನು ಬಾರಿಸುವ ಮದ್ದಳೆಗನಾದ ಪ್ರಸಂಗ ದಲ್ಲಿ, ಪ್ರಭುವನ್ನು ಸಾಕಾರ ಮೂರ್ತಿಯೆಂದೂ, ಗಗನದಲ್ಲಿ ಬಗೆಬಗೆಯ ಬಣ್ಣಗಳಿಂದ ರಂಜಿಸುವ ಕಾಮನಬಿಲ್ಲು ಕಣ್ಣಿಗೆ ಕಂಡರೂ ಕೈಗೆ ನಿಲುಕಲಾರದೇ ಇರುವಂತೆ, ವಿವಿಧ ವೇಷಭೂಷಣಗಳಿಂದ ಒಪ್ಪುವ ಅಲ್ಲಮನನ್ನು ಮಾಯೆ ಬಿಗಿದಪ್ಪಿಕೊಳ್ಳಹೋಗಲು ಬಯ ಲನಪ್ಪಿದಂತಾಗಿ ಸಿಗದಿರುವ ಪ್ರಸಂಗದಲ್ಲಿ ಹಾಗೂ ಹಠಯೋಗಿಯೆಂದು ಖ್ಯಾತಿವೆತ್ತ ವಜ್ರ ಕಾಯದ ಗೋರಕ್ಷನು ಹೆಮ್ಮೆಯಿಂದ ಯೋಗಸಿದ್ಧಿಯನ್ನು ತೋರಿಸಲೋಸುಗ ಅಲ್ಲಮನ ಕೈಯೊಳಗೆ ಖಡ್ಗವಿತ್ತು ಹೊಡೆಯಿಸಿಕೊಳ್ಳಲು ಶಿಲಾಪ್ರತಿಮೆಗೆ ಹೊಡೆದಂತಾಗಿ ಮೈಗೆ ಏನೂ ಗಾಯವಾಗದೇ ಖಡ್ಗವೇ ನುಚ್ಚುನೂರಾಗಿ ಬೀಳಲು ಶಿರುಗಿ ಪ್ರಭುವು ಅವನಿಗೆ ಶಿವಯೋಗದ ಮಹಿಮೆಯನ್ನು ಪ್ರದರ್ಶಿಸಲೋಸುಗ ಖಡ್ಗವನ್ನು ಗೋರಕ್ಷಕನ ಕೈದಿತ್ತು ಹೊಡೆಯಿಸಿಕೊಳ್ಳಲು ಒಂದು ಹನಿ ಸಹ ರಕ್ತಬೀಳದೇ ಸೊಂಟಕ್ಕೆ ಹೊಡೆದ ಕತ್ತಿಯು ಅತ್ತಿಂದ ಇತ್ತ, ಇತ್ತಿಂದ ಅತ್ತ ಬಯಲೊಳಗೆ ಬೀಸಿದಂತಾದ ಸನ್ನಿವೇಶದಲ್ಲಿ ಪ್ರಭು ವನ್ನು ನಿರಾಕಾರ ಮೂರ್ತಿಯೆಂದೂ ಹೇಳುವದು.

ವಿಮಲ ಮಾನಸ ತೀರ್ಥದಲ್ಲಿ ಸ್ನಾನಮಾಡಿ ಶುಭವಾಸನೆಯುಳ್ಳ ಸದ್ಭಾವ ಕುಸು ಮದಿಂದ ಪೂಜೆಮಾಡಿ ಅಸದೃಶ ಪರಂಜ್ಯೋತಿಯನ್ನು ಕಂಡ ಅನುಭವಿಯ ಮಾಟ ಕೂಟ ನೋಟಗಳೆಲ್ಲವೂ ಲಿಂಗಪೂಜೆಯಾದಾಗ, ಹೊರಗಣ ಜಲಪುಷ್ಪಾದಿಗಳ, ಧೂಪದೀ ಪಾದಿಗಳ, ಛತ್ರ ಚಾಮರಾದಿಗಳ ಪಂಚಪಕ್ವಾನ್ನ ನೈವೇದ್ಯದ ಹಂಗು ಅವನಿಗಿಲ್ಲ. ಅನಂತ ನಾಮ, ಅನಂತರೂಪ, ಅನಂತಶಕ್ತಿಯು ಅನಂತನನ್ನು ಅರಿಯಲು ಅನಂತಪ್ರೇಮ ವೊಂದೇ ಬೇಕಲ್ಲದೆ ಬಹಿರಾಡಂಬರಗಳು ಬೇಕಿಲ್ಲ ಎಂಬುದನ್ನೇ–

" ಹೂವ ಕೊಯ್ಯ ಹೋದರೆ ಹೂ ದೊರಕೊಳ್ಳವು.
ಅಗ್ಘವಣಿಯ ತುಂಬುವರೆ ಅಗ್ಘವಣಿ ತುಂಬದು.
ಪೂಜಿಸ ಹೋದರೆ ಪೂಜೆ ಸೇವೆಗೊಳ್ಳದು.
ಇದೇನು ಸೋಜಿಗವಯ್ಯಾ.
ಅರಿದು ಮರೆದವನಲ್ಲ, ಬೆರಗು ಹಿಡಿದವನಲ್ಲ,
ಗುಹೇಶ್ವರನೆಂಬ ಬುದ್ಧಿ ಇಂತುಂಟು "
" ಮಜ್ಜನಕ್ಕೆರೆವಡೆ ನೀನು ಶುದ್ಧ ನಿರ್ಮಲದೇಹಿ.
ಪೂಜೆಯ ಮಾಡುವಡೆ ನಿಮಗೆ ಗಗನ ಕುಸುಮದ ಅಖಂಡಿತಪೂಜೆ.
ಅರ್ಪಿತವ ಮಾಡುವಡೆ ನೀನು ನಿತ್ಯತೃಪ್ತನು.
ಧೂಪದೀಪಾರತಿಗಳ ಬೆಳಗುವೊಡೆ ನೀನು ಸ್ವಯಂಜ್ಯೋತಿಪ್ರಕಾಶನು.
ಅರ್ಚನೆಯ ಮಾಡುವಡೆ ನೀನು ಮುಟ್ಟಬಾರದ ಘನವೇದ್ಯನು.
ನಿತ್ಯ ನೇಮಂಗಳ ಮಾಡುವಡೆ ನಿನಗೆ ಅನಂತ ನಾಮಂಗಳಾದವು
ಗುಹೇಶ್ವರ,

ಎಂಬ ವಚನಗಳಿಂದ ಹೇಳಿದುದಲ್ಲದೆ, ಗುಹೇಶ್ವರನು ಕುರುಹನ್ನೂ ಮೀ
ವೇದ್ಯನು. ನಾನುನೀನೆಂಬ ದ್ವೈತಭಾವವಳಿದು ಅದ್ವೈತದ ಇರುವಿಕೆಯಲ್ಲಿ
ಪೂಜೆ ಮಾಡುವವರಾರು ? ಪೂಜೆಗೊಂಬುವರಾರು ? ಎಂಬುದನ್ನು-

"ಮನವೇ ಲಿಂಗವಾದ ಬಳಿಕ ನೆನೆವುದಿನ್ನಾರನಯ್ಯ ?
ಭಾವವೇ ಐಕ್ಯವಾದ ಬಳಿಕ ಬಯಸುವದಿನ್ನಾರನಯ್ಯ ?
ಭ್ರಮೆಯಳಿದು ನಿಜವು ಸಾಧ್ಯವಾದ ಬಳಿಕ
ಅರಿವುದಿನ್ನಾರನಯ್ಯ ಗುಹೇಶ್ವರ ?''

ಎಂಬ ಈ ವಚನದಿಂದ ಅರಿಯಬಹುದು.

"ಬಯಲು ಬಯಲನೆ ಬಿತ್ತಿ ಬಯಲು ಬಯಲನೆ ಬೆಳೆದು
ಬಯಲು ಬಯಲಾಗಿ ಬಯಲಾಯಿತ್ತಯ್ಯ
ಬಯಲ ಜೀವನ ಬಯಲ ಭಾವನೆ
ಬಯಲು ಬಯಲಾದೆ ಗುಹೇಶ್ವರ''

ಸಗುಣದಿಂದ ನಿರ್ಗುಣಕ್ಕೆ, ಸಾಂತದಿಂದ ಅನಂತಕ್ಕೆ, ಸಾಕಾರದಿಂದ ನಿರಾಕಾ
ಯವದಿಂದ, ನಿರವಯವಕ್ಕೆ, ಖಂಡಿತದಿಂದ ಅಖಂಡಿತಕ್ಕೆ, ಸ್ಥೂಲದಿಂದ ಸೂಕ್ಷ್ಮ
ಸಿದ್ಧಾಂತಕ್ಕನುಸರಿಸಿ, ಜೀವನು ಸಗುಣೋಪಾಸನೆಯನ್ನು ಮಾಡಿ ಕೊನೆಗೆ
ತ್ಪೂರ್ಣವೆನಿಸಿದ ಪರಬ್ರಹ್ಮಸ್ವರೂಪ ಪಡೆಯುವ ಕೊನೆಯ ನಿಲವನ್ನು
ವಾಗಿ ಹೇಳಿ ತಾನೂ ಆ ಮಟ್ಟಕ್ಕೆ ಏರಿದುದನ್ನು ಈ ವಚನದಲ್ಲಿ ಹೇಳಿರುವನು.
ಉನ್ನತೋನ್ನತ ಆಧ್ಯಾತ್ಮಿಕ ಸುವರ್ಣಮಂದಿರದ ತುತ್ತತುದಿಯನ್ನೇರಿದ
ಅಂಧ ತಮಸ್ಸಿನ ಸೆರೆಮನೆಯಲ್ಲಿ ಸುಳಿವ ಮಾಯೆಗೆ ಸಿಲ್ಕುವನೇ ?



## ೮ ನೆಯ ಗತಿ

**ಪ್ರಾಸ್ತಾವಿಕ –**

ಜೀವನ ಸಂಗ್ರಾಮದಲ್ಲಿ ಸೋಲು ಗೆಲವುಗಳು ಯಾರಿಗೂಬಿಟ್ಟದ್ದಲ್ಲ. ಹಲವರು ಸೋತು ಸೋತು ಸಣ್ಣಾಗುತ್ತಿದ್ದರೆ ಕೆಲವರು ಸೋತರೂ ಸಹ ಅದರಿಂದ ಕುಗ್ಗದೇ ಬಗ್ಗದೇ ಸೋಲೇ ಗೆಲುವಿನ ತಳಹದಿ ಎಂದು ಧೈರ್ಯ ಸ್ಥೈರ್ಯಗಳಿಂದ ಮತ್ತೆ ಗೆಲುವನ್ನು ಪಡೆಯಲು ಪ್ರಯತ್ನಿಸಿ ವಿಜಯಿಗಳಾಗುವರು. ಜೀವನದ ತುಮುಲದಲ್ಲಿ ಸೋಲನ್ನರಿಯದೇ ಗೆಲುವಿನ ಮೇಲೆ ಗೆಲುವನ್ನೇ ಪಡೆಯುತ್ತ ಕೀರ್ತಿಶಾಲಿಗಳಾಗಿ ಮೆರೆವ ಜನರು ಬೆರಳಿನಿಂದ ಎಣಿಸುವಷ್ಟು ಮಾತ್ರ.

« ನಡೆವರೆಡಹದೆ ಕುಳಿತವರು ಎಡಹುವರೆ » ಎಂಬುದೊಂದು ರಾಘವಾಂಕನ ದಿವ್ಯೋಕ್ತಿ. ಕರ್ತಾರನ ಕಮ್ಮಟವೆನಿಸಿದ ಈ ಲೋಕದಲ್ಲಿ ಪ್ರತಿಯೊಬ್ಬ ಮಾನವನು ಸೋಮಾರಿಯಾಗದೆ ತನು ಮನ ಧನಗಳನ್ನು ದುಡಿಸಲೇಬೇಕು, ಜೀವನ ಯಾತ್ರೆಯಲ್ಲಿ ಗುರಿಯನ್ನು ಸಾಧಿಸುವಾಗ ಜಯಾಪಜಯಗಳು ಅನಿವಾರ್ಯ. ಆಗ ಎದೆಗುಂದದೇ ದಿಟ್ಟತನದಿಂದ ಅಡಿಯ ಮುಂದಿಟ್ಟು ನಡೆಯುವವರು ಎಡಹುವದು ಸಹಜ. ನಡೆಯುವವರು ಎಡಹುವರಲ್ಲದೇ ಕಟ್ಟೆಯ ಮೇಲೆ ಕೈಕಟ್ಟಿಕೊಂಡು ಕುಳಿತವರು ಎಡಹುವರೇ ? ಲೋಕಸಭೆಯ ಚುನಾವಣೆಗೆ ನಿಂತವರೇ ಬಿದ್ದರು ಗೆದ್ದರು ಎಂದು ಹೇಳಿಸಿ ಕೊಳ್ಳುವರಲ್ಲದೆ, ಚುನಾವಣೆಗೆ ನಿಲ್ಲದವರು ಬಿದ್ದರು ಗೆದ್ದರು ಎಂದು ಹೇಳಿಸಿಕೊಳ್ಳಲಾರರು. ಕುಸ್ತಿಯ ಕಣಕ್ಕಿಳಿದ ಜಟ್ಟಿಯೇ ಬೀಳುವನು ಇಲ್ಲವೆ ಗೆಲ್ಲುವನಲ್ಲದೆ ಸ್ವಸ್ಥವಾಗಿ ಬೇರೆಡೆ ಕುಳಿತು ನೋಡುವವನು ಬೀಳುವನೇ ? ಗೆಲ್ಲುವನೇ ? ನೀರಲ್ಲಿ ಧುಮುಕಿ ಈಜುವವನೇ ಮುಳುಗುವನು ಇಲ್ಲವೆ ತೇಲುವನಲ್ಲದೇ ನದೀ ತೀರದಲ್ಲಿ ಕುಳಿತವನು ಮುಳುಗುವನೇ ? ಓರ್ವ ಮನುಷ್ಯನು ದಾರಿ ನಡೆಯುವಾಗ ಆಕಸ್ಮಾತ್ತಾಗಿ ಎಡವಿ ಬಿದ್ದರೆ ಬಿದ್ದವನು ಬಿದ್ದಲ್ಲಿಯೇ ಬಿದ್ದುಬಿಡಬೇಕೇ ? ಇಲ್ಲವೆ ಸಾವರಿಸಿಕೊಂಡು ಎದ್ದು ಮುಂದೆ ನಡೆಯಬೇಕೇ ? ಬಿದ್ದದ್ದು ತಪ್ಪಲ್ಲ . ಬೀಳುವದೂ ತಪ್ಪಲ್ಲ, ಸಾವರಿಸಿಕೊಂಡು ಏಳದೆ ಬಿದ್ದಲ್ಲೇ ಬೀಳುವದು ಮಾತ್ರ ತಪ್ಪು.

ಆದ್ಯ ಶಂಕರಾಚಾರ್ಯರು ಮಹಾದೇವನ ಸಮ್ಮುಖದಲ್ಲಿ ನತಮಸ್ತಕರಾಗಿ ಕುಳಿತು

" ಕ್ಷಂತವ್ಯೋ ಮೇsಪರಾಧಃ ಶಿವಶಿವಶಿವಭೋ ಶ್ರೀ ಮಹಾದೇವ ಶಂಭೋ "

ಎಂದು ಪ್ರಾರ್ಥನೆ ಮಾಡಿದ ' ಶಿವಪರಾಧ ಕ್ಷಮಾಪನ ಎಂಬ ' ಕಾವ್ಯವು ಸಂಸ್ಕೃತದಲ್ಲಿ ಪ್ರಸಿದ್ಧ ಎದೆ.

ಶ್ರೀ ಬಸವೇಶ್ವರರು ಕಡೂಲ ಸಂಗಮನಾಥನಲ್ಲಿ –

« ಎನ್ನ ತಪ್ಪು ಅನಂತ ಕೋಟಿ, ನಿಮ್ಮ ಸೈರಣೆಗೆ ಲೆಕ್ಕವಿಲ್ಲ
ಇನ್ನು ತಪ್ಪಿದೆನಾದರೆ ನಿಮ್ಮ ಪಾದವೇ ಸಾಕ್ಷಿ ಕೂಡಲ ಸಂಗಮದೇವ »

ಎಂದು ಪ್ರಾರ್ಥನೆ ಮಾಡಿದರೂ ಮತ್ತೆ ಧೀರೋದಾತ್ತರಾಗಿ –

" ಜಂಬೂದ್ವೀಪ ನಖಂಡ ಪೃಥ್ವಿಯೊಳಗೆ ಎರಡಾಳಿನ ಭಾಷೆಯ ಕೇಳಿರಯ್ಯ !
ಕೊಲುವೆನೆಂಬಭಾಷೆ ದೇವನದು, ಗೆಲುವೆನೆಂಬ ಭಾಷೆ ಭಕ್ತನದು,
ಸತ್ಯವೆಂಬ ಕೂರಲಗನೇ ಸೆಳೆದು ನಿಮ್ಮ ಭಕ್ತರೇ ಗೆದ್ದರು ನೋಡಾ
ಕೂಡಲ ಸಂಗಮದೇವಾ " ॥

ಎಂದು ಡಂಗುರ ಹೊಯ್ದು ವಿಜಯಶ್ರೀಯನ್ನು ಗಳಿಸಲು ಬದ್ಧಕಂಕಣರಾಗಿ ನಿಂತರು. ದೇವ ದಾನವರಲ್ಲಿ, ಕೌರವ ಪಾಂಡವರಲ್ಲಿ, ರಾಮ ರಾವಣರಲ್ಲಿ ನಡೆದ ಯುದ್ಧಗಳಲ್ಲಿ ವಶಿಷ್ಟ ವಿಶ್ವಾಮಿತ್ರರ ಹೋರಾಟದಲ್ಲಿ " ಸತ್ಯಮೇವಜಯತೇ " ಎಂಬುಕ್ತಿಯಂತೆ ಸತ್ಯಕ್ಕೇನೇ ಗೆಲುವು ದೊರೆತದ್ದು ಕಂಡು ಬರುವದು. ರಾಮರಾವಣಾದಿಗಳ ಯುದ್ಧದಲ್ಲಿ ರಕ್ತದ ಕಾಲುವೆ ಹರಿದು ಹೆಣಗಳ ರಾಸಿ ಬೀಳುವಂತೆ, ಮಾಯೆ ಅಲ್ಲಮರಲ್ಲಿ ನಡೆದ ಯುದ್ಧದಲ್ಲಿ ಒಂದು ಹನಿ ರಕ್ತವೂ ಬೀಳುವದಿಲ್ಲ. ಈ ಯುದ್ಧದಲ್ಲಿ ಅಣುಬಾಂಬುಗಳ, ಅಣ್ವಸ್ತ್ರಗಳ, ಆಟಂಬಾಂಬುಗಳ ಪತನವಿಲ್ಲ. ಈ ಯುದ್ಧವು ಕಣ್ಣಿಗೆ ಕಾಣದಿದ್ದರೂ ಕಣ್ಣಿಗೆ ಕಾಣುವ ಯುದ್ಧಕ್ಕಿಂತಲೂ ಭೀಕರವಾದುದು; ವಿಧ್ವಂಸಕಾರಕವಾದುದು. ಭೂಮಂಡಲದಲ್ಲಿ ನಡೆದ ಯುದ್ಧಗಳು ಒಪ್ಪಂದವಾಗಿಯೋ, ಅಥವಾ ಬಲಿಷ್ಠರಾಷ್ಟ್ರಗಳ ಒತ್ತಾಯಕ್ಕಾಗಿಯೋ ಮಣಿದು ಸುಮ್ಮನಿರುವವು. ಯುದ್ಧಕ್ಕೆ ಪೂರ್ಣವಿರಾಮ ಹಾಕುವವು. ಆದರೆ ಮನೋ ಮಂಡಲದಲ್ಲಿ ನಡೆದ ಈ ಯುದ್ಧಕ್ಕೆ ಇತಿ ಎಂಬುದೇ ಇಲ್ಲ. ಹಿಂದೆ ನಡೆದಿದೆ, ಇಂದು ನಡೆಯುತ್ತಲಿದೆ, ಮುಂದೆಯೂ ನಡೆಯುತ್ತಲೇ ಇರುವದು. ಭಾಸ್ಕರನು ಬಂದಾಗಿದಾಕ್ಷಣ ಬ್ರಹ್ಮಾಂಡದಲ್ಲಿಯ ಕತ್ತಲೆಯು ಚದುರಿಹೋಗುವಂತೆ, ಪಿಂಡಾಂಡದಲ್ಲಿಯ ಅಹಂಕಾರ, ಮಮಕಾರ, ಮದ, ರಾಗದ್ವೇಷ ಮೊದಲಾದ ತಾಮಸಗುಣಗಳು ಪ್ರಭುವು ಬಂದಾಕ್ಷಣ ದಿಕ್ಕೆಟ್ಟು ಹೋಗುವವು. ದಿವ್ಯಾತ್ಮ ಶಕ್ತಿಯನ್ನು ಮೈಗೂಡಿಸಿಕೊಂಡಿರುವ ಅಲ್ಲಮನ ಮುಂದೆ " ಸಿಂಹದ ಮುಂದೆ ಜಿಗಿದಾಟವೇ ! ಪ್ರಳಯಾಗ್ನಿಯ ಮುಂದೆ ಪತಂಗದಾಟವೇ ? ಸೂರ್ಯನ ಮುಂದೆ ಕೀಟದಾಟವೇ ? ಎಂಬಂತೆ ಮಾಯೆಯ ಪಾಡಾಯಿತು.

"ಕಾಲಿಲ್ಲದ ಗಮನ, ಕೈಯಿಲ್ಲದ ಸೋಂಕು, ಬಾಯಿಯಿಲ್ಲದ ರುಚಿ, ಭಾವವೇ ಖರ್ಪರವಾಗಿ ಪರಮದೇಹಿ ಎಂದು ಬೇಡುವ ಪರಮನ ತೋರಯ್ಯ ಗುಹೇಶ್ವರ "

"ಇರ್ದು ಬದ್ಧನಲ್ಲ ಸುಳಿದು ಸೂತಕಿಯಲ್ಲ ಆವ ಸಂಗವೂ ಇಲ್ಲದ ನಿಶ್ಯಂಕನು ಬೇಕು ಬೇಡೆನ್ನದೆ, ಅಳಿದು ಉಳಿದು ಕರ್ಪೂರದ ಗಿರಿಯನುರಿತಾಗಿದಂತೆ, ಕೂಡಲ ಚನ್ನಸಂಗಯ್ಯನಲ್ಲಿ ಲಿಂಗೈಕ್ಯವು.

ಇಂತಹ ದಿವ್ಯ ವಿಭೂತಿಯನ್ನು ಕಾಣಲು ದಿವ್ಯಪಥದಿಂದಲೇ ಸಾಗಬೇಕು. ಶಿವನು ಗಿರಿಜೆಗೆ ಆ ದಿವ್ಯ ಪಥವನ್ನು ಹೇಳಿದರೂ ಗಿರಿಜೆಯು ಆ ಮಾತನ್ನು ಕೇಳದೇ ಹಟಮಾರಿತನದಿಂದ ಅಲ್ಲಮನನ್ನು ಸೋಲಿಸಿಯೇ ತೀರುವೆನೆಂದು ವಾಮಮಾರ್ಗವನ್ನು ಆಶ್ರಯಿಸಿ ತನ್ನ ತಾಮಸೀಮಾಯೆಯನ್ನು ಕಳುಹಿಸಿದಳು. ಸಚ್ಚಿದಾನಂದ ಸ್ವರೂಪನಾದ ಪ್ರಭುವು ಶ್ರೇಯೋ ಮಾರ್ಗದಿಂದ ದೊರೆಯುವನಲ್ಲದೆ ಪ್ರೇಯೋ ಮಾರ್ಗದಿಂದ ದೊರೆಯು

ವನೇ ? ಉತ್ತರ ದಿಕ್ಕಿಗೆ ಹೊರಟವನೇ ಎತ್ತರವಾದ ಹಿಮಾಲಯುವನ್ನೂ, ಪಾವನಗಂಗೆ ಯನ್ನೂ ಕಾಣುವನಲ್ಲದೆ ದಕ್ಷಿಣದಿಕ್ಕಿಗೆ ಹೊರಟವನು ಎಂದಿಗಾದರೂ ಕಾಣುವನೇ ?

ಅಲ್ಲಮನು ಬಲ್ಲಿದರಲ್ಲಿ ಬಲ್ಲಿದನು ಕಲ್ಲೆದೆಯವರನ್ನೂ ಮೆಲ್ಲೆದೆಯವರನ್ನಾಗಿ ಮಾಡುವ ಮಹಾಜ್ಞಾನಿಯು ನಿರ್ಮಾಯನು, ನಿರಂಜನನು, ನಿರ್ಗುಣನು, ನಿರವಯನು ನಿರ್ಲೇಪನು ವಾಙ್ಮನಕ್ಕತೀತವಾದ ಮಹಿಮೆಯುಳ್ಳವನು. ಇಂತಹ ಅಸದೃಶಪ್ರಭೆಯುಳ್ಳ ಪ್ರಭುವನ್ನು ತನ್ನ ತಾಮಸೀ ಮಾಯೆಯ ಕೈಗೊಂಬೆಯನ್ನಾಗಿ ಮಾಡುವ ಬಯಕೆಯುಳ್ಳ ಗಿರಿಜೆಯ ಮನೋರಥವು

" ಬಿಸಜ ತಂತುವಿನ ಸಂಚದಿಂದ ಮದಗಜ ಬಧವಡೆಯಬಲ್ಲುದೇ ?
ತರಗೆಲೆ ಮುಸುಕಿದೊಡೆ ದಾವಾನಲ ಕೆಡಬಲ್ಲುದೇ ?
ಮಂಜಿನ ಫೌಜು ಸೂರ್ಯನ ಮುತ್ತಬಲ್ಲುದೇ ?

" ಬಿಸಿಲ ಮುಂದಣ ಮಂಜಿನಂತಾಯಿತ್ತು, ದಿಟದ ಮುಂದಣ ಸಟಿಯಂತಾಯಿತ್ತು, ಪುಣ್ಯದ ಮುಂದಣ ಪಾಪದಂತಾಯಿತ್ತು, ಧೀರನ ಮುಂದಣ ಹೇಡಿಯಂತಾಯಿತ್ತು, ಉರಗನ ಮುಂದಣ ಭೇಕದಂತಾಯಿತ್ತು, ಹರಿಯ ಮುಂದಣ ಕರಿಯಂತಾಯಿತ್ತು. ಈ ವಚನಗಳಲ್ಲಿ ಹೇಳಿದ ದೃಷ್ಟಾಂತದಂತೆ ನಿಷ್ಫಲವಾಯಿತು, ಗಿರಿಜೆಯಿಂದ ಕಳುಹಿಸಲ್ಪಟ್ಟ ತಾಮಸೀ ಮಾಯೆಯು ಅಲ್ಲಮನನ್ನು ಸೋಲಿಸಲು ಹಣಗಾಡಿ ಹಣಗಾಡಿ ತಾನೇ ದಣಿದಳಲ್ಲದೆ ಅಲ್ಲಮನು ದಣಿಯಲಿಲ್ಲ. ಕಾಶೀಯಾತ್ರೆಗೆ ಹೊರಟ ಯಾತ್ರಿಕನು ಪಥವ ನಡೆನಡೆದು ತಾನೇ ದಣಿವನಲ್ಲದೆ ಪಥವೇನಾದರೂ ದಣಿವುದೇ ? ಸಮರ ಭೂಮಿಯಲ್ಲಿ ಶತ್ರುಗಳ ಮೇಲೆ ಬಾಣಪ್ರಯೋಗ ಮಾಡಿ ಮಾಡಿ ಬಾಣಗಳ ಮಳೆಗರೆವ ವೀರಭಟನ ಕೈಗಳೇ ನೋಯುವವಲ್ಲದೆ ಬಾಣಗಳಿಗೇನಾದರೂ ನೋವುಂಟೇ ? ಶಸ್ತ್ರಕ್ರಿಯೆಯನ್ನು ಮಾಡಿದ ಡಾಕ್ಟರನಕೈಗಳೇ ನೋಯುವವಲ್ಲದೆ ಶಸ್ತ್ರಗಳಿಗೇನಾದರೂ ನೋವುಂಟೇ ? ಹೀಗೆ ನಿರ್ಗುಣನಾದ ಅಲ್ಲಮನ ಕೂಡ ದುರ್ಗುಣೆಯಾದ ತಾಮಸೀ ಮಾಯೆಯು ಹೋರಾಡಿ ದಣಿದಳಲ್ಲದೇ ಅಲ್ಲಮನು ದಣಿಯಲಿಲ್ಲ,

" ಸೋಲದಾತನೆ ವಿರತನು ಮನದೊಳಗೆ ಬಾಲೆಯರ ಸಿಂಗರವನೇ
ಕಂಡು ಸೋಲದಾತನೇ ವಿರತನು.
ಮುರಿದುನೋಡುವ ನೋಟದ ಮುಗುಳ್ನಗೆಯ ಸರಸದಿನಿಗತಿಯ
ನುಡಿಯ । ಸನ್ನೆವೆರಸಿ ತೋರುವ ಭಾವ ಮೋಹ ಮುಂಬರಿವ
ಸೊಬಗಿನ ಸುದತಿಯ ಕಂಡು ಸೋಲದಾತನೇ ವಿರತನು ॥

ಎಂಬ ನಿಜಗುಣರ ಉಕ್ತಿಯಂತೆ ಮಾಯೆಯ ಸಡಗರದ ಬೆಡಗುಬಿನ್ನಾಣಗಳಿಗೆ; ಒನಪು ಒಯ್ಯಾರಗಳಿಗೆ ಎಡವಿಬೀಳದೆ ದೃಢವೈರಾಗ್ಯದಿಂದ ರಾರಾಜಿಸಿ ವಿರಕ್ತಶಿಖಾಮಣಿಯಾಗಿ ಮೆರೆದನು,

ಮಾಯೆಯು ಕೈವಾಡದಿಂದ ಅಲ್ಲಮನ ಹೂರಣ ಹೊರಗೆಡಹುವೆನೆಂದು ಶ್ರಮಿಸಿದ ಗಿರಿಜೆಯು ಪ್ರಭುವಿನ ದಿಟ್ಟನಿಲುವನ್ನು ಕಂಡು ತನ್ನ ಛಲದಿಂದ ಹಿಂದಕ್ಕೆ ಸರಿದು ಅವನ ವ್ಯಕ್ತಿತ್ವಕ್ಕೆ ತಲೆಬಾಗಿದಳು. ಹಿಮಾಚಲವು ಅತ್ತಿತ್ತ ಚಲಿಸಿದರೂ ಚಲಿಸಬಹುದು ಆದರೆ ಪ್ರಭುವಿನ ಘನವಾದ ಮನಸ್ಸು ಮಾತ್ರ ಅತ್ತಿತ್ತ ಹೊಯ್ದಾಡದು ಎಂದು ಮನಗಂಡಳು. ಅಲ್ಲಮನನ್ನು ಗೆಲ್ಲುವಕಾರ್ಯದಲ್ಲಿ ಮಾಯೆಯು ಸೋತಳೆಂದು ಚಿಂತಾತುರಳಾಗದೆ ಮತ್ತೆ ಅಲ್ಲಮನನ್ನು ತಾತ್ವಿಕ ಮಾರ್ಗದಿಂದ ಅರಿಯಬೇಕು ಅರಿತುಧನ್ಯಳಾಗಬೇಕೆಂಬ ಮಹತ್ವಾಕಾಂಕ್ಷೆಯನ್ನು ತಾಳಿದಳು.

ಧೀರೋದಾತ್ತ ಮಾನವನು ತಪ್ಪಿ ಅಲ್ಲದ ಸಲ್ಲದ ಕೆಲಸಗಳನ್ನು ಮಾಡಿ ಒಣದುರಭಿಮಾನ ದುರಹಂಕಾರಕ್ಕೊಳಗಾಗಿ ಅಲ್ಲಿಯೇ ಅಂಟಿಕೊಂಡುಕೂಡದೇ ಪುನಃ ತಿಳಿಣ್ಣಗನಿದ್ದ ಹೇಯವಾವುದು ? ಉಪಾದೇಯವಾವುದು ? ಎಂಬುದರ ಸುದೀರ್ಘ ವಿಚಾರವಾದಿ ಶಾಂತರು ಅಹುದಹುದೆಂದು ಬಣ್ಣಿಸುವ ಕೆಲಸ ಮಾಡುವನು. ಸೋತಿದ್ದಕ್ಕೆ ಮನಸ್ಸಿನಲ್ಲಿ ಪಶ್ಚಾತ್ತಾಪತಾಳದೆ ಮತ್ತೆ ಅದೇ ಮಾರ್ಗದಲ್ಲಿ ಕಾಲಿಕ್ಕಿ ಕೆಳಗಿಳಿವುತ್ತ ಜೀವನವನ್ನು ಹಾಳುಮಾಡಿಕೊಳ್ಳುವದು ವಿವೇಕಿಯಲಕ್ಷಣವಲ್ಲ. ಬಿದ್ದೆನೆಂದು ಬಿದ್ದಲ್ಲಿಯೇ ಬೀಳದೆ ಧೈರ್ಯ ಸ್ಥೈರ್ಯಗಳಿಂದ ಮತ್ತೆ ಎದ್ದು ತಪ್ಪು ತಿದ್ದಿಕೊಂಡು ಉದ್ಧಾರವಾಗುವ ಶುದ್ಧ ಮಾರ್ಗವನ್ನು ಹಿಡಿಯಬೇಕು.

''ನ್ಯಾಯಾತ್ಪಥಃ ಪ್ರವಿಚಲಂತಿ ಪದಂನಧೀರಾಃ''

ಎಂಬುಕ್ತಿಯಂತೆ ಮಹಾನುಭಾವರು ಸತ್ಯಶುದ್ಧ ಮಾರ್ಗದಿಂದ ಎಂದೆಂದಿಗೂ ರೇಖಾ ಮಾತ್ರಮಪಿ ಹಿಂದೆ ಸರಿಯುವದಿಲ್ಲ. ಲೋಕಕ್ಕೆ ಸನ್ಮಾರ್ಗದರ್ಶಕಳಾದ ಲೋಕಮಾತೆಯಾದ ಗಿರಿಜೆಯು ತನಗೆ ಅಲ್ಲಮನ ವಿಷಯದಲ್ಲಿ ಸೋಲಾದಂತೆ ಕಂಡರೂ ಅದರಿಂದ ಹಿಮ್ಮುಖಿಯಾಗದೇ ಪುನಃ ತನ್ನ ಸಾತ್ವಿಕಕಳೆಯನ್ನು ಕಳುಹಿ ಅಲ್ಲಮನ ವ್ಯಕ್ತಿತ್ವವನ್ನು ಮತ್ತೆ ಗಗನದೆತ್ತರಕ್ಕೆ ಮುಟ್ಟಿಸುವಳು.

---

### ವಿಷಯ ಪ್ರಾರಂಭ

ಮದ್ದಳೆಯನ್ನು ಬಾರಿಸುವ ಭಿಕಾರಿಯ ಬೆಂಬತ್ತಿ ರಾಜಮನೆತನದ ಘನತೆಯನ್ನೂ, ವಂಶಗೌರವವನ್ನೂ ಕಳೆದೆಯೆಂದು ಮಮಕಾರ ಭೂಪಾಲನೂ, ಆ ಪರದೇಶಿಯ ಸಂಗ ಬೇಡ ಬೇಡವೆಂದು ಎಷ್ಟು ಹೇಳಿದರೂ ಕೇಳದೆ ಆ ದಿಕ್ಕೇಡಿಯ ಸಹವಾಸ ಮಾಡಿ ನಮ್ಮ ರಾಜವಂಶಕ್ಕೇನೇ ಕಲಂಕ ಹಚ್ಚಿದೆಯೆಂದು ತಾಯಿ ಮೋಹಿನಿಯೂ ಸಿಟ್ಟು ಮಾಡಿ ಮಗಳ ಅವಿವೇಕತನಕ್ಕೆ ಪ್ರಲಾಪಿಸುತ್ತಿರಲು ವಿಮಳೆಯು ಬಂದು ರಾಜದಂಪತಿಗಳೇ! ಮಗಳ ಸಲುವಾಗಿ ಚಿಂತಿಸಬೇಡಿರಿ. ಜಗಜ್ಜನನಿಯಾದ ಪಾರ್ವತಿಯೇ ತನ್ನ ತಾಮಸೀ ಕಳೆಯನ್ನು ಅಲ್ಲಮನನ್ನು ಸೋಲಿಸುವದಕ್ಕಾಗಿ ಭೂಲೋಕಕ್ಕೆ ಕಳುಹಿರುವಳು, ಅದಕ್ಕಾಗಿಯೇ ಕಾಡು ನಾಡೆನ್ನದೆ ಎಲ್ಲೆಡೆಗೆ ಅವನ ಬೆಂಬತ್ತಿ ತಿರುಗಾಡಿದಳು. ಆಕೆಯು ಕಾರಣ ಕನ್ಯೆಯು. ಇದಕ್ಕಾಗಿ ಚಿಂತೆ ಮಾಡುವದೇಕೆ? ಎಂದು ನುಡಿಯಲು ಮಾಯೆಯೂ ಸಹ ತಾಯಿತಂದೆಗಳೇ ವಿಮಳೆಯು ಹೇಳಿದ ಮಾತು ದಿಟ. ಕೈಲಾಸದಲ್ಲಿ ಶಿವನ ಸಭೆಯೊಳಗೆ ಅಲ್ಲಮನನ್ನು ಸೋಲಿಸುವೆನೆಂದು ಮಾತುಕೊಟ್ಟು ಪಣತೊಟ್ಟು ನಿಮಗೆ ಮಾಯೆಯೆಂಬ ಮಗಳಾಗಿ ಹುಟ್ಟಿಬಂದೆನು. ನಾನು ಬಂದ ಕಾರ್ಯ ಕೈಗೂಡಲಿಲ್ಲ, ಅದಕ್ಕಾಗಿ ಚಿಂತಿಸಬೇಡಿರಿ ಎಂದು ಹೇಳಿ ಮಾಯೆಯು ವಿಮಳೆಯೊಂದಿಗೆ ಕೈಲಾಸಕ್ಕೆ ಹೋದಳು. ಇತ್ತ ತಾಯಿತಂದೆಗಳು ಮಗಳ ವಿಯೋಗದಿಂದ ದುಃಖಿಸುತ್ತಿರಲು ಅಹಂಕಾರಾಚಾರ್ಯರು ಬಂದು ಅವರನ್ನು ಸಮಾಧಾನಪಡಿಸಿ ಹೋದರು.

ಮಾಯೆಯು ಕೈಲಾಸಕ್ಕೆ ಹೋಗಿ ಅಲ್ಲಮನು ತನಗೆ ವಶನಾಗಲಿಲ್ಲ ಎಂದು ಹೇಳಲು ಪಾರ್ವತಿಯು ಚಿಂತಾತುರಳಾದಳು. ಆಗ ಶಿವನು ಗಿರಿಜೆಯೇ!

> ಸಿಡಿಲು ಹಕ್ಕಿಯ ರೆಕ್ಕೆಯನ್ನು ಕಿತ್ತು ಮಾಂಸದ ಅಡಿಗೆಯನ್ನು
> ಮಾಡುವ ಕಡುಗಲಿಗಳಾರಿರುವರು? ಕಾಳೋರಗನ
> ನಿದ್ರೆಯನ್ನು ಬದುಕುವ ತಂತ್ರದ ಗಾರುಡಿಗರಾರಿರುವರು?

ಬೇಡ ಬೇಡವೆಂದು ಹೇಳಿದರೂ ನೀನೇ ಅಹಂಭಾವದಿಂದ ಮಾಯೆಯನ್ನು ಕಳುಹಿಸಿದಿ. ಉಪಮಾತೀತನೂ ಸಚ್ಚಿದಾನಂದ ಸ್ವರೂಪನೂ ಆದ ಅಲ್ಲಮನು ಮಾಯೆಗೆ ಸಿಗುವನೇ? ಎಂದು ಮೂದಲಿಸಿ ನುಡಿಯಲು ಗಿರಿಜೆಯು ಶಿವನೇ ನನ್ನ ಅಪರಾಧವನ್ನು ಕ್ಷಮಿಸಿ ಪ್ರಭುವಿನ ನಿಜಸ್ವರೂಪವನ್ನು ತಿಳಿಸಿ ಉದ್ಧರಿಸಬೇಕು. ಮೂಗಿಲ್ಲದವನ ಮುಂದೆ ಕನ್ನಡಿಯನ್ನು ಹಿಡಿದು ತೋರಿಸಿ ಅವನನ್ನು ನಾಚಿಸುವಂತೆ ಮಾಡಬಾರದು ಎನ್ನಲು, ಶಿವನು ಕರುಣೆಯಿಂದ ಗಿರಿಜೆಯೇ ನಿನ್ನ ಪವಿತ್ರವಾದ ಸಾತ್ವಿಕ ಕಳೆಯನ್ನು ಭೂವಿಗೆ ಕಳುಹಿಸು. ಆಕೆಯ ಸಾತ್ವಿಕ ಭಕ್ತಿಗೆ ಪ್ರಭುವು ಒಲಿದು ತಾನೇ ಅನುಗ್ರಹಿಸುವನು, ಎನ್ನಲು ಗಿರಿಜೆಗೆ ಸಂತಸವಾಯಿತು. ಶಿವನೇ ನಿನ್ನ ಕರುಣೆಯಿಂದ ನಾನು ಬದುಕಿದೆನು, ಎನ್ನಲು ಶಿವನ ಬಳಿಯಿದ್ದ ವೃಷಭರಾಜನು ತಾಯೇ ತಾವು ಶಿವಾನುಗ್ರಹದಿಂದ ಯಾವಾಗಲೂ ಪರಮಸುಖಿಗಳು. ತಮಗೇನು ಅಂತಹ ಸಂಕಟ? ಅಂತಹ ಹಾನಿ ತಮಗೇನಾಯಿತು? ನಾವೇ ಬಚ್ಚಿ

ಟ್ಟ ಸಂಪತ್ತು ನಮಗೆ ದೊರೆತರೆ ಅದರಲ್ಲಿ ಆಶ್ಚರ್ಯವೇನು ? ಎನ್ನಲು ಶಿವನು ವೃಷಭ ರಾಜನೇ ನಮ್ಮ ಭಾಗ್ಯದಲ್ಲಿದ್ದದ್ದೇ ನಮಗೆ ಬರುವದಲ್ಲದೆ ಇಲ್ಲದುದು ಎಂದಿಗೂ ಬಾರದು, ಅವರವರ ಹಿಂದಣ ಕರ್ಮವೇ ಅವರವರ ಮುಂದಣ ಫಲಸಿದ್ಧಿಗೆ ಕಾರಣ. ಇದನ್ನು ಬಾಲಲೀಲಾಮಹಾಂತ ಶಿವಯೋಗಿಗಳು–

"ಹಿಂದಿನ ಕರ್ಮವನು ಇಂದುಂಡುಡಬೇಕು ।
ಇಂದಿನ ಕರ್ಮವನು ಮುಂದುಂಡುಡಬೇಕು
ಬಂಧನವೇಕಿದಕೆ ಇಂದುಧರನಾಣ್ಯಾಗಿ ।
ಸಂದೇಹವಿಲ್ಲವೋ ತಿಳಿಕಂಡ್ಯಾ ಆತ್ಮಾ ।
ನರರಪಾಪ ಪುಣ್ಯಗಳ ನರರ ಸೆರಗಲಿ ಹಾಕಿ ।
ಗುರುಮಹಂತಲಿಂಗ ತಾ ಮರೆಯಾಗುತಿಹನು ॥"

ಎಂದೂ,

"ಏನಾನು ನೆವದಿಂದ ತಾನೆ ಬಪ್ಪುದು ಸಿರಿಯು ।
ಕಾನವದಲ್ಲಿ ಕರಿ ಹುಟ್ಟಿ ಪಟ್ಟಕ್ಕೆ ।
ತಾನೇ ಬಂದಂತೆ ಸರ್ವಜ್ಞ ।

ಎಂದು ಸರ್ವಜ್ಞ ಕವಿಯು ಹೇಳಿರುವನಲ್ಲದೆ.

ಏನಾನು ನೆವದಲ್ಲಿ ತಾನೆಪೋಪುದಸಿರಿಯು ।
ಕಾನನದೊಳಗೆ ಕಿಡಿಕಟ್ಟಿ ಕಾಡೆಲ್ಲ,
ತಾನೆ ಬೆಂದಂತೆ ಸರ್ವಜ್ಞ ॥

ಎಂದೂ ಹೇಳಿರುವನು.

'ಬಾರದು ಬಪ್ಪದು ಬಪ್ಪದು ತಪ್ಪದು' ಎಂಬ ವಚನವೂ, "ಮಾಡಿದ್ದುಣ್ಣೋ ಮಹಾರಾಯಾ" ಎಂಬ ಜಾನಪದ ಉಕ್ತಿಯೂ ಮೇಗಣ ಅಭಿಪ್ರಾಯವನ್ನೇ ಸಮರ್ಥಿಸುತ್ತವೆ.

ವೃಷಭರಾಜನೇ ನೀನು ಬಹಳ ಜಾಣನು. ಭೂಮಿಯಲ್ಲಿ ಹೂಳಿಟ್ಟ ಧನವನ್ನು ಪಡೆವ ಭಾಗ್ಯವುಳ್ಳ ಓರ್ವ ಭಾಗ್ಯವಂತನನ್ನು ಅವನ ಕಾಲುಗಳೇ ನಿಧಿಯ ಕಡೆಗೆ ಕರೆದು ಯ್ಯುವಂತೆ, ನಿನ್ನ ಸ್ಥಿತಿಯಿರುವದು. ತಾವು ಬಚ್ಚಿಟ್ಟ ಸಂಪತ್ತು ತಮಗೇನೇ ದೊರೆತರೆ ಅದರಲ್ಲಿ ಆಶ್ಚರ್ಯವೇನು ? ಎಂಬ ನಿನ್ನ ಮಾತುಗಳು ಶುಭ ಸೂಚನೆಯನ್ನೇ ಮಾಡುತ್ತಲಿವೆ. ವೃಷಭರಾಜನೇ ಅಲ್ಲಮ ಪ್ರಭುವೆಂಬ ತವನಿಧಿಯನ್ನು ಪಡೆದು ಸುಖಿಯಾಗಿರು. ಅಲ್ಲಮಪ್ರಭುವಿನ ಕೂಡುವಿಕೆಯಲ್ಲಿ ಸಕಲ ದುಃಖ ನಿವೃತ್ತಿ ನಿತ್ಯಾನಂದ ಪದಪ್ರಾಪ್ತಿ. ಇದು ನೀನು ಭೂಮಿಯಲ್ಲಿ ಅವತರಿಸಡಿದ್ದರೆ ಅಲ್ಲಮನು ಎಲ್ಲರಿಗೂ ಸಿಗುವದಿಲ್ಲ. ನಿನ್ನಯ ಭಕ್ತಿಯ ಮಹಿಮೆಯಿಂದಲೇ ಅಲ್ಲಮನು ಎಲ್ಲರಿಗೂ ಕರುಣೆದೋರಿ ಸ್ವಾನುಭಾವದ ಅಕ್ಷಯ ಭಂಡಾರ ವನ್ನೀಯುವನು ಈ ಮಹತ್ಕಾರ್ಯವು ನಿನ್ನಿಂದಲೇ ಸಾಧ್ಯವಲ್ಲದೆ ಅನ್ಯರಿಂದಾಗದು ಎಂದು ಶಿವನು ವೃಷಭರಾಜನನ್ನು ಹೊಗಳಲು ಅಲ್ಲಿರುವ ಹಲ ಕೆಲವು ಪ್ರಮಥರು ವೃಷ

ಭರಾಜನ ಸ್ತುತಿಯನ್ನು ಸಹಿಸದೆ ಈ ವೃಷಭರಾಜನು ಭೂಮಂಡಲದಲ್ಲಿ ಭಕ್ತಿಸಾಮ್ರಾಜ್ಯವನ್ನು ಸ್ಥಾಪಿಸುವನಂತೆ. ಅಲ್ಲಮನ ನೈಜಸ್ವರೂಪವನ್ನು ಇವನೇ ತಿಳಿವನಂತೆ. ದೊಡ್ಡ ಭಕ್ತ! ಶಿವನು ಆಡಿದ ಮಾತುಗಳೆಲ್ಲವೂ ವ್ಯರ್ಥ. ಭಕ್ತಿಯ ಮಹಿಮೆ ಇವನಿಗೇ ಗೊತ್ತು! ಎಂದು ಗರ್ವದಿಂದ ಗಹಗಹಿಸಿ ನಕ್ಕರು. ಆಗ ವೃಷಭರಾಜನು ಅವರ ನಿಂದೆಯನ್ನು ಕೇಳಿ ಮನದಲ್ಲಿ ರೋಷತಾಳಲಿಲ್ಲ. ಇಲ್ಲವೇ ಸಿಟ್ಟಿನಿಂದ ಅವರಿಗೇನಾದರೂ ಪ್ರತ್ಯುತ್ತರವನ್ನೀಯಲಿಲ್ಲ, ನನಗೆ ಅಖಿಲ ಬ್ರಹ್ಮಾಂಡ ನಾಯಕನಾದ ಶಿವನ ಒಲುಮೆಯಿದೆ, ಇವರ ಹಂಗು ನನಗೇನು ? ಎಂದು ಹಮ್ಮುಬಿಮ್ಮುಗಳಿಂದ ಬಿಗಿದುನಿಲ್ಲಲಿಲ್ಲ. ಶಾಂತಿ ಸಮುದ್ರನಾಗಿ "ತುಂಬಿದುದು ತುಳುಕದು ನೋಡಾ" ಎಂಬುಕ್ತಿಯಂತೆ, ಗಂಭೀರ ಮುದ್ರೆಯನ್ನು ತಾಳಿ ಮೌನವಾಗಿಯೇ ಇದ್ದನು. ಶಿವನು ವೃಷಭರಾಜನ ಶಾಂತಿಸ್ಥೈರಣೆಗಳನು ಕಂಡು ಆನಂದಪರವಶನಾದನು.

ಎಲೈ ಪ್ರಮಥರೇ, ವೃಷಭನ ಮಹಿಮೆಯು ಅಗಾಧವಾದುದು. ಸುಮ್ಮನೇ ಏಕೆ ಅಸೂಯೆ ಪಡುವಿರಿ ? ವೃಷಭರಾಜನ ಮಹಿಮೆಯನ್ನರಿಯಲು ನೀವೆಲ್ಲರೂ ಭೂಮಿಯಲ್ಲಿ ಅವತರಿಸಿರಿ. ಅವನ ಬಗ್ಗೆ ಮದ ಮತ್ಸರ ತಾಳಬೇಡಿರಿ ಎಂದು ಕಟ್ಟಪ್ಪಣೆಮಾಡಿ ಎಲ್ಲರನ್ನೂ ಭೂಲೋಕಕ್ಕೆ ಕಳುಹಿಸಿದನು. ಆಗ ೭೭೦ ಪ್ರಮಥಗಣಂಗಳು ಹಲವಾರು ರುದ್ರ ಕನ್ನಿಕೆಯರೊಡನೆ ಕೂಡಿಕೊಂಡು ಭೂಲೋಕಕ್ಕೆ ಹೊರಡಲು ಕೈಲಾಸದ ಶಿವಗಣಂಗಳು ಕೂಡಿ ಸಂಭ್ರಮದಿಂದ ಬೀಳ್ಕೊಟ್ಟರು. ವೃಷಭರಾಜನ ಭಕ್ತಿಯ ವೈಭವದಿಂದ, ಗುರು ಲಿಂಗ ಜಂಗಮರ ಆರಾಧನೆಯಿಂದ ಭೂಲೋಕವು ಕೈಲಾಸವಾಗಿ ಪರಿಣಮಿಸಿತು.

ಹರಿ ವಿರಿಂಚಿ ಸುರೇಂದ್ರ ಸುರಮುನಿ ।
ವರರು ಹರುಷಿತರಾಗಿ ದೇವಾ ।
ಪರಮ ಪಾವನವಾಯ್ತು ಧಾರುಣಿ ಹಲವು ಮಾತೇನು ।
ನಿರುಪಮದ ಗುರುಲಿಂಗ ಜಂಗಮ ।
ದಿರವನರಿವೊಡೆ ಸಾಧ್ಯವಿನ್ನಾ ।
ವರವೃಷೇಂದ್ರನ ಕತದಲೆಂದುದು ಕೂಡೆ ತಮತಮಗೆ ॥



## ೯ ನೆಯ ಗತಿ

# ಬಸವಾದಿ ಪ್ರಮಥರು ಧರೆಗಿಳಿದುದು

ದಕ್ಷಿಣ ಕರ್ನಾಟಕದೊಳಗಿರುವ ಶಿವಮೊಗ್ಗ ಜಿಲ್ಲೆಯೊಳಗೆ, ಪ್ರಕೃತಿ ಸೌಂದರ್ಯದ ನೆಲೆವೀಡಾಗಿ ಭೂದೇವಿಯ ಸೀಮಂತಮಣಿಯೋ ಏನೋ ಎಂಬುವಂತೆ ಒಪ್ಪುವ ಉಡುತಡಿ ಎಂಬ ಗ್ರಾಮವು ಪ್ರಭುದೇವರ ಜನ್ಮ ಸ್ಥಳವಾದ ಬಳ್ಳಿಗಾವಿಯ ಸಮೀಪದಲ್ಲಿದೆ. ಈ ಊರಸುತ್ತಲೂ ಕೌಶಿಕರಾಜನ ಹಾಳಾದ ಕೋಟೆಯ ಗೋಡೆಯಿದೆ. ಮಾಯಾ ಕೋಲಾಹಲನೆನಿಸಿದ ಅಲ್ಲಮಪ್ರಭುದೇವರ ಗುರುವೆನಿಸಿದ ಅನಿಮಿಷಯೋಗಿಗಳು ಶಿವಯೋಗ ಸಮಾಧಿಯಲ್ಲಿ ಕುಳಿತ ಅನಿಮಿಷಯ್ಯನ ಎಂಬ ಗ್ರಾಮವೂ ಹತ್ತಿರದಲ್ಲೇ ಇರುವದು. ನಾವು ಚಿಕ್ಕವಟುಗಳಾಗಿದ್ದಾಗ ಶಿವಯೋಗಮಂದಿರ ಸಂಸ್ಥಾಪಕರಾದ ಹಾನಗಲ್ಲ ಕುಮಾರಮಹಾಸ್ವಾಮಿಗಳೊಡನೆ ಹೋಗಿದ್ದೆವು. ಹರನ ಹೊರತಾಗಿ ಪರದೈವದ ಹೆಸರನ್ನು ನುಡಿಯಲಾರೆನು, ಕೇಳಲಾರೆನು ಎಂಬ ದೃಢನಿಷ್ಠೆಯುಳ್ಳ ಸತ್ಯಕ್ಕನ ಸತ್ವಪರೀಕ್ಷೆಗಾಗಿ ಶಿವನು ಜಂಗಮವೇಷವನ್ನು ಧರಿಸಿಬಂದು ಭಿಕ್ಷೆಬೇಡಿದಾಗ ಅವಳು ಜೋಳಿಗೆಯಲ್ಲಿ ಪಾಯಸ ನೀಡಲು ಜೋಳಿಗೆ ಹರಿಯಿತು. ಆಗ ಜೋಳಿಗೆ ಹರಿಯಿತು ಹರಿಯಿತು ಎಂದು ಜಂಗಮನು ಅರಿವೆ ಹರಿದುದಕ್ಕಾಗಿ ಎಂದುದರಿಂದ ಅದನ್ನೆಣಿಸದೆ ಹರಿಯಿಂದ ತಪ್ಪಿಗೆ ಹುಗ್ಗಿಯೊಳಗಿರುವ ಹುಟ್ಟಿನಿಂದಲೇ ತಿವಿದು ಹುಟ್ಟು ಸಾವಿಲ್ಲದ ಮೋಕ್ಷವನ್ನು ಪಡೆದ ಸತ್ಯಕ್ಕನ ಜಂಬೂರ ಎಂಬ ಗ್ರಾಮವೂ, ಚರಜಂಗಮವೇಷದಿಂದ ಶಿವನೇ ಭಿಕ್ಷೆ ಬೇಡಲು ಬಂದಾಗ ಮಗನನ್ನೇ ಕರಕರಕೊಯ್ದು ಬಾಣಸವ ಮಾಡಿ ನೀಡಿ ೬೩ ಪುರಾತನರಲ್ಲಿ ಸುಪ್ರಸಿದ್ಧನಾದ ಸಿರಿಯಾಳಶೆಟ್ಟಿಯ ಸಿರಿಯಾಳಕೊಪ್ಪ ಎಂಬ ಊರೂ ಸಮೀಪದಲ್ಲಿಯೇ ರಾರಾಜಿಸುತ್ತಿವೆ.

ಆ ಉಡುತಡಿ ಎಂಬ ಗ್ರಾಮದಲ್ಲಿ ನಿರ್ಮಲ ಸುಮತಿದೇವಿ, ಎಂಬ ಸತಿ ಪತಿಗಳು ಹಾಲುಸಕ್ಕರೆಯಂತೆ ಅನ್ಯೋನ್ಯ ಕೂಡಿಕೊಂಡಿದ್ದು ಸಂಸಾರವನ್ನು ಸಸಾರವಾಗಿ ಮಾಡುತ್ತಿದ್ದರು. ( ಅಕ್ಕನ ತಾಯ್ತಂದೆಗಳು ಶಿವಭಕ್ತ ಶಿವಭಕ್ತೆಯೆಂದು ಹರಿಹರನೂ, ಓಂಕಾರ ಶೆಟ್ಟಿ ಲಿಂಗಮ್ಮ ಎಂದು ಸಾಂಗತ್ಯಕಾರನೂ ಹೇಳುವರು. ) ತನುಮನ ಭಾವಂಗಳಲ್ಲಿ ವಿಷಮವಿಲ್ಲದೇ ಸಾಮರಸ್ಯವುಳ್ಳ ಆ ದಂಪತಿಗಳ ಸಂಸಾರವು ಜೇಂಗೊಡದಲ್ಲಿ ಪಾಲ್ಗೊಡಸು ಕೂಡಿದಂತಿತ್ತಲ್ಲದೆ, ಅಮೃತದಲ್ಲಿ ವಿಷ ಬೆರೆತಂತೆ, ಸಿಹಿಯಲ್ಲಿ ಕಹಿ ಕೂಡಿದಂತೆ ಇರಲಿಲ್ಲ. ಅವರಿಬ್ಬರೂ ದೈಹಿಕವಾಗಿ ಬೇರೆ ಬೇರೆಯಾಗಿ ತೋರಿದರೂ ಭಾವ ಮನಂಗಳಲ್ಲಿ ಒಬ್ಬರಂತೆಯೇ ತೋರುತ್ತಿದ್ದರು. ಬಲಗಣ್ಣು ಎಡಗಣ್ಣು ಎಂದು ಎರಡಿದ್ದರೂ ಆ ಎರಡೂ ಕಣ್ಣುಗಳು ಕೂಡಿ ನೋಡುವ ನೋಟವು ಒಂದೇ ಅಲ್ಲವೇ ? ಎರಡು ಕಣ್ಣುಗಳವೆಯೆಂದು ತಿಳಿದು ಬಲಗಣ್ಣಿನಿಂದ ಒಂದು ಪತ್ರವನ್ನೂ ಎಡಗಣ್ಣಿನಿಂದ ಬೇರೊಂದು ಪುಸ್ತಕವನ್ನೂ ಓದಲು ಬಂದೀತೇ ?

ಕಾಲುಗಳೆರಡಾದರೂ ಓಟವೊಂದೇ, ಕೈಗಳೆರಡಾದರೂ ಮಾಟವೊಂದೇ, ದೇಹವೆರಡಾದರೂ ಕೂಟವೊಂದೇ, ಸಾಟಿಗಳೆರಡಾದರೂ ಊಟವೊಂದೇ, ಕಿವಿಗಳೆರಡಾದರೂ

ಕೇಳ್ವ ಶಬ್ದವೊಂದೇ, ಮೂಗಿನ ಹೊರಳೆಗಳು ಎರಡಾದರೂ ಮೂಸುವ ಗಂಧವೊಂದೇ. ಸಂಸಾರವು ೬೩ ಅಂಕಿಯಂತೆ ಇರಬೇಕು. ೬೩ ಅಂಕಿಯಲ್ಲಿಯ ಆರು - ಮೂರು ಈ ಎರಡೂ ಅಂಕಿಗಳು ಒಂದಕ್ಕೊಂದು ಸಮ್ಮುಖವಾಗಿ ಇರುವವು; ೩೬ ಈ ಅಂಕಿಯಲ್ಲಿಯ ೩ ಮತ್ತು ೬ ರ ಮುಖಗಳು ಒಂದು ಅತ್ತ ಒಂದು ಇತ್ತ ಇರುವವು. ಸತಿಪತಿಗಳ ಮೌಖಿಕ ಮಾತುಗಳಾಗಲಿ, ಮಾನಸಿಕ ಚಿಂತನವಾಗಲಿ, ಬೌದ್ಧಿಕ ವಿಚಾರಗಳಾಗಲಿ ಒಮ್ಮುಖವಾಗಿರ ಬೇಕಲ್ಲದೆ ಇಮ್ಮುಖವಾಗಿರಬಾರದು.

ಮನಬಂದ ಹೆಣ್ಣನ್ನು ವಿನಯದಲಿ ಕರೆದಿತ್ತು ।
ಮನಮುಟ್ಟಿ ಬಾಳ್ವೆ ಮಾಡಿದರೆ । ಅಮೃತದ ।
ಕೆನೆಯ ಸವಿದಂತೆ ಸರ್ವಜ್ಞ ।
ಒಲ್ಲದವಳೊಡನಾಡಿ ಚೆಲ್ಲವಾಡುವನೆಗ್ಗ ।
ಕಲ್ಲಪುತ್ಥಳಿಯ ಬಿಗಿದಪ್ಪಿ । ಚುಂಬಿಸಲು ।
ಹಲ್ಲು ಹೋದಂತೆ ಸರ್ವಜ್ಞ ॥

ಎಂದು ಸರ್ವಜ್ಞನು ಸರಸ ವಿರಸ ಸಂಸಾರಗಳ ಚಿತ್ರಣವನ್ನು ಮನಃಪಟಲದಮೇಲೆ ಅಚ್ಚೊತ್ತಿ ಮೂಡುವ ಹಾಗೆ ಹೇಳಿರುವನು.

ನಿರ್ಮಲ ಸುಮತಿದೇವಿ ಎಂಬ ಹೆಸರುಗಳು ಅಂಕಿತ ನಾಮಗಳಾದಿರದೇ ಅನ್ವರ್ಥಕ ನಾಮಗಳಾಗಿದ್ದವು. ನಿರ್ಮಲನೆಂಬ ಪತಿಯು ಪರಿಶುದ್ಧ ಹೃದಯನೂ, ಸುಮತಿದೇವಿ ಯೆಂಬ ಸತಿಯು ಸದ್ಬುದ್ಧಿಯುಳ್ಳವಳೂ, ಸುವಿಚಾರ ಸಂಪನ್ನೆಯೂ ಆಗಿ ರಾರಾಜಿಸುತ್ತಿದ್ದಳು. ಭೂಮಿಯಲ್ಲಿ ಸಸಿಯು ಕಸುವಿನಿಂದ ಬೆಳೆಯಬೇಕಾದರೆ ಆ ಭೂಮಿಯು ಹಸನಾಗಿರಬೇಕಲ್ಲವೇ ? ಕುಡಿವ ನೀರು, ಉಸಿರಾಡಿಸುವ ಗಾಳಿ ಶುದ್ಧವಾಗಿದ್ದರೇನೇ ಆರೋಗ್ಯವಲ್ಲವೇ ? ತೊಡುವ ಬಟ್ಟೆಗಳು ಹಸನಾಗಿದ್ದರೇನೇ ದೇಹಕ್ಕೆ ಒಪ್ಪುವವಲ್ಲವೇ ? ನಡೆವ ಹಾದಿ ಹಸನಾಗಿದ್ದರೆ ಪಯಣ ಸುಖಕರವಲ್ಲವೇ ? ನುಡಿದ ಮಾತು ಹುಸಿಯಾಗದೇ ಹಸನಾಗಿದ್ದರೆ ಜೀವನಯಾತ್ರೆ ಸುಖದಸುಗ್ಗಿಯಾಗುವದಲ್ಲವೇ ? ಹಾಗೆ ನಮ್ಮ ನಡೆ, ನುಡಿ, ಆಚಾರ, ವಿಚಾರಗಳಲ್ಲಿ ಐಕ್ಯತೆಯಿರಬೇಕು.

ಆಡುವದು ಪುರಾತನರಂತೆ ಮಾಡುವದು ಕಿರಾತರಂತೆ ಆಗದೇ ಆಡುವದೂ ಮಾಡುವದೂ ಪುರಾತನರಂತೆ ಆಗಬೇಕು.

ಶ್ರೀ ಸದ್ಗುರುದೇವನು ಕರುಣೆಯಿಂದ ಅನುಗ್ರಹಿಸುವ ಶಿವದೀಕ್ಷೆಯಿಂದ, ಆಣವ ಮಾದಿ ಮಲತ್ರಯಗಳನ್ನು ಕಳೆದುಕೊಂಡು ಲಿಂಗತ್ರಯಗಳಲ್ಲಿರುವ ಲಿಂಗತ್ರಯಗಳ ಇಂಗಿತವ ತಿಳಿದುಕೊಂಡು ಧನ್ಯರಾದರು. ಗುರ್ವನುಗ್ರಹವಾದಾಗಲೇ ಜೀವನು ದೇವನಾಗುವನು, ನರನು ಹರನಾಗುವನು; ಅಧೋಮಾರ್ಗದತ್ತ ಅಂದರೆ ಪ್ರವೃತ್ತಿ ಮಾರ್ಗದತ್ತ ಸಾಗಿದ ಜೀವನು ಊರ್ಧ್ವಮಾರ್ಗದತ್ತ ಅಂದರೆ ತೇಜೋ ಮಾರ್ಗದತ್ತ ಸಾಗಿ ಶಾಂತಿಸಾಗರದಲ್ಲಿ ಈಜುವನು. ಭವಬಂಧನ ಭವಪಾಶಗಳಿಗೆ ಕಾರಣಗಳಾದ ಆಣವಾದಿ ಮಲತ್ರಯ

ಗಳು ಕಳೆದು ಹೋದ ಮೇಲೆ " ಮೂಲಾಭಾವೇ ಕುತಃ ಶಾಖಾ " ಎಂಬಂತೆ ತದುದ್ಭ
ಗಳಾದ ಷಡ್ಭ್ರಮೆ, ಷಡ್ವಿಕಾರ, ಷಡೂರ್ಮಿ, ತಾಪ, ಪಾಪ, ರೋಷ, ದ್ವೇಷಾದಿ
ಅಬ್ಬರವು ಅಡಗಿಹೋಗಿ ಅಂಗಭಾವವಳಿದು ಲಿಂಗಭಾವದಲ್ಲೇ ಉಳಿದ ಮಹ
ಮಹಿಮೆಯನ್ನು ಹೇಳಲು ಬರುವದಿಲ್ಲ ಎಂದು ಮುಗ್ಗೆಯ ಮಾಯಿದೇವರು-

ನುಡಿವೆಡೆಯಲ್ಲಿ ನೋಡುವೆಡೆಯಲ್ಲಿ ರಮಿಪ್ಪೆಡೆಯಲ್ಲಿ ವಸ್ತುವಂ।
ಪಿಡಿವೆಡೆಯಲ್ಲಿ ಭೋಗಿಪೆಡೆಯಲ್ಲಿ ಸುಖಂಬಡೆವಲ್ಲಿ ದೇಹಮಂ।
ಬಿಡುವೆಡೆಯಲ್ಲಿ ಲಿಂಗಕಳೆ ಲಿಂಗಗುಣಂ ಘನಲಿಂಗಯೋಗಮಾ।
ದೊಡೆ ಬಳಿಕಾಮಹಾತ್ಮನನೇನೆಬಪೂರ್ವದದಂ ಶಿವಾಧವಾ ॥

ಎಂಬ ಪದ್ಯದಲ್ಲಿ ಹೇಳಿರುವರು.

ನಿರ್ಮಲನು ಪರಿಶುದ್ಧ ಚಿತ್ತವುಳ್ಳವನೂ, ಸುಮತಿಯು ಸದ್ಬುದ್ಧಿಯುಳ್ಳವ
ಆದಿದ್ದು ಭವಪ್ರಪಂಚವನ್ನು ಶಿವಪ್ರಪಂಚವನ್ನಾಗಿ ಮಾರ್ಪಡಿಸಿ ಜೀವನ ಸಾಗಿಸುತ್ತಿದ್ದ

ದೇವರ ದಾಸಿಮಯ್ಯ-ಸುಗ್ಗಲಾದೇವಿ, ಶ್ರೀಬಸವೇಶ್ವರ-ನೀಲಾಂಬಿಕೆ, ಮಹಾದೇ
ಭೂಪಾಲ-ಮಹಾದೇವಿ, ಮಹಾತ್ಮಾ ಗಾಂಧಿ-ಕಸ್ತೂರಬಾ, ಅರವಿಂದಘೋಷ-ಮೃ
ಲಿನಿ ಮುಂತಾದ ಮಹಾವಿಭೂತಿಗಳು ಆದರ್ಶ ಗೃಹಸ್ಥಯೋಗಿಗಳಾಗಿ ಮೆರೆಯಲಿಲ್ಲ
ಸಂಸಾರನಾಟಕದಲ್ಲಿ ಪುರುಷನ ಪಾತ್ರಕ್ಕಿಂತಲೂ ಸ್ತ್ರೀ ಪಾತ್ರದ ವೇಷವು ಅತಿ
ಪ್ರಧಾನವಾದುದು, ಅಂತೆಯೇ-

" ಗೃಹಿಣೀ ಗೃಹಮುಚ್ಯತೇ " ಎಂದು ಅಭಿಜ್ಞರೂ,
" ಸಹಸ್ರಂತುಪಿತ್ರೂನ್ಮಾತಾ ಗೌರವೇಣಾತಿರಿಚ್ಯತೇ "
ಎಂದು ಸ್ಮೃತಿ ವಾಕ್ಯವೂ,
ಮೊದಲು " ಪಿತೃದೇವೋಭವ " ಎಂದು ಹೇಳುವದು ಬಿಟ್ಟು
" ಮಾತೃದೇವೋಭವ " ಎಂದು ಘಂಟಾಘೋಷವಾಗಿ ಹೇಳುತ್ತ

" ಹರನ ಶಿರವನು ಏರಿ ಹರಿಯ ಉರವನು ಮೆಟ್ಟಿ ।
ಸರಸಿಜೋದ್ಭವನ ಮೊಗಗೆಡಿಸಿ, ಮೀರಿದಳು ।
ಹಿರಿಯರಿನ್ನಾರು ಸರ್ವಜ್ಞ ॥

ಎಂದು ಸರ್ವಜ್ಞನೂ, ಸ್ತ್ರೀ ಮಹತ್ವವನ್ನು ಸಸಯುಕ್ತಿಕವಾಗಿ ಪ್ರತಿಪಾದಿಸಿದ್ದಾನೆ.
ಶಿವ ಭಕ್ತಿ, ಶಿವಜ್ಞಾನ, ಶಿವವ್ರತ, ಶಿವಾಚಾರ, ಶಿವಾನುಭವಗಳಲ್ಲಿಯೇ ಕಾಲಕಳೆವ ಆ
ದಂಪತಿಗಳು ಉಡುತಡಿಯಲ್ಲಿರುವ ಶ್ರೀಮಲ್ಲಿಕಾರ್ಜುನ ದೇವಾಲಯಕ್ಕೆ ದಿನಾಲು ಹೋ
ಪೂಜೆ ಮಾಡಿ, ಮೈನೀಡಿ, ಮನವಾರೆಹಾಡಿ, ಕಣ್ತುಂಬನೋಡಿ, ಪ್ರದಕ್ಷಿಣೆಮಾಡಿ ನಲಿದಾ
ಬರುತ್ತಿದ್ದರು.

ಬಳ್ಳಿಗೆ ಸೌರಭಸೂಸುವ ಹೂಗಳಾಗುತ್ತಿದ್ದರೆ ಆದಕ್ಕೆ ಬೆಲೆ. ಹೂವಾಗದಿದ್ದರೆ
ಬಳ್ಳಿಯನ್ನು ಕಳ್ಳಿಯಂತೆ ಕಿತ್ತೊಗೆಯುವರು. ಮರಕ್ಕೆ ಹಣ್ಣಾಗುತ್ತಿದ್ದರೆ ಬೆಲೆ. ಇಲ್ಲ

ದರೆ ಆ ಮರವನ್ನು ಕಡಿದುಹಾಕುವರು. ಮೇಲಿಂದಮೇಲೆ ಈಯುವ ಆಕಳನ್ನು ಎಲ್ಲರೂ ಅಕ್ಕರತೆಯಿಂದ ಜೋಪಾನ ಮಾಡುವರಲ್ಲದೆ ಗೊಡ್ಡು ಆಕಳನ್ನು ಪ್ರೀತಿಸುವರೇ? ಅದನ್ನು ಕಟುಕರಿಗೆ ಮಾರಿ ಬಿಡುವರು. ಬಳ್ಳಿಗೆ ಹೂ, ಮರಕ್ಕೆ ಹಣ್ಣು, ಮನೆಗೆ ದೀಪ, ಭಾವಿಗೆ ಸೆಲೆ ಹೇಗೆ ಮುಖ್ಯವೋ ಹಾಗೆ ಸದ್ಗೃಹಸ್ಥನಿಗೆ ಸಂತಾನ ಬೇಕು.

" ಮಕ್ಕಳಿದ್ದರೆ ಮನೆಯು ಚಂದ,
ರೊಕ್ಕವಿದ್ದರೆ ಬಾಳ್ವೆ ಚಂದ,

ಎಂಬ ಲೋಕೋಕ್ತಿಯೂ,

" ಮಕ್ಕಳಿಲ್ಲದ ಮನೆಯು ರೊಕ್ಕವಿಲ್ಲದ ಬಾಳ್ವೆ ।
ಅಕ್ಕರವು ಇರದ ತವರೂರು । ಇವು ಮೂರು ।
ದುಃಖ ಕಾಣಯ್ಯ ಸರ್ವಜ್ಞ " ॥

ಎಂಬ ಸರ್ವಜ್ಞನ ಮಾತೂ,

ಬಂಜೀ ಬಾಗಿಲ ಮುಂದ ಅಂಜೂರಿ ಗಿಡಹುಟ್ಟಿ ।
ಟೊಂಗಿ ಟೊಂಗೆಲ್ಲ ಗಿಣಿ ಕುಂತು । ಕೇಳ್ಯಾವ ।
ಬಂಜಿ ನಿನ ಬದುಕು ಹೆರವರಿಗಿ ॥

ಎಂಬ ಜನಪದ ಸಾಹಿತ್ಯವು ಪುತ್ರಹೀನನ ಸಂಸಾರ ನಿರರ್ಥಕ ಎಂಬುದನ್ನೇ ಸಮರ್ಥಿಸುತ್ತವೆ, ಸಾಧ್ವಿಶಿರೋಮಣಿಯಾದ ಸುಮತಿಯು ಸಂತಾನವಿಲ್ಲದ ಚಿಂತೆಯಿಂದ ಉಡುತಡಿಯಲ್ಲಿಯೇ ಇರುವ ಮಲ್ಲಯ್ಯನ ಗುಡಿಗೆ ಹೋಗಿ ದಿನಾಲು ಭಕ್ತಿಯಿಂದ ಸೇವೆಮಾಡಿ ಬರುತ್ತಿದ್ದಳು.

ಶ್ರೀಶೈಲಮಲ್ಲಯ್ಯನಲ್ಲಿ ಅಪಾರ ಭಕ್ತಿಯುಳ್ಳ ಮುಗ್ಧಮಹಿಳೆಯರು ಜನಪದ ಸಾಹಿತ್ಯದಲ್ಲಿ ಹಾಡಿದ ಹಾಡುಗಳು ಜನಜನಿತವಾಗಿವೆ. ಓರ್ವ ಗರತಿಗೆ ಮಲ್ಲಯ್ಯನಲ್ಲಿ ವಿಶೇಷ ಭಕ್ತಿ, ಶ್ರೀಶೈಲಮಲ್ಲಯ್ಯನಾದರೋ ದೂರ ಬಹುದೂರ. ಹೋಗಬೇಕೆಂದರೆ ಕೈಯಲ್ಲಿ ಕಾಸಿಲ್ಲ. ನಡೆದು ಹೋಗಬೇಕೆಂದರೆ ಮೈಯಲ್ಲಿ ಕಸುವಿಲ್ಲ. ಮನದಲ್ಲೇನೋ ಭಕ್ತಿ ತುಂಬಿ ತುಳುಕುತ್ತಿದೆ. ಆಗ ಆ ಸಾಧ್ವಿಯು ಚಿಂತಿಸಿ, ಚಿಂತಿಸಿ–

" ಪರ್ವತವೆಂಬೂದು ಅರವತ್ತು ಗಾವುದ ।
ಬರಲಾರೆನಯ್ಯೋ ಬಹುದೂರ । ಮಲ್ಲಯ್ಯ ।
ದೂರಿಂದ ಕೈಯ ಮುಗಿವೇನು ॥

ಎಂದು ಕೈಜೋಡಿಸಿ ಭಕ್ತಿಪರವಶಳಾಗುವಳು. ಮತ್ತೋರ್ವ ಗರತಿಗೆ ಎಡವಿ ಬಿದ್ದರೆ ಮಲ್ಲಯ್ಯನ ಗುಡಿಯೊಳಗೇ ಹೋಗಿ ಬೀಳುವಷ್ಟು ಸಮೀಪ. ಇಷ್ಟು ಸಮೀಪದಲ್ಲಿದ್ದರೂ ಮನೆಯೊಳಗಣ ಕೆಲಸ ಬೊಗಸೆಗಳ ಮೂಲಕ ಸಮಯಾಭಾವ. ಭಕ್ತಿಯೇನೋ ಹೃದಯದಲ್ಲಿ ತುಂಬಿ ಹೊರಸೂಸುತ್ತಿದೆ. ಮನೆಗೆಲಸಗಳನ್ನೆಲ್ಲ ಮುಗಿಸಿ ಹೋಗುವಷ್ಟರಲ್ಲಿ ಪೂಜಾರಿಯು ಬಾಗಿಲು ಮುಚ್ಚಿ ಬಿಡುತ್ತಿದ್ದ. ಅಂತಹ ಪ್ರಸಂಗದಲ್ಲಿ ಗರತಿಯು ದೃಢನಿಷ್ಠೆಯಿಂದ ಹೋಗಿ ಮುಚ್ಚಿದ ಬಾಗಿಲ ಮುಂದೆ ಕೈಮುಗಿದು ನಿಂತು–

" ಹೊತ್ತು ಮುಳುಗಿದರೇನು ಕತ್ತಲಾದರೇನು!
ಅಪ್ಪ ನಿನ ಗುಡಿಗೆ ಬರುವೆನೋ । ಮಲ್ಲಯ್ಯ ।
ಮುತ್ತಿನ ಬಾಗಿಲ ತೆಗೆದಿರೊ " ॥

ಎಂದು ಎದೆಯ ದನಿತೆಗೆದು ಬೇಡಿಕೊಳ್ಳಲು ಭಕ್ತರ ಹೃದಯದ ಕೂಗು ಕೇಳಿ ಮ
ಯ್ಯನು ಗಕ್ಕನೇ ಬಾಗಿಲು ತೆಗೆಯುತ್ತಿದ್ದನಂತೆ.

ಕೈಗಳ ಬಿಚ್ಚಿ ಬಿಸಾಟರು ಬಿಡೆನು,
ಮೈಗಳ ಕಡಿದು ಹರಹಿದಡೆ ಬಿಡೆ ಬಿಡೆನು ನಿಮ್ಮ ಚರಣ"

ಎಂದು ಅಚಲನಿರ್ಧಾರದಿಂದ, ದೃಢನಿಷ್ಠೆಯಿಂದ ಸಿದ್ಧರಾಮನು ಆ ಎಂದು ಆ
ರಕ್ಕಸನ ಬಾಯಿಯಂತಿರುವ ಭೀಕರಕಮರಿಯಲ್ಲಿ ಹಾರಿದಾಗ ಭಕ್ತಾನುಗ್ರಹ ತತ್ಪರ
ಮಲ್ಲಯ್ಯನು ಕಂದ ಸಿದ್ಧರಾಮನನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ಕಾಪಾ
ಲ್ಲವೇ ?

" ಸಿರಿಗಿರಿಮಹಂತಮಲ್ಲಯ್ಯ ಉಘೇ, ಉಘೇ, ಉಘೇ " ಎಂದು ಉದ್ಘೋ
ತ್ತ ಶ್ರೀಶೈಲಮಲ್ಲಯ್ಯನ ಸಂದರ್ಶನಕ್ಕೆ ಹೊರಟ ಪರಿಷೆಯವರು ಹಸಿದು ಕಂ
ರಲು, ಇಳಿಹಾಳಬೊಮ್ಮಯ್ಯನೆಂಬ ಶರಣನು ತಲೆಯಮೇಲಿಟ್ಟುಕೊಂಡು ಬಿತ್ತ
ಒಯ್ವ ಕಡಲೆಯ ಕಾಳುಗಳ ಬುಟ್ಟಿಯನ್ನೇ ಬುತ್ತಿಯೆಂದು ತಿಳಿದು ಅವರು ಬೇ
ನೆನೆಸಿದ ಕಡಲೆಯ ಕಾಳುಗಳನ್ನೆಲ್ಲ ಅವನು ಕೊಟ್ಟು, ಬುಟ್ಟಿಯ ಕೆಳಗೆ ಬಿದ್ದುಳಿದ ಕಾ
ಳನ್ನು ಮಾತ್ರ ಅವನು ಬಿತ್ತಿಬಿಟ್ಟನು. ಶ್ರೀಶೈಲಮಲ್ಲಯ್ಯನ ಮಹಿಮೆಯಿಂದ ಬಿ
ಹಿಡಿ ಕಡಲೆಯೇ ಹುಲುಸಾಗಿ ಬೆಳೆದು ರಾಸಿಮಾಡಲು ಪಡಸಾಲೆ ಹಿಡಿಸಲಾರದಷ್ಟು ಕ
ಯರಾಸಿ ತುಂಬಿತುಳುಕಿತು. ಅಂತೆಯೇ ಹಳ್ಳಿಗರು:—

ಆಡುತ್ತ, ಹಾಡುತ್ತ, ನೋಡುತ್ತ ಭಕ್ತಿ ।
ಮಾಡಿಭೋ ಸಿರಿಗಿರಿಮಲ್ಲಿಕಾರ್ಜುನಗೆ ।
ಸಿರಿಗಿರಿ ಮಲ್ಲಯ್ಯ ಶರಣೆನ್ನಿರಯ್ಯ ।
ಸಿರಿಗಿರಿ ಮಲ್ಲಯ್ಯ ಶರಣೆನ್ನಿರಯ್ಯ ॥

ಎಂದು ಹಾಡಿ, ನಲಿದಾಡಿ, ಕುಣಿದಾಡುವರು.

ನಂಬಿದ ಭಕ್ತರ ಮನೋರಥಗಳನ್ನು ಪೂರೈಸುವ ಶ್ರೀಶೈಲಮಲ್ಲಯ್ಯನ ಅನು
ದಿಂದ ಶ್ರೀಸುಮತಿದೇವಿಯು ಗರ್ಭಿಣಿಯಾದಳು. ಸಾಮಾನ್ಯವಾಗಿ ಹೆಣ್ಣುಮ
ಗರ್ಭವತಿಯರಾದ ಕೂಡಲೇ ಏನೊಂದೂ ಕೆಲಸ ಮಾಡದೇ ಸುಮ್ಮನೇ ಕುಳಿತು
ವರು. ಆದರೆ ಸುಮತಿದೇವಿಯು ಹಾಗೆ ಮಾಡಲಿಲ್ಲ. ಲಿಂಗಪೂಜೆ, ಜಂಗಮದಾಸೋ
ಗುರುಸೇವೆ ಮಾಡುವಲ್ಲಿ ಅವಳು ಹಿಂಜರಿಯಲಿಲ್ಲ. ಗರ್ಭಧಾರಣೆ ಮಾಡಿದ ಹ
ಹೆಣ್ಣು ಮಕ್ಕಳಿಗೆ ಅನಿಷ್ಟ ಅಂದರೆ ಇದ್ದಲಿ ತಿನ್ನುವದು, ಬೂದಿ ತಿನ್ನುವದು ಇ
ಬಯಕೆಗಳು ತೋರುತ್ತವೆ. ಆದರೆ ಸುಮತಿದೇವಿಗೆ ಇಂತಹ ಅನಿಷ್ಟ ಬಯಕೆಗಳು
ತೋರಲಿಲ್ಲ. ಜಂಗಮಾರ್ಚನೆಯನ್ನು ಮಾಡಿ ಪಾದೋದಕ ಪ್ರಸಾದಗಳನ್ನು ಸೇ
ಬಯಕೆ, ಗುರುಮುಖದಿಂದ ಶಿವಾನುಭವ ಕೇಳುವಬಯಕೆ, ಲಿಂಗಪೂಜೆ ಮಾ

ಬಯಕೆ, ಶಿವಪೂಜೆಗಾಗಿ ಸಕಲ ಸಾಮಗ್ರಿಗಳನ್ನು ಸಿದ್ಧಪಡಿಸುವ ಬಯಕೆ, ಆಸನಬದ್ಧಳಾಗಿ ಕುಳಿತು ವಿಭೂತಿ ರುದ್ರಾಕ್ಷಿಧಾರಣ ಮಾಡಿ ಶಿವಮಂತ್ರಜಪಿಸುವ ಬಯಕೆ. ಹೀಗೆ ಸಾತ್ವಿಕ ಬಯಕೆಗಳು ತೋರಹತ್ತಿದವು. ಗರ್ಭಧಾರಣೆ ಮಾಡಿದ ತಾಯಂದಿರು ಆಹಾರ ವಿಹಾರಾದಿಗಳಲ್ಲಿ ಪರಿಶುದ್ಧರಾಗಿದ್ದಷ್ಟೂ ಅವರ ಪುಣ್ಯಗರ್ಭದಿಂದ ಹುಟ್ಟುವ ಮಕ್ಕಳು ಸುಶೀಲರೂ, ಸುಸಂಪನ್ನರೂ, ಬುದ್ಧಿವಂತರೂ ಆಗುವರು.

ಆಹಾರವು ಸಾತ್ವಿಕ, ರಾಜಸ, ತಾಮಸ ಎಂದು ಮೂರುಬಗೆಯದಾಗಿದೆ. ಸಾತ್ವಿಕ ಆಹಾರಸೇವನೆಯಿಂದ ದೀರ್ಘಆಯುಷ್ಯ, ಅಂತಃಕರಣಕ್ಕೆ ಸ್ಫೂರ್ತಿ, ಆರೋಗ್ಯ ಸಂತೋಷ ದೇಹಬಲಗಳುಂಟಾಗುತ್ತವೆ.

„ ಸತ್ವಾತ್ ಸಂಜಾಯತೇಜ್ಞಾನಂ „ „ ಊರ್ಧ್ವಂಗಚ್ಛಂತಿ ಸತ್ವಸ್ಥಾಃ „
" ಯದನ್ನಂ ಭಕ್ಷತೇ ನಿತ್ಯಂ ಜಾಯತೇ ತಾದೃಶೀಪ್ರಜಾ „
" ಆಹಾರ ಶುದ್ಧೌ ಸತ್ವ ಶುದ್ಧಿಃ „

ಎಂಬ ಭಗವದುಕ್ತಿಯಂತೆ, ಸಾತ್ವಿಕಾಹಾರ ಸೇವನೆಯಿಂದ ತಾಮಸ ಪ್ರವೃತ್ತಿಯು ಅಳಿದು ಸತ್ವಾತಿಶಯದಿಂದ ಅಂತರಂಗದಲ್ಲಿ ಆಧ್ಯಾತ್ಮತೇಜವು ಬೆಳಗುತ್ತದೆ.

ಪ್ರತಿಯೊಬ್ಬರೂ ಸೇವಿಸುವ ಆಹಾರದ ಸೂಕ್ಷ್ಮಭಾಗದಿಂದ ರಸರಕ್ತಾದಿ ಸಪ್ತ ಧಾತುಗಳಾಗುವವು. ಅದಕ್ಕಿಂತಲೂ ಸೂಕ್ಷ್ಮ ಭಾಗದಿಂದ ಮನಸ್ಸು ನಿರ್ಮಾಣವಾಗುವದು.

ಚಿಕ್ಕ ಮಗು ಕುಡಿಯುವ ಮೊಲೆ ಹಾಲು ತಾಯಿಉಣ್ಣುವ ಆಹಾರದಿಂದಲೇ ಆಗುವದು. ಆ ಹಾಲು ಶುದ್ಧವಾಗಿದ್ದರೆ ಅದನ್ನು ಕುಡಿದ ಮಕ್ಕಳು ಶುದ್ಧರೂ ಸುಪ್ರಸಿದ್ಧರೂ ಆಗುವರು. ಕಾರಣ ಬಸುರಿಯಾದ ಸ್ತ್ರೀಯರು ಶುದ್ಧಸಾತ್ವಿಕಾಹಾರ ಸೇವಿಸುವದು ಉತ್ತಮ. ಬಸುರಿಯಾದ ತಾಯಂದಿರು ಮಾಡುವ ಆಹಾರ ವಿಹಾರಾದಿಗಳ ಪರಿಣಾಮವು ಗರ್ಭಸ್ಥ ಶಿಶುವಿನಮೇಲೆ ಆಗುವದು ಎಂಬುದಕ್ಕೆ ಅನೇಕ ಐತಿಹಾಸಿಕ ಘಟನೆಗಳನ್ನು ಹೇಳಬಹುದು.

ನೆಪೋಲಿಯನ್ ಬೋನಾಪಾರ್ಟನ ತಾಯಿಯು ಗರ್ಭಿಣಿಯಾಗಿದ್ದಾಗ ಶೂರ ಸರದಾರರ ಸೇವೆ ಮಾಡಿದುದರಿಂದಲೇ ವೀರಶಿರೋಮಣಿ, ನೆಪೋಲಿಯನ್‌ಬೋನಾಪಾರ್ಟನಂತಹ ಶೂರ ಸರದಾರನನ್ನು ಹೆತ್ತಳೆಂದೂ, ಶ್ರೀಕೃಷ್ಣನು ಗರ್ಭಿಣಿಯಾದ ತನ್ನ ತಂಗಿ ಸುಭದ್ರೆಗೆ ಚಕ್ರವ್ಯೂಹಕೋಟೆಯನ್ನು ಪ್ರವೇಶಿಸುವ ಚಾತುರ್ಯದಮಾತು ಹೇಳಲು ಆ ಮಾತು ಕೇಳಿಯೇ ಆಕೆಯ ಮಗನಾದ ಅಭಿಮನ್ಯು ಕೋಟೆಯನ್ನು ಪ್ರವೇಶ ಮಾಡಿದನೆಂದೂ ತಿಳಿದು ಬರುತ್ತದೆ.

ಗಾಂಧೀಜಿಯವರ ತಾಯಿಯಾದ ಪುತಳಾಬಾಯಿಯು ಪ್ರತ್ಯಕ್ಷ ವೈಷ್ಣವಧರ್ಮದ ಸಾಕಾರ ಮೂರ್ತಿಯಾಗಿದ್ದಳು. ಪೂಜಾ ಪಾರಾಯಣಾದಿಗಳನ್ನು ಮಾಡದೇ, ನಿತ್ಯ ದೇವತಾ ದರ್ಶನ ತಕ್ಕೊಳ್ಳದೇ ಬಾಯಲ್ಲಿ ನೀರುಸಹ ಹಾಕುತ್ತಿದ್ದಿಲ್ಲ. ಪ್ರತಿನಿತ್ಯ ರಾಮನಾಮವನ್ನು ಜಪಿಸಿ, ಸೂರ್ಯದೇವನ ದರ್ಶನತಕ್ಕೊಂಡೇ ಊಟಮಾಡುವ ವ್ರತನಿಯಮವನ್ನು ಹಿಡಿದಿದ್ದಳು. ಮಳೆಗಾಲದ ಮೇಘ ಮಂಡಲಗಳಿಂದ ಆಚ್ಛಾದಿತನಾಗಿ ಸೂರ್ಯನು

ಕಾಣದೇ ಇರುವ ದುರ್ದಿನಗಳಲ್ಲಿ ಆ ತಾಯಿಯು ಸೂರ್ಯದರ್ಶನವಾಗದಿದ್ದುದ
ಒಂದೆರಡುದಿನ ಉಪವಾಸ ಇರುತ್ತಿದ್ದಳಂತೆ. ಆ ತಾಯಿಯು ಮಾಡುವ ಉಪ
ಪರಿಣಾಮವೇ ಗಾಂಧೀಜಿಯವರ ಮೇಲಾಗಿ ಅವರು ಅನೇಕಸಲ ರಾಷ್ಟ್ರದ ಸ್ವಾ
ಸಂಗ್ರಾಮದಲ್ಲಿ ಉಪವಾಸ ಮಾಡಿದ್ದುಂಟು. ಮಕ್ಕಳನ್ನು ತಿದ್ದಿತಿದ್ದಿ ಸಿದ್ಧಪುರುಷ
ಮಾಡುವದೂ, ತಿದ್ದದೇ ತೀಡದೇ ಬುದ್ಧಿಗೇಡಿಗಳನ್ನಾಗಿ ಮಾಡುವದೂ ತಾಯ
ಕೈಯಲ್ಲಿಯೇ ಇರುವದು. ಮಕ್ಕಳ ವಿಷಯದಲ್ಲಿ ತಾಯಂದಿರ ಅದರಲ್ಲಿಯೂ ಗ
ಯಾದ ತಾಯಂದಿರ ಹೊಣೆಗಾರಿಕೆ ಬಹಳ ಇರುವದು.

ವಚನದಲ್ಲಿ ನಾಮಾಮೃತತುಂಬಿ, ಕಿವಿಯಲ್ಲಿ ಕೀರುತಿ ತುಂಬಿ, ನಯ
ಗುರುಲಿಂಗ ಜಂಗಮರ ಮೂರುತಿ ತುಂಬಿ, ಹೃದಯದಲ್ಲಿ ದಿವ್ಯಸ್ಫೂರ್ತಿ ತುಂಬಿ, ಕ
ಸುವ ಆ ಮಂಗಳಾಂಗನೆಗೆ ಒಂಭತ್ತುತಿಂಗಳು ತುಂಬಿ ಶುಭಕರಣ, ಶುಭನಕ್ಷತ್ರ, ಶು
ಶುಭವಾರಗಳಿಂದ ಕೂಡಿದ ಶುಭಮುಹೂರ್ತದಲ್ಲಿ ಹೆಣ್ಣು ಮಗುವನ್ನು ಹೆತ್ತಳು.

ಇಳೆಯೊಳುಡುತಡಿಯೆಂಬ ಪಟ್ಟಣ ।
ದೊಳಗೆ ವೀರಶಿವಾಗಮಿಕ ನಿ ।
ಮರ್ಳನ ವಲ್ಲಭೆಯೆನಿಪ ಸುಮತಿಯು ಗರ್ಭಶುಕ್ತಿಯಲಿ ।
ಚೆಲುವೆಯಾದ ಕುಮಾರಿಯೆಂಬ ।
ಗ್ಗಳದ ಮುತ್ತುದಯಿಸಿತು ಧರಣೀ ।
ತಳದೊಳಗೆ ಪಾರ್ವತಿಯ ಸಾತ್ವಿಕ ಗುಣವೆ ರೂಪಾಗಿ ॥

ಪಾರ್ವತಿಯ ತಾಮಸೀ ಕಳೆಯಾದ ಮಾಯೆಯು ಹುಟ್ಟಿದಾಗ ಧೀರಮುನಿಗಳು,
ಸಿದ್ಧರು, ಯೋಗೀಶ್ವರರು ಎದೆಗುಂದಿದರೆ ಪಾರ್ವತಿಯ ಸಾತ್ವಿಕ ಕಳೆಯಾದ ಮ
ವಿಯು ಜನಿಸಲು ಎಲ್ಲಜನರೂ ಆನಂದಸಾಗರದಲ್ಲಿ ಈಜಿದರು. ತಮೋಗುಣ ಪ್ರ
ರಾದ ದುರ್ಜನರ ಉದಯದಿಂದ ಲೋಕಕ್ಕೆ ದುಃಖವೂ, ಸತ್ವಗುಣ ಪ್ರಧಾನರಾದ
ನರ ಉದಯದಿಂದ ಲೋಕಕ್ಕೆ ಸುಖಶಾಂತಿಗಳೂ ದೊರಕುವವು.

ವಿಶ್ವದಲ್ಲಿರುವ ಜನಗಳಲ್ಲಿ ಮೂರುಬಗೆಯನ್ನು ಮಾಡಬಹುದು. ಹುಟ್ಟು
ಮಹಂತರೆಂದು ಹೇಳಿಸಿಕೊಳ್ಳುವವರು ಕೆಲವೇಜನರು. ಇವರು ಕಾಲಕರ್ಮ
ಕಾಟಕ್ಕೆ ಸಿಲುಕದೆ, ಷಡೂರ್ಮಿ, ಷಡ್ಭ್ರಮೆ, ಷಡ್ವಿಕಾರಗಳ ಬಲೆಗೆ ಬೀಳದೆ, ಮ
ಪಟಲದ ಆವರಣಕ್ಕೆ ಬಳಗಾಗದೆ, ಸ್ವಸ್ವರೂಪ ಸಾಕ್ಷಾತ್ಕಾರಕ್ಕೆ ಚ್ಯುತಿ ಬಾರದಂತೆ
ವಿನಲ್ಲಿಯೇ ನಿಲ್ಲುವವರಿವರು. ತಪೋವನದಲ್ಲಿ ಧ್ಯಾನಾಸಕ್ತನಾಗಿ ಕುಳಿತಾಗ ಸ್ವರ್ಗ
ಕದ ಅಪ್ಸರೆಯು ಮುಂದೆಬಂದು ಮಣಿಮಣಿದು ಕುಣಿಕುಣಿದು ಒನಪು ಒಯ್ಯ
ಮಾಡಿ ಜಂಬಕೊಚ್ಚಿಕೊಂಡರೂ ಸಹ ಆಕೆಯ ರೂಪಲಾವಣ್ಯಕ್ಕೆ ಮೋಹ
" ಮಾಯಾಕರಂಡೀ ನರಕಸ್ಯ ಹಂಡೀ ತಪೋವಿಖಂಡೀ " ಎಂದು ಮೂದಲಿಸಿ ಪ್ರ
ವೈರಾಗ್ಯ ತೋರಿಸಿದ ಶುಕಮುನಿಯೂ, ಚಲನಚ್ಚಿತ್ರ ಮಂದಿರಗಳಲ್ಲಿ ಹೇಗೆ ನಟನ
ಪರದೆಯ ಮೇಲೆ ಅಭಿನಯಿಸುವರೋ ಹಾಗೆ ಹರಿಯ ಉರ, ಹರನ ಶಿರ, ಸರಸಿಜ
ನನ ಮೊಗಗಳೆಂಬ ರಂಗಭೂಮಿಯ ಮೇಲೆ ... ನಟಿಸುತ್ತ ಮೂ

ವನ್ನೇ ಮರುಳುಗೊಳಿಸುವರು. ಇಂತಹ ಮಾಯಾಂಗನೆಯು ಅಲ್ಲಮಪ್ರಭುವನ್ನು ಸೋ-ಲಿಸ ಬರಲು–

> " ಎಸೆಯದಿರು ಎಸೆಯದಿರು ಕಾಮಾ ನಿನ್ನ ಬಾಣವ,
> ಹುಸಿಯಲೇಕೋ ? ಕಾಮ ಕ್ರೋಧ ಲೋಭ ಮೋಹ ಮಂದ ಮತ್ಸರ
> ಇವು ಸಾಲವೇ ನಿನಗೆ ? ಗುಹೇಶ್ವರಲಿಂಗದ ವಿರಹದಲ್ಲಿ
> ಬೆಂದವರ ಮರಳಿ ಸುಡಲುಂಟೇ ? ಮರುಳ ಕಾಮಾ ?

ಎಂದು ಧಿಕ್ಕರಿಸಿ ಮಾಯೆಯನ್ನು ಹಿಂದಕ್ಕಟ್ಟಿದ ಅಲ್ಲಮಪ್ರಭುವು ಸಿದ್ಧಪುರುಷ ಎಂದು ಹೇಳಬಹುದು. ಇನ್ನೂ ಹಲವು ಮಹಾತ್ಮರು ಜೀವನದ ತುಮುಲದಲ್ಲಿ ಊಹಿಸಲು ಬಾರದಷ್ಟು ಹೋರಾಟಮಾಡಿ ಸೋಲು ಗೆಲುವುಗಳ ಮಧ್ಯದಲ್ಲಿಸಿಕ್ಕು ಸಣ್ಣಾಗಿ ಹಣ್ಣಾಗಿ ಕೊನೆಗೆ ಸೋಲೇ ಗೆಲುವಿಗೆ ಮೂಲವೆಂದು ಬಗೆದು–

> " ನಾಳೆ ಬಪ್ಪುದು ನಮಗಿಂದೇ ಬರಲಿ, ಇಂದು ಬಪ್ಪದು ನಮಗೀಗಲೇ ಬರಲಿ
> ಇದಕಾರಂಜುವರು ? ಇದಕಾರಳುಕುವರು ? ಜಾತಸ್ಯ ಮರಣಂಧ್ರುವಂ
> ಎಂದುದಾಗಿ, ನಮ್ಮ ಕೂಡಲಸಂಗಮದೇವರು ಬರೆದ ಬರೆಹವ
> ತಪ್ಪಿಸುವರೆ ಹರಿಬ್ರಹ್ಮಾದಿಗಳಿಗಳವಲ್ಲ "!

ಎಂದು ಎದೆಗಾರಿಕೆಯಿಂದ ಮುಂದುವರಿದು ಕೊನೆಗೆ ವಿಜಯಶ್ರೀಯನ್ನೇ ಗಳಿಸುವವರು. ಕೆಲವು ಮಹಾನುಭಾವರು, ಜೀವನದ ಗೊತ್ತು, ಗುರಿಗಳನ್ನರಿಯದೇ, ಬದುಕುವದಕ್ಕಾಗಿ ಉಣ್ಣದೇ ಉಣ್ಣುವದಕ್ಕಾಗಿಯೇ ಬದುಕಿ, ವಿಷಯಾಂಧರಾಗಿ ಪಶುಜೀವನ ಸಾಗಿಸುವ ಪಶುಮಾನವರ ವಿವರಣೆ ಈಗ ಬೇಕಿಲ್ಲ.ಏಕೈಕವೀರರ ಪ್ರಸ್ತಾಪವನ್ನೇ ತಕ್ಕೊಂಡರೆ ಸಾಕು. ದೈಹಿಕ, ಬೌದ್ಧಿಕ, ಮಾನಸಿಕ ಮುಂತಾದ ಯಾವ ವಿಕಾರಗಳಿಗೂ ಒಳಗಾಗದೇ ಹುಟ್ಟಿದಾ ಕ್ಷಣವೇ ತಮ್ಮ ಮೂಲಸ್ವರೂಪವನ್ನು ಚಿಂತನಮಂಥನ ಮಾಡುವ ದೇವಮಾನವರ ವಿಷಯದಲ್ಲಿ ಶ್ರೀರಾಮಕೃಷ್ಣ ಪರಮಹಂಸರು ಹೋಮಾ ಪಕ್ಷಿಯ ದೃಷ್ಟಾಂತ ಕೊಟ್ಟಿ-ರುವರು. ಸಾಮಾನ್ಯವಾಗಿ ಎಲ್ಲ ಪಕ್ಷಿಗಳೂ ಗೂಡು ಕಟ್ಟಿ ಅಲ್ಲಿ ತತ್ತಿಹಾಕಿ ತತ್ತಿ ಒಡೆದ ನಂತರ ಮರಿಗೆ ಗುಟುಕುಹಾಕಿ ಜೋಪಾನ ಮಾಡುವವು. ಆದರೆ ಹೋಮಾ ಎಂಬ ಪಕ್ಷಿಯು ಮಾತ್ರ ಗೂಡು ಕಟ್ಟದೇ ಗುಟುಕು ಹಾಕದೇ ಗಗನ ಮಂಡಲದ ಊಹಿಸಲು ಬಾರದಷ್ಟು ಎತ್ತರದಲ್ಲಿ ತತ್ತಿಹಾಕುವದು. ಆ ತತ್ತಿಯು ಭೂಭಾಗದಲ್ಲಿ ಬೀಳುವದರೊ ಳಗೆ ಒಡೆದು ಮರಿಯಾಗಿ ಅದು ಮತ್ತೆ ಆಕಾಶಕ್ಕೆ ಹಾರಿಹೋಗುವದು. ಹೀಗೆ ಕೆಲವೇ ಮಹಾತ್ಮರು ತಾಯಿಯ ಗರ್ಭದಿಂದ ಹುಟ್ಟಿದ ಅಲ್ಪಾವಧಿಯಲ್ಲಿಯೇ ಪ್ರವೃತ್ತಿ ಮಾರ್ಗ ದಿಂದ ವಿಮುಖರಾಗಿ ನಿವೃತ್ತಿಮಾರ್ಗದತ್ತ ಸಾಗಿ ಆತ್ಮಸಾಕ್ಷಾತ್ಕಾರ ಮಾಡಿಕೊಳ್ಳು ವರು. ಈ ಗೇಣು ಹೊಟ್ಟೆಯನ್ನು ತುಂಬಿಕೊಳ್ಳುವದಕ್ಕಾಗಿಯೇ ಲೋಕವೆಲ್ಲ ಗಾಣದೆತ್ತಿ ನಂತೆ ತಿರುತಿರುಗಿ ಕೊರಗಿಸೊರಗಿ ಹೋಗುತ್ತದೆ. ಈ ಹಸಿವು ತೃಷೆಗಳನ್ನು ಕಳೆಯುವದ ಕ್ಕಾಗಿಯೇ ವಿಧಾನ ಸಭೆ, ಲೋಕಸಭೆ, ಸಂಸಾರದ ಕೋರ್ಟು-ಕಚೇರಿ ನ್ಯಾಯಾಲಯಗಳು, ಸೆರೆಮನೆಗಳು ನಿರ್ಮಾಣವಾದವು. ಇಂತಹ ಭೀಕರ ಹಸಿವು ತೃಷೆಗಳನ್ನು–

ಹಸಿವೇ ನೀನು ನಿಲ್ಲು ನಿಲ್ಲು,
ತೃಷೆಯೇ ನೀನು ನಿಲ್ಲು ನಿಲ್ಲು,
ನಿದ್ರೆಯೇ ನೀನು ನಿಲ್ಲು ನಿಲ್ಲು,
ಕಾಮವೇ ನೀನು ನಿಲ್ಲು ನಿಲ್ಲು,
ಕ್ರೋಧವೇ ನೀನು ನಿಲ್ಲು ನಿಲ್ಲು,
ಮೋಹವೇ ನೀನು ನಿಲ್ಲು ನಿಲ್ಲು,
ಲೋಭವೇ ನೀನು ನಿಲ್ಲು ನಿಲ್ಲು,
ಮದವೇ ನೀನು ನಿಲ್ಲು ನಿಲ್ಲು,
ಮಚ್ಚರವೇ ನೀನು ನಿಲ್ಲು ನಿಲ್ಲು,
ಸಚರಾಚರವೇ ನೀನು ನಿಲ್ಲು ನಿಲ್ಲು,

ನಾನು ಚೆನ್ನಮಲ್ಲಿಕಾರ್ಜುನ ದೇವರ ಅವಸರದ ಓಲೆಯನ್ನೊಯ್ಯುತ್ತಿದ್ದೇನೆ. ಶರಣಾರ್ಥಿ ಎಂದು ನಿಲ್ಲಿಸಿ, ಯತಿಗಳನ್ನೂ ವ್ರತಿಗಳನ್ನೂ, ಮತಿವಂತರನ್ನು ಧೃತಿಗೆಡಿಸುವ ಕಾಮಕ್ರೋಧಾದಿ ಷಡ್ರಿಪುಗಳನ್ನು ಸಹ ನಿಲ್ಲುನಿಲ್ಲು ಎಂದು ನಿಲ್ಲಿಸಿ, ಚನ್ನಮಲ್ಲಿಕಾರ್ಜುನ ನೆಂಬನಲ್ಲನಲ್ಲಿಗೆ ತಾನೇ ಲಗ್ನಪತ್ರಿಕೆಯನ್ನು ಸಲ್ಲಿಸಲು ಹೊರಟ, ಭಕ್ತಿ ಜ್ಞಾನ ವೈರಾಗ್ಯ ಸಾಕಾರದೇವತೆಯಂತಿರುವ ಮಹಾದೇವಿಯಕ್ಕ ಪ್ರಥಮಶ್ರೇಣಿಯ ಸಿದ್ಧಪುರುಷರ ಪಂಕ್ತಿ ಕೆಯಲ್ಲಿ ಬರುವಳು.

ಹಿಮಾಲಯದಲ್ಲಿ ಹುಟ್ಟಿದ ಬಾಲಗಂಗೆಯಂತೆ, ಆಗ ತಾನೇ ಅರಳಿದ ಮಲ್ಲಿಗೆ ಹೂವಿನಂತೆ, ಪರಿಶುದ್ಧಹೃದಯದ ಅನ್ವರ್ಥಕನಾಮದ ನಿರ್ಮಲಶೆಟ್ಟಿಯಂತಹ, ಆದರ್ಶ ಪತಿ, ಪಿತೃ-ಕುಲ ಪತಿ-ಕುಲ ಈ ಉಭಯ ಕುಲವನ್ನು ಉದ್ಧರಿಸುವ ಸದ್ಬುದ್ಧಿಯುಳ್ಳ ಅನ್ವರ್ಥಕನಾಮದ ಸುಮತಿದೇವಿಯಂತಹ ಆದರ್ಶಸತಿ, ಇವರ ಪುಣ್ಯಗರ್ಭದಲ್ಲಿಹುಟ್ಟಿದ ಮಹಾಶಕ್ತಿಯೆಂದರೆ ಪಾರ್ವತಿಯ ಸಾತ್ವಿಕಕಳೆ. ಮಗು ಹುಟ್ಟಲು ನಿರ್ಮಲಸುಮತಿಯರ ಹಿಡಿಸಲಾರದಷ್ಟು ಸಂತಸವಾಯಿತು.

ನಿರ್ಮಲ ಸುಮತಿಯರ ಪುಣ್ಯಗರ್ಭದಿಂದವತರಿಸಿದ, ಪಾರ್ವತಿಯ ಸಾತ್ವಿಕ ಕಳೆಯೇ ಮೈವೆತ್ತುನಿಂತಂತಿರುವ ಮಗಳ ರೂಪಕ್ಕೆ ಇತಿಮಿತಿಯಿಲ್ಲದಾಯಿತು. ತಾಯ್ತಂದೆಗಳಿಗೆ ಮಾತಿನಗೊಂಬೆಯಾಗಿ, ಬಂಧುಬಾಂಧವರಿಗೆ ಮುದ್ದಿನಖಣಿಯಾಗಿ ಎತ್ತಿಕೊಳ್ಳುವವರಿಗೆ ರತ್ನದಗೊಂಬೆಯಾಗಿ ಸಂತಸವಿತ್ತಳು.

ಸದ್ಗುರಂಗಳಾದ ಗುರುಲಿಂಗಶಿವಾಚಾರ್ಯರು ಮನೆಗೆ ದಯಮಾಡಿಸಿದರು. ಅವರ ಧೂಳಿಪಾದೋದಕದಿಂದ ಮನೆಯನ್ನೆಲ್ಲ ಶುದ್ಧಮಾಡಲು ಅವರು ಮಗುವಿಗೆ ಲಿಂಗಧಾರಣೆ ಮಾಡಿದರು.

ಗರ್ಭೋಪನಿಷತ್ತು "ನವಮೇಮಾಸಿ ಸರ್ವಲಕ್ಷಣಜ್ಞಾನಕರಣ ಸಂಪೂರ್ಣಃ ಭವತಿ ಪೂರ್ವಜಾತಿಸ್ಮರತಿ ಶುಭಾಶುಭಂಚಕರ್ಮವಿಂದತಿ"

ಅಂದರೆ ಒಂಭತ್ತನೇ ತಿಂಗಳಿಗೆ ಪಿಂಡದಲ್ಲಿ ಜೀವಕಳೆಯು ಬರುವದು ಎಂಬು ಹೇಳುವದು, ಶ್ರೀಮನ್ನಿಜಗುಣರೂ ಪರಮಾರ್ಥಗೀತೆಯಲ್ಲಿ ಪಿಂಡೋತ್ಪತ್ತಿಯನ್ನು ಹೇಳುವಾಗ-

" ಪೂರ್ವ ಸ್ಮರಣಂ ಜನಿಪಾಯಾಸ । ಸಾರ್ವಮದೆಂಟುನವಕ್ರಮಂಮಾಸ "

ಒಂಭತ್ತನೇ ಮಾಸದಲ್ಲಿ ಪಿಂಡದಲ್ಲಿ ಚೈತನ್ಯ ಪ್ರವೇಶವಾಗುವದೆಂದೂ, ಪೂರ್ವ ಜನ್ಮಗಳ ಸಂಸ್ಮರಣೆಯಾಗುವದೆಂದೂ ಹೇಳಿರುವರು. ಗರ್ಭದಲ್ಲಿದ್ದ ಶಿಶು ಭವಿಯಾಗಿ ತಾಯಿಯು ಭಕ್ತಳಾದರೆ ಅದು ಧರ್ಮಬಾಹಿರವಾಗುವದು. ಲಿಂಗಧಾರಿಗಳಾದ ಮಗು ಮತ್ತು ತಾಯಿಯ ಸಮ್ಮಿಲನ ಸಾಧುವಲ್ಲವೆಂದು ಭಾವಿಸಿ ದೂರದರ್ಶಿಗಳೂ ಶಿವಾನುಭವಿಗಳೂ ಆದ ಪಾಲ್ಕುರಿಕೆಯ ಸೋಮನಾಥ ಪಂಡಿತರು ೬೩ ಶೀಲಗಳನ್ನು ಬಿತ್ತರಿಸುವಾಗ " ತನ್ನ ಸತಿಯು ಗರ್ಭಿಣಿಯಾದರೆ ಅಷ್ಟಮ ಮಾಸಕ್ಕೆ ಚರಲಿಂಗದ ಕೈಯಿಂದ ವಿಭೂತಿ ಪಟ್ಟವಂ ಕಟ್ಟಿಸುವದೇ ೧೪ ನೇ ಶೀಲವು " ಎಂದು ಹೇಳಿರುವರು. ಅಂದರೆ ತಾಯಿಯ ಗರ್ಭಕ್ಕೆ ಲಿಂಗಧ ಸಂಬಂಧ ಮಾಡಿ ಆ ಲಿಂಗವನ್ನು ತಾಯಿಯ ಕೈಯಲ್ಲಿ ಕೊಟ್ಟು ತನ್ನಲಿಂಗದ ಕೂಡ ಆ ಲಿಂಗದ ಪೂಜೆಯನ್ನು ಮಾಡಲು ಆ ತಾಯಿಗೆ ಹೇಳಿ ಹುಟ್ಟಿದಬಳಿಕ ಕೂಸಿಗೆ ಸಂಬಂಧ ಪಡಲು ತಿಳಿಸಬೇಕು.

ಲಿಂಗಧಾರಕಳಾದ ತಾಯಿಯು ಲಿಂಗಧಾರಣವಿಲ್ಲದ ಭವಿಗೂಸನ್ನು ಮುಟ್ಟದ ಶರಣ ಶಿರೋಮಣಿ ಸೌಂದರನಾಚಯ್ಯನ ಒಂದು ಸುಂದರ ಕಥೆಯು ಶರಣ ಚರಿತೆಯಲ್ಲಿ ಬಂದಿದೆ. ಹಡೆಯುವದಕ್ಕೆ ಮೊದಲೇ ಗುರುಗಳಿಂದ ಲಿಂಗಧಾರಣೆ ಹೊಂದಿದ ಸೌಂದರ ನಾಚಯ್ಯನ ಧರ್ಮ ಪತ್ನಿಯು ಮೊದಲು ಹುಟ್ಟಿದ ಕೂಸಿಗೆ ಲಿಂಗಧಾರಣೆ ಮಾಡಿ ಮೊಲೆಯುಣ್ಣಿಸಿದಳು. ಮುಂದೆ ಅಲ್ಪಾವಧಿಯಲ್ಲಿಯೇ ಮತ್ತೊಂದು ಕೂಸು ಹುಟ್ಟಿತು. ಆಗ ಶಿವಶರಣೆಯಾದ ಆ ತಾಯಿಯು ಲಿಂಧಾರಣವಿಲ್ಲದ ಆ ಕೂಸು ಭವಿಯೆಂದು ಅದಕ್ಕೆ ಮೊಲೆಯುಣ್ಣಿಸಲು ನಿರಾಕರಿಸಿದಳು. ಈ ಬಗ್ಗೆ ಶಿವಾನುಭವ ಮಂಟಪದಲ್ಲಿ ವಾದ ವಿವಾದಗಳು ನಡೆದು ಕೊನೆಗೆ ಪ್ರಭುದೇವರು ಆ ಕೂಸಿಗೆ ಲಿಂಗಧಾರಣ ಮಾಡಿಸಿದಾಗಲೇ ಆ ತಾಯಿಯು ಮಗುವಿಗೆ ಮೊಲೆ ಕುಡಿಸಿದಳೆಂಬ ಸಂಗತಿಯು ಶರಣರ ಚರಿತ್ರೆಯಲ್ಲಿ ಬಂದಿರುವದು.

ಈ ರೀತಿಯಾಗಿ ಲಿಂಗಧಾರಣೆ ಮಾಡಿಕೊಳುವವರು ವಿರಳ. ಹುಟ್ಟಿದಬಳಿಕ ಮಾತ್ರ ಎಲ್ಲರೂ ತಪ್ಪದೇ ಮಾಲಿನ್ಯವನ್ನು ಕಳೆಯುವದಕ್ಕಾಗಿ ಮಠಪತಿಯನ್ನು ಮತ್ತು ಲಿಂಗಧಾರಣ ಮಾಡುವ ಸಲುವಾಗಿ ಹಿರಿಯ ಮಠದವರನ್ನೂ ಕರೆದುಕೊಂಡು ಹೋಗುವ ಸತ್ ಸಂಪ್ರದಾಯವು ಹಳ್ಳಿಪಟ್ಟಣಗಳಲ್ಲಿ ನಡೆಯುತ್ತಲಿದೆ.

ಗುರುಗಳ ಧೂಳಿಪಾದೋದಕದಿಂದ ಮನೆಯನ್ನು ಶುದ್ಧಮಾಡಿ ಮಠದಯ್ಯನವರಿಂದ ಲಿಂಗಧಾರಣೆ ಮಾಡಿಸಿಕೊಂಡ ಮರುದಿನವೇ ಅವರು ಲಿಂಗವನ್ನು ಬಿಟ್ಟುಬಿಡುವರು

ಹುಟ್ಟಿದಾಗ ಮಾತ್ರ ಅಂಗಕ್ಕೆಲಿಂಗಸಂಬಂಧವಾಗುವದುನಿಜ. ಮುಂದೆ ಸಾಯುವ ತನಕ ಕೆಲವರಿಗೆ ಅಂಗಕ್ಕೂಲಿಂಗಕ್ಕೂಸಂಬಂಧವೇ ಇರುವದಿಲ್ಲ. ಇದು ವಿಷಾದದ ಸಂಗತಿಯು. ಆದರೆ ಅನೇಕ ಲಿಂಗನಿಷ್ಠೆಯುಳ್ಳ ಸದ್ಭಕ್ತರು ತಪ್ಪದೇ ಲಿಂಗವಧರಿಸಿ ಅರ್ಚನಾದಿಕ್ರಿಯೆಗಳನ್ನು ಮಾಡುತ್ತಿರುವರು.

ಶಿಲ್ಪಶಾಸ್ತ್ರದಲ್ಲಿಹೇಳಿದ ಸರ್ವಗುಣಗಳಿಂದಲೂ, ಪಂಚಸೂತ್ರಗಳಿಂದಲೂ, ಒಪ್ಪು ರುವ ಲಿಂಗವನ್ನು ಪಂಚಗವ್ಯಸ್ನಾನ, ಜಲಾಧಿವಾಸ, ಧಾನ್ಯಾಧಿವಾಸಗಳಿಂದ ಪರಿಶೋ ಪಂಚಾಮೃತದಿಂದ ಅಭಿಷೇಕ ಮಾಡಿ ಗಂಧ ಪುಷ್ಪ ಧೂಪ ದೀಪಾದಿ ಷೋಡಶೋಪಚಾ ಳಿಂದ ಪೂಜಿಸಿ ಲಿಂಗದ ಪೀಠಾದಿಗಳಲ್ಲಿ ಮಂತ್ರ ಸಂಬಂಧ ಮಾಡಿ ಆ ಲಿಂಗದಲ್ಲಿ ವಿಧ್ಯು ಕಾರ ಶಿವಕಳೆಯನ್ನು ಆವಾಹನಮಾಡಬೇಕು. ಆವಾಹನವೆಂದರೆ ಪ್ರತೀಕದಲ್ಲಿ ಭಾ ನೆಲೆಗೊಳ್ಳುವಂತೆ ಇಷ್ಟದೇವತೆಯನ್ನು ಮಂತ್ರಪೂರ್ವಕವಾಗಿ ಪ್ರಾರ್ಥಿಸುವದು.

ಅವಾಹನಕ್ರಮವೆಂದರೆ ಶಿಷ್ಯನ ಮಸ್ತಕದ ಮೇಲೆ ವಿಭೂತಿಯಿಂದ ಪಂಚದಳ ಕ ವನ್ನು ಬರೆದು ಪಂಚಕೋನಗಳಲ್ಲಿ ನಕಾರಾದಿಯಾಗಿ ಪಂಚಪ್ರಣವಗಳನ್ನೂ, ಮಧ್ಯ ಓಂಕಾರವನ್ನೂ ಬರೆದು, ಕೋಟಿ ಕೋಟಿ ಸೂರ್ಯರ ಬೆಳಗಿಗಿಂತಲೂ ಮಿಗಿಲೆನಿಸಿ, ಗಿನ ಒಬ್ಬುಳಿಯಾಗಿ ಥಳಥಳ ಹೊಳೆವ ಚಿತ್ಕಳೆಯನ್ನು ಧ್ಯಾನಿಸಿ ಆ ಶಿವಕಳೆ "ದೀಪಃ ಪ್ರದೀಪ್ತಾದಿವ" ಒಂದು ದೀಪದಿಂದ ಮತ್ತೊಂದು ದೀಪವನ್ನು ಹೊತ್ತಿಸು ಸಾವಧಾನದಿಂದ ಅಂಕುಶ ಮುದ್ರೆಯಿಂದ ತಂದು ಶಿವಲಿಂಗದಲ್ಲಿ ನೆಲೆಸುವಂತೆ ಮಾಡು

ಜಗದಗಲ, ಮುಗಿಲಗಲ, ಮಿಗೆಯಗಲ, ನಿಮ್ಮಗಲ ಪಾತಾಳದಿಂದತ್ತತ್ತ ಶ್ರೀಚರಣ, ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮುಕುಟ. ಅಗಮ್ಯ, ಅಪ್ರಮಾಣ, ಚರ, ಅಪ್ರತಿಮ,...... ' ಎಂಬ ಬಸವೇಶ್ವರರ ಉಕ್ತಿಯಂತೆ ನಿರಾಕಾರವಾಗಿರ್ದ ತ್ಪರ ಶಿವಚೈತನ್ಯವನ್ನು ಭಾವ, ಮನ, ದೃಷ್ಟಿ ದ್ವಾರಾ ಘೃತಕಾಠಿಣ್ಯನ್ಯಾಯ, ಜಲ ನ್ಯಾಯ, ಜಲ ನ್ಯಾಯದಂತೆ ಸಾಕಾರವಾಗಿರ್ದ ಲಿಂಗವನ್ನು ಶಿಷ್ಯನ ಹಸ್ತದಲ್ಲಿ ದಯ ಲಿಸುವನು. ಗುರು ಶಿರಸ್ಥಲದಿಂದ ತಂದು ಕರಸ್ಥಲಕ್ಕೆ ಕೊಟ್ಟು ಉರಸ್ಥಲದಲ್ಲಿ ಪೂಜಿಸಿ ಪರಸ್ಥಲಕ್ಕೆ ಮುಟ್ಟಲು ಉಪದೇಶಿಸುವನು.

ಶಿವಶರಣರ ಕರಮನ ಭಾವಂಗಳಲ್ಲಿ ಬೆಳಗುವ ಲಿಂಗವೇ ಆಯತ, ಸ್ವಾಯತ ಹಿತವೆಂದೂ, ಇಷ್ಟ, ಪ್ರಾಣ, ಭಾವವೆಂದೂ ಪ್ರಸಿದ್ಧವಾಗಿರುವದು. ಇಷ್ಟಲಿಂಗಪೂ ಮೂರ್ತಿ ಪೂಜೆಯಲ್ಲ. ಶ್ರುತಿಯು " ಬ್ರಹ್ಮಣಃ ತ್ರಿಣಿರೂಪಾಣಿ ಸಕಲಂ ಸಕಲ ನಿಷ್ಕಲಂ ಚೇತಿ " ಎಂದು ಹೇಳುವದು.

ಇಷ್ಟಲಿಂಗವು ಸಕಲ ರೂಪ, ಪ್ರಾಣಲಿಂಗವು ಸಕಲ ನಿಷ್ಕಲರೂಪ, ಭಾವಲಿಂಗವು ರೂಪವೆಂದೂ ಹೇಳುವರಲ್ಲದೆ ನಿಷ್ಕಲ ಸ್ವರೂಪವಾದ ಭಾವಲಿಂಗವು ಸನ್ನಿಹಿತವ ಸಕಲ ನಿಷ್ಕಲ ಸ್ವರೂಪವಾದ ಪ್ರಾಣಲಿಂಗವು ಸ್ವಾಯತವೆಂದೂ, ಸಕಲರೂಪ ಲಿಂಗವು ಆಯತವೆಂದೂ ವಚನವಾಙ್ಮಯದಲ್ಲಿ ಉಲ್ಲೇಖವಿದೆ.

ನಿರಾಕಾರವನ್ನು ಸಾಕಾರ ಮಾಡಿ ಕರುಣಿಸಿದ, ಅಮೂರ್ತವನ್ನು ಮೂರ್ತ ದಯವಾಲಿಸಿದ, ಹಿಡಿಯಲಿಕ್ಕೆ ಬಾರದುದನ್ನು ಹಿಡಿಯಲಿಕ್ಕೆ ಬರುವಂತೆ ಅನುಗ್ರ ಶ್ರೀ ಗುರುವಿನ ಬಗ್ಗೆ ತೋಂಟದಸಿದ್ಧಲಿಂಗಶಿವಯೋಗಿಗಳು—

" ಬಯಲ ಮೂರ್ತಿಯ ಮಾಡಿ ಎನ್ನ ಕರಸ್ಥಲಕ್ಕೆ ಕೊಟ್ಟನಯ್ಯ ಶ್ರೀಗುರು. ಬಯಲ ಮೂರ್ತಿಯ ಅಮೂರ್ತಿಯ ಮಾಡಿ ಎನ್ನ ಪ್ರಾಣದೊಳಗಿರಿಸಿದ ನಯ್ಯ ಶ್ರೀಗುರು, ಇದು ಕಾರಣ ಎನ್ನ ಕರಸ್ಥಲ, ಮನಸ್ಥಲ, ಭಾವಸ್ಥಲ ದಲ್ಲಿ ಧರಿಸಿ ನಾನು ಅಂಗಲಿಂಗಸಂಬಂಧಿಯಾದೆನಯ್ಯ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ "

ಎಂಬ ವಚನದಲ್ಲಿ ಹೇಳಿರುವರು.

ಲೋಕದಲ್ಲಿ ನಡೆಯುವ ವಿವಿಧ ಮಹೋತ್ಸವಗಳಲ್ಲಿ, ವಿವಾಹ ಮಹೋತ್ಸವವೇ ಬಹಳ ದೊಡ್ಡದು. ವರನಿಗೆ ಒಪ್ಪುವಂತಹ ಕನ್ಯೆಯನ್ನು, ಕನ್ಯೆಗೆ ಒಪ್ಪುವಂತಹ ವರನನ್ನು ಮೇಳೈಸಿ ಮೊದಲು ನಿಶ್ಚಯ ಕಾರ್ಯ ಮಾಡುವರು,

" ವೃಣೇಧ್ವಂ, ಪ್ರದಾಸ್ಯಾಮಿ, ಸ್ವೀಕರಿಸಿರಿ, ಕೊಡುವೆನು ಎಂದು ಕನ್ಯಾಪಿತೃವು ಹೇಳಿ ಕನ್ಯಾದಾನ ಮಾಡುವದೂ, " ಪುತ್ರಾರ್ಥ ಸ್ವೀಕೃತಾಮಯಾ " ಎಂದು ವರನ ಪಕ್ಷದವರು ಹೇಳುವದೂ ನಡೆದು ಕೊನೆಯಲ್ಲಿ ಹಿಡಿತುಂಬ ಸಕ್ಕರೆಯನ್ನು ಪರಸ್ಪರರ ಬಾಯಲ್ಲಿ ಹಾಕಿ ಮುಗಿಸುವರು. ನಿಶ್ಚಯ ಕಾರ್ಯವನ್ನು ಸಂಕ್ಷಿಪ್ತದಲ್ಲಿ ಮುಗಿಸಿದಂತೆ, ಲಗ್ನ ಸಮಾರಂಭ ವನ್ನು ಸಂಕ್ಷಿಪ್ತವಾಗಿ ಮುಗಿಸಲಿಕ್ಕೆ ಬರುವದಿಲ್ಲ. ಲಗ್ನ ಸಮಾರಂಭದಲ್ಲಿ ಪಂಚ ಕಲಶ ಸ್ಥಾಪನೆ, ಸುರಗಿ ಸುತ್ತುವದು, ಮಾಂಗಲ್ಯಧಾರಣ, ಕಂಕಣಧಾರಣ, ಅಕ್ಷತಾರೋಪಣ, ಬಾಸಿಂಗ ಧಾರಣ ಮುಂತಾದ ವಿವಿಧ ಕಾರ್ಯಕ್ರಮಗಳು ವಿಧಿಪ್ರಕಾರ ನಡೆಯಬೇಕಾಗು ವದು. ಲೌಕಿಕದಲ್ಲಿ ಹೇಗೆ ಒಂದು ಲಗ್ನ ಸಮಾರಂಭವಿದೆಯೋ ಹಾಗೆ ಪರಮಾರ್ಥ ದಲ್ಲಿಯೂ ಒಂದು ಆದರ್ಶಪ್ರಾಯವಾದ ಲಗ್ನವಿದೆ. ಅದು ಲಿಂಗಪತಿಯೊಡನೆ ಶರಣ ಸತಿಯ ಮದುವೆ. ಇದನ್ನೇ ಶ್ರೀಮನ್ನಿಜಗುಣ ಶಿವಯೋಗಿಗಳು-

" ಶರಣ ಸತಿಯ ಮದುವೆಯ ಸಂಭ್ರಮವನು ನೋಡಿರಮ್ಮ ।
ಪರಮಾನಂದ ಪಯೋನಿಧಿಯೊಳಗೋಲಾಡಿರಮ್ಮ ॥

ಎಂದು ಮಾರ್ಮಿಕವಾಗಿ ಹಾಡಿರುವರು. ಲೌಕಿಕರು ಮಾಡುವ ವಿವಾಹದಲ್ಲಿ ನಿಶ್ಚಯ ಕಾರ್ಯ, ಹಾಗೂ ಲಗ್ನ ವಿಧಿಗಳಿದ್ದಂತೆ, ಲಿಂಗ ಪತಿ ಶರಣ ಸತಿಯ ವಿವಾಹದಲ್ಲಿ ಹುಟ್ಟಿ ದಾಗ ಮಾಡುವ ಲಿಂಗಧಾರಣೆಯು ನಿಶ್ಚಯಕಾರ್ಯವಿದ್ದಂತೆ, ಲಿಂಗದೀಕ್ಷೆಯು ಲಗ್ನ ವಿದ್ದಂತೆ.

ಸ್ಮೃತ್ಯಾದಿಗ್ರಂಥಗಳಲ್ಲಿ ಗರ್ಭದಾನ ಮೊದಲ್ಗೊಂಡು ಔರ್ಧ್ವದೇಹಿಕವೆಂಬ ಕೊನೆ ಯದಾದ ಷೋಡಶ ಸಂಸ್ಕರಗಳ ವರೆಗಿನ ಎಲ್ಲ ಸಂಸ್ಕಾರಗಳ ಗೂಢ ವಿವೇಚನೆಯು ಬಂದಿ ರುವದು. ಸಂಸ್ಕಾರ ಎಂಬ ಶಬ್ದಕ್ಕೆ " ಸಮ್ಯಕ್ ಕರೋತೀತಿ ಸಂಸ್ಕಾರಃ " ಸಮ್ಯಕ್ ಕ್ರೀಯತೇ ಅನೇನ ಇತಿ ಸಂಸ್ಕಾರಃ " ಎಂದು ಇಬ್ಬಗೆಯಾಗಿ ವ್ಯುತ್ಪತ್ತಿ ಮಾಡಬಹುದು. ಸಾಮಾನ್ಯವಾದ ಒಂದು ಪದಾರ್ಥವನ್ನು, ಹಲವಾರು ವಿಶಿಷ್ಟ ಕ್ರಿಯೆಗಳಿಂದ ಅತ್ಯಮೂಲ್ಯ ಬೆಲೆಯುಳ್ಳದ್ದನ್ನಾಗಿ ಮಾಡುವದೋ ಅಥವಾ ಯಾವುದಾದರೊಂದು ಸಾಧಾರಣ ವಸ್ತುವು ಸಹ ಅಸಾಧಾರಣ ಸಾಧನೆಯಿಂದ, ಅಪೂರ್ವ ವಸ್ತುವಾಗಿ ಮಾಡಲ್ಪಡುವದೋ ಅದೇ ಸಂಸ್ಕಾರವೆಂದು ಹೇಳಬಹುದು.

ಹತ್ತಿ – ಮಲಮಲ ಅರಿವೆ, ಉಣ್ಣೆ – ಉಲ್ಲನ ಅರಿವೆ, ಗೋಮಯ - ವಿಭೂತಿ, ಬಿದಿರು - ಹಾಳಿ, ಗಂಧದ ಕಟ್ಟಿಗೆ – ಗಂಧದ ಎಣ್ಣೆ, ಜಲ - ವಿದ್ಯುತ್ತು, ಕುಂಬಳಕಾಯಿ - ತಂಬೂರಿ, ಕಬ್ಬು – ಸಕ್ಕರಿ. ಹೀಗೆ ಲೌಕಿಕದಲ್ಲಿ ಸಾಮಾನ್ಯ ವಸ್ತುಗಳು ಮಾಂತ್ರಿಕ, ತಾಂತ್ರಿಕ, ಯಾಂತ್ರಿಕ ಸಾಧನೆಗಳಿಂದ ಶ್ರೇಷ್ಠವೆನಿಸಿ, ಪೂಜ್ಯವೆನಿಸಿ, ಅತ್ಯುಪಯುಕ್ತವೆನಿಸಿ ಮೆರೆಯುತ್ತವೆ.

ಆಣವಾದಿ ಮಲತ್ರಯಗಳಿಂದ ಮಲಿನನಾದ, ಕಾಮಾದಿ ಷಡ್ರಿಪುಗಳಿಂದ ಬಂಧಿತನಾದ ಜೀವನು ಪರಿಶುದ್ಧನಾಗಬೇಕಾದರೆ ಸಂಸ್ಕಾರವು ಬೇಕೇಬೇಕು. ಮೇಲ್ಕಾಣಿಸಿದ ಷೋಡಶ ಸಂಸ್ಕಾರಗಳಲ್ಲಿ ಉಪನಯನ ಸಂಸ್ಕಾರವು ಅತೀವ ಮಹತ್ವದ್ದು. "ಉಪ ಅಂದರೆ ಸಮೀಪಕ್ಕೆ, ನಯನ ಅಂದರೆ ಮುಟ್ಟಿಸುವದು." ಯಾವ ಸಂಸ್ಕಾರವು ದೂರದಲ್ಲಿದ್ದ ಜೀವನನ್ನು ದೇವನ ಸಾನಿಧ್ಯಕ್ಕೆ ಒಯ್ದು ಮುಟ್ಟಿಸುವದೋ ಅದೇ ಉಪನಯನ ಸಂಸ್ಕಾರ ಎಂದು ಹೇಳಲ್ಪಡುವದು. ಈ ಉಪನಯನ ಸಂಸ್ಕಾರವನ್ನು ಪ್ರಾಕೃತರಾದ ದ್ವಿಜರು ತಮ್ಮ ವಟುವಿಗೆ ೮ ನೇ ವರ್ಷದಲ್ಲಿ ಮಾಡುವರು. ಆದರೆ ಅಪ್ರಾಕೃತರಾದ ವೀರಶೈವರು ಮಗುವು ಹುಟ್ಟಿದಾಗಲೇ ಆ ಕೂಸಿಗೆ ಲಿಂಗಧಾರಣ ಮಾಡುವರು. ದೂರದಲ್ಲಿದ್ದ ಮುಮುಕ್ಷುವನ್ನು ಉಪನಯನ ಸಂಸ್ಕಾರವು ದೇವನಸಾನಿಧ್ಯಕ್ಕೆ ಒಯ್ಯುತ್ತಿದ್ದರೆ, ದೀಕ್ಷಾಸಂಸ್ಕಾರವು ಜೀವನನ್ನು ದೇವನನ್ನಾಗಿ ಮಾಡುತ್ತದೆ. ದೇವ ಸಾನಿಧ್ಯ ಬೇರೆ, ದೇವನೇ ತಾನಾಗುವದು ಬೇರೆ,

" ಲಿಂಗಧಾರಣಮಾತ್ರೇಣ ಶಿವತ್ವಪ್ರಾಪ್ತಿರೇವಹಿ "

ಎಂದು ಪರಮೇಶ್ವರಾಗಮವು ಉದ್ಘೋಷಿಸುವದು.

ಈ ದೀಕ್ಷಾಸಂಸ್ಕಾರದಿಂದಲೇ ಮಾನವನು ಮಾನವನಾಗಿ ಉಳಿಯದೆ, ದಾನವನಾಗಿ ಬೆಳೆಯದೆ ಮಹಾಮಾನವನಾಗುವನು. ಸಂಸ್ಕಾರದಿಂದಲೇ ನರನು ಹರನಾಗುವನು. ವಾಯುಪ್ರಾಣಿಯು ಲಿಂಗಪ್ರಾಣಿಯಾಗುವದು, ನರನು ಹರನಾಗುವನು, ಸಂಸ್ಕಾರ ದಿಂದಲೇ ಮಾಂಸಪಿಂಡವಳಿದು ಮಂತ್ರ ಪಿಂಡವಾಗುವದು. ಗರ್ಭಸ್ಥ ಶಿಶುವಿಗೆ, ಅಥವಾ ಹುಟ್ಟಿದ ಮಗುವಿಗೆ ಲಿಂಗಧಾರಣ ಮಾಡಬೇಕೆಂಬ ವಿಧಿಗೂ, ಹುಟ್ಟಿದ ಬಳಿಕ ಯಾವ ಸಂಸ್ಕಾರವಿಲ್ಲದೆ ಎಂಟು ವರ್ಷಗಳ ನಂತರ ಮೌಂಜೀ ಬಂಧನ ಮಾಡಬೇಕೆಂಬ ವಿಧಿಯುಳ್ಳ ಉಪನಯನ ಸಂಸ್ಕಾರಕ್ಕೂ ಅಜಗಜಾಂತರವಿದೆ.

ತಂದೆ ತಾಯಿಗಳಾದ ಮಾದರಸ ಮಾದಲಾಂಬಿಕೆಯರು, ನಂದೀವ್ರತದಿಂದ ಹುಟ್ಟಿದ ಬಾಲಬಸವನು ಮೊಲೆ ಹಾಲು ಕುಡಿಯದೇ ಕಣ್ಣು ಮುಚ್ಚಿ ಮಲಗಿಕೊಳ್ಳಲು ಮುದ್ದು ಮಗುವು ಎಲ್ಲಿ ಕೈಬಿಟ್ಟು ಹೋಗುವದೋ ಎಂದು ಅಳಹತ್ತಿದರು. ಅದೇ ದಿನ ಕೂಡಲ ಸಂಗಮದಿಂದ ಬಾಗೇವಾಡಿಯ ಶಿವಾಲಯಕ್ಕೆ ಬಂದಿದ್ದ ಜಾತವೇದಮುನಿಗಳು ಮಾದರಸರ ಮನೆಗೆ ಬಂದು ತಮ್ಮ ಜೋಳಿಗೆಯಲ್ಲಿದ್ದ ವಿಭೂತಿಯನ್ನು ಮಗುವಿನ ಹಣೆಗೆ ಹಚ್ಚಿ ಲಿಂಗಧಾರಣ ಮಾಡಿಕೊಡರು. ಮುಂದೆ ತಾಯಿತಂದೆಗಳು ಆ ಬಾಲನಿಗೆ ೮ ವರ್ಷ ತುಂಬಲು ತಮ್ಮ ಕುಲದಂತೆ ಮೌಂಜಿಯನ್ನು ಮಾಡಬೇಕೆಂದು ಗೊತ್ತು ಮಾಡಿದರು

ಆದರೆ ಬಾಲಬಸವನಿಗೆ ಲಿಂಗಧಾರಣ ಮಾಡಿದ್ದು, ಗೋತ್ರಾದ ಮೂಲಕ ಅವನು ಜನಿವಾರವನ್ನು ಹಾಕಿಕೊಳ್ಳಲಿಕ್ಕೆ ಒಪ್ಪಲಿಲ್ಲ. ಪುರೋಹಿತರೂ, ಮಾತಾಪಿತೃಗಳೂ, ಏನು ಹೇಳಿದರೂ ಕೇಳದೆ ದಿಟ್ಟತನದಿಂದ ಆ ಮುಂಜಿಯ ಮಂಟಪವನ್ನು ಬಿಟ್ಟು ಸಂಗಮಕ್ಕೆ ತನ್ನ ಗುರುಗಳ ಹತ್ತಿರ ಹೊರಟುಹೋದನು.

"ಮಣ್ಣು ಮಡಕೆ ಮಣ್ಣಾಗದು ಕ್ರೀಯಳಿದು ;
ಬೆಣ್ಣೆ ಕರಗಿ ತುಪ್ಪವಾಗಿ ಮರಳಿ ತುಪ್ಪ ಬೆಣ್ಣೆಯಾಗದು ಕ್ರೀಯಳಿದು ;
ಹೊನ್ನು ಕಬ್ಬುನವಾಗದು ಕ್ರೀಯಳಿದು ;
ಮುತ್ತು ನೀರಲ್ಲಿ ಹುಟ್ಟಿ ಮತ್ತೆ ನೀರಾಗದು ಕ್ರೀಯಳಿದು ;
ಕೂಡಲ ಸಂಗನ ಶರಣನಾಗಿ ಮರಳಿ ಮಾನವನಾಗನು ಕ್ರೀಯಳಿದು" ॥

"ಪೂರ್ವ ಜನ್ಮ ನಿವೃತ್ತಿಯಾಗಿ ಗುರು ಕರುಣೆವಿಡಿದವರಿಗೆ
ಬಂಧನವದೆಲ್ಲಿಯದೋ ?
ಭವಬಂಧವೆಲ್ಲಿಯದೊ ?
ಸಂಕಲ್ಪ ವಿಕಲ್ಪವೆಂಬ ಸಂದೇಹ ಕಳೆದುಳಿದವರಿಗೆ,
ಕೂಡಲಸಂಗಮದೇವನ ತ್ರಿಸಂಧ್ಯಾಕಾಲದಲ್ಲಿ
ಮಾಣದೇ ನೆನೆವಂಗೆ ?

ಎಂಬ ವಚನಗಳು ಶಿವದೀಕ್ಷಾ ಸಂಸ್ಕಾರವನ್ನು ಹೊಂದಿದ ಶರಣನ ಘನತೆಯನ್ನು ಹೇಳುತ್ತವೆ. ಗುರುಕರುಣೆಯನ್ನು ಪಡೆದ ಗುರುಸುತ ಪಡೆಯದ ನರಸುತ ಈ ಇಬ್ಬರಲ್ಲಿಯ ವೈಷಮ್ಯವನ್ನು ಮೈಲಾರದ ಬಸವಲಿಂಗ ಶರಣರು–

"ನರ ಸುತ ಗುರು ಸುತರೀರ್ವರ ಚರಿತೆಯ
ನರಿದು ಜನರು ವಿಚಾರಿಪುದು ॥
ಸಪ್ತ ವ್ಯಸನಗಳ ಚಿತ್ತದಿಕಾಮಿಸಿ ।
ಗುಪ್ತಪಾತಕಸಹ ನರಸುತನು ॥
ಸಪ್ತವಿಧದ ಸದುಭಕ್ತಿಯೊಳಗೆಲೋ ।
ಲುಪ್ತನೆನಿಸುತಿಹ ಗುರುಸುತನು ॥
ಧರೆಯೊಳಹಂಕಾರ ಮಮಕಾರಗಳಿಂ ।
ಬೆರೆಡರೊಳಿರುತಿಹ ನರಸುತನು ।
ಶರಣನೆ ಸತಿ ಶಿವಲಿಂಗವೆ ಪತಿ ಎಂ ।
ಬೆರಡರರುವಿನೊಳಿಹ ಗುರುಸುತನು"

ಎಂಬ ಪದ್ಯದಲ್ಲಿ ಗುಣ ಧರ್ಮಗಳ ಮೂಲಕ ವಿವರಿಸಿ ಹಾಡಿರುವರು.

"ದೀಯತೇಚ ಶಿವಜ್ಞಾನಂ ಕ್ಷೀಯತೇ ಪಾಶಬಂಧನಂ ।
ದೀಯತೇ ಕ್ಷೀಯತೇಯಸ್ಮಾತ್ ದೀಕ್ಷೇತೀಯಂ ನಿಗದ್ಯತೇ" ॥
"ಅನ್ವಯೋಃ ಶಾಸನೇ ಸಿದ್ಧಾ ದೀಕ್ಷಾ ಕ್ಷಪಣ ದಾನಯೋಃ"

ಎಂಬ ಸಿದ್ಧಾಂತಶಿಖಾಮಣಿ ಮತ್ತು ಆಗಮಕಾರರ ಉಕ್ತಿಯಂತೆ ಯಾವ ಪರ... ಪರಿಪೂರ್ಣ ಮಹಾಲಿಂಗದ ಸ್ವರೂಪ ತಿಳಿವಲ್ಲಿ ಶ್ರುತಿಯೂ ಮೌನಮುದ್ರೆಯನ್ನು ... ವದೋ ಅಂತಹ ಪರಶಿವನ ನಿಜಸ್ವರೂಪವನ್ನು ತಿಳಿಸಿ, ಜೀವನಿಗೆ ಅಂಟಿಕೊಂಡಿರುವ ... ವಾದಿ ಮಲತ್ರಯಗಳನ್ನೂ, ಸಂಚಿತಾದಿ ಕರ್ಮತ್ರಯಗಳನ್ನೂ ಅಳಿಸಿ ಸ್ವಸ್ವರೂಪದಲ್ಲಿ... ಸುವಂತೆ ಮಾಡುವ ಜ್ಞಾನಕ್ರಿಯಾತ್ಮಕವಾದ ಧಾರ್ಮಿಕ ಸಂಸ್ಕಾರವೇ ದೀಕ್ಷೆಯೆನಿಸುವು... ಈ ದೀಕ್ಷೆಯು ವೇಧಾದೀಕ್ಷೆ, ಕ್ರಿಯಾದೀಕ್ಷೆ, ಮನುದೀಕ್ಷೆ ಎಂದು ಮೂರು ಬಗೆಯು...

ಗುರುಃಸ್ಪೃಶತಿ ಹಸ್ತೇನ ಯಂಯಂ ಪಶ್ಯತಿ ಚಕ್ಷುಷಾ ।
ಶಿವಂ ಭವತಿ ತತ್ಸರ್ವಂ ಗುರೋರೇವ ಪ್ರಸಾದತಃ ॥

ಕರ್ತುಂ, ಅಕರ್ತುಂ, ಅನ್ಯಥಾ ಕರ್ತುಂ ಸಮರ್ಥನಾದ, ಹರನಿಂದಲಧಿಕನೆನಿಪ ಸದ್ಗುರು... ತನ್ನ ಪರುಷಹಸ್ತದಿಂದ ಮುಟ್ಟಿದುದು, ದಿಟ್ಟಿಯಿಂದ ನಿಟ್ಟಿಸಿ ನೋಡಿದುದು ಪಾವನವಾಗುವದು.

"ಕಣ್ಣಿನಿಂದಲೆ ಪುಣ್ಯ । ಕಣ್ಣಿನಿಂದಲೆ ಪಾಪ ।
ಕಣ್ಣಿನಿಂದಿಹವು ಪರವಕ್ಕು । ಲೋಕಕ್ಕೆ ।
ಕಣ್ಣೆ ಕಾರಣವು ಸರ್ವಜ್ಞ ॥
ಕಣ್ಣು ಸಣ್ಣದು ತಾನು ಹಣ್ಣದಿಹುದೊಂದಿಲ್ಲ ।
ತಣ್ಣಗಿಕ ಮನವ ನುರಿಸುವದು । ಇದನು ಕೊಂ ।
ದಣ್ಣಗಳು ಆರು ಸರ್ವಜ್ಞ ॥

ಎಂದು ಸರ್ವಜ್ಞನು ಕಣ್ಣೇ ಇಹಪರಕ್ಕೂ ಸಾಧನವೆಂದು ಬಣ್ಣಿಸಿರುವನು.

ಕಣ್ಣಿದ್ದರಲ್ಲವೇ ಓದು ಬರಹ ಕಲಿತು ಬುದ್ಧಿವಂತರಾಗುವದು ? ಕಣ್ಣಿದ್ದರ... ದೇಶ ವಿದೇಶಗಳಿಗೆ ಪರ್ಯಟನ ಮಾಡುವದು ? ಕಣ್ಣಿದ್ದರಲ್ಲವೇ ಲಿಂಗದಲ್ಲಿ ... ಇಡುವ ತ್ರಾಟಕಯೋಗದಿಂದ–

" ಚಿತ್ತೇ ಚಲತಿ ಸಂಸಾರಃ ನಿಶ್ಚಲೇ ಮುಕ್ತಿರೇವಚ "

ಎಂಬುಕ್ತಿಯಂತೆ ಚಿತ್ತಸ್ಥೈರ್ಯದ ಮೂಲಕ ಮುಕ್ತಿಯನ್ನು ಪಡೆವುದು ? ಕೃಪಾ... ಸ್ನೇಹದೃಷ್ಟಿ, ಮೋಹದೃಷ್ಟಿ, ವಕ್ರದೃಷ್ಟಿ, ಕಾಮದೃಷ್ಟಿ, ದೈನ್ಯದೃಷ್ಟಿ, ವಿಶಾಲ... ಸಂಕುಚಿತ ದೃಷ್ಟಿ ಹೀಗೆ ದೃಷ್ಟಿಯಲ್ಲಿ ಬಗೆಬಗೆಯಾಗಿ ವಿಂಗಡಣೆಯುಂಟು.

ಕೆಟ್ಟ ಕಣ್ಣುಳ್ಳವರ ಕಣ್ಣಿನಿಂದ ಚಿಕ್ಕಚಿಕ್ಕಮಕ್ಕಳಿಗೆ ದೃಷ್ಟಿಯಾಗಬಾರ... ತಾಯಿತ ಕಟ್ಟುವದೂ, ಹುಲಿಯುಗುರ ಕಟ್ಟುವದೂ, ನಯನ ಮನೋಹರವಾಗಿ ... ಸುಂದರ ಮಂದಿರಗಳಿಗೆ ದೃಷ್ಟಿದೋಷ ತಾಕಬಾರದೆಂದು ಅವುಗಳಿಗೆ ಅಕರಾಳ ... ಕರೇಗೊಂಬೆಗಳನ್ನು ನೇತಾಡುವಂತೆ ತೂಗುಹಾಕುವದೂ, ಹಿಂಡುವ ದನಗಳಿಗೆ ... ತಾಗಿ ರಕ್ತಹಿಂಡಹತ್ತಲು ಮಂತ್ರಹಾಕುವದೂ, ಪ್ರಸಾದಹಚ್ಚುವದೂ ಎಲ್ಲ... ಕಂಡುಬರುವದು. ದೋಷ ದೃಷ್ಟಿಯಿದ್ದಂತೆ ಲೇಸಾದ ದೃಷ್ಟಿಯೂ ಒಂದಿದೆ. ... ಕರುಣಾದೃಷ್ಟಿ, ಕೃಪಾದೃಷ್ಟಿ, ಅನುಗ್ರಹದೃಷ್ಟಿ, ದಿವ್ಯದೃಷ್ಟಿ ಎಂದು ಕರೆಯುವರು

ಶ್ರೀ ನಿಜಗುಣ ಶಿವಯೋಗಿಗಳು " ನೋಡಲಾಗದೆ ದೇವ ನೋಡಲಾಗದೆ ।
ಕೂಡೆ ನಿನ್ನ ದಿಟ್ಟಿ ಮೂರು ನಾಡೆ ಲೇಸು ಮಾಡಲೆನ್ನ " ।
ನೋಡುನೀನೆನ್ನ ಪರಿಭವದ ಬಾಧೆಯನು ಕೃಪೆ ।
ಮಾಡು ಬೇಗದೊಳಭಯವಿತ್ತು ಶಂಕರ "

ಇವೇ ಮುಂತಾದ ಪದ್ಯಗಳಲ್ಲಿ ತಮ್ಮ ಆರಾಧ್ಯ ಮೂರ್ತಿಯಾದ ಶಂಭುಲಿಂಗ ಮಹಾನು ಭಾವನ ಮುಂದೆ ಕೈಜೋಡಿಸಿ ಕೃಪಾದೃಷ್ಟಿಗಾಗಿ ಯಾಚನೆ ಮಾಡಿರುವರು. ಈ ನಿಜಗು ಣರೇ ಅನುಭವಸಾರದ ಮೊದಲನೇ ಸಂಧಿಯ ಮೊದಲನೇ ಪದ್ಯದಲ್ಲಿ-

" ಶ್ರೀ ಗುರುವೆ ನಿಜಸುಖದ ಸಾಗರವೆ ತೆರೆ ಮುಸುಗುತಾವಗಂ ಬೆಳಗು
ತಿಹ ನಿನ್ನ ಕಡೆಗಣ್ಣಿಗೀಗೆ ಸಂತಸವನಖಿಳರ್ಗೆ "

ಶ್ರೀ ಗುರುವೇ ನಿನ್ನ ಕೃಪಾದೃಷ್ಟಿಯು ಸಕಲರಿಗೂ ತುಷ್ಟಿ, ಪುಷ್ಟಿಗಳನ್ನೀಯಲಿ ಎಂದು ಪ್ರಾರ್ಥಿಸಿರುವರು. ಗುರುವಿನ ಕೃಪಾದೃಷ್ಟಿಯು ಅತ್ಯಪೂರ್ವವಾದುದು, ಅಗಾಧ ವಾದುದು, ಅವರ್ಣನೀಯುವಾದುದು.

ಸಾಮಾನ್ಯ ಪ್ರಾಣಿಗಳಲ್ಲಿರುವ ವಾತ್ಸಲ್ಯ ದೃಷ್ಟಿಯು ಎಷ್ಟು ಮಹತ್ಕಾರ್ಯವನ್ನು ಮಾಡುತ್ತದೆ ಎನ್ನುವ ಬಗ್ಗೆ –

" ಸುತರಾಮನನ್ಯಶರಣಾಃ ಕ್ಷೀರಾದ್ಯಾಹಾರಮಂತರಾ ।
ಕೇವಲಯಾ ಸ್ನೇಹದೃಶಾಕಚ್ಛಪತನಯಾಃ ಪ್ರಜೀವಂತಿ "

ಎಂಬ ಆರ್ಯೋಕ್ತಿಯು ಪ್ರಮಾಣವಾಗಿದೆ. ಆಮೆಯು ತನ್ನ ಮರಿಗೆ ಗುಟುಕು ಹಾಕುವ ದಿಲ್ಲ ಅಥವಾ ಮೊಲೆ ಕುಡಿಸುವದಿಲ್ಲ. ಆದರೆ ತಾಯಿಯು ತನ್ನ ಮರಿಯನ್ನು ಮಮತೆ ಯ ಕರುಣೆಯ ದೃಷ್ಟಿಯಿಂದಲೇ ನೋಡಿ ಅದುಬದುಕಿ ಬೆಳೆಯುವಂತೆ ಮಾಡುತ್ತದೆ. ಸಾಮಾನ್ಯಪ್ರಾಣಿಯ ದೃಷ್ಟಿಯುಲ್ಲೇ ಇಷ್ಟು ಶಕ್ತಿಯಿರುವಾಗ ಮಾನವನ, ಅದರಲ್ಲಿಯೂ ದೇವಮಾನವನಾದ ಸದ್ಗುರುವಿನ ದೃಷ್ಟಿಯಲ್ಲಿ ಎಂಥ ಸಾಮರ್ಥ್ಯವಿದೆ ಎಂಬುದು ಊಹೆ ಗೂ ನಿಲುಕದಮಾತು.

ಆದ್ಯಶಂಕರಾಚಾರ್ಯರಿಗೆ ತಮ್ಮ ಶಿಷ್ಯವೃಂದದಲ್ಲಿಯ ಹಸ್ತಾಮಲಕನ ಮೇಲೆ ಬಹಳ ಕರುಣೆಯಿತ್ತಂತೆ. ಒಂದು ದಿನ ಬೆಳಿಗ್ಗೆ ಅವನಿಲ್ಲದಿರುವಾಗ ಪ್ರವಚನ ಪ್ರಾರಂಭಿಸಲು ವಿಲಂಬಮಾಡಿದುದಕ್ಕಾಗಿ ಶಿಷ್ಯವೃಂದವು ರೊಚ್ಚಿಗೆದ್ದು ಅವನೇ ನಿಮಗೆ ಮೇಲಾದ ಶಿಷ್ಯ ನೇ ? ನಾವೇನೂ ನಿಮಗೆ ಕಣ್ಣಲ್ಲಿ ಕಾಣುವದಿಲ್ಲವೇ ? ಎಂದು ದಿಟ್ಟತನದಿಂದ ನುಡಿಯಲು ಆಚಾರ್ಯರು ಪ್ರವಚನ ಪ್ರಾರಂಭಿಸಿದರು. ಪ್ರವಚನ ಮುಕ್ತಾಯವಾಗುವ ಸಮಯಕ್ಕೆ ಹಸ್ತಾಮಲಕನು ಬಂದನು.ಆಗ ಆಚಾರ್ಯರು ಆ ಶಿಷ್ಯನನ್ನು ಕೃಪಾದೃಷ್ಟಿಯಿಂದ ನೋಡಿ ಅವನಿಗೆ ಅಖಂಡ ಜ್ಞಾನಾಮೃತವನ್ನು ನೀಡಿ ಕೃತಾರ್ಥನನ್ನಾಗಿ ಮಾಡಿದರು.

ಮೂರು ಬಗೆಯ ದೀಕ್ಷೆಗಳಲ್ಲೊಂದಾದ ವೇಧಾದೀಕ್ಷೆಯಲ್ಲಿ ಭವಬಂಧನದಲ್ಲಿ ಸಿಲ್ಕಿದ ಶಿಷ್ಯನ ಬಂಧವಿಮೋಚನಕ್ಕಾಗಿ ಕರುಣೆಯಿಂದ ನೋಡುವ ಕೃಪಾದೃಷ್ಟಿಗೂ

ಪ್ರಾಕೃತ ಶರೀರಗಳನ್ನು ಅಂದರೆ ಮಲತ್ರಯಾತ್ಮಕ ಶರೀರಗಳನ್ನು ಕಳೆದು ಅಪ್ರಾಕೃ ಶರೀರಗಳನ್ನು ಅಂದರೆ ಲಿಂಗರೂಪಶರೀರಗಳನ್ನು ಮಾಡುವ ಹಸ್ತ ಮಸ್ತಕಸಂಯೋಗಕ್ಕೆ ಪ್ರಾಧಾನ್ಯತೆ ಇರುವದು.

" ಗುರೋರಾಲೋಕ ಮಾತ್ರೇಣ ಹಸ್ತ ಮಸ್ತಕ ಯೋಗತಃ ।
ಯಶ್ಶಿವತ್ವ ಸಮಾವೇಶಃ ವೇಧಾದೀಕ್ಷೇತಿಸಾಮತಾ ॥ "

ಶ್ರೀ ಗುರುವು ಕೃಪಾದೃಷ್ಟಿಯಿಂದ ಶಿಷ್ಯನನ್ನು ನೋಡಿ, ಮಂತ್ರಪೂತವಾದ ತನ್ನ ಹಸ್ತವನ್ನು ಶಿಷ್ಯನ ಮಸ್ತಕದಲ್ಲಿ ಸಂಯೋಜನೆಮಾಡಿ, ಅವನ ಕಾರಣ ತನುವಿಗೆ ಆಣವ ಮಲವನ್ನು ಕಳೆದು ಅಲ್ಲಿ ಭಾವಲಿಂಗವನ್ನು ಸಂಬಂಧ ಮಾಡುವದೇ ವೇಧಾದೀ ಯೆನಿಸುವದು.

ಮೂರು ದೀಕ್ಷೆಗಳಲ್ಲೊಂದಾದ ಮಾಂತ್ರೀ ದೀಕ್ಷೆಯಲ್ಲಿ ಮಂತ್ರೋಪದೇಶ ಪ್ರಾಧಾನ್ಯವಿರುವದು.

" ಮನನಾತ್ತ್ರಾಣನಾಚ್ಚೈವ ಮದ್ರೂಪಸ್ಯಾವ ಬೋಧನಾತ್ ।
ಮಂತ್ರ ಮಿತ್ಯುಚ್ಯತೇ ಬ್ರಹ್ಮನ್ ಮದಧಿಷ್ಠಾನತೋಽಪಿವಾ ॥ "

ಆವುದರ ನೆನಹು ನಮ್ಮನ್ನು ಕಾವುದೋ, ಆವುದು ಪರಾತ್ಪರವೆನಿಸಿದ ಮಹಾಲಿಂಗ ಸ್ವರೂಪವನ್ನು ತಿಳಿಸಿಕೊಡುವದೋ, ಆವುದರಲ್ಲಿ ಶಿವನು ನೆಲೆಸುವನೋ ಅದೇ-ಮಂತ್ರ ವೆಂದು ಹೇಳಲ್ಪಡುವದು.

" ಪರಮಾತ್ಮಾ ಮಹೇಶ್ವರಃ ತಸ್ಯವಾಚಕ ಮಂತ್ರೋಽಯಂ ।
ತಸ್ಯಾಭಿಧಾನ ಮಂತ್ರೋಽಯಮಭಿದೇಯಶ್ಚ ಸಸ್ಮೃತಃ
ಅಭಿಧಾನಾಭಿಧೇಯತ್ವಾತ್ ಮಂತ್ರಾತ್ ಸಿದ್ಧಃ ಪರಃ ಶಿವಃ ।
ನಮಃ ಶಬ್ದಂ ವದೇತ್ಪೂರ್ವಂ ಶಿವಾಯೇತಿ ತತಃ ಪರಂ ॥

ಪಂಚಾಕ್ಷರ ಮಂತ್ರವು ಶಿವನ ವಾಚಕವು. ಶಿವನ ಅಭಿಧಾನವು . ಶಿವನು ಅದರ ಅರ್ಥ ವಾಚ್ಯ ವಾಚಕಗಳಿಗೆ, ಅಭಿಧಾನ ಅಭಿಧೇಯುಗಳಿಗೆ ಅಭೇದವಿರುವಂತೆ ಇಲ್ಲಿಯೂ ಮಂತ್ರ ಹಾಗೂ ಮಂತ್ರಾರ್ಥವೆನಿಸಿದ ಶಿವ ಈ ದ್ವಯದಲ್ಲಿ ಅಭೇದವುಂಟು.

ಪ್ರಣವೇನೈವ ಮಂತ್ರೇಣ ಬೋಧ್ಯತೇ ನಿಷ್ಕಲಶ್ಶಿವಃ ।
ಪಂಚಾಕ್ಷರೇಣ ಮಂತ್ರೇಣ ಪಂಚಬ್ರಹ್ಮತನುಸ್ತಥಾ ॥

ಓಂಕಾರರೂಪ ಪ್ರಣವಮಂತ್ರದಿಂದ ಶುದ್ಧ ಚಿದ್ರೂಪವಾದ ನಿಷ್ಕಲ ಪರಬ್ರಹ್ಮ ಪ್ರಕಾಶನವೂ, ಪಂಚಾಕ್ಷರ ಮಂತ್ರದಿಂದ ಸಕಲ ಬ್ರಹ್ಮನಾದ ಪಂಚಬ್ರಹ್ಮಮಯ ಟ ಪ್ರಕಾಶನವೂ ಉಂಟಾಗುವದು. ಓಂಕಾರವು ಅ-ಉ-ಮ್ ಈ ಮೂರಕ್ಷರಗಳ ಸಂಯು ರೂಪವಾಗಿರುತ್ತದೆ. ಈ ಅಕಾರ, ಉಕಾರ, ಮಕಾರಗಳು ಕ್ರಮವಾಗಿ ಸತ್ತು, ಚಿತ್ತು ಆನಂದ ಇವುಗಳ ವಾಚಕಗಳಾಗಿವೆ. ಸದ್ರೂಪ, ಚಿದ್ರೂಪ, ಆನಂದರೂಪವಾದ ಮಹಾಲಿಂಗ, ನಮಃ ಶಿವಾಯ ಎಂಬ ಪಂಚಾಕ್ಷರ ಮಂತ್ರದಲ್ಲಿರುವ ನಕಾರಾದಿ ಪಂ

ವರ್ಣಗಳು ಕ್ರಮವಾಗಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದ ಲಿಂಗಗಳ ವಾಚಕಗಳಾಗಿ ತದ್ಬೀಜಗಳಾಗಿರುವವು. ಮಹಾಲಿಂಗವು ಆಚಾರಾದಿಲಿಂಗಗಳಿಗೆ ಬೀಜವಾಗಿರುವಂತೆ ಓಂಕಾರವು ಪಂಚಾಕ್ಷರವೆಂಬ ವೃಕ್ಷಕ್ಕೆ ಬೀಜವಾಗಿರುವದು. ಇನಿತಾದ ವಟಬೀಜದ ಘನತೆಯಂತೆ ಎಸೆವ ಈ ಮಂತ್ರವನ್ನು ಗುರುವು ಶಿಷ್ಯನ ಕಿವಿಯಲ್ಲಿ ಉಪದೇಶಿಸುವನು. ಈ ವಿಷಯದಲ್ಲಿ –

ಗುರುಣೋದೀರಿತಾಕರ್ಣೇ ಯಾಸಾ ಮಾಂತ್ರೀತಿ ಕಥ್ಯತೇ ;

ಎಂಬ ಆಗಮ ಪ್ರಮಾಣವುಂಟು. ಪರಿಶುದ್ಧನಾದ ಶಿಷ್ಯನ ಬಲಗಿವಿಯಲ್ಲಿ ಶಿವಪಂಚಾಕ್ಷರೀ ಮಹಾಮಂತ್ರವನ್ನು ಇತರರಿಗೆ ಕೇಳಿಸದಂತೆ ಉಪದೇಶಮಾಡಿ ಆ ಮಹಾಮಂತ್ರದ ಅರ್ಥವನ್ನೂ, ಛಂದಸ್ಸು, ಋಷಿ, ದೇವತೆ, ನ್ಯಾಸಪದ್ಧತಿ ಮುಂತಾದವುಗಳನ್ನೂ ಶಿವಾಗಮೋಕ್ತರೀತ್ಯಾ ತಿಳಿಸಿಕೊಡಬೇಕು.

ಶ್ರೀ ಗುರುವು ತನ್ನ ಬಳಿಯಲ್ಲಿ ಸ್ವಸ್ತಿಕಾಸನದಲ್ಲಿ ಕುಳಿತಿರುವ ಶಿಷ್ಯನಿಗೆ ದೀಕ್ಷಾ ಮಂಟಪದಲ್ಲಿರುವ ಈಶಾನಾದಿ ಪಂಚಕಲಶದಲ್ಲಿರುವ ಪವಿತ್ರ ತೀರ್ಥದಿಂದ ಅಭಿಷೇಕ ಮಾಡಿ ವಿಭೂತಿ ರುದ್ರಾಕ್ಷಿಗಳನ್ನು ಧರಿಸಿ ಪಾದಾಂಗುಷ್ಠದಿಂದ ಮಸ್ತಕಾಗ್ರದವರೆಗೆ ಅಂದರೆ ಪಾದದಿಂದ ಜಾನು, ಜಾನುವಿನಿಂದ ತೊಡೆ, ತೊಡೆಯಿಂದ ಉದರ, ಉದರದಿಂದ ಕಂಠ, ಕಂಠದಿಂದ ಮಸ್ತಕ ಈ ಐದು ಸ್ಥಾನಗಳಲ್ಲಿ, ಪೃಥ್ವ್ಯಾದಿ ಪಂಚತತ್ವಗಳ ಪ್ರಣವ ಳೆನಿಸಿದ ನಕಾರಾದಿ ಪ್ರಣವಗಳನ್ನು ಸಂಬಂಧ ಮಾಡಬೇಕು. ಇಲ್ಲವೆ–

“ ಓಂಕಾರೋವದನಂ ದೇವಿ ನಮಃಕಾರೌ ಭುಜದ್ವಯಂ ।
ಶಿಕಾರೋ ದೇಹಮಧ್ಯಸ್ತು ವಾಯುಕಾರೌ ಪದದ್ವಯಂ ॥

ಎಂಬ ಆಗಮೋಕ್ತಿಯಂತೆ ಮುಖಾದಿ ಸ್ಥಾನಗಳಲ್ಲಿ ಓಂಕಾರಾದಿ ಪ್ರಣವಗಳನ್ನು ಸಂಬಂಧಿಸಬೇಕು. ಹೀಗೆ ಮಂತ್ರ ಸಂಬಂಧದಿಂದ ಶಿಷ್ಯನ ಮಾಂಸಪಿಂಡವಳಿದು ಮಂತ್ರಪಿಂಡವಾಗುವದು. ಹೀಗೆ ಸರ್ವಾಂಗಕ್ಕೂ ಪ್ರಣವ ಸಂಬಂಧಮಾಡಿ ಲಿಂಗಾಂಗ ಸಾಮರಸ್ಯಬೋಧಕವಾದ ಮಹಾ ಮಂತ್ರವನ್ನು ಗೌಪ್ಯವಾಗಿ ಶಿಷ್ಯನ ಬಲಗಿವಿಯಲ್ಲಿ ಉಪದೇಶಿಸಬೇಕು.

ವೇಧಾದೀಕ್ಷೆಯಲ್ಲಿ ಕೃಪಾದೃಷ್ಟಿಯ ಅವಲೋಕನ, ಹಸ್ತಮಸ್ತಕ ಸಂಯೋಗಗಳಿಗೂ, ಮಾಂತ್ರೀ ದೀಕ್ಷೆಯಲ್ಲಿ ಮಂತ್ರೋಪದೇಶಕ್ಕೂ ಪ್ರಾಶಸ್ತ್ಯವಿದ್ದರೆ ಕ್ರಿಯಾದೀಕ್ಷೆಯಲ್ಲಿ ಶುಭಮುಹೂರ್ತಾವಲೋಕನ, ಪಂಚಕಲಶಸ್ಥಾಪನ, ದೀಕ್ಷಾಮಂಟಪ ನಿರ್ಮಾಣ,ವಿಭೂತಿ ಧಾರಣ, ರುದ್ರಾಕ್ಷಿಧಾರಣ, ಕಂಕಣಧಾರಣೆ ಮುಂತಾದ ವಿವಿಧಕಾರ್ಯಕಲಾಪಕ್ಕೆ ಪ್ರಾಧಾನ್ಯತೆಯುಂಟು.

“ಕ್ರಿಯೆ ಬಹಿರಿಷ್ಟಲಿಂಗಮುಮಳ್ಳಾಂತ್ರಲಿಂಗಮೆ ಮಂತ್ರಮಾದ್ವಿಧಾ ।
ಶ್ರಯ ಘನ ಭಾವಲಿಂಗಮೆ ಮಹತ್ತರ ಯೋಗಮಿದಂ ಕಳೇವರ ।
ತ್ರಯದೊಳಮರ್ಚಿ ಸದ್ಗುರು ಕೃಪಾನಿಧಿ ಮಾಡಿದ ದೀಕ್ಷೆಯರ್ಥನಿ ।
ರ್ಣಯಮನುಪಾಯದಿಂ ತಿಳಿದೊಡಾತನೆ ಮುಕ್ತನಲಾ ಶಿವಾಧವಾ ॥

ಕರುಣಾನಿಧಿಯಾದ ಶ್ರೀಗುರುವು ಸ್ಥೂಲ ಶರೀರದಲ್ಲಿ ಇಷ್ಟಲಿಂಗವನ್ನು ಧಾರಣ ಮಾಡು ವದೇ ಕ್ರಿಯಾದೀಕ್ಷೆಯು. ಸೂಕ್ಷ್ಮಶರೀರದಲ್ಲಿ ಪವಿತ್ರ ಪ್ರಾಣಲಿಂಗ ಸಂಬಂಧ ಮಾಡುವ ಮಂತ್ರದೀಕ್ಷೆಯು. ಕಾರಣ ಶರೀರದಲ್ಲಿ ಇಷ್ಟಪ್ರಾಣಲಿಂಗಗಳಿಗಾಶ್ರಯವಾದ ಭಾವ ವನ್ನು ನೆಲೆಗೊಳಿಸುವದೇ ವೇಧಾದೀಕ್ಷೆಯು. ಹೀಗೆ ಮಗ್ಗೆಯಮಾಯಿದೇವರು ತಮ್ಮ ಶಿವಾಧವಶತಕದಲ್ಲಿ ತ್ರಿವಿಧದೀಕ್ಷೆಗಳ ವಿವರವನ್ನು ಬಹಳೇ ಮಾರ್ಮಿಕವಾಗಿ ಹೇಳಿರುವ

ಆಚಾರ್ಯನು ಈ ದೀಕ್ಷೆ ಮಾಡುವಮುನ್ನ ಶಿಷ್ಯನಲ್ಲಿ ಶಕ್ತಿಪಾತ ಚಿಹ್ನೆಗಳನ್ನು ನೋಡಿ ಉಪದೇಶಿಸಬೇಕು. ಶಕ್ತಿಪಾತ ಚಿಹ್ನವೆಂದರೆ ಅನುಗ್ರಹಶಕ್ತಿಯ ಬೀಳು ಅದರ ಮುಂಗುರುತುಗಳನ್ನು ನೋಡಬೇಕು. ಅನುಗ್ರಹಶಕ್ತಿಯು ಅತ್ಯದ್ಭುತವಾದುದು

> " ತುಂಬಿಯ ಶಕ್ತಿಪಾತ ಗುಣದಿಂ ಪುಳುತುಂಬಿಯುದಾಯ್ತೊ ತನ್ನಭಾ।
> ವಂ ಬಲಿದಾಯ್ತೊ ತುಂಬಿ ಪುಳುವಂ ಪಿಡಿದೊಯ್ದುದೊ ತಾನೆಪೋದುದೊ।
> ಬೆಂಬಳಿಗೊಂಡು ನೋಳ್ಪೊಡೆಯನುಗ್ರಹ ಶಕ್ತಿಯೆ ಮುಕ್ತಿಕಾರಣಂ।
> ನಂಬುಗೆಯೆಂಬುದೇನು ? ಪರಮಪ್ರಭುವೇ ಮಹದೈಪುರೀಶ್ವರ॥

ಹೂವಿನಿಂದ ಹೂವಿಗೆ ಹಾರಿ ಮಕರಂದ ಹೀರುವ ತುಂಬಿಯು ತನ್ನ ಶಕ್ತಿಯನ್ನು ಕೊಟ್ಟು ಕೀಡೆಯನ್ನು ಭ್ರಮರವನ್ನಾಗಿ ಮಾಡುತ್ತಿರುವಾಗ ದೈವೀ ಶಕ್ತಿಯು, ಜೀವನನ್ನು ದೇವನನ್ನಾಗಿ ಮಾಡಲಾರದೇ ?

ತುಂಬಿಯು ತಾನೇ ಹುಡುಕಿ ಹುಳುವನ್ನು ಹಿಡಿದುತಂದು ಆ ಹುಳದಲ್ಲಿ ತನ್ನ ಶಕ್ತಿ ತುಂಬಿ ಆ ಹುಳವನ್ನು ತನ್ನಂತೆ ದುಂಬಿಯನ್ನಾಗಿ ಮಾಡಿಕೊಳ್ಳುವದಲ್ಲದೆ ಆ ಹುಳ ದರೂ ತುಂಬಿಯಾಗಬೇಕೆಂಬ ಹಂಬಲದಿಂದ ತುಂಬಿಯು ಬೆಂಬತ್ತಿತೇ ? ತುಂಬಿಯೇ ವನ್ನು ಹುಡುಕಿ ಹಿಡಿದೊಯ್ದಿತಲ್ಲದೆ ಹುಳವೇನಾದರೂ ತುಂಬಿಯಿದ್ದಲ್ಲಿಗೆ ಹೋಯಿ ಗುಬ್ಬಿ ಕಾಗೆಗಳ ಬಾಯ್ಗೆ ತುತ್ತಾಗಿ ಹೋಗುವ ಹಸಿರು ಕೀಡೆಯು ಗಗನದಲ್ಲಿ ಹಾರ ದುಂಬಿಯ ಶಕ್ತಿಪಾತದಿಂದ ತಾನೂ ಗಗನದಲ್ಲಿ ಹಾರಾಡಿ ಪಾರಿಜಾತಾದಿ ಕುಸುಮಗ ಮಳ ಕುಡಿವ ಭ್ರಮರವಾಗಲಿಲ್ಲವೇ ?

ಹುಳವು ಭ್ರಮರವಾಗಲಿಕ್ಕೆ ಅದರ ಪ್ರಯತ್ನ ಕಾರಣವಿರದೆ ದುಂಬಿಯ ಶಕ್ತಿ ವೊಂದೇ ಮುಖ್ಯ ಕಾರಣವಾದಂತೆ, ಪರಶಿವನೇ ಪತಿತನಾದ ನನ್ನ ಉದ್ಧಾರವಾಗಲಿಕ್ಕೆ ನಿನ್ನ ಅನುಗ್ರಹ ಶಕ್ತಿಯೇ ಮುಖ್ಯ ಕಾರಣವಲ್ಲದೆ ಸ್ವ ಪ್ರಯತ್ನ ವಿಶ್ವಾಸಾದಿಗಳು ಬೇಕಿಲ್ಲ ಎಂದು ಮಾಯಿದೇವರ ಅಭಿಪ್ರಾಯ.

ಶರೀರಕ್ಕೆ ಚಳಿಜ್ವರ ಮೊದಲಾದ ರೋಗರುಜಿನಗಳು ಬಂದರೆ ಹೇಗೆ ಅದು ಪರೀಕ್ಷೆ, ನಾಡೀಮಿಡಿತ ಮೊದಲಾದ ಬಾಹ್ಯಲಕ್ಷಣಗಳಿಂದ ತಿಳಿಯಲ್ಪಡುವದೋ ಹಾಗೆ ಮುಮುಕ್ಷುವಿಗೆ ಮುಕ್ತಿಯಲ್ಲಿ ಕುತೂಹಲ, ಸಂಸಾರದಲ್ಲಿ ಹೇಯಬುದ್ಧಿ, ಗುರು ಜಂಗಮಭಕ್ತಿ, ಶಿವಾನುಭವದಲ್ಲಿ ಆಸಕ್ತಿ, ... ವಿಚಾರ ಇವುಗಳು ...

ದರೆ ಶಕ್ತಿಪಾತವಾಗಿದೆಯೆಂದು ತಿಳಿಯಬೇಕು.

ಉಪದೇಶಕನಾದ ಆಚಾರ್ಯನು ಶಕ್ತಿಪಾತ ಚಿಹ್ನವನ್ನು ನೋಡಿಯೇ ಶಿಷ್ಯನನ್ನು ಶಿವದೀಕ್ಷಾ ಸಂಪನ್ನನನ್ನಾಗಿ ಮಾಡಬೇಕು. ಬಿತ್ತನೆಯ ಕೆಲಸ ಮಾಡುವ ನೇಗಿಲಯೋಗಿಯು ಭೂಮಿಯು ಹಸಿಯಾಗಿದೆಯೋ ಇಲ್ಲವೋ ಎಂಬುದನ್ನು ನೋಡಿಯೇ ಬಿತ್ತುವನಲ್ಲದೆ ಒಣಭೂಮಿಯಲ್ಲಿ ಬೀಜ ಬಿತ್ತುವನೇ ? ತಜ್ಞನಾದ ಡಾಕ್ಟರನು ರೋಗಿಯ ದೇಹಪರೀಕ್ಷೆಯನ್ನು ಮಾಡಿಯೇ ಔಷಧವನ್ನು ಕೊಡುವನಲ್ಲದೆ ಮನಬಂದಂತೆ ಔಷಧಕೊಡುವನೇ ? ವಿದ್ಯಾರ್ಥಿಯು ಪ್ರಶ್ನೆಪತ್ರಿಕೆಗಳಿಗೀಯುವ ಉತ್ತರವನ್ನು ನೋಡಿಯೇ ಪರೀಕ್ಷಕನು ಗುಣಗಳನ್ನು ಹಾಕುವನಲ್ಲದೆ ಅಸಂಬದ್ಧವಾಗಿ ಬರೆದ ಅಥವಾ ಏನೂ ಬರೆಯದ ಉತ್ತರ ಪತ್ರಿಕೆಗಳಿಗ ಗುಣ ಹಾಕುವನೇ ?

" ಗುರು ಶಿಷ್ಯಾವುಭೌ ಮೋಹಾದಪರೀಕ್ಷ್ಯ ಪರಸ್ಪರಂ ।
ಉಪದೇಶಂ ದದನ್ ಗೃಣ್ಹನ್ ಪ್ರಾಪ್ನುಯಾತಾಂಪಿಶಾಚತಾಮ್ ॥

ಉಪದೇಶಕನಾದ ಸದ್ಗುರುವು ಶಿಷ್ಯನು ಉಪದೇಶಕ್ಕೆ ಅಧಿಕಾರಿಯೋ ಹೇಗೆ, ಶಿಷ್ಯನ ಹೃದಯವು ಪರಿಪಕ್ವವಾಗಿದೆಯೋ ಇಲ್ಲವೋ, ಎಂಬುದನ್ನು ಪರೀಕ್ಷಿಸಬೇಕು. ಅದರಂತೆ ಶಿಷ್ಯನೂ ಗುರುವು ಉಪದೇಶಕೊಡಲು ಅರ್ಹನೋ, ಅವನು ಶಾಸ್ತ್ರ ಪರಿಣತ, ಸಾನುಭಾವಿ, ಸದಾಚಾರ ಸಂಪನ್ನನಾಗಿ ಇರುವನೋ ಇಲ್ಲವೋ ಎಂಬುದನ್ನು ಪರಾಮರ್ಶಿಸಬೇಕು. ಹೀಗೆ ಅನ್ಯೋನ್ಯ ಪರೀಕ್ಷೆ ಮಾಡದೇ ಕೇವಲ ಶಿಷ್ಯಪರಂಪರೆಯನ್ನು ಬೆಳೆಯಿಸಿಕೊಳ್ಳಬೇಕೆಂಬ ಹಂಬಲದಿಂದಾಗಲಿ, ಹಣದಾಸೆಯಿಂದಾಗಲಿ ಉಪದೇಶ ಮಾಡಿದರೆ ಉಪದೇಶಕೊಟ್ಟಗುರು, ಹಾಗೂ ಡಂಬಾಚಾರಕ್ಕಾಗಿ ಉಪದೇಶ ತಕ್ಕೊಂಡ ಶಿಷ್ಯ ಈರ್ವರೂ ಭೂತ, ಪ್ರೇತ, ಪಿಶಾಚಿಗಳಾಗುವರೆಂದು ಸಿದ್ಧಾಂತವಿದೆ. ಅನಧಿಕಾರಿ, ಅನಾಚಾರಿ, ಅಯೋಗ್ಯ ಶಿಷ್ಯನಿಗೆ ಉಪದೇಶ ಮಾಡಬಾರದೆಂಬ ಬಗ್ಗೆ ಬಸವೇಶ್ವರರು–

" ಕುಂಬಳದ ಕಾಯಿಗೆ ಕಬ್ಬುನದ ಕಟ್ಟುಕೊಟ್ಟರೆ
ಕೊಳೆವುದಲ್ಲದೆ ಬಲುಹಾಗ ಬಲ್ಲುದೇ ?
ಅಳಿಮನದವಂಗೆ, ಶಿವ ದೀಕ್ಷೆಯ ಕೊಟ್ಟರೆ
ಭಕ್ತಿ ಎಂತಹುದೋ – ಮುನ್ನಿನಂತೆ
ಕೂಡಲ ಸಂಗಯ್ಯಾ ಮನಹೀನನ ಮೀಸಲ ಕಾಯ್ದಿರಿಸಿದಂತೆ "
" ಸಗಣಿಯ ಬೆನಕಂಗೆ ಸಂಪಗೆಯರಳಲ್ಲಿ ಪೂಜಿಸಿದರೆ
ರಂಜನೆಯಲ್ಲದೆ ಅದರ ಗಂಜಳ ಬಿಡದಣ್ಣ ।
ಮಣ್ಣಪುತ್ಥಳಿಯ ಮಾಣದೇ ಜಲದಲ್ಲಿ ತೊಳೆದರೆ
ನಿಚ್ಚ ನಿಚ್ಚಕ್ಕೆ ಕೆಸರಹುದಲ್ಲದೆ ಅದರಚ್ಚುಗಬಿಡದಣ್ಣ,
ಲೋಕದ ಮಾನವಂಗೆ ಶಿವದೀಕ್ಷೆಯ ಕೊಟ್ಟರೆ
ಕೆಟ್ಟವನೇಕೆ ಶಿವಭಕ್ತನಹನು ಕೂಡಲಸಂಗಮದೇವ "

ಎಂಬ ವಚನಗಳಲ್ಲಿ ಹೇಳಿರುವರು. ಈ ಅಭಿಪ್ರಾಯವನ್ನೇ–

ಪರಿಪಕ್ವ ಹೃದಯರಲ್ಲದ ಮಂದಮನುಜರಿಗೆ
ಬರಿದೆ ಬೋಧಿಪೆನೆಂಬ ಭ್ರಮೆಯೇಕೆ ಮನುಜ ॥
ಆರರೆ ಇಂತಘಟನಾಘಟನೆ ನಿನ್ನೊಳಗಿರೆ ।
ಮರಣಾದ್ಯನರ್ಥವಿನ್ನಿಳಿಯುವರ್ಗಹುದುಂಟೆ । ಪ ।
ಪರುಷವೇದಿಯಸೋಂಕೆ ಕಾಬ್ಬೊನ್ನು ಕನಕವಾಗುಳಿವಂತೆ ।
ಕಾರ್ಗಲ್ಲು ಕನಕವಹುದೇ ? ।
ದುರಿತವರತ ಮುಮುಕ್ಷುಗಳಿಗಲ್ಲದೆ ಕರ್ಮ ।
ಪರರಿಗನುಗ್ರಹಿಸಲು ಮುಕ್ತರಹುದುಂಟೇ ॥ ೧ ॥

ಮೊಳೆವ ಜವ್ವನದ ಮೋಹಿನಿಯು ಸುರತಿಸೆ ಗರ್ಭ ।
ಬೆಳೆವಂತೆ ಹಸುಳೆಗೆ ಗರ್ಭ ನಿಲ್ಲುವದೆ ?
ತಿಳಿವಾಸಕ್ತರಿಗಲ್ಲದಹಮೆಂಬ ನರಕದ ।
ಹುಳುಗಳಿಗುಪದೇಶಿಸಲು ಬುದ್ಧರಹುದುಂಟೇ ॥ ೨ ॥

ಬಲಿದ ಶುಕ್ತಿಯೊಳು ಸ್ವಾತಿಯು ಬಿಂದು ಮುತ್ತಾಗು ।
ವೊಲು ಕೆರೆ ಜಲದ ಚಿಪ್ಪಿನೊಳಾಗುತಿಹುದೆ ?
ಸಲುವಾತ್ಮ ಜಾಗರೂಕರಿಗಲ್ಲದ ಜ್ಞಾನ ।
ಮಲಜೀವರ್ಗರುಹೆ ಶ್ರೀಗುರುಶಿದ್ಧನಹುದುಂಟೆ ॥ ೩ ॥

ಎಂಬ ಪದ್ಯದಿಂದ ಸರ್ಪಭೂಷಣ ಶಿವಯೋಗಿಗಳು ಸಮರ್ಥನೆ ಮಾಡಿದ್ದಾರೆ.

ಭಕ್ತಿಯಿಲ್ಲದ ಶಿಷ್ಯಗೊತ್ತಿಕೊಟ್ಟುಪದೇಶ ।
ಬತ್ತಿದಾ ಕೆರೆಯ ಬಯಲಲ್ಲಿ ರಾಜಾನ್ನ ।
ಬಿತ್ತಿ ಬೆಳೆದಂತೆ ಸರ್ವಜ್ಞ ॥
ಶ್ವಾನ ತೆಂಗಿನಕಾಯ ತಾನು ಮೆಲಬಲ್ಲುದೇ ?
ಹೀನಮನದವನಿಗುಪದೇಶವಿತ್ತಡದು ।
ಹಾನಿಕಾಣಯ್ಯ ಸರ್ವಜ್ಞ ॥
" ಹೊಲಬನರಿಯದ ಗುರುವು ತಿಳಿಯಲರಿಯದ ಶಿಷ್ಯ ।
ನೆಲೆಯನಾರಯ್ಯದುಪದೇಶವಂಧಕನು ।
ಕೊಳನ ಹೊಕ್ಕಂತೆ ಸರ್ವಜ್ಞ ॥

ಪರಿಪಕ್ವ ಹೃದಯವಿಲ್ಲದ ಮೂಢಮನುಜರಿಗೆ ಮಾಡುವ ಉಪದೇಶ, ಸುಜ್ಞಾನಸ್ಥಿ ಯೆಗಳಿಲ್ಲದ ಗುರು, ಏನು ಹೇಳಿದರೂ ತಿಳಿಯದ ಜಡಮತಿಯಶಿಷ್ಯ, ಸ್ವಸ್ವರೂಪ ಸಾಕ್ಷಾತ್ಕಾರ ಮಾಡದ, ಅನುಭವಾಮೃತದ ಸವಿನೋಡದ ಒಣ ಉಪದೇಶ ಇವುಗಳಿ ಏನೂ ಪ್ರಯೋಜನವಿಲ್ಲವೆಂಬುದನ್ನೇ ಸರ್ವಜ್ಞನು ಮಾರ್ಮಿಕವಾಗಿ ಹೇಳಿರುವನು.

ಸಾಮಾನ್ಯಜನರ ಸಾತ್ವಿಕ ಕಳೆಯಾಗಿರದ ಜಗಜ್ಜನನಿಯಾದ ಪಾರ್ವತಿಯ ಸ್ವ

ಕಳೆ, ಅನ್ವರ್ಥಕನಾಮದ ನಿರ್ಮಲ-ಸುಮತಿಯರೆಂಬ ತಾಯಿತಂದೆಗಳು, ಚಿತ್ಪ್ರಕಾಶ ದಿಂದ ತೊಳಗಿ ಬೆಳಗುವ ಮಹಾದೇವಿಯಕ್ಕ, ಹೃತ್ತಾಪಹಾರಕರಾದ ಸಮರ್ಥ ಗುರು ಲಿಂಗ ಶಿವಾಚಾರ್ಯರೂ ಇಷ್ಟೆಲ್ಲ ಅಪೂರ್ವ ಸಮ್ಮೇಲನ ಕೂಡಿದ ಮೇಲೆ ಕೇಳುವದೇನು ?

ಪಾರ್ವತಿಯ ಸಾತ್ವಿಕ ಕಳೆಯೇ ಸಾಕಾರವಾಗಿ ನಿಂತಿರುವ ಅಕ್ಕಮಹಾದೇವಿಯು ಶ್ರೀ ಗುರುವಿನಿಂದ ಲಿಂಗಧಾರಣ, ಲಿಂಗದೀಕ್ಷೆಗಳನ್ನು ಪಡೆದು ಧನ್ಯಳಾದಳು. ಭವಬಂಧನ ಭವಪಾಶಗಳನ್ನು ಕಳೆದುಕೊಂಡು ನಿತ್ಯ ಮುಕ್ತಿಯನ್ನು ಪಡೆಯುವ ಹಂಬಲವುಳ್ಳ ಪ್ರತಿ ಯೊಬ್ಬ ಮುಮುಕ್ಷುವೂ ಗುರು ಸೇವೆಯನ್ನು ಮಾಡಿ ಕೃತಾರ್ಥನಾಗಬೇಕು.
ಈ ವಿಷಯದಲ್ಲಿ –

" ತದ್ವಿಜ್ಞಾನಾರ್ಥಂ ಸ ಗುರುಮೇವ ಅಭಿಗಚ್ಛೇತ್ ।
ಸಮಿತ್ಪಾಣಿಃ ಶ್ರೋತ್ರೀಯಂ ಬ್ರಹ್ಮನಿಷ್ಠಂ ॥ "

ಎಂಬ ಉಪನಿಷತ್ಪ್ರಮಾಣವುಂಟು.

" ಅಪುತ್ರಸ್ಯ ಗತಿರ್ನಾಸ್ತಿ " ಎಂಬುದೊಂದು ಸೂಕ್ತಿಯಿದೆ. ಯಾರಿಗೆ ಮಕ್ಕಳಾಗುವ ದಿಲ್ಲವೋ, ಅವರಿಗೆ ಸದ್ಗತಿಯಾಗುವದಿಲ್ಲ ಎಂಬುದು ಈ ವಾಕ್ಯದ ಸಾಮಾನ್ಯಾರ್ಥ. ಹೆಚ್ಚು ಮಕ್ಕಳನ್ನು ಹಡೆದವರಿಗೆ ಎ ಕ್ಲಾಸಿನ ಮೋಕ್ಷವೂ, ಒಂದೆರಡು ಮಕ್ಕಳನ್ನು ಹಡೆದವರಿಗೆ ಬಿ ಕ್ಲಾಸಿನ ಮೋಕ್ಷವೂ,ಏನೂ ಹಡೆಯದವರಿಗೆ ಮೋಕ್ಷವೇ ಇಲ್ಲವೆಂದಾಯಿತು.ಮಕ್ಕಳನ್ನು ಹಡೆಯದವರಿಗೆ ಮೋಕ್ಷವಿಲ್ಲ ಎಂದು ಅರ್ಥ ಮಾಡಿದರೆ ದೃಷ್ಟಿ ಮಾತ್ರದಿಂದ ಜಗತ್ತನ್ನೇ ಉದ್ಧಾರಮಾಡುವ ಮಹಾಮಹಾ ಶಿವಯೋಗಿಗಳು ಮೋಕ್ಷಕ್ಕೆ ಪರವಾಗಬೇಕಾದೀತು. ಯಾಕಂದರೆ ಅವರೆಲ್ಲರೂ ಹೊನ್ನು ಹೆಣ್ಣು ಮಣ್ಣುಗಳನ್ನು ದೂರೀಕರಿಸಿದ ವೀರವಿರಕ್ತ ರಲ್ಲವೇ ? " ಅಪುತ್ರಸ್ಯ ಗತಿರ್ನಾಸ್ತಿ " ಎಂಬ ಸೂಕ್ತಿಗೆ ಯಾರಿಗೆ ಮಕ್ಕಳಾಗುವದಿಲ್ಲವೋ ಅವರಿಗೆ ಸದ್ಗತಿಯಿಲ್ಲ ಎಂದು ನೈಜಾರ್ಥವಿರದೆ, ಸತ್ಯಾರ್ಥವಿದೆ, ಯಥಾರ್ಥ ಅರ್ಥ ವಿದೆ, ಯಾರು ಗುರುವಿನ ಮಕ್ಕಳಾಗುವದಿಲ್ಲವೋ, ಯಾರು ಮಕ್ಕಳಂತಹ ಪರಿಶುದ್ಧ ಮನಸ್ಸುಳ್ಳವರು ಆಗುವದಿಲ್ಲವೋ ಅವರಿಗೆ ಸದ್ಗತಿಯಿಲ್ಲ, ಎಂಬುದೇ ಆ ವಾಕ್ಯದ ನಿಶ್ಚಿತಾ ರ್ಥವು. ಮಕ್ಕಳನ್ನು ಹಡೆಯುವದಕ್ಕೂ ಮೋಕ್ಷಕ್ಕೂ ಏನೇನೂ ಸಂಬಂಧವಿಲ್ಲ.

" ಗೇಹಸ್ಯ ಮೋಕ್ಷಃ ನೋಮೋಕ್ಷಃ ನದೇಹಸ್ಯಕಮಂಡಲೋಃ ।
ಅಜ್ಞಾನ ಹೃದಯಗ್ರಂಥಿ ಮೋಕ್ಷೋ ಮೋಕ್ಷ ಇತೀರಿತಃ ॥ "

' ಅಜ್ಞಾನಂ ಬಂಧಃ ' '' ತತ್ತ್ವ ಜ್ಞಾನೇನ ಮುಕ್ತಿಃ ಸ್ಯಾತ್ '' ಮುಂತಾದ ಪ್ರಮಾಣ ಗಳು ಮೋಕ್ಷಕ್ಕೆ ಗೇಹತ್ಯಾಗ ದೇಹತ್ಯಾಗಗಳು ಕಾರಣವಾಗಿರದೇ ಜ್ಞಾನಅಜ್ಞಾನಗಳೇ ಬಂಧ ಮೋಕ್ಷಕ್ಕೆ ಕಾರಣವೆಂದು ಹೇಳುತ್ತವೆ.

" ಸುಪುತ್ರಃ ಕುಲದೀಪಕಃ" '' ಕುವರಂ ವಂಶಕೆ ಭೂಷಣಂ "
ಮಕ್ಕಳಿಲ್ಲದ ಮನೆಯು ರೊಕ್ಕವಿಲ್ಲದ ಬಾಳ್ವೆ ।
ಅಕ್ಕರವು ಇರದ ತವರೂರು । ಇವು ಮೂರು ।
ದುಃಖಕಾಣಯ್ಯ ಸರ್ವಜ್ಞ ॥

" ಅಪುತ್ರಸ್ಯ ಗತಿರ್ನಾಸ್ತಿ " ಮುಂತಾವ ಸೂಕ್ತಿಗಳಲ್ಲಿ ಸತ್ಯಾಂಶವಿಲ್ಲದಿಲ್ಲ. ಮಕ್ಕ ಮನೆಯಲ್ಲಿ ಆನುವಂಶಿಕವಾಗಿ ಬಂದಿರುವ ಅತಿಥಿಸೇವೆ, ಲಿಂಗಪೂಜೆ, ಜಂಗಮ ದಾಸೋ ಸತ್ಪಾತ್ರದಾನ, ಮುಂತಾದ ಸತ್ಸಂಪ್ರದಾಯಗಳನ್ನು ಅವ್ಯಾಹತವಾಗಿ ನಡೆಯಿಸು ಮಕ್ಕಳಿಲ್ಲದಿದ್ದರೆ ಆ ಸತ್ಸಂಪ್ರದಾಯಗಳು ಪೊಟಕಾಗಿನಿಲ್ಲುವವು. ಅದಕ್ಕಾಗಿಯೇ ಭಾವಿಗಳು ಪುತ್ರನಿಗೆ ಪ್ರಾಶಸ್ತ್ಯಕೊಟ್ಟು ಅವನಿಲ್ಲದೇ ಹೋದರೆ ಸದ್ಗತಿಯೂ ಎನ್ನುವಷ್ಟರ ಮಟ್ಟಿಗೆ ಹೇಳಿದ್ದಾರೆ.

" ದೀಕ್ಷೆಯಿಲ್ಲದಿದ್ದರೆ ಮೋಕ್ಷವಿಲ್ಲ " ಎಂಬ ನಾಣ್ಣುಡಿಯೂ ದೀಕ್ಷಾಮ ವನ್ನು ಸಾರಿಹೇಳುತ್ತದೆ.

ಪಾರ್ವತಿಯು ನಿರಂಜನ ಪ್ರಭುದೇವನನ್ನು ಸೋಲಿಸಿಯೇ ತೀರುವೆನೆಂದು ತೊಟ್ಟು ತನ್ನ ತಾಮಸೀ ಕಳೆಯನ್ನು ಭೂಲೋಕಕ್ಕೆ ಕಳುಹಿಸಲು ಆಕೆಯು ಮ ಭೂಪಾಲ ಮೋಹಿನಿದೇವಿಯುವರ ಉದರದಲ್ಲಿ ಮಾಯೆಯೆಂಬ ಹೆಸರಿನಿಂದ ಜನ ಮನನ್ನು ಸೋಲಿಸಲು ಎಷ್ಟು ಪ್ರಯತ್ನಮಾಡಿದರೂ ಅದು ಕೈಗೂಡದೆ ಗೊಳಗಾದಳು. ಆಗ ಪಾರ್ವತಿಯು ತನ್ನ ಸಾತ್ವಿಕ ಕಳೆಯನ್ನು ಕಳುಹಲು ಆಕೆಯು ಹಂಕಾರ ಸುಮತಿಯರ ಪುಣ್ಯಗರ್ಭದಿಂದ ಅವತರಿಸಿ ಅಲ್ಲಮನ ಸೇವೆಮಾಡಿ ಳಾದಳು. ಸಾಮಾನ್ಯ ಜನರ ಜ್ಞಾನಾಮೃತಸರೋವರಕ್ಕೆ ಆವರಣ ವಿಕ್ಷೇಪಾದಿ ದೋ ತಿಳಿನೀರನ್ನು ಹಾವಸೆ ಮುಚ್ಚುವಂತೆ ಮುಸುಕುವವು. ಆದರೆ ಅವತಾರೀ ಪು ಅಥವಾ ದೇವಾಂಶಸಂಭೂತರಾದವರ ಜ್ಞಾನಾಮೃತ ಶರಧಿಯುಮೇಲೆ ಆವರಣ ಪಾದಿಗಳು ಮುಸುಕುವದಿಲ್ಲ.

ಹಲವಾರು ಗಿಡಮರಗಳು ಹೂ, ಹಣ್ಣುಗಳನ್ನು ಬಿಡದೆ ಹುಟ್ಟಿ ಬೆಳೆದು ಬಿದ್ದು ವವು. ಹಲಕೆಲವು ಗಿಡಬಳ್ಳಿಗಳು ಹೂಗಳನ್ನುಬಿಟ್ಟು ಹಣ್ಣುಗಳನ್ನುಕೊಟ್ಟು ವಾಗುವವು. ಕೆಲವು ಸಸ್ಯಗಳು, ಅಂದರೆ ಮರುಗ ಮೊದಲಾದವುಗಳು ಹುಟ್ಟು ಸುಗಂಧವ ಬೀರುತ್ತಲೇ ಹುಟ್ಟುವವು. ಇದರಂತೆ ಹಲವು ಮಹಾತ್ಮರು ಉಚ್ಚ ಯಿಂದ ಕೂಡಿಕೊಂಡೇ ಉದಯಿಸುದರು. ಅವರ ಅರಿವಿಗೆ ಮರವೆಯ ಪರದೆಯಿಲ್ಲ

ಮಹಾದೇವಿಯಕ್ಕ ಪಾರ್ವತಿಯ ವರಪ್ರಸಾದದಿಂದ ಅವತರಿಸಿದವಳು. ದೇ ಸಂಭೂತೆ, ಅಂತೆಯೇ–

" ನೇಮದ ಕಾಮಿನಿಯು, ಭಸಿತದ ಭಾಮಿನಿಯು, ರುದ್ರಾ ಭದ್ರಾಂಗಿಯು, ಭಕ್ತಿಯ ಭಾಗ್ಯವೆನಿಪ ಮುಕ್ತಿಯ ತವರ್ಮನೆ ಎನಿಪ, ಶಿ ಸಂಪನ್ನೆ, ಪ್ರಸಾದದ ಮೇರುವೆ, ತತ್ವ ಶಿಖಾಮಣಿ, ಪುಣ್ಯದ ಪುಂಜೆ, ನೈಷ್ಠ ಸತ್ಯದ ಸದನ, ಶಾಂತಿಯ ನಿಧಿ, ಚಿದಂಬರ ಸಂಯುತೆ, ಸ್ವಾನುಭಾವದ ಸಾಗರ... ಮುಂತಾಗಿ ಹರಿಹರ ಕವಿಯು ವರ್ಣಿಸಿದ್ದಾನೆ. ಓದಿದ ಜಾಣರು, ಓದದ ಜಾಣ ಎರಡು ಪ್ರಕಾರಗಳಿವೆ. ಶಾಲೆ, ಕಾಲೇಜ, ವಿಶ್ವವಿದ್ಯಾಲಯಗಳಿಗೆ ಹೋಗಿ ಪ್ರಾ ಬಳಿಯಲ್ಲಿ ವಿವಿಧ ರೀತಿಯಿಂದ ವಿದ್ಯಾಭ್ಯಾಸಮಾಡಿ ಹಲವಾರು ಸಲ ಅನು

ರಾಗಿ ಮತ್ತೆ ಓದಿ ಜಾಣರಾಗುವ ಕೆಲವರು. ಇನ್ನು ಕೆಲವೇ ಜನರು ಸ್ವಲ್ಪೇ ಅಧ್ಯಯನ ಮಾಡಿ ಅಥವಾ ಏನೂ ಓದದೆ ಜಾಣರಾಗುವರು.

ಶ್ರೀ ಶಿವಗುರು ಸುಭದ್ರೆಯರ ಮಗನಾದ ಶಂಕರಾಚಾರ್ಯರು ಶಿವನಅವತಾರ ವೆಂದು ಹೇಳುವರು. ಬಾಲಶಂಕರನು ಹುಟ್ಟಿದ ಮೊದಲನೇ ದಿನದಲ್ಲಿಯೇ ವರ್ಣಮಾಲೆ ಯನ್ನು ಉಚ್ಚರಿಸಲು ಪ್ರಾರಂಭಿಸಿದನೆಂದೂ, ೨ ನೇ ವರ್ಷದಲ್ಲಿ ಪುರಾಣ ಹಾಗೂ ಕಾವ್ಯ ಓದಲು ಮೊದಲು ಮಾಡಿದನೆಂದೂ, ೭ ನೇ ವರ್ಷದಲ್ಲಿಯೇ ೪ ವೇದ ವೇದಾಂಗ, ದರ್ಶನ ಪುರಾಣ, ಇತಿಹಾಸ, ಕಾವ್ಯ, ಅಲಂಕಾರ ಗ್ರಂಥಗಳಲ್ಲಿ ಪ್ರವೀಣನಾದನೆಂದು ಅವರ ಇತಿಹಾ ಸದಿಂದ ತಿಳಿದುಬರುವದು. ವೇದವತೀ ಪುತ್ರರಾದ ಮಧ್ವಾಚಾರ್ಯರು ವಾಯುದೇವರ ಅವತಾರವೆಂದು ಅವರ ಅನುಯಾಯಿಗಳಲ್ಲಿ ನಂಬುಗೆಯಿದೆ. ಆಚಾರ್ಯರು ಬಾಲ್ಯದಲ್ಲಿ-ಯೇ ಪಾಠಶಾಲೆಯೊಳಗೆ ಓದು ಬರಹ ಕಲಿಸುವ ಅಧ್ಯಾಪಕರನ್ನೇ ವಿವಿಧ ಪ್ರಶ್ನೆಗಳಿಂದ ದಂಗು ಬಡಿಸುತ್ತಿದ್ದರೆಂದು ಅವರಚರಿತ್ರೆಯಿಂದ ತಿಳಿದುಬರುವದು. ನೋಬೆಲ್ ಪಾರಿ ತೋಷಕ ವಿಜೇತರಾದ ವಿಶ್ವಕವಿ ಕವೀಂದ್ರ ರವೀಂದ್ರರು ಬಾಲ್ಯದಲ್ಲಿಯೇ ಮೇಧಾವಿಗಳು ಮೆಚ್ಚುವಂತಹ ಕವಿತೆಗಳನ್ನು ಬರೆಯುತ್ತಿದ್ದರೆಂದು ತಿಳಿದುಬರುವದು. ಉಭಯ ಕವಿತಾ ವಿಶಾರದರಾದ ಎಳಂದೂರ ಷಡಕ್ಷರ ಕವಿಗಳು ತಮ್ಮ ಹನ್ನೊಂದನೆಯ ವರ್ಷದಲ್ಲಿಯೇ ಕವಿತೆ ಬರೆಯಲಾರಂಭಿಸಿದರೆಂದು ಐತಿಹ್ಯವುಂಟು.

ಅಕ್ಕಮಹಾದೇವಿಯ ಜನ್ಮಸ್ಥಳ, ತಾಯಿ ತಂದೆಗಳು, ವಿವಾಹ ಮುಂತಾದವುಗಳ ಬಗ್ಗೆ ಉಲ್ಲೇಖ ದೊರೆಯುವಂತೆ ಆಕೆಯು ಅಧ್ಯಯನ ಮಾಡಿದಬಗ್ಗೆ ದಾಖಲೆಗಳಿಲ್ಲ, ಅಕ್ಕ ಮಹಾದೇವಿಯು ಬರೆದ ವಚನಗಳು ಅರ್ಥಪೂರ್ಣವಾಗಿವೆ. ಅಕ್ಕನ ಕಿರಿದಾದ ವಚನಗಳಲ್ಲಿ ಹಿರಿದಾದಅರ್ಥವು ತುಂಬಿ ತುಳುಕುತ್ತದೆ. ಅಂತೆಯೇ ಜ್ಞಾನ ಭಂಡಾರಿ, ಷಟಸ್ಥಲ ಚಕ್ರ-ವರ್ತಿಯೆನಿಸಿದ ಚನ್ನಬಸವಣ್ಣನವರು –

> " ಆದ್ಯರ ಅರುವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ
> ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ
> ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ
> ಅಜಗಣ್ಣನ ಐದು ವಚನಕ್ಕೆ ಕೂಡಲ ಚೆನ್ನಸಂಗಯ್ಯನಲ್ಲಿ
> ಮಹಾದೇವಿಯಕ್ಕಗಳ ಒಂದು ವಚನ ನಿರ್ವಚನಕಾಣಾ
> ಸಿದ್ಧರಾಮಯ್ಯ "

ಎಂದು ಹೇಳಿದ್ದಾರೆ.

ಗುರು ಮತ್ತು ಲಿಂಗದ ಬಗೆಗಿರುವ ಅಕ್ಕನ ವಿಚಾರಗಳು ಇಂತಿವೆ –

> " ಶ್ರೀ ಗುರುಲಿಂಗದೇವರು ತಮ್ಮ ಹಸ್ತವ ತಂದು ಉನ್ನತಮಸ್ತಕದ
> ಮೇಲೆ ಇರಿಸಿದಾಗಲೇ ಎನ್ನ ಭವಂ ನಾಸ್ತಿಯಾಯಿತ್ತು
> ಎನ್ನ ತನ್ನಂತೆ ಮಾಡಿದ, ಎನಗೆ ತನಗೆ ತೆರಹಿಲ್ಲದಂತೆ
> ಮಾಡಿ ತೋರಿದನು ನೋಡಾ ಎನ್ನ ಶ್ರೀಗುರುಲಿಂಗದೇವ
> ಚನ್ನಮಲ್ಲಿಕಾರ್ಜುನ "

" ಹುಟ್ಟಿದೆನು ಶ್ರೀ ಗುರುವಿನ ಹಸ್ತದಲ್ಲಿ, ಬೆಳೆದೆನು ಅಸಂಖ್ಯಾತರ ಕರುಣದಿಂದ ... ... "

" ಸಂಸಾರ ನಿಸ್ಸಾರವೆಂದು ತೋರಿದವನೆನ್ನಗುರು, ಅಂಗವಿಕಾರದ ಸಂಗವ ನಿಲಿಸಿ ಲಿಂಗವನಂಗದ ಮೇಲೆ ಸ್ಥಾಪ್ಯವ ಮಾಡಿದನೆನ್ನ ಗುರು, ಹಿಂದಣ ಜನ್ಮವ ತೊಡೆದು ಮುಂದಣ ಪಥವನ್ನು ತೋರಿದನೆನ್ನ ತಂದೆ
ಚೆನ್ನಮಲ್ಲಿಕಾರ್ಜುನನ ನಿಜವನರುಹಿದನೆನ್ನ ಗುರು "

" ನಿತ್ಯವೆನ್ನ ಮನೆಗೆ ನಡೆದುಬಂದಿತ್ತು
ಮುಕ್ತಿ ಎನ್ನ ಮನೆಗೆ ನಡೆದುಬಂದಿತ್ತು,
ಜಯ ಜಯ ಗುರುವೆ ನಮೋ ಪರಮ ಗುರುವೆ ನಮೋ
ಚೆನ್ನಮಲ್ಲಿಕಾರ್ಜುನನ ತಂದೆನಗೆ ತೋರಿ ಕೊಟ್ಟ
ಗುರುವೇ ನಮೋ ನಮೋ, !

" ನರಜನ್ಮವ ತೊಡೆದು ಹರಜನ್ಮವ ಮಾಡಿದ ಗುರುವೇ !
ಭವಬಂಧನವ ಬಿಡಿಸಿ ಪರಮಸುಖವ ತೋರಿದಗುರುವೇ !
ಭವಿ ಎಂಬುದ ತೊಡೆದು ಭಕ್ತೆ ಎಂದೆನಿಸಿದ ಗುರುವೇ !
ಚೆನ್ನಮಲ್ಲಿಕಾರ್ಜುನನ ತಂದೆನ್ನ ಕೈವಶಕ್ಕೆ ಕೊಟ್ಟ ಗುರುವೇ ಶರಣು"

" ಅಯ್ಯಾ ಪಾತಾಳವಿತ್ತಿತ್ತ ಶ್ರೀ ಪಾದವತ್ತತ್ತ
ಬ್ರಹ್ಮಾಂಡವಿತ್ತಿತ್ತ ಮಣಿಮುಕುಟವತ್ತತ್ತ,
ಅಯ್ಯಾ ದಶದಿಕ್ಕು ಇತ್ತಿತ್ತ ದಶಭುಜಗಳತ್ತತ್ತ,
ಚೆನ್ನಮಲ್ಲಿಕಾರ್ಜುನಯ್ಯಾ ನೀವೆನ್ನ ಕರಸ್ಥಲಕ್ಕೆಬಂದು ಚುಳುಕಾದಿರಯ್ಯಾ " ॥

ಲಿಂಗವೆಂಬ ಮದುವಣಿಗನಿಗೆ ಶರಣ ಸತಿಯೆಂಬ ಕನ್ಯೆಯನ್ನು ಧಾರೆಯೆರೆದು ಕೊಡುವವ ಗುರುವೇ.

" ಗುರುವೇ ತೆತ್ತಿಗನಾದ, ಲಿಂಗವೇ ಮದುವಣಿಗನಾದ
ಆನು ಮದುವಳಿಗೆಯಾದೆನು, ವಸುಧೆಯ ಭಕ್ತರೆಲ್ಲರೂ ನಿಬ್ಬಣಿಗರಾದರು
ಕೊಟ್ಟರು ಸಾದೃಶ್ಯವಪ್ಪ ಗಂಡನನೋಡಿ,
ಇದು ಕಾರಣ ಚೆನ್ನಮಲ್ಲಿಕಾರ್ಜುನಯ್ಯನೇ ಗಂಡನೆನಗೆ "

ಅಲೌಕಿಕ ಲಗ್ನಮಂಟಪ, ಹಾಗೂ ಎಂದೆಂದಿಗೂ ಬಿಡದ ಶಾಶ್ವತವಾದ ದಾಂಪತ್ಯ ಜೀವನದ ಬಗೆಗೆ_

" ಜಲದ ಮಂಟಪದ ಮೇಲೆ ಉರಿಯ ಚಪ್ಪರವನಿಕ್ಕಿ
ಆಲಿಕಲ್ಲ ಹಸೆಯ ಹಾಸಿ,

ಕಾಲಿಲ್ಲದ ಹೆಂಡತಿಗೆ ತಲೆಯಿಲ್ಲದ ಗಂಡ ಬಂದು ಮದುವೆಯಾದನು,
ಎಂದೆಂದೂ ಬಿಡದ ಬಾಳುವೆಗೆ ಕೊಟ್ಟರೆನ್ನ,
ಚನ್ನಮಲ್ಲಿಕಾರ್ಜುನನೆಂಬ ಗಂಡಂಗೆನ್ನ ಮದುವೆಯ ಮಾಡಿದರು. ''

ಅಲೌಕಿಕ ಆಭರಣಗಳೆನಿಸಿದ ವಿಭೂತಿ ರುದ್ರಾಕ್ಷಿಗಳ ವಿಷಯದಲ್ಲಿ ಮಹಾದೇವಿಯಕ್ಕನ ವಿಚಾರ-

" ಮಂಗಳವೇ ಮಜ್ಜನವೆನಗೆ, ವಿಭೂತಿಯೇ ಒಳಗುಂದದರಿಸಿನವೆನಗೆ
ದಿಗಂಬರವೇ ದಿವ್ಯಾಂಬರವೆನಗೆ. ಶಿವಪಾದರೇಣುವೇ ಅನುಲೇಪನವೆನಗೆ
ರುದ್ರಾಕ್ಷಿಯೇ ವೈದೊಡಿಗೆ ಎನಗೆ. ಶರಣರ ಪಾದಗಳೇತೊಂಡಿಲ ಬಾಸಿಗವೆನಗೆ,
ಚನ್ನಮಲ್ಲಿಕಾರ್ಜುನನೇ ಗಂಡನೆನಗೆ, ಆನು ಚನ್ನಮಲ್ಲಿಕಾರ್ಜುನಂಗೆ ಮದುವಳಿಗೆ
ಎನಗೆ ಬೇರೆ ಶೃಂಗಾರವೇಕೆ ಹೇಳಿರವ್ವ ''

ಪೂಜ್ಯ ವಸ್ತುಗಳೆನಿಸಿದ ಗುರು-ಲಿಂಗ-ಜಂಗಮರನ್ನು ಪೂಜಾ ಸಾಧನಗಳೆನಿಸಿದ ವಿಭೂತಿ ರುದ್ರಾಕ್ಷಿ ಮಂತ್ರಗಳಿಂದ ಪೂಜಿಸಿ ಪೂಜಾ ಫಲಗಳೆನಿಸಿದ ಪಾದೋದಕ ಪ್ರಸಾದಗಳ ವಿಷಯದಲ್ಲಿ ಅಕ್ಕನ ವಿಚಾರಗಳು ಇಂತಿವೆ -

" ಲಿಂಗಕ್ಕೆ ರೂಪನರ್ಪಿಸುವೆ, ಜಂಗಮಕ್ಕೆ ರುಚಿಯನರ್ಪಿಸುವೆ.
ಕಾಯಕ್ಕೆ ಶುದ್ಧಪ್ರಸಾದವ ಕೊಂಬೆ, ಪ್ರಾಣಕ್ಕೆ ಸಿದ್ಧಪ್ರಸಾದವ ಕೊಂಬೆ.
ನಿಮ್ಮ ಪ್ರಸಾದದಿಂದ ಧನ್ಯಳಾದೆನಯ್ಯ ಚನ್ನಮಲ್ಲಿಕಾರ್ಜುನ "

'' ಹತ್ತು ಸಾಗರದೊಳಗೆ ( ದಶವಿಧ ಪಾದೋದಕ ) ಮತ್ತೆ ಜಳಕವ ಮಾಡಿ
ಹತ್ತೊಂದು ( ಏಕಾದಶ ಪ್ರಸಾದ ) ವಿಧದ ಉಣಿಸುಗಳ ನಾನುಂಡು
ಕಿತ್ತೆನು ಮಾಯದ ಬಲೆಗಳ "

'' ಕಾಯ ಪ್ರಸಾದವೆನ್ನ, ಜೀವ ಪ್ರಸಾದವೆನ್ನ, ಪ್ರಾಣ ಪ್ರಸಾದವೆನ್ನ,
ಭಾವ ಪ್ರಸಾದವೆನ್ನ, ಸುಯಿಧಾನ ಪ್ರಸಾದವೆನ್ನ, ಸಮಯ
ಪ್ರಸಾದವೆನ್ನ, ಚೆನ್ನಮಲ್ಲಿಕಾರ್ಜುನಯ್ಯ ನಿಮ್ಮ ಪ್ರಸಾದವ
ಹಾಸಿ ಹೊದೆದುಕೊಂಡಿಪ್ಪೆನು ''

ಮಹಾದೇವಿಯಕ್ಕ ಬರೆದಿರುವ ಯೋಗಾಂಗತ್ರಿವಿಧಿಯಲ್ಲಿಯ ಪದ್ಯ ಮತ್ತು ವಚನಗಳನ್ನು ಓದಿದರೆ ಅವುಗಳಲ್ಲಿ ಎಂತಹ ಸತ್ವಯುತ, ತತ್ವಯುತ, ಸತ್ಯಾರ್ಥವು ಗರ್ಭೀಕರಿಸಿಕೊಂಡಿದೆ ಎಂಬುದು ತಿಳಿಯದಿರದು,

'' ಪರುಷ ಲೋಹವ ಸೋಂಕಿ ವರುಷವಿರಬಲ್ಲುದೇ ।
ಪರುಷವೆಂತಂತೆ ಶಿಷ್ಯಂಗೆ ಗುರುವಿನಾ ।
ದರುಶನವೆ ಪರುಷ ಸರ್ವಜ್ಞ ॥ ''

ಪರುಷಮಣಿಯು ಸೋಂಕಿದಾಕ್ಷಣವೇ ಕಬ್ಬಿಣವು ಥಳಥಳ ಹೊಳೆಯುವ ಬಂಗಾರವಾಗು ದಲ್ಲದೇ ಪರುಷ ಮುಟ್ಟಿದ ಒಂದು ವರುಷದ ನಂತರ ಅದು ಚಿನ್ನವಾಗುವದೇ ? ಇ ರಂತೆ ಗುರುದರ್ಶನ ಮಾತ್ರದಿಂದಲೇ ಸಾಮಾನ್ಯ ಮಾನವನೂ, ದೇವಮಾನವನಾಗು

ಅಕ್ಕಮಹಾದೇವಿಯು ಸಾಮಾನ್ಯ ಮಾನವಳಲ್ಲ. ಅವಳು ಪಾರ್ವತಿಯ ಅನುಗ್ರ ದಿಂದ ಅವತಾರವೆತ್ತಿ ಬಂದವಳು. ಅವಳ ಗುರುಗಳಾದ ಗುರುಲಿಂಗ ಶಿವಾಚಾರ್ಯ ದರೋ ಸಮ್ಯಕ್ಕ್ರಿಯೆ ಸಮ್ಯಕ್ಜ್ಞಾನಗಳ ಸಾಕಾರ ಮೂರ್ತಿಗಳು.

ಗುರುಗಳಿಂದ ಅನುಗ್ರಹಿತಳಾದ ಮಹಾದೇವಿಯು ಗುರೂಪದೇಶದಂತೆ ದಿನದಿ ಬ್ರಾಹ್ಮೀ ಮುಹೂರ್ತದಲ್ಲೆದ್ದು ಲಿಂಗ ಪೂಜೆ ಮಾಡುತ್ತ –

" ಅಯ್ಯಾ ನೀ ಕೇಳಿದರೆ ಕೇಳು ಕೇಳದಿರ್ದೊಡೆ ಮಾಣು ।
ನಾನಿನ್ನ ಹಾಡಿದಲ್ಲದೆ ಸೈರಿಸಲಾರೆನಯ್ಯಾ !
ಅಯ್ಯಾ ನೀ ಒಲಿದರೆ ಒಲಿ ಒಲಿಯದಿರ್ದೊಡೆ ಮಾಣು ।
ನಾನಿನ್ನ ಪೂಜಿಸಿದಲ್ಲದೆ ಸೈರಿಸಲಾರೆನಯ್ಯಾ !
ಅಯ್ಯಾ ನೀ ಮೆಚ್ಚಿದರೆ ಮೆಚ್ಚು, ಮೆಚ್ಚದಿರ್ದೊಡೆ ಮಾಣು ।
ನಾನಿನ್ನನಪ್ಪಿದಲ್ಲದೆ ಸೈರಿಸಲಾರೆನಯ್ಯಾ !
ಅಯ್ಯಾ ನೀನೋಡಿದೊಡೆ ನೋಡು, ನೋಡದಿರ್ದೊಡೆ ಮಾಣು ।
ನಾ ನಿನ್ನ ನೋಡಿ ಹಿಗ್ಗಿ ಹಾರೈಸಿದಲ್ಲದೆ ಸೈರಿಸಲಾರೆನಯ್ಯಾ ।
ಚನ್ನಮಲ್ಲಿಕಾರ್ಜುನಯ್ಯಾ ನಾನಿಮ್ಮ ಪೂಜಿಸಿ,
ಹರುಷದೋಲಾಡುವೆನಯ್ಯಾ ॥ "

ಪೂಜಕಳಾದ ತಾನು ಪೂಜ್ಯ ಮೂರ್ತಿಯ ಪೂಜೆ ಮಾಡಿದನಂತರ ತನ್ನ ಪೂಜೆಯಿ ಪೂಜ್ಯ ಮೂರ್ತಿಯು ಪ್ರಸನ್ನನಾಗಬೇಕು. ಪ್ರಸನ್ನನಾದ ದೇವನಿಂದ ತನ್ನ ಮನೋ ಗಳನ್ನು ಪೂರೈಸಿಕೊಳ್ಳಬೇಕು. ಎಂಬ ಭಾವ ಆಕೆಯಲ್ಲಿ ತಿಲಮಾತ್ರವಿಲ್ಲ.

ಅಂಗೈಯೊಳಗೆ ಕಂಗೊಳಿಸುವ ಲಿಂಗಯ್ಯನೇ ! ನಾನು ನಿನ್ನನ್ನು ಮನವಾರೆ ಹೊಗಳುವೆನು. ಅದನ್ನು ನೀನು ಇಷ್ಟಪಟ್ಟರೆ ಕೇಳು, ಇಷ್ಟವಿಲ್ಲದಿದ್ದರೆ ಬಿಟ್ಟು ಬಿಡು. " ಸಶೃಣೋತಿ ಅಕರ್ಣಃ " ನೀನು ಕಿವಿಯಿಲ್ಲದೇ ಕೇಳುವಿ ಎಂದು ಉಪನಿಷತ್ತು ಸಾ ವದು. ನಾನು ಮಾತ್ರ ನಿನ್ನನ್ನು ಹಾಡದೇ ಹೊಗಳದೇ ಇರಲಾರೆ. ನಿನ್ನನ್ನು ಹಾಡಿದಾ ಹೊಗಳಿದಾಗಲೇ ನನ್ನಮನಕ್ಕೆ ಶಾಂತಿಸಮಾಧಾನಗಳು. ನಿನ್ನನ್ನು ಪೂಜೆ ಮಾಡ ನನ್ನ ಚಿತ್ತಕ್ಕೆ ಸಂತೃಪ್ತಿ ಇಲ್ಲ. ನೀನು ಬೇಕಾದರೆ ಒಲಿ, ಸಾಕಾದರೆ ಬಿಟ್ಟುಬಿಡು. ಯುವದೂ ಒಲಿಯದಿರುವದೂ ನಿನ್ನ ಕೆಲಸ. ಭಕ್ತಿಯಿಂದ ಸೇವೆ ಮಾಡುವದಷ್ಟೇ ಆದ್ಯ ಕರ್ತವ್ಯ.

ಇಷ್ಟಲಿಂಗ ಮೂರ್ತಿಯೇ ನೀನು ಇಷ್ಟಪಡು ಅಥವಾ ಇಷ್ಟಪಡದಿರು. ಮಾತ್ರ ನಿನ್ನನ್ನು ಆಲಿಂಗನಮಾಡದೇ ಇರಲಾರೆ. ನೀನು ಭಕ್ತವತ್ಸಲನಾದುದ

ನನ್ನನ್ನು ಕೈಬಿಡದೇ ಎತ್ತಿಕೊಳ್ಳುವೆ ಎಂಬ ಭರದಸೆ ನನಗಿದೆ. ಲಿಂಗೋಪಭೋಗಿಯಾಧ ನಾನು ನಿನ್ನ ಜೊತೆಯಾಗಿಯೇ ಇರುವೆನು.

ಪರತರ ಶಿವಲಿಂಗವೇ ! ನೀನು ಕರುಣಾ ದೃಷ್ಟಿಯಿಂದ ನೋಡಿ ಅನುಗ್ರಹಮಾಡು ಇಲ್ಲವೆ ಬಿಡು. ನಾನು ಮಾತ್ರ ನಿನ್ನ ಭವ್ಯ ದಿವ್ಯ ಉಜ್ವಲ ರೂಪವನ್ನು ನೋಡಿ ಹಿಗ್ಗಿ ಸಂತಸದ ಸುಗ್ಗಿಯೊಳಗೆ ಕುಣಿದಾಡದೇ ಇರಲಾರೆನು.

ಪರಾತ್ಪರ ಮಹಾಲಿಂಗವೇ ! ನಿನ್ನನ್ನು ನೋಡಿ ಕೂಡಿ ಪೂಜಿಸಿ ಹಾಡಿಕುಣಿದಾಡಿ ನಲಿದಾಡಿ ಹರುಷಸಾಗರದಲ್ಲಿ ಓಲಾಡುವೆನು.

ಸಹಜ ಭಕ್ತನು ತನ್ನ ಹೃದಯದ ಆರಾಧ್ಯ ದೇವತೆಯನ್ನು ಆರಾಧನೆಮಾಡಿ ಆನಂದ ಪಡುವ ಬಗೆಯನ್ನು ಶ್ರೀಮನ್ನಿಜಗುಣಶಿವಯೋಗಿಗಳು,–

"ಆವಪುಣ್ಯವೋ ಲಿಂಗದ ಪೂಜಾವಿಧಿಯನುಭಾವವಹುದು ನರಜನ್ಮದೊಳು ।
ಸಾವಿರ ಮುಖದೊಳರಸಿ ನೋಡಿ ನಿಗಮಾಗಮಾವಳಿಗಾಣದಸಾಧ್ಯವಿದು, "

"ಮೊದಲು ಲಿಂಗದ ಕಳೆಯನು ಭಾವಿಸುವರತಿ ।
ಹೃದಯದೊಡಗೂಡಿ ನೆನೆವರತಿ ॥
ಪದಮಳಲೋಚನದೊಳು ನಿಟ್ಟಿಸುವರತಿ ।
ಯೊದವಿ ಕರದೊಳಿಂಬಿಡುವರತಿ ॥ ೧ ॥

ಹರುಷರಸದೊಳು ಮಜ್ಜನವೆರೆವಿಂಪು ॥
ಪರಮವಸ್ತ್ರ ಗಂಧಾಕ್ಷತೆಗೊಡುವಿಂಪು ॥
ಪರಿಮಳವೆಸೆವಲರನು ಸಿಂಗರಿಸುವಿಂಪು ।
ವರ ಧೂಪಾರತಿಗಳನೆತ್ತುವಿಂಪು ॥ ೨ ॥

ರಸವೊಸರುವ ಸವಿಗಳನೂಡುವನುರಾಗ ॥
ವೆಸೆವ ತಾಂಬೂಲವನು ನೀಡುವನುರಾಗ ।
ಮಿಸುನಿಯ ಛತ್ರ ಚಾಮರವನಿಕ್ಕುವನುರಾಗ ।
ವೊಸೆದು ದರ್ಪಣವನು ಪಿಡಿವನುರಾಗ ॥ ೩ ॥

ಕೂಡೆ ಬಿಜ್ಜಣಿಗೆಯ ಬೀಸುವಲೇಸು ।
ನಾಡೆ ನಮಿಸಿ ಲಲ್ಲೆಗರೆವಲೇಸು ।
ಮೂಡುವ ತನುಪುಳಕದೊಳು ಪಾಡುವಲೇಸು ।
ನೋಡುತಾನಂದಾಶ್ರು ಸುರಿವಲೇಸು ॥ ೪ ॥

ಹಿಂಗದೇ ಪುಷ್ಪಾಂಜಲಿಗೈಯುವತಿ ಸುಖ ।
ಸಿಂಗರವೆನಿಸಿ ಬಣ್ಣಿಸುವ ಸುಖ ॥
ಮಾಂಗಲಮಯ ಶಂಭುಲಿಂಗವೆನಿಸಿ ರಾಜಿಪಸುಖ ।
ಲಿಂಗಪೂಜಾ ಸಂಭ್ರಮದ ಸುಖ ॥

ಈ ಪದ್ಯದಲ್ಲಿ ಹೃದಯಂಗಮವಾಗಿ ಹೇಳಿರುವರು.

ಶಿವಲಿಂಗ ಪೂಜಕನು ಲಿಂಗಪೂಜೆಯನ್ನು ಷೋಡಶೋಪಚಾರಗಳಿಂದ ಮಾಡುವಾಗ... ವಂಗಳಲೋಚನದಿಂದ ಲಿಂಗವನ್ನು ನೋಡಿ ಆನಂದಪಡುವನು. ಪಂಚಾಮೃತ... ಗಂಧಾಕ್ಷತೆಗಳ ಲೇಪನ, ಧಾರಣ, ಪರಿಮಳ ಪುಷ್ಪಾಲಂಕರಣ, ಧೂಪದೀಪಸಮರ್ಪಣ... ದೈವಿಕಕಾರ್ಯಗಳಲ್ಲಿ ತಲ್ಲೀನನಾಗಿ ಸಂತಸಪಡುವನು. ವಿವಿಧ ನೈವೇದ್ಯ... ತಾಂಬೂಲನೀಡಿ, ಛತ್ರ ಚಾಮರಗಳನ್ನು ಹಿಡಿದು ಕುಣಿದಾಡಿ ಹರ್ಷಪಡುವನು. ತನು... ರೋಮಾಂಚನಗಳೆದ್ದು, ಕಂಠಗದ್ಗದವಾಗಿ, ಕಡೆಗಣ್ಣುಗಳಲ್ಲಿ ಆನಂದಾಶ್ರುಗಳ ಕೋ... ಹರಿಯುತ್ತಿರಲು ಭಕ್ತನು ಭಾವಪರವಶತೆಯಿಂದ ಮೈಮರೆದು ಚಿದಾನಂದವನ್ನೂ ... ನಂದವನ್ನೂ, ಸಹಜಾನಂದವನ್ನೂ ಅನುಭವಿಸುವನು. ಈ ಲಿಂಗಪೂಜಾಸಂಭ್ರ... ಸುಖಕ್ಕೆ ಯಾವ ಸುಖವೂ ಸರಿಬಾರದು.

ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗ ಎಂದು ಯೋಗವು ಮೂರು ... ಯಾಗಿದೆ. ಈ ಯೋಗತ್ರಯಕ್ಕೆ ಕರ್ಮಕಾಂಡ, ಜ್ಞಾನಕಾಂಡ, ಭಕ್ತಿಕಾಂಡವೆಂದೂ ... ವರು. ಈ ಕಾಂಡತ್ರಯಗಳಲ್ಲಿ ಕರ್ಮಕಾಂಡದ ಲಕ್ಷಣವನ್ನು ಶಾಸ್ತ್ರಕಾರರು–

> " ಅಹಂಕರ್ತಾಸ್ಯ ಸಮಸ್ತಸ್ಯ ಧರ್ಮಾಧರ್ಮಸ್ಯ ಕರ್ಮಣಃ
> ಇತ್ಯನೇನಾಭಿಮಾನೇನ ಕರ್ಮಕಾಂಡೋಽಯಮುಚ್ಯತೇ "

ಎಂದು ಹೇಳಿರುವರು.

ನಾನು ಮಾಡುವವನು, ನಾನೇ ಎಲ್ಲರಿಗಿಂತ ಮೇಲಾದವನು, ನನ್ನಿಂದಲೇ ... ಕೆಲಸ ನಡೆಯುವವು. ನನಗೆ ಯಾರೂ ಸರಿಯಿಲ್ಲ, ನನ್ನ ಮುಂದೆ ಯಾರ ಆಟವೂ ನಡ... ವದಿಲ್ಲ, ನನ್ನಲ್ಲಿ ಏನು ಬೇಕಾದರೂ ಇದೆ. ಹೀಗೆ ಮಾಡುವ ಪ್ರತಿಯೊಂದು ಕಾರ... ಲ್ಲಿಯೂ ಅಭಿಮಾನವು ತುಂಬಿಕೊಂಡಿದ್ದರೆ ಮಾಡುವ ಆ ಕಾರ್ಯವು ಕರ್ಮಕಾಂಡವೆ... ವದು. ಜ್ಞಾನಕಾಂಡದ ಲಕ್ಷಣವನ್ನು —

> " ನಾಹಂ ಕರ್ತಾಸ್ಯ ಕರ್ತೃತ್ವಂ ನೈವ ಸಾಕ್ಷೀ ಸ್ವಭಾವತಃ ।
> ಇತ್ಯನೇ ನಾಭಿಮಾನೇನ ಜ್ಞಾನಕಾಂಡೋಽಯಮುಚ್ಯತೇ ॥ "

ಎಂದು ಹೇಳಿರುವರು.

ಮಾಡುವವನು ನಾನಲ್ಲ, ನೋಡುವವನು ನಾನಲ್ಲ, ನುಡಿಯುವವನು ನಾನಲ್ಲ, ನಡೆಯು... ವನು ನಾನಲ್ಲ, ಈಕ್ಷಣ, ಶ್ರವಣ, ಗಮನ, ಮುಂತಾದ ಕ್ರಿಯೆಗಳನ್ನು ಇಂದ್ರಿಯ... ಮಾಡುವವು, ಲೋಕದಲ್ಲಿ ಅನೇಕ ಜನರು ಅನಂತ ಕಾರ್ಯಗಳನ್ನು ಮಾಡುತ್ತಿ... ಅವೆಲ್ಲವನ್ನೂ ನೋಡುತ್ತ ಸೂರ್ಯನು ಹೇಗೆ ಸಾಕ್ಷೀಭೂತನಾಗಿರುವನೋ ಹಾಗೆ ... ದಲ್ಲಿ ಬಗೆಬಗೆಯ ಕ್ರಿಯಾಕಲಾಪ ನಡೆದಿದ್ದರೂ ಅವಕ್ಕೂ ನನಗೂ ಏನೂ ಸಂಬಂಧ...

" ಸಾಕ್ಷೀ ಚೇತಾಕೇವಲೋನಿರ್ಗುಣಸ್ವ " ಎಂಬಂತೆ ನಾನು ಸಾಕ್ಷಿಭೂ... ನಾಗಿರುವೆನು, ಹೀಗೆ ಅಭಿಮಾನರಹಿತನಾಗಿ ಇರುವಸ್ಥಿತಿಯೇ ಜ್ಞಾನಕಾಂಡವೆನಿಸು... ಭಕ್ತಿ ಯೋಗದ ಲಕ್ಷಣವನ್ನು —

" ನಕರ್ತಾಹಂ ನಸಾಕ್ಷೀಚ ಶಿವ ಏವೇತಿಕರ್ಮಣಃ ।
ದ್ವಯಾಭಿಮಾನರಾಹಿತ್ಯಂ ಭಕ್ತಿಕಾಂಡೋSಯ ಮುಚ್ಯತೇ " ॥

ಎಂದು ಹೇಳಿರುವರು.

" ಕರ್ತಾ ಕಾರಯಿತಾ ಕರಣಂ ಶಿವ ಏವ " " ದಾತಾ ಭೋಕ್ತಾ ಸದಾಶಿವಃ" ಎಂಬುಕ್ತಿಯಂತೆ ಮಾಡುವವನು ಶಿವನೇ ಮಾಡಿಸಿಕೊಳ್ಳುವವನು ಶಿವನೇ, ಮಾಡುವ ಕರ್ಮವೂ ಶಿವನೇ. ಅಹಂಕಾರದ ಲವಲೇಶವಿಲ್ಲದೆ ಶಿವಾರ್ಪಣ ಬುದ್ಧಿಯಿಂದ ಮಾಡುವ ಸಹಜ ಕ್ರಿಯೆಯಲ್ಲವೂ ಭಕ್ತಿಕಾಂಡ ವೆನಿಸುವದು. ಕರ್ಮಕಾಂಡ, ಜ್ಞಾನಕಾಂಡಗಳಲ್ಲಿ ಅಹಂಕಾರವು ಸ್ಥೂಲ ಸೂಕ್ಷ್ಮವಾಗಿದ್ದರೆ ಭಕ್ತಿಕಾಂಡದಲ್ಲಿ ಅಹಂಕಾರವು ತಿಲಮಾತ್ರವೂ ಇರುವದಿಲ್ಲ.

ಪೂಜಕನು ಪೂಜ್ಯವಸ್ತುವಿನ ಪೂಜೆ ಮಾಡುವಲ್ಲಿಯೇ ಆನಂದ ಪಡುವನಲ್ಲದೆ, ಪೂಜ್ಯವಸ್ತುವಿನಿಂದ ಯಾವ ಪ್ರತಿಫಲವನ್ನೂ ಪಡೆಯುವ ಹವ್ಯಾಸದಲ್ಲಿರುವದಿಲ್ಲ, ಪ್ರತಿಫಲದ ಆಶೆಯಿಲ್ಲದೆ ನಿರಪೇಕ್ಷ ಭಾವನೆಯಿಂದ ಸೇವೆಮಾಡಿದರೆ ಸೌಖ್ಯವುಂಟು. ಎನ್ನುವ ವಿಷಯದಲ್ಲಿ ಒಂದು ಮನೋವೇಧಕ ಕಥೆಯಿದೆ.

" ರಾಜಾನೋ ಬಹುವಲ್ಲಭಾಃ " ಎಂಬುಕ್ತಿಯಂತೆ ರಾಜನಿಗೆ ಅನೇಕ ಸತಿಯರಿರುವರು. ಒಮ್ಮೆ ಒಬ್ಬ ಮಹಾರಾಜನು ಮಂತ್ರಿಗಳೊಡಗೂಡಿ ಪರದೇಶಕ್ಕೆ ಪಯಣ ಮಾಡುವವನಿದ್ದನು. ಎಲ್ಲ ಸತಿಯರನ್ನು ಹತ್ತಿರ ಕರೆದು ನಾವು ಪರದೇಶಕ್ಕೆ ಪಯಣ ಮಾಡುತ್ತೇವೆ ನಿಮಗೆ ಇಷ್ಟವಾದ ವಸ್ತುಗಳನ್ನು ಬರೆದು ಕೊಡಿ ಎನ್ನಲು ಎಲ್ಲರೂ ಆನಂದಭರಿತರಾಗಿ, ಕೆಲವರು ಚಿನ್ನದೊಡವೆಗಳನ್ನೋ, ಮತ್ತೆ ಕೆಲವರುಪೀತಾಂಬರಗಳನ್ನೋ, ಬರೆದುತಂದು ಕೊಟ್ಟರು. ಅವರಲ್ಲಿ ಜಾಣೆಯಾದ ಒಬ್ಬ ಪ್ರೇಯಸಿಯು ಕಾಗದದ ಮೇಲೆ ಯಾವ ಸಾಮಾನುಗಳನ್ನು ಬರೆಯದೇ ಒಂದು ಅಂಕಿಯನ್ನು ಮಾತ್ರ ಬರೆದು ಕೊಟ್ಟಳು. ರಾಜನು ಪ್ರೇಯಸಿಯರ ಅಭಿಲಾಷೆಯಂತೆ ಬೆಲೆಬಾಳುವ ಉತ್ತಮೋತ್ತಮ ಅಲಂಕಾರಾದಿಗಳನ್ನು ತಕ್ಕೊಂಡನು, ಆದರೆ ಜಾಣೆಯಾದ ಆ ಪ್ರೇಯಸಿಯು ಬರೆದಿರುವ ಒಂದು ಅಂಕಿಯ ಅರ್ಥವು ರಾಜನಿಗಾಗಲಿಲ್ಲ. ಕೂಡಲೇ ರಾಜನು ಮಂತ್ರಿಯನ್ನು ಕರೆದು ವಿಚಾರಿಸಲು ಮಹಾರಾಜರೇ ! ಈ ಪ್ರೇಯಸಿಯು ಬರೆದಿರುವ ಒಂದು ಅಂಕಿಯಲ್ಲಿ ರಹಸ್ಯಾರ್ಥವು ತುಂಬಿದೆ. ಕಾಗದದ ಮೇಲೆ ಬರೆದಿರುವ ಈ ಅಂಕಿಯು ಸಾಮಾನ್ಯ ಜನರಿಗೆ ಏನೋ ಬರೆದಿರುವರು ಎಂದು ಅನಿಸಿದರೂ ಇದರಲ್ಲಿ ವಿಶಿಷ್ಟಾರ್ಥವು ಹುದುಗಿರುವದು.

ಉಡಲು, ಇಡಲು, ತೊಡಲು, ನನಗೆ ರನ್ನದೊಡವೆಗಳು ಬೇಕಿಲ್ಲ, ಚಿನ್ನದಾಭರಣಗಳು ಬೇಕಿಲ್ಲ, ಬೆಲೆಬಾಳ್ವ ಪೀತಾಂಬರಗಳು ಬೇಕಿಲ್ಲ. ನನಗೆ ನೀನೊಬ್ಬನೇ ಬೇಕು. ನನಗೆ ಭೋಗಭಾಗ್ಯಗಳು ಬೇಕಿಲ್ಲ, ಸಿರಿಸಂಪದಗಳು ಬೇಕಿಲ್ಲ, ನನಗೆ ನೀನೊಬ್ಬನೇ ಬೇಕು. ನನಗೆ ಮೇಣೆ, ಪಲ್ಲಕ್ಕಿ, ಛತ್ರ,ಚಾಮರ, ಆನೆ, ಒಂಟೆ, ಕುದುರೆಗಳು ಬೇಕಾಗಿಲ್ಲ, ನನಗೆ ನೀನೊಬ್ಬನೇ ಬೇಕು. ಅರಮನೆಯ ಆಡಂಬರ, ಅಂಸೊತ್ತಿಗೆಯ ಸಂಭ್ರಮ ನನಗೆ ಬೇಕಾಗಿಲ್ಲ, ನನಗೆ ನೀನೊಬ್ಬನೇ ಬೇಕು ಎಂಬುದೇ ಒಂದು ಅಂಕಿಯನ್ನು ಬರೆದುದರ ತಾತ್ಪರ್ಯವೆಂದು ಹೇಳಲು, ರಾಜನಿಗೆ ಆಶ್ಚರ್ಯವಾಯಿತು. ಆಮೇಲೆ ರಾಜನು 'ನನಗೆ ನೀನೊಬ್ಬನೇ ಬೇಕು'

ಎಂದು ಹಂಬಲಿಸಿ ಬರೆದ ಪ್ರೇಯಸಿಯೊಡನೆಯೇ ಇದ್ದು ಬಿಟ್ಟನು.

ಲಿಂಗದೇವನೇ ಪತಿಯೆಂದು ತಿಳಿದ ಶರಣ ಸತಿಯಾದರೂ ಲಿಂಗ ದೇವನನ್ನು ವಿಷ್ಣು ಮಭಕ್ತಿಯಿಂದ, ಅನನ್ಯ ಭಕ್ತಿಯಿಂದ ಸೇವಿಸುವಳು.

ಶಿವಲಿಂಗ ಪೂಜೆಯು, ವಿಶಿಷ್ಟಕಾಲ, ಹಾಗೂ ಸಾಮಾನ್ಯ ಕಾಲಗಳಲ್ಲಿ ಮಾಡು ಮೂಲಕ ಅದು ಉತ್ತಮೋತ್ತಮ ಪೂಜೆ, ಉತ್ತಮ ಪೂಜೆ, ಮಧ್ಯಮ ಪೂಜೆ, ಅಧಮ ಪೂಜೆ ಎಂದು ನಾಲ್ಕು ವಿಧವಾಗಿ ಅನುಭಾವಿಗಳು ವಿಂಗಡಿಸಿರುವರು. ಬ್ರಾಹ್ಮೀ ಮುಹೂರ್ತ ದಲ್ಲಿ ಮಾನವ ಕೋಟಿಯೆಲ್ಲ ನಿದ್ರೆಯಿಂದ ಕಣ್ಮುಚ್ಚಿ ಮೌನಮುದ್ರೆಯನ್ನು ತಾಳಿರುತ್ತ ದನಕರುಗಳು ತಮ್ಮ ತಮ್ಮ ಕೊಟ್ಟಿಗೆಯಲ್ಲಿ ಮಲಗಿರುತ್ತವೆ. ಹಕ್ಕಿ ಪಕ್ಕಿಗಳು ಗಿಡಮರ ಲ್ಲಿಯ ತಮ್ಮ ಗೂಡುಗಳಲ್ಲಿ ಹಾಯಾಗಿ ನಿದ್ದೆಮಾಡುತ್ತವೆ. ಇಂಥಹ ನಿಶ್ಶಬ್ದ, ನಿ ಪ್ರಶಾಂತ ವಾತಾವರಣದಲ್ಲಿ ಮಾಡುವ ಪೂಜೆಯು ಉತ್ತಮೋತ್ತಮ ಪೂಜೆ ಅಂದರೆ ಅರುಣೋದಯದಲ್ಲಿ ಮಾಡುವ ಪೂಜೆಯು. ಸೂರ್ಯೋದಯದ ನಂ ಮಾಡುವ ಪೂಜೆಯು ಮಧ್ಯಮ ಪೂಜೆಯು.

ಸರಕುಗಳ ತೇಜಿ ಮಂದಿ ತಿಳಿದುಕೊಳ್ಳುವ ಉದ್ದೇಶ ಫೋನು ಮಾಡುವದು. ಬ ಸಲ್ಲಿ ಚಕ್ಕು ಮುರಿಸುವದು, ಕರಣಿಕರಿಂದ ವಿವಿಧ ಕೆಲಸ ತಕ್ಕೊಳ್ಳುವದು, ಗಳಿಕೆ ಲೆಕ್ಕ ನೋಡುವದು, ಇವೇ ಮುಂತಾದ ಕರ್ಮ ಕೋಟಲೆಯಿಂದ ಯಜಮಾನನ ಮ ಗಾಳಿಗಿಟ್ಟ ದೀಪದಂತೆ, ಬಿರುಗಾಳಿಯಿಂದ ಆಲ್ಲೋಲಕಲ್ಲೋಲವಾದ ಸಾಗರದಂತೆ ಯ್ದಾಡ ಹತ್ತುವದು. ಬಾಹ್ಯ ಪ್ರಪಂಚದಲ್ಲಿಯೂ, ಹಾಗೂ ಅಂತರ್ಮಾನಸ ಪ್ರ ದಲ್ಲಿಯೂ ಪ್ರಕ್ಷುಬ್ಧವಿರುವ ಸನ್ನಿವೇಶದಲ್ಲಿ ಮಾಡುವ ಪೂಜೆಯು ಅಧಮಪೂಜೆಯು.

> " ಉತ್ತಮಂ ಶಿವಲಿಂಗಪೂಜೆಯದು ಬಹಳನ ।
> ಕ್ಷತ್ರವಿಹ ಕಾಲದೊಳು ಮಧ್ಯಮಂ ಮತ್ತಲ್ಪ ತಾರಕೆ ಗ
> ಳುಳ್ಳ ಕಾಲದೊಳಧಮ ಪೂಜೆ ದಿನಕರನುದಯದಿ ।
> ವ್ಯರ್ಥವಶನಾರ್ಥಕಾಲದೊಳು ಲಿಂಗಾರ್ಚನೆಯು ...... "

ಎಂದು ಸಮಯ ಭೇದದಿಂದ ಪೂಜೆಯೂ ತಾರತಮ್ಯ ಹೊಂದುವದಾಗಿ ಹೇಳಿರು ಅಕ್ಕಮಹಾದೇವಿಯು ಮಾಡುವ ಪೂಜೆಯು ಉತ್ತಮೋತ್ತಮವಾಗಿತ್ತು.

> " ಇಷ್ಟಲಿಂಗವ ದೃಷ್ಟಿಯಿಂದ ಗ್ರಹಿಸಿ, ಪ್ರಾಣಲಿಂಗವ ಮನೋಜ್ಞ
> ದಿಂದ ಗ್ರಹಿಸಿ, ತೃಪ್ತಿಲಿಂಗವ ಭಾವಜ್ಞಾನದಿಂದ ಗ್ರಹಿಸಿ
> ಲಿಂಗತ್ರಯವಿಡಿದು ಆಚರಿಸಿ ಲಿಂಗದೊಡನೆ ಕೂಡಿ ಲಿಂಗವೇ
> ತಾನಾಗಿ ವಿರಾಜಿಸುತ್ತಿರ್ಪುದೀಗ ಶಿವಯೋಗನೋಡಾ ಮಹಾ
> ಗುರುಶಿವಸಿದ್ಧೇಶ್ವರ ಪ್ರಭುವೇ "

ದೀಪ, ದೀಪದ ಕಿರಣ, ದೀಪಪ್ರಭೆ ಈ ಮೂರರಲ್ಲಿ ಹೇಗೆ ಅವಿಭಾಜ್ಯ ಸಂಬಂ ವಿರುವದೋ ಹಾಗೆ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳಿಗೆ ಅವಿಭಾಜ್ಯ

ವುಂಟು. ಮನೆಯತುಂಬ ಬಿದ್ದಿರುವ ಕಿರಣಗಳಿಗೂ, ಮನೆಯ ತುಂಬ ವ್ಯಾಪಿಸಿರುವ ಪ್ರಭೆಗೂ ದೀಪವೇ ಆಧಾರವಾದಂತೆ ಮನ, ಕರಣ, ಇಂದ್ರಿಯಗಳನ್ನು ವ್ಯಾಪಿಸಿರುವ ಪ್ರಾಣಲಿಂಗಕ್ಕೂ ಮತ್ತು ಭಾವದಲ್ಲಿ ಬೆಳಗುವ ಚಿಜ್ಜ್ಯೋತಿಯಾದ ಭಾವಲಿಂಗಕ್ಕೂ ಇಷ್ಟ ಲಿಂಗವೇ ಆಧಾರವಾಗಿರುವದು.

ತೋಂಟದ ಸಿದ್ಧಲಿಂಗಶಿವಯೋಗಿಗಳ ಉಕ್ತಿಯಂತೆ ಇಷ್ಟಲಿಂಗವನ್ನು ಅಷ್ಟವಿಧಾರ್ಚನೆ ಷೋಡಶೋಪಚಾರಗಳಿಂದ ಪೂಜೆಮಾಡಿ, ದೃಷ್ಟಿಯೋಗದಿಂದ ಅಂದರೆ ತ್ರಾಟಕ ಯೋಗದಿಂದ ನೋಡಿ,

" ನಿಮ್ಮ ತೇಜವ ನೋಡಲೆಂದು ಹೆರಸಾರಿ ನೋಡುತ್ತಿರಲು,
ಶತಕೋಟಿ ಸೂರ್ಯರು ಮೂಡಿದಂತಿರ್ದುದಯ್ಯಾ!
ಮಿಂಚಿನ ಬಳ್ಳಿಯ ಸಂಚವಕಂಡೆ,
ಎನಗಿದು ಸೋಜಗವಾಯಿತ್ತು,
ಗುಹೇಶ್ವರಾ ನೀನು ಜ್ಯೋತಿರ್ಲಿಂಗವಾದರೆ
ಉಪಮಿಸಿ ನೋಡಬಲ್ಲವರಿಲ್ಲವಯ್ಯಾ "

ಎಂಬ ಪ್ರಭುವಿನ ಉಕ್ತಿಯಂತೆ ಮಹಾ ಪ್ರಕಾಶವ ಕಂಡು ನಲಿದಾಡುತ್ತಿದ್ದಳು. ಮನಃಕರಣ ಇಂದ್ರಿಯ ಪ್ರಾಣಂಗಳಲ್ಲೆಲ್ಲ ಚಿತ್ಪ್ರಕಾಶವೇ ತುಂಬಿತುಳುಕುತ್ತಿತ್ತು. ವಾಯುಪ್ರಾಣಿಯಾಗದೇ ಲಿಂಗಪ್ರಾಣಿ ಅಥವಾ ಪ್ರಾಣಲಿಂಗಿಯಾಗುತ್ತಿದ್ದಳು. ಪ್ರಾಣಲಿಂಗವನ್ನು ಆಂತರಿಕ ಮಾನಸಿಕ ಉಪಕರಣಗಳಿಂದ ಅಂದರೆ ಶಾಂತಿಜಲ, ಜ್ಞಾನದೀಪ, ತ್ರಿಕರಣ, ತಾಂಬೂಲ, ಆತ್ಮಾರ್ಪಣ, ನೈವೇದ್ಯ ಮುಂತಾದವುಗಳಿಂದ ಪೂಜಿಸಿ–

« ಭಾವಲಿಂಗವನು ಬಿಡದೆ ನೀನು ಪರಿಭಾವಿಸು ಭೇದವಿಲ್ಲದೆ ಯೋಗಿ »

ಎಂಬ ನಿಜಗುಣಶಿವಯೋಗಿಗಳ ಉಕ್ತಿಯಂತೆ ಅಭೇದ ಭಾವನೆಯಿಂದ ಅನುಸಂಧಾನ ಮಾಡಿ ಸಾಮರಸ್ಯಾನಂದವನ್ನು ಪಡೆಯುತ್ತಿದ್ದಳು, ಅಂಗ–ಲಿಂಗವೆಂಬ ದ್ವೈತದಿಂದ ಪ್ರಾರಂಭವಾದ ಉಪಾಸನೆಯು ಕಟ್ಟಕಡೆಗೆ ಅದ್ವೈತದಲ್ಲಿ ಕೊನೆಗಾಣುವ ಪರಿಯನ್ನು ಮಹಾದೇವಿಯಕ್ಕ –

" ಲಿಂಗವೆನ್ನೆ, ಲಿಂಗೈಕ್ಯವೆನ್ನೆ, ಸಂಗವೆನ್ನೆ, ಸಮರಸವೆನ್ನೆ!
ಆಯಿತೆನ್ನೆ, ಆಗದೆನ್ನೆ, ನೀನೆನ್ನೆ, ನಾನೆನ್ನೆ,
ಚೆನ್ನಮಲ್ಲಿಕಾರ್ಜುನನಲ್ಲಿ ಲಿಂಗೈಕ್ಯವಾದ ಬಳಿಕ ಏನೂಎನ್ನೆ "

ಎಂಬ ವಚನದಲ್ಲಿ ಹೇಳಿರುವಳು.

" ಭಕ್ತನೆನಿಸುವೆನಯ್ಯ ಮೆಲ್ಲಮೆಲ್ಲನೆ;
ಯುಕ್ತನೆನಿಸುವೆನಯ್ಯ ಮೆಲ್ಲಮೆಲ್ಲನೆ;
ಸಾರಿ ಶರಣನೆನಿಸುವೆನಯ್ಯ ಮೆಲ್ಲಮೆಲ್ಲನೆ;

ಎಂಬ ಬಸವಣ್ಣನವರ ಉಕ್ತಿಯಂತೆ ಹಂತಹಂತವಾಗಿ ಭಕ್ತ ಸ್ಥಲದಿಂದ ಐಕ್ಯಸ್ಥಲ... ಆರೋಹಣ ಮಾರ್ಗದಿಂದ–

" ಅಹಂತ್ವಮಿತಿ ಶಬ್ದ ವಿಭೇದವಡಂಗಿ ತೋರ್ಪೊಡಾತನ ಪ...
ನಿಷ್ಕಲ ಮಹಾಸ್ಥಲಯುಕ್ತಿವಿದಂ ಶಿವಾಧವಾ "

ಎಂಬ ಮಾಯಿದೇವರ ಉಕ್ತಿಯಂತೆ ನಾನು ನೀನಿಲ್ಲದ, ನೀನು ನಾನಿಲ್ಲದ ಎಂಬ ಅ... ಭಾವನೆಯುಳ್ಳ ಐಕ್ಯಸ್ಥಲಕ್ಕೆ ಮುಟ್ಟಿ ಅಲ್ಲಿಂದ ಅಂದರೆ ಐಕ್ಯಸ್ಥಲದಿಂದ ಕ್ರಮಶಃ ... ಸ್ಥಲಕ್ಕೆ, ಶರಣಸ್ಥಲದಿಂದ ಪ್ರಾಣಲಿಂಗಿ ಸ್ಥಲಕ್ಕೆ ಆವರೋಹಣ ಮಾರ್ಗದಿಂದ ಇಷ್ಟ... ಗೋಪಾಸಕನು ಇಳಿದಿಳಿದು ಪೂಜ್ಯ-ಪೂಜಕ ಭಾವದ ಭಕ್ತಸ್ಥಲಕ್ಕೆ ಬಂದು ನಿಲ್ಲಬೇಕು.

"ಹುಟ್ಟಿದೆ ಶ್ರೀಗುರುವಿನ ಹಸ್ತದಲ್ಲಿ, ಬೆಳೆದೆನು ಅಸಂಖ್ಯಾತರ ಕರುಣದ... ಭಾವವೆಂಬ ಹಾಲು, ಸುಜ್ಞಾನವೆಂಬ ತುಪ್ಪ, ಪರಮಾರ್ಥವೆಂಬ ಸಕ್ಕರೆಯ ನ... ನೋಡಾ, ಇಂತಪ್ಪ ತ್ರಿವಿಧಾಮೃತವ ದಣಿಯಲೆರೆದು ಸಲಹಿದರೆನ್ನ, ವಿವಾಹವ ಮಾ... ಸಯುವಪ್ಪ ಗಂಡಂಗೆ ಕೊಟ್ಟರಿ. " ಎಂದು ತಾನೇ ಹೇಳಿಕೊಂಡಂತೆ ಲಿಂಗ ಪತಿ... ಮದುವೆಯಾದ ಮಹಾದೇವಿಯು ಪತಿಭಕ್ತಿಯಿಂದ ಲಿಂಗಪೂಜೆಯನ್ನು ಮಾಡುತ್ತ ... ದಿಂದ ಕಾಲ ಕಳೆಯಹತ್ತಿದಳು.

## ೧೦ನೆಯ ಗತಿ

# ಮಹಾದೇವಿಯಕ್ಕನ ಚರಿತ್ರೆ

ಮಹಾದೇವಿಯಕ್ಕನ ತಂದೆ ತಾಯಿಗಳು ನಿರ್ಮಲ-ಸುಮತಿಯರೆಂದು ಚಾಮರಸನೂ, ಶಿವಭಕ್ತ-ಶಿವಭಕ್ತೆಯರೆಂದು ಹರಿಹರನೂ, ಓಂಕಾರಶೆಟ್ಟಿ-ಲಿಂಗಮ್ಮರೆಂದು ಮಹಾದೇವಿಯಕ್ಕನ ಸಾಂಗತ್ಯದ ರಾಚಯ್ಯ ಕವಿಯೂ ಹೇಳುವರು. ಈ ಹೆಸರುಗಳು ಒಂದಕ್ಕಿಂತ ಒಂದು ಹೆಚ್ಚು ಅರ್ಥಪೂರ್ಣವಾಗಿವೆ; ತಾತ್ವಿಕಾರ್ಥದಿಂದ ತುಂಬಿ ತುಳುಕುತ್ತವೆ. ಜಗಜ್ಜನನಿಯಾದ ಪಾರ್ವತಿಯ ಸಾತ್ವಿಕಕಳೆಯು ಅವತರಿಸಲು ಸಾತ್ವಿಕ ದಂಪತಿಗಳೇ ಇರಬೇಕಲ್ಲವೇ?

ನಿರ್ಮಲ ಹೃದಯದಿಂದ ಶಂಭುವನ್ನು ನಂಬಿದ ಅಂಬುಜಾಕ್ಷಿಗೆ ಬಾಲ್ಯಶೈಶವಗಳು ಕಳೆಯಲು ತುಂಬು ಜವ್ವನ ಪ್ರಾಪ್ತವಾಗಿ ಮೊಲೆ, ಮುಡಿ, ನಿತಂಬಗಳು ತುಂಬಕೊಂಡವು. ಯೌವನದಲ್ಲಿ ಕಾಲಿಕ್ಕುತ್ತಲೇ ಸಾಮಾನ್ಯ ಜನರ ಅಂಗೋಪಾಂಗಗಳು ಮಾತ್ರ ತುಂಬಿ ತುಳುಕಿದರೆ, ತಾರುಣ್ಯದಲ್ಲಿ ಕಾಲಿಟ್ಟ ಅಸಾಮಾನ್ಯಳಾದ ಅಕ್ಕಮಹಾದೇವಿಯ ಅಂಗೋ-ಪಾಂಗಗಳು ತುಂಬಿಕೊಳ್ಳುವದರೊಡನೆ ಲಿಂಗನಿಷ್ಠೆಯೂ ತುಂಬಿತುಳುಕಿತು.

" ತುಂಬಿ ಲಿಂಗದ ನಿಷ್ಠೆಯೊಡನೆ ನಿ ।
ತಂಬ ಮೊಲೆ ಮುಡಿ ಹೆಚ್ಚಿ ಬೆಳೆದವು ।
ಶಂಭುವಿನ ಸತ್ಕರ್ಮ ಭಕ್ತಿ ಜ್ಞಾನವೆಂಬಂತೆ ।
ಶಂಬರಾರಿಯ ಶಸ್ತ್ರಹತಿಯ ವಿ ।
ಡಂಬನೆಯ ಧಿಕ್ಕರಿಸಿ ತೋರುವೆ ।
ನೆಂಬ ಭರದಲಿ ಜವ್ವನವ ಹೇರಿದಳು ಮಹಾದೇವಿ "

ಒಂದು ಸುಂದರ ಸುಮನೋಹರ ಲತೆ, ಅಲ್ಲಿ ಒಂಭತ್ತು ಕಮಲಗಳು ಅರಳಿ ಸುಗಂಧ ಸೌರಭ ಸೂಸುತ್ತಲಿವೆ, ಆ ಕಂಪಿನ ಸೋಂಪಿಗೆ ಝೇಂಕೃತಿಗೈವ ದುಂಬಿಗಳು ಬಂದು ಮುತ್ತಿ ಮುಸುಕಿ ಮಧುಪಾನವ ಮಾಡುತ್ತಲಿವೆ. ಬಾಹ್ಯ ಪ್ರಪಂಚದಲ್ಲಿರುವ ಲತೆ, ಲತೆಗೆ ಬಿಟ್ಟಿರುವ ಕಮಲಗಳು, ಕಮಲಗಳಲ್ಲಿಯ ಮಧು, ಮಧುವನೀಂಟುವ ಆರಡಿಗಳು, ಈ ಎಲ್ಲ ವಿವರಗಳನ್ನು ಅಂತರಂಗ ಪ್ರಪಂಚಕ್ಕೆ ಸಮನ್ವಯಮಾಡಿ ಆಧ್ಯಾತ್ಮವಾದಿಗಳು ಪ್ರತಿಪಾದಿಸಿರುವರು.

ಗುರು ಕರುಣೆಯಿಂದ ಪರಿಶುದ್ಧವಾದ ಮಹಾತನುವೇ ಒಂದು ಸುಂದರ ಸುಮನೋಹರ ಲತೆ, ಅಲ್ಲಿ ೪-೬, ೧೦-೧೨, ೧೬-೨, ಒಂದು ಸಾವಿರ, ೩-೧ ದಳಗಳುಳ್ಳ ಕಮಲಗಳು. ಅಲ್ಲಿರುವ ಆಚಾರಲಿಂಗ, ಗುರುಲಿಂಗ ಮೊದಲಾದ ನವಲಿಂಗಗಳೇ ದುಂಬಿಗಳು. ಅವು ಓಂಕಾರದ ಝೇಂಕಾರ ದನಿಗೈಯುತ್ತ ಚಿದಾನಂದರಸವ ಕುಡಿಯುತ್ತಲಿವೆ ಎಂಬುದನ್ನೇ ಶಿವಾನುಭಾವಿಗಳಾದ ಮೈಲಾರದ ಬಸವಲಿಂಗ ಶರಣರು-

" ಅಂಗದ ಲತೆ ಕಮಲಂಗಳೊಳಗೆ ನವಲಿಂಗ ತುಂಬಿ ।
ಮಂಗಲ ಘೋಷದಿ ಝೇಂಕರಿಸುತಲಿದೆ ಲಿಂಗತುಂಬಿ "

ಎಂಬ ಪದ್ಯದಲ್ಲಿ ಎಲ್ಲದರ ಸಮನ್ವಯಮಾಡಿ ಸಮೀಚೀನವಾಗಿ ಹೇಳಿರುವರು.

"ವಚನದಲ್ಲಿ ನಾಮಾಮೃತ ತುಂಬಿ, ನಯನದಲ್ಲಿ ಮೂರುತಿ ತುಂಬಿ,
ಮನದಲ್ಲಿ ನೆನಹು ತುಂಬಿ, ಕಿವಿಯಲ್ಲಿ ಕೀರುತಿ ತುಂಬಿ,
ಕೂಡಲ ಸಂಗಮದೇವಾ ನಿಮ್ಮ ಚರಣ ಕಮಲದೊಳಗಾನುತುಂಬಿ,

"ಕಣ್ಗಳು ತುಂಬಿದ ಬಳಿಕ ನೋಡಲಿಲ್ಲ,
ಕಿವಿಗಳು ತುಂಬಿದ ಬಳಿಕ ಕೇಳಲಿಲ್ಲ,
ಕೈಗಳು ತುಂಬಿದ ಬಳಿಕ ಪೂಜಿಸಲಿಲ್ಲ,
ಮನ ತುಂಬಿದ ಬಳಿಕ ನೆನೆಯಲಿಲ್ಲ,
ಮಹಂತ ಕೂಡಲಸಂಗಮದೇವನ" ॥

"ತುಂಬಿ ಪರಿಮಳವನುಂಡುದೋ ?
ಪರಿಮಳ ತುಂಬಿಯನುಂಡುದೋ ?
ಲಿಂಗಪ್ರಾಣವಾಯಿತೋ ? ಪ್ರಾಣಲಿಂಗವಾಯಿತೋ ?
ಗುಹೇಶ್ವರ ಈ ಉಭಯ ಭೇದವ ನೀನೆಬಲ್ಲೆ"

"ತುಂಬಿ ಬಂದರೆ ಪರಿಮಳ ಓಡಿತ್ತುಕಂಡೆ,
ದೇವ ಬಂದರೆ ದೇಗುಲ ಓಡಿತ್ತುಕಂಡೆ,

ಮುಂತಾದ ವಚನಗಳಲ್ಲಿ ಬರುವ ತುಂಬಿ ಪದವು ನಾಮ ಪದವಾಗಿಯೂ. ಕ್ರಿಯಾಪದವಾಗಿಯೂ ಬಳಸಲ್ಪಟ್ಟಿದೆ,

"ಹೊಳೆಯು ತುಂಬಿ ಹರಿಯುತ್ತದೆ" ಇಲ್ಲಿ ಪ್ರಯೋಗಿಸಲ್ಪಟ್ಟ ತುಂಬಿ, ಪದವು ಕ್ರಿಯಾಪದವಾಗಿದೆ. ತುಂಬಿಯು ಹೂವಿಂದ ಹೂವಿಗೆ ಹಾರಿ ಮಕರಂದವನ್ನು ಕುಡಿಯುತ್ತದೆ. ಇಲ್ಲಿ ಪ್ರಯೋಗಿಸಲ್ಪಟ್ಟ ತುಂಬಿ ನಾಮಪದವಾಗಿದೆ. ಮೇಲ್ಕಾಣಿಸಿದ ವಚನಗಳಲ್ಲಿ ಬರುವ ತುಂಬಿ ಪದವು ಸಂದರ್ಭಕ್ಕನುಸರಿಸಿ ಉಭಯಾರ್ಥಗಳನ್ನು ಕೊಡುತ್ತದೆ. ಸಾಧಕ ಅಥವಾ ಸಾಧಕಿಯ ತನು, ಮನ, ಭಾವಂಗಳು, ಸತ್ಕ್ರಿಯೆ, ಸುವಿಚಾರ, ಸದ್ಭಾವನೆ ತುಂಬಿ ತುಳುಕುತ್ತಿರಬೇಕು.

ಜಾಗತಿಕ ಮಹಿಳೆಯರಲ್ಲಿ ನಡೆಯುವ ಸೌಂದರ್ಯದ ಸ್ಪರ್ಧೆಗೆ ನಿಲ್ಲಿಸಿದರೆ ಆ ಸ್ಪರ್ಧೆಯಲ್ಲಿ ಪ್ರಪ್ರಥಮ ಸ್ಥಾನ ಗಳಿಸುವಷ್ಟು ಅಕ್ಕಮಹಾದೇವಿ ರೂಪವತಿಯಾಗಿದ್ದಳು. ದೇಹದ ಅಂಗೋಪಾಂಗಗಳು ಜವ್ವನದಿಂದ ತುಂಬಿ ತುಳುಕುವಂತೆ, ಆಕೆಯ ತನು, ಮನ, ಭಾವಂಗಳು ಲಿಂಗನಿಷ್ಠೆಯಿಂದ ತುಂಬಿತುಳುಕುತ್ತಿದ್ದವು. ಮಹಾದೇವಿಯಕ್ಕ ಪ್ರಾತಃಕಾಲ ಲಿಂಗ ಪೂಜೆಯನ್ನು ಮಾಡಿ ಪೂಜಾ ಮಂದಿರದಿಂದ ಪಡಸಾಲೆಗೆ ಬರುವಷ್ಟರಲ್ಲಿ ಕಿವಿಗಿಕ್ಕುವಂತಹ ಮಹಾಧ್ವನಿ ಕೇಳಿಸಿತು. ಬಾಗಿಲಲ್ಲಿ ಹಣಿಕಿಹಾಕಿ ನೋಡಲು ಊರದೊರೆಯಾದ ಕೌಶಿಕ ಮಹಾರಾಜನ ಸಂಭ್ರಮದ ಮಹೋತ್ಸವ "ಗುರುಃ ಸಾಕ್ಷಾತ್ ಪರಬ್ರಹ್ಮ"

ಸಚ್ಛಿಷ್ಯರು ಸದ್ಗುರುಗಳನ್ನು ಹೇಗೆ ಪ್ರತ್ಯಕ್ಷ ದೇವರೆಂದೇ ಭಾವಿಸುವರೋ ಹಾಗೆ ಅಂದಿನ ಪ್ರಜೆಗಳು, '' ರಾಜಾ ಪ್ರತ್ಯಕ್ಷ ದೇವತಾ '' ಅಂದರೆ ರಾಜನನ್ನು ಪ್ರತ್ಯಕ್ಷ ದೇವರೆಂದೇ ತಿಳಿಯುತ್ತಿದ್ದರು. ಪ್ರಜೆಗಳೇ ಪ್ರಭುವಾಗಿ ಆಳುವ ಪ್ರಜಾಪ್ರಭುತ್ವದ ಕಾಲವಿಂದು ಇದ್ದರೆ ರಾಜರೇ ಸಾರ್ವಭೌಮರಾಗಿ ಸರ್ವಾಧಿಕಾರಿಗಳಾಗಿ ಆಳುವ ಕಾಲವು ಅಂದುಇತ್ತು.

ಮಹಾರಾಜನ ಮಹೋತ್ಸವವನ್ನು ಸಂಭ್ರಮದಿಂದ ಮಾಡುವದಕ್ಕಾಗಿ ಪ್ರಜೆಗಳೆಲ್ಲರೂ ಪಟ್ಟಣವನ್ನು, ತಳಿರು ತೋರಣಗಳಿಂದಲೂ, ಸುಸ್ವಾಗತಂ ಎಂದು ಬರೆದ ಕಮಾನುಗಳಿಂ- ದಲೂ ಸಿಂಗರಿಸಿದ್ದರು. ಕಹಳೆ, ಭೇರಿ, ನಗಾರಿ, ತುತ್ತೂರಿ, ಸನಾದಿ ಮೊದಲಾದ ವಾದ್ಯ ಗಳ ಸುಮನೋಹರ ಸುನಾದವು ದಿಗ್ದಿಗಂತಗಳಲ್ಲಿ ತುಂಬಿತ್ತು. ಆನೆ, ಕುದುರೆ, ಕಾಲಾಳು ಗಳು ಸಾಲುಸಾಲಾಗಿ ನಿಂತುಕೊಂಡಿವೆ. ಸಾವಿರಾರು ಸುಮಂಗಲೆಯರಾದ ಮುತ್ತೈದೆಯರು ಮುತ್ತಿನಾರತಿಗಳನ್ನು ಎತ್ತಿಹಿಡಿದು ನಿಂತಿದ್ದಾರೆ. ಇಂತಹ ಪ್ರಚಂಡ ಜನಸಾಗರದ ಮಧ್ಯ ದಲ್ಲಿ ರತ್ನಕಿರೀಟದಿಂದಲೂ, ರತ್ನಾಭರಣಗಳಿಂದಲೂ ರಾಜವೇಷದಿಂದಲೂ ಭೂಷಿತನಾದ ಕೌಶಿಕಮಹಾರಾಜನು ಉತ್ಸವದ ಮಧ್ಯದಲ್ಲಿ ಸಿಂಗರಿಸಿದ ಆನೆಯ ಮೇಲಿರುವ ಚಿನ್ನದಂ- ಬಾರಿಯಲ್ಲಿ ರಾಜಠೀವಿಯಿಂದ ಕುಳಿತಿದ್ದಾನೆ.

ಸೈನಿಕರು ತಲೆಬಾಗಿ ಕೈಮುಗಿದು ಸಲ್ಲಿಸುವ ಗೌರವಾದರದ ವಂದನೆಗಳನ್ನು, ಪ್ರಜೆಗಳೀಯುವ ಕಾಣಿಕೆಗಳನ್ನು, ಸಂಘ ಸಂಸ್ಥೆಗಳ ಪೂಮಾಲೆಗಳನ್ನು ಸ್ವೀಕರಿಸುತ್ತ, ಪಟ್ಟಣದ ಸೌಂದರ್ಯವನ್ನು ನೋಡುತ್ತ ಕೌಶಿಕ ರಾಜನು, ಮುನ್ನಡೆದಾಗ ಉತ್ಸವವನ್ನು ನೋಡಲು ಮೇಲುಪ್ಪರಿಗೆಗಳ ಮೇಲೆನಿಂತ ಸುಮಂಗಲೆಯರಲ್ಲಿ ಓರ್ವ ದಿವ್ಯ ಕನ್ಯಾ ರತ್ನವು ಕಣ್ಣಿಗೆ ಬಿದ್ದಿತು.

ಆ ಪೆಣ್ಮಣಿಯನ್ನು ಕಂಡಾಕ್ಷಣ ಕೌಶಿಕನು ಕಾಮಾಂಧನಾದನು. ಉತ್ಸವವು ಮುಂದೆ ಪಟ್ಟಣದಲ್ಲಿ ನಡೆಯಬಾರದೆಂದು ಕಟ್ಟಪ್ಪಣೆ ಮಾಡಿ,ಉತ್ಸವವನ್ನು ರಾಜಧಾನಿಗೆ ಹಿಂತಿರು ಗಿಸಿದನು. ರಾಜನ ಮಹೋತ್ಸವವು ಅರ್ಧಕ್ಕೇನೇ ಹಿಂತಿರುಗಿದ್ದರಿಂದ ಪ್ರಜೆಗಳು ಬಹಳ ವಿಷಾದಪಟ್ಟರು. ಏನಾಯಿತು ? ಆರೇನು ಮಾಡಿದರು ? ಉತ್ಸವ ಹಿಂದಿರುಗಲು ಏನು ಕಾರಣ ಎಂದು ಎಲ್ಲರೂ ಒಬ್ಬರಿಗೊಬ್ಬರು ಮಾತನಾಡುವವರೇ.

ನನ್ನ ಪ್ರೇಮದ ಪ್ರಜೆಗಳು ಅಮಿತೋತ್ಸಾಹದಿಂದ ಪಟ್ಟಣವನ್ನು ಸಿಂಗರಿಸಿ ನನ್ನ ಸಂದರ್ಶನಕ್ಕಾಗಿ ಹಾದೀಕಾಯುತ್ತಿರುವರು ಅವರ ಗತಿಯೇನು ? ಮಹಾರಾಜನಾದ ನಾನು ಒಂದು ಹೆಣ್ಣಿನ ಮೋಹಕ್ಕೋಸ್ಕರವಾಗಿ ಈ ಮಹೋತ್ಸವವನ್ನು ಹಿಂದಿರುಗಿಸಿದರೆ ಜನರು ಏನಂದಾರು ? « ಪ್ರಜಾನಾಂರಂಜನಾತ್‌ರಾಜಾ » ಯಾರು ತಮ್ಮ ಸದ್ಗುಣರಾಶಿ ಯಿಂದ ಜನರನ್ನು ಸಂತೋಷಪಡಿಸುವರೋ ಅವರೇ ರಾಜರು, ಮುಂತಾದ ಸುವಿಚಾರಗ ಳನ್ನೆಲ್ಲ ಮೂಲೆಗೊತ್ತಿದನು. '' ಕಾಮಾತುರಾಣಾಂ ನಭಯಂ ನಲಜ್ಜಾ » ಎಂಬುಕ್ತಿಯಂತೆ ರಾಜನ ಪಾಡಾಗಿ ವಿವೇಕಭ್ರಷ್ಟನಾದನು.

" ಯೌವನಂಧನಸಂಪತ್ತಿಃ ಪ್ರಭುತ್ವಮವಿವೇಕಿತಾ ।
ಏಕೈಕಮಪ್ಯನರ್ಥಾಯ ಕಿಮುತತ್ರ ಚತುಷ್ಟಯಂ " ॥

ಮಾನವನ ಅಧಃಪತನಕ್ಕೆ ಯೌವನ, ಸಂಪತ್ತು, ಅಧಿಕಾರ ಈ ಮೂರು ಕಾರಣಗಳು ಗಿದ್ದರೂ ಈ ಮೂರರ ಜೊತೆಗೆ –

" ಹೇಯೋಪಾದೇಯಂ ವಿಚಾರೋ ವಿವೇಕಃ "

ಒಳಿತಾವುದು ? ಕೆಡಕಾವುದು ? ಪೂಜ್ಯವಾವುದು ? ತ್ಯಾಜ್ಯವಾವುದು ? ಇವುಗಳ ಪ್ರಣ ರಣ ಮಾಡುವ ವಿವೇಕವೊಂದಿದ್ದರೆ ಯೌವನ, ಸಂಪತ್ತು, ಅಧಿಕಾರಗಳು ಏನೂ ಮಾಡ ರವು. ಈ ಮೂರರ ಜೊತೆಗೆ ವಿವೇಕವೊಂದಿಲ್ಲದಿದ್ದರೆ–

" ಮರ್ಕಟಸ್ಯ ಸುರಾಪಾನಂ ತಸ್ಯ ವೃಶ್ಚಿಕದಂಶನಂ ।
ತನ್ಮಧ್ಯೇ ಭೂತಸಂಚಾರಃ ಯದ್ವಾತದ್ವಾ ಭವಿಷ್ಯತಿ " ॥

ಮಂಗನಿಗೆ ಸೆರೆ ಕುಡಿಸಿ, ಚೇಳು ಕಡಿಸಿ ಪಿಶಾಚಿ ಹಿಡಿಸಿದಂತೆ ಆಗುವದೆಂದು ಜ ಹೇಳುವರು.

ವಿವೇಕಭ್ರಷ್ಟನಾದ ರಾಜನು ಮಂತ್ರಿಗಳನ್ನು ಏಕಾಂತದಲ್ಲಿ ಕರೆಯಿಸಿ ಮಂತ್ರಿ ಉತ್ಸವ ಹಿಂದಿರುಗಿಸಿದ ತಾಣದಲ್ಲಿಯೇ ಒಂದು ಮೇಲುಪ್ಪರಿಗೆಯ ಮನೆಯಿದೆ. ಉ ವನ್ನು ನೋಡಲು ನಿಂತಿದ್ದ ಸುಮಂಗಲೆಯರ ಮಧ್ಯದಲ್ಲಿ ದಿವ್ಯಸುಂದರಿಯಾದ ಕನ್ಯೆಯನ್ನು ನೋಡಿದೆನು. ಆ ಕನ್ಯೆಯನ್ನು ನೋಡಿದಾಗಿನಿಂದ ನನ್ನ ಮನಸ್ಸಿಗೆ ಸಮಾಧಾನಗಳೇ ಇಲ್ಲದಂತಾಗಿದೆ. ಈಗಿಂದೀಗಲೇ ನೀವು ಆ ಮೇಲುಪ್ಪರಿಗೆಯ ಮ ಹೋಗಿ ಆ ಕನ್ಯಾರತ್ನವನ್ನು ರಾಜಮರ್ಯಾದೆಯಿಂದ ಕರೆದುಕೊಂಡು ಬನ್ನಿರಿ ಯನ್ನು ಲಗ್ನಮಾಡಿಕೊಂಡು ಪಟ್ಟದ ರಾಣಿಯನ್ನಾಗಿ ಮಾಡಬೇಕೆಂದು ನಿಶ್ಚಯಿಸಿ ವಿಲಂಬಮಾಡದೇ ಈ ಕೆಲಸ ಮಾಡಿರಿ ಎಂದು ಅಪ್ಪಣೆ ಮಾಡಿದನು.

ರಾಜಾಜ್ಞೆಯ ಪ್ರಕಾರ ಮಂತ್ರಿಗಳು ಸುದೀರ್ಘ ವಿಚಾರಮಾಡಿ ಕನ್ಯೆಯನ್ನು ಕರೆತ ಕೆಲಸಕ್ಕೆ ವ್ಯವಹಾರ ಚತುರನೂ, ಚತುರಮತಿಯೂ ಆದ ವಸಂತಕನೆಂಬ ಸರದಾರ ಕಳುಹಿಸಲು ನಿರ್ಧರಿಸಿದರು. ಅವಿವೇಕಿಯಾದ ರಾಜನು ವಸಂತಕನನ್ನು ಕರೆಯಿಸಿ ವ ಕನೇ ! ಕನ್ಯೆಯ ತಾಯಿ ತಂದೆಗಳು ರಾಜಾಜ್ಞೆಯನ್ನು ಶಿರಸಾವಹಿಸಿ ಗೌರವಿಸಿ ಕನ್ಯೆಯನ್ನು ಕಳುಹಿಸಿದರೆ ಒಳಿತಾಯ್ತು,ರಾಜಾಜ್ಞೆಯನ್ನು ಧಿಕ್ಕರಿಸಿ ಕನ್ಯೆಯನ್ನು ಕಳ ಒಪ್ಪದಿದ್ದರೆ ಅವರನ್ನು ಸೆರೆಯಲ್ಲಿಟ್ಟು ಆ ಕನ್ಯೆಯನ್ನು ತರಬೇಕು ಎಂದು ಕಟ್ಟಪ್ಪ ಮಾಡಿದನು.

ಚತುರಮತಿಯಾದ ವಸಂತಕನು ಕೌಶಿಕರಾಜನ ಆಜ್ಞೆಯಂತೆ ಬಂದು ವಿಮ ಸುಮತಿಯರಿಗೆ ಕನ್ಯೆಯ ವಿಷಯ ತಿಳಿಸಲು ಅವರಿಗೆ ನಿಂತ ನೆಲ ಕುಸಿದಂತಾಗಿ ಹೃದ ಸಿಡಿಲು ಬಡಿದಂತಾಯಿತು. ಸಾಮಾನ್ಯ ಜನರ ಅಭಿಲಾಷೆಯಿದ್ದರೆ ಅದಕ್ಕೇನಾದ ಮಾರುತ್ತರವನ್ನು ಕೊಟ್ಟು ಪ್ರತೀಕಾರ ಮಾಡಲು ಸಾಧ್ಯವಿತ್ತು. ಆದರೆ ದೊರೆ ಕೌ ಆಜ್ಞೆಯಿದ್ದುದರಿಂದ ಏನು ಮಾಡಬೇಕೆಂಬುದು ತಿಳಿಯದಂತಾಗಿ ಅವರು ದಿಗ್ಭ್ರ ದರು. ಕಣ್ಣುಕಟ್ಟಿ ಕಾಡಿನಲ್ಲಿ ಬಿಟ್ಟಂತಾಯಿತು ಅವರ ಪರಿಸ್ಥಿತಿ. ವಯಸ್ಸಿನಿಂದ ಕ

ಆದರೂ ಜಾಣತನದಿಂದ ಹಿರಿಯಳಾದ ಮಹಾದೇವಿಯಕ್ಕನಿಗೂ ಏನೂ ತಿಳಿಯದಂತಾಗಿ

" ಹಿಂದೆ ಹಳ್ಳ, ಮುಂದಣತೊರೆ ಸಲ್ಲುವ ಪರಿಯೆಂತು ಹೇಳಾ ?
ಹಿಂದಣಕೆರೆ, ಮುಂದಣಬಲೆ, ಹದುಳವಿನ್ನೆಲ್ಲಿಯದು ಹೇಳಾ ?
ನೀನಿಕ್ಕಿದ ಮಾಯೆ ಕೊಲುತಿಪ್ಪುದು ಕಾಯಯ್ಯ, ಕಾಯಯ್ಯ
ಚನ್ನಮಲ್ಲಿಕಾರ್ಜುನ "

ಎಡಬಲ, ಹಿಂದುಮುಂದು, ಸುತ್ತುಮುತ್ತು ಮುತ್ತಿದ ಈ ಕುತ್ತುಗಳ ಮೊತ್ತದಿಂದ ಎತ್ತಿಕೊ ಎಂದು ಚನ್ನಮಲ್ಲಿಕಾರ್ಜುನನಿಗೆ ಮೊರೆಯಿಟ್ಟಳು.

" ಸಂಸಾರವೆಂಬ ಹಗೆಯಯ್ಯ ತಂದೆ !
ಎನ್ನ ವಂಶವಂಶದಪ್ಪದೆ ಅರಸಿಕೊಂಡು ಬರುತ್ತಿದೆಯಯ್ಯ !
ಎನ್ನವನರಸಿಯರಸಿ ಹಿಡಿದು ಕೊಲುತಿದೆಯಯ್ಯ !
ನಿಮ್ಮ ಮೊರೆಹೊಕ್ಕೆ ಕಾಯಯ್ಯ ಎನ್ನ ಬಿನ್ನಪವನವಧಾರು
ಚನ್ನಮಲ್ಲಿಕಾರ್ಜುನ "

ಎಂದು ಗೋಗರೆದಳು, ಗೋಳಾಡಿದಳು.

ಹರನೇ ನೀನೆನಗೆ ಗಂಡನಾಗಬೇಕೆಂದು ಅನಂತಕಾಲ ತಪಿಸಿದ್ದೆ ನೋಡಾ !
ಹಸೆಯ ಮೇಲಣ ಮಾತು ಬೆಸಗೊಳಲಟ್ಟಿದರೆ ಶಶಿಧರನ ಹತ್ತಿರಕ್ಕೆ
ಕಳುಹಿದರೆಮ್ಮವರು, ಭಸ್ಮವನೆ ಹೂಸಿ ಕಂಕಣವನೇ ಕಟ್ಟಿದರು
ಚನ್ನಮಲ್ಲಿಕಾರ್ಜುನಯ್ಯ ನನಗೆ ನೀನಾಗಬೇಕೆಂದು.

" ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ ಚೆಲುವಂಗಾನೊಲಿದೆನವ್ವ
ಎಡೆಯಿಲ್ಲದ, ಕಡೆಯಿಲ್ಲದ ತೆರಹಿಲ್ಲದ ಕುರುಹಿಲ್ಲದ
ಚೆಲುವಂಗಾನೊಲಿದೆನವ್ವ ! ನೀನು ಕೇಳಾ ತಾಯೆ
ಭವವಿಲ್ಲದ ಭಯವಿಲ್ಲದ ನಿರ್ಭಯ ಚೆಲುವಂಗೊಲಿದೆನಾನು !
ಕುಲಸೀಮೆಯಿಲ್ಲದ ನಿಸ್ಸೀಮ ಚೆಲುವಂಗೊಲಿದೆ ನಾನು
ಇದು ಕಾರಣ ಚನ್ನಮಲ್ಲಿಕಾರ್ಜುನನೇ ಚೆಲುವ ಗಂಡನೆನಗೆ !
ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು "

ಶ್ರೀ ಗುರುದೇವನು ಅಲೌಕಿಕ ಸತಿಗೆ ಅಲೌಕಿಕ ಆಭರಣಗಳನ್ನು ಹಾಕಿ ಅಲೌಕಿಕ ಪತಿ ಲಿಂಗದೇವನೊಡನೆ ಸಂಭ್ರಮದಿಂದ ಮದುವೆ ಮಾಡಿರುವಾಗ ಈ ಹುಟ್ಟು ಸಾವುಳ್ಳ ಲೌಕಿಕ ಕೌಶಿಕನೊಡನೆ ಮದುವೆಯಾಗಬೇಕೆ ?

" ಗಿರಿಯಲ್ಲಲ್ಲದೆ ಹುಲ್ಲು ಮೊರಡಿಯಲ್ಲಾಡುವದೆ ನವಿಲು ?
ಕೊಳನಲ್ಲದೆ ಕಿರಿವಳ್ಳಕ್ಕೆಳಸುವದೆ ಹಂಸೆ ?
ಮಾಮರ ತಳಿತಲ್ಲದೆ ಸ್ವರಗೈವುದೆ ಕೋಗಿಲೆ ?
ಪರಿಮಳವಿಲ್ಲದ ಪುಷ್ಪಕ್ಕೆಳಸುವದೆ ಭ್ರಮರ ?

ಎನ್ನದೇವ ಚೆನ್ನಮಲ್ಲಿಕಾರ್ಜುನನಲ್ಲದೆ ಅನ್ಯವಿಷಯಕ್ಕೆಳಸುವುದೆ
ಎನ್ನ ಮನ "

ವಿವಿಧ ವರ್ಣರಂಜಿತ ಸಾವಿರ ಕಣ್ಣಿಳ್ಳ ನವಿಲು ಸಹ್ಯಾದ್ರಿಯಲ್ಲಲ್ಲದೆ ಕಲ್ಲುಮುಳ್ಳು ಹುಲ್ಲು ಮೊರಡಿಯಲ್ಲಿ ಕುಣಿವುದೇ ? ಪಂಚಮದ ಇಂಚರವುಳ್ಳ ಕೋಗಿಲೆಯು ಮಾಮರದ ಚಿಗುರು ತಿಂದು ಸೊಗಸಾಗಿ ಗಾನ ಮಾಡುವದಲ್ಲದೆ ಕಹಿಯಾದ ಬೇವಿನ ಕುಡಿ ತಿಂದು ಗಾನ ಮಾಡುವದೇ ? ಹಾಲು ನೀರು ಕೂಡಿಟ್ಟರೂ ನೀರು ಬಿಟ್ಟು ಹಾಲು ಕುಡಿವ ಹಂಸಪಕ್ಷಿಯು ಮಾನಸ ಸರೋವರದಲ್ಲಿ ಇರುವದಲ್ಲದೆ ಕೊಳಚಿ ನೀರಿನ ಚ... ನೀರಲ್ಲಾಡುವದೇ ? ಹೂವಿಂದ ಹೂವಿಗೆ ಹಾರಿ ಮಕರಂದ ಕುಡಿವ ಭೃಂಗ ಪರಿಮಳ ಪುಷ್ಪಕ್ಕೆ ಎರಗುವದಲ್ಲದೆ ನಿರ್ಗಂಧ ಕುಸುಮಕ್ಕೆ ಎರಗುವದೇ ?

ಹೀಗೆ ಚೆನ್ನಮಲ್ಲಿಕಾರ್ಜುನನನ್ನೇ ಪತಿಯೆಂದು ತಿಳಿದ ನಾನು ಅನ್ಯಪುರುಷರಿಗೆ ... ಬೇಕೆ ? ಎಂದು ಚಡಪಡಿಸಿದಳು.

ಆದರೂ ಈಗ ಬಂದ ಕರೆಯು ಸಾಮಾನ್ಯನ ಕರೆಯಲ್ಲ. ಊರ ದೊರೆಯಾದ ಕೌ... ಮಹಾರಾಜನ ಕರೆಯು. ಯಾರಕರೆಯಾದರೇನು ? ಎಲ್ಲಾ ಕರೆಗಳು ಕೀಳಿಂದ... ಸಂಸಾರದ ತೊರೆಯಲ್ಲಿ ನೂಕತಕ್ಕವುಗಳೇ !

ಆಕಸ್ಮಿಕವಾಗಿ ಬಂದಿರುವ ಈ ಜಟಿಲ ಸಮಸ್ಯೆಯನ್ನು ಹೇಗೆ ಪರಿಹರಿಸಬೇಕು ? ಅದಕ್ಕುಪಾಯವೇನು ? ಇದನ್ನು ತಿಳಿಯದೇ ತಾಯಿತಂದೆಗಳು ಮೌನವಾಗಿ ... ಬಿಟ್ಟರು. ಜಾಣೆಯಾದ ಮಹಾದೇವಿಯ ಚಿತ್ತದಲ್ಲಿ ಅನೇಕಾನೇಕ ವಿಚಾರ ತರಂಗ ಏಳಹತ್ತಿದವು. ಬಂದು ಬೇಡುವವ ಭವಿ, ನಾನಾದರೋ ಭಕ್ತೆ–

" ಭವಿಸಂಗವಳಿದು ಶಿವಭಕ್ತನಾದ ಬಳಿಕ ಭಕ್ತಂಗೆ
ಭವಿಸಂಗವತಿ ಘೋರ ನರಕ !
ಶರಣ ಸತಿ ಲಿಂಗ ಪತಿಯಾದ ಸತಿಸಂಗವತಿ ಘೋರನರಕ !
ಚೆನ್ನಮಲ್ಲಿಕಾರ್ಜುನ ಲಿಂಗೈಕ್ಯಂಗೆ ಪ್ರಾಣಗುಣವಳಿಯದವರ
ಸಂಗಭಂಗ "

ಆದಕಾರಣ ಈ ವಿಷಯದಲ್ಲಿ ಮಹಾದೇವಿಯು ಚಿಂತನ ಮಂಥನಮಾಡಿ ಕೊನೆಗೆ ... ಬಾರದೆಂದು ನಿಶ್ಚಯಿಸಿದಳು. ಒಪ್ಪಿದರೆ ತಪ್ಪಿಸಲುಬಾರದು. ರಾಜಾಜ್ಞೆಯೆಂದು ... ಧರ್ಮ ಮಾರ್ಗಕ್ಕೆ ಹೊರತಾಗಿ ನಡೆಯಬೇಕೇನು? " ಧರ್ಮೋ ರಕ್ಷತಿ ರಕ್ಷಿತಃ " ... ಧರ್ಮ ಮಾರ್ಗದಿಂದ ನಡೆದರೆ ನಮ್ಮನ್ನು ಧರ್ಮವು ಸಮರಾಂಗಣದಲ್ಲಿ ಬಿಡುವ ಬಾಣ ತಾಕದಂತೆ ವಜ್ರಕವಚವು ಹೇಗೆ ಕಾಪಾಡುವದೋ ಹಾಗೆ ಕಾಪಾಡುವದು. ಪ್ರಾಣ... ಲೂ ಧರ್ಮದಲ್ಲಿ ಅತ್ಯಧಿಕ ರತಿಯುಳ್ಳ ಮಹಾದೇವಿಯು ಹಿಮಾಚಲದಂತೆ ಅಚಲ... ತನ್ನ ದೃಢನಿಷ್ಠೆಯಿಂದ ಅತ್ತಿತ್ತ ಹೊಯ್ದಾಡಲಿಲ್ಲ. ಆಗ ಗೆಳತಿಯರು ದಿಟ್ಟ... ಮುಂದೆ ಬಂದು " ಬಂದಿ ಕನೆಂಬ ಸುಖವ ಹಿಂಗಿದವರುಂಟೇ? ''ಕರೆಯದಲೆ, ... ವಾಗಿಯೇ ಸಿರಿಸಂಪತ್ತುಗಳು ಭೋಗಭಾಗ್ಯಗಳು ಮನೆಯ ಬಾಗಿಲೊಳಗೆ ...

ವೆಂದರೆ ಬೇಡ ಎನ್ನುವವರುಂಟೇ ? ಮಹಾರಾಜನ ಕೈವಿಡಿದು ಮಹಾರಾಣಿಯಾಗುವ ಅಪೂರ್ವ ಯೋಗವು ದೊರೆತಾಗ ಒಲ್ಲೆನ್ನಬೇಕೇ ? ನಾನೀ ಎನ್ನುವ ಮಹಾ ಮಹಾ ಮಹಿಳೆಯರಿಗೂ ದೊರೆಯಂದ ಮಹಾರಾಣಿ ಪದವಿಯು ದೊರೆತಾಗ ಒಲ್ಲೆನ್ನುವದು ಮಹಾಪ್ರಮಾದ. ಅರಮನೆಯಲ್ಲಿ ಅರಗಿಳಿಯಂತೆ ಸೌಖ್ಯವಾಗಿರು, ಅರಸಂಗೆ ಅರಸಿಯಾಗಿ ಸರಸವಾಗಿರು. ಮನದಲ್ಲಿ ಯಾವ ಆಲೋಚನೆ ಮಾಡದೇ ನಮ್ಮ ಮಾತಿಗೆ ಒಪ್ಪಿಬಿಡು, ಒಪ್ಪಿದರೆ ನಿನಗೆ ತಪ್ಪದೇ ಸುಖವಾಗುವದು ಎಂದು ಒತ್ತಾಯಿಸಿದರು.

ಗೆಳತಿಯರೇ, ಕಂಡಾಗ ಸರಸವೆನಿಸಿ ಉಂಡಾಗ ನಿರಸವೆನಿಸುವ ಭೋಗಭಾಗ್ಯಗಳು ನನಗೆ ಬೇಕಾಗಿಲ್ಲ. ರಾಜನ ಪ್ರಾಣಿಗ್ರಹಣಮಾಡಿ ರಾಣಿಯಾಗುವ ಇಚ್ಛೆ ನನಗೆ ತಿಲಮಾತ್ರ ವಿಲ್ಲ. ಅರಸಂಗೆ ಅರಸಿಯಾಗು ಎಂಬ ಮಾತು ನನಗೆ ಸರಸವಾಗದೇ ವಿರಸವಾಗಿದೆ. ಭೋಗ ಸಾಮಗ್ರಿಗಳಿಂದ ತುಂಬಿದ ಅರಮನೆಯು ಅರಿವಿನ ಮನೆಗೆ, ಗುರುವಿನ ಮನೆಗೆ ಹೊರಟ ನನಗೆ ಸೆರೆಮನೆಯಂತೆ ತೋರುವದು. ಚನ್ನಿಗನಾದ ಚನ್ನಮಲ್ಲಿಕಾರ್ಜುನನಿಗೆ ಒಲಿದ ಚೆನ್ನೆಗೆ ಅನ್ಯರ ಹಂಗಿಲ್ಲ, ಸುಮ್ಮ ಸುಮ್ಮನೇ ಏನಾದರೊಂದು ಹೇಳಬೇಡಿರಿ.

" ಬಂಜೆ ಬೇನೆಯನರಿಯಳು ಮಲತಾಯಿ ಮುದ್ದುಬಲ್ಲಳೇ ?
ನೊಂದನೋವ ನೋಯದವರೆತ್ತ ಬಲ್ಲರು ?
ಚನ್ನಮಲ್ಲಿಕಾರ್ಜುನನಿರಿದಲಗು ಒಡಲಲ್ಲಿ ಮುರಿದು ಹೊರಳುವವಳ
ನೀವೆತ್ತ ಬಲ್ಲಿರೇ ಎಲೆ ತಾಯಿಗಳಿರಾ "

" ನಿನ್ನರಿಕೆಯ ನರಕವೇ ಮೋಕ್ಷನೋಡಯ್ಯ !
ನಿನ್ನರಿಯದ ಮುಕ್ತಿಯೇ ನರಕವಯ್ಯಾ !
ನೀನೊಲ್ಲದ ಸುಖವೆ ದುಃಖ ಕಂಡಯ್ಯಾ !
ನೀನೊಲಿದ ದುಃಖವೇ ಪರಮಸುಖ ಕಂಡಯ್ಯ !
ಚನ್ನಮಲ್ಲಿಕಾರ್ಜುನಯ್ಯ ನೀಕಟ್ಟಿಕೆಡಹಿದ ಬಂಧನವೇ
ನಿರ್ಬಂಧನವೆಂದಿಪ್ಪೆನು,

" ಕಲ್ಲ ಹೊತ್ತು ಕಡಲೊಳಗೆ ಮುಳುಗಿದೊಡೆ ಎಡರಿಂಗೆ ಕಡೆಯುಂಟೇ ಅವ್ವ
ಕಂಡ ಕಂಡ ಠಾವಿನಲ್ಲಿ ಮನಬೆಂದೊಡೆ ಗಂಡ ಚೆನ್ನಮಲ್ಲಿಕಾರ್ಜುನ
ನೆಂತೊಲಿವನವ್ವ "

ಭವಬಂಧನ ಭವಪಾಶಗಳನ್ನುಂಟುಮಾಡುವ ರಾಜಭೋಗಗಳನ್ನು ತಿರಸ್ಕರಿಸಿ,

" ನಾನು ನಿನಗೊಲಿದೆ, ನೀನು ಎನಗೊಲಿದೆ, ನೀನೆನ್ನನಗಲದಿಪ್ಪೆ
ನಾನಿನ್ನನಗಲದಿಪ್ಪೆನಯ್ಯ, ನಿನಗೆ ನನಗೆ ಬೇರೊಂದು ಠಾವುಂಟೇ ?
ನೀನು ಕರುಣೆ ಎಂಬುದ ನಾನು ಬಲ್ಲೆನು ನೀನಿರಿಸಿದ ಗತಿಯೊಳಗೆ
ಇಪ್ಪಳಾನಯ್ಯ ನೀನೇ ಬಲ್ಲೆ ಚನ್ನಮಲ್ಲಿಕಾರ್ಜುನ "

ಇಂತಹ ಅನುಪಮ ಲಿಂಗಾಂಗ ಸಾಮರಸ್ಯದ ಸುಪಥನಲ್ಲಿ ನಡೆಯುವ ಧೈರ್ಯಸ್ಥೈರ್ಯ

ಗೆಳಿದ್ದರೂ, ಅಕ್ಕಮಹಾದೇವಿಯು, ಅರಸನಿಗೆ ತನ್ನ ಮನೋರಥವು ಕೈಗೂಡದೇ ತನ್ನ ತಾನೇ ಹಿಂದಿರುಗಬೇಕು. ಮತ್ತು ತನ್ನ ಸ್ವಂತದ ಘನೋದ್ದೇಶವು ಸಾಧಿಸಬೇಕು, ಒಂದು ಸದುಪಾಯವನ್ನು ಹುಡುಕಿದಳು. ಇಲ್ಲಿ ಎದುರಾದ ಸಮಸ್ಯೆಯು ಸಾಮಾನ್ಯ ರದೇ ನಾನೀ ಎಂಬ ಎದೆಗಾರರನ್ನು ಗದಗದ ನಡಗಿಸುವಂತಹುದು. ಇಂತಹ ಸಮಸ್ಯೆಯನ್ನು ಚತುರಮತಿ ಮಹಾದೇವಿಯು ಜಾಣತನದಿಂದ ಬಿಡಿಸಿದಳು. ಕವಿಸಾರ್ವಭೌಮನಾದ ಕಾಲಿದಾಸನು ತನ್ನ ಶಾಕುಂತಲ ನಾಟಕದಲ್ಲಿ–

" ಸ್ತ್ರೀಣಾಮಶಿಕ್ಷಿತ ಪಟುತ್ವಮಮಾನುಷೀಸು ।
ಸಂದೃಶ್ಯತೇ ಕಿಮುತಯಾಃ ಪ್ರತಿಬೋಧವತ್ಯಃ "

ಸ್ತ್ರೀಯರು ಜನ್ಮತಃ ಜಾಣೆಯರು, ಅಶಿಕ್ಷಿತೆಯರಿದ್ದರೂ ಸುಶಿಕ್ಷಿತರಿಗಿಂತ ಅವರು ಚತುರ ತಿಗಳು ಎಂದು ಹೇಳಿರುವನು.

ಉಪನಿಷತ್ಕಾಲದಲ್ಲಿದ್ದ ವಾಚಕ್ನವೀ, ಗಾರ್ಗಿ, ರೇಖೆಯರ; ಪೌರಾಣಿಕ ಕಾಲದ ಸುಲಭಾ, ಸೀತೆ, ದಮಯಂತಿಯರ; ವಚನವಾಙ್ಮಯ ಕಾಲದಲ್ಲಿದ್ದ ನೀಲಾಂಬಿಕೆ, ಗಂ ಬಿಕೆ, ಅಕ್ಕನಾಗಮ್ಮ ಇವರ ಇತಿಹಾಸವನ್ನೋದಿದರೆ ಈ ಮಾತು ದಿಟವೆನಿಸುವದು.

" ಪರಿಮಳವನಾರಿಕ್ಕಿದರುಕ ।
ರ್ಪೂರಕೆ ಕೋಗಿಲೆಗಾರು ಸೊಗಸಿನ !
ಸರವಕಲಿಸಿದರಂಚೆಗಾರಡಿಯಿಡಲು ಕಲಿಸಿದರು ॥

ಸುತ್ತಮುತ್ತಲು ಸುವಾಸನೆಯನ್ನು ಬೀರುವ ಕಪ್ಪುರಕ್ಕೆ ಯಾರಾದರೂ ಹೊರ ತಂದು ಪರಿಮಳವನ್ನು ಲೇಪಿಸಿದರೇ ? ಮಧುರ ಕಂಠದಿಂದ ಹಾಡುವ ಕೋಗಿಲೆಗೆ ರಾದರೂ ಮಧುರ ಕಂಠವನ್ನು ಕಡವಾಗಿ ಕೊಟ್ಟರೇ ? ಮಂದ ಮಂದವಾಗಿ ಅಡಿಯಿ ರಾಜಹಂಸನಿಗೆ ಯಾರಾದರೂ ಅಡಿಯಿಡಲು ಕಲಿಸಿದರೇ ? ಅವೆಲ್ಲವೂ ಅವಕ್ಕೆ ಸಹಜವೋ ಹಾಗೆ ಸ್ತ್ರೀಯರಿಗೂ ಜಾಣತನವು ಸಹಜಸಿದ್ಧವಾದುದು ಎಂದು ಪ್ರಭು ಲೀಲೆಯ ಕರ್ತೃವಾದ ಚಾಮರಸನು ಹೇಳಿರುವನು.

ಜಾಣೆಯಾದ ಅಕ್ಕಮಹಾದೇವಿಯು " ಗೆಳತಿಯರೇ ರಾಜನಿಗೆ ನಾನು ಬೇಕಾ ನಾನು ಹೇಳಿದುದನ್ನೆಲ್ಲ ನೆರವೇರಿಸಿಕೊಡಬೇಕು. ನನ್ನ ಮನದ ಬಯಕೆಯು ವಂತೆ ಪ್ರತಿಜ್ಞೆಯನ್ನು ಮಾಡಬೇಕು. " ಎಂದು ಹೇಳಲು ವಿಲಾಸಿನಿಯರು ಮಹಾ ಕಾರ್ಯವೆಂದು ಭಾವಿಸಿ ರಾಜನಿಗೆ ಹೋಗಿತಿಳಿಸಲು ಕೂಡಲೇ ರಾಜನು

" ಲಲನೆ ಕೇಳೌ ನಿನ್ನ ಬಯಕೆಯ ।
ಸಲಿಸುವೆನು ಮೊದಲಲ್ಲಿಬಳಿಕಾ ।
ನೊಲಿಸಿಕೊಂಬೆನು ನಿನ್ನನಂತಲ್ಲದೆ ದುರುಕ್ತಿಯಲಿ ।
ನೆಲನೊಡೆಯ ನಾನೆಂಬ ಗರ್ವದ ।
ಬಲುಹುಗಿಲುಹನು ಮಾಡಿದೊಡೆ ಕೇ ।
ಳಲಗೆ ತನ್ನಯ ಸತ್ಯ ಭಾಷೆಯುನೆಂದನವನೀಶ " ॥

ಲಲನೆಯೇ ಕೇಳು, ನಾನು ಮಹಾರಾಜನೆಂಬ ಗರ್ವದಿಂದ ಉಬ್ಬದೇ ದರ್ಪದಿಂದ ಯಾವ ದುರುಕ್ತಿಗಳನ್ನಾಡದೇ ಮೊದಲು ನಿನ್ನ ಮನೋರಥವನ್ನು ಪೂರೈಸಿ ನಂತರ ನಿನ್ನನ್ನು ಒಲಿಸಿ ಕೊಳ್ಳುವೆನು. ಇದು ಸತ್ಯಭಾಷೆ, ಪ್ರತಿಜ್ಞೆ. ಇದರಲ್ಲಿ ಏನೇನೂ ತಪ್ಪುವದಿಲ್ಲ ಎಂದು ವಚನ ವಿತ್ತನು. ಇದಲ್ಲದೆ ನಾನು ನಿನಗೆ ಕೊಟ್ಟ ಭಾಷೆಯಂತೆ ನಡೆಯದಿದ್ದರೆ, ಕೊಟ್ಟ ಭಾಷೆಯು ಪೂರೈಸುವ ಮುನ್ನ ನಿನ್ನನ್ನು ಬಯಸಿದರೆ, ವಚನ ಭ್ರಷ್ಟನು, ಜೀವಹಿಂಸಕನು, ತಾಯಿ ಮಕ್ಕಳಲ್ಲಿ ಕಲಹ ಹಚ್ಚುವವನು, ಮಿತ್ರ ದ್ರೋಹಿಯು, ಪತ್ನೀ ಪೀಡಕನು, ಪರಸ್ತ್ರೀಯ ರನ್ನು ಪಾಪದೃಷ್ಟಿಯಿಂದ ನೋಡುವ ಶುನಕನು, ನಿಂದಕನು, ನಿಷ್ಠುರನು, ಪರದ್ರವ್ಯಾಪ ಹಾರಕನು, ಬಂಧು-ಬಾಂಧವರಲ್ಲಿ ಅಲ್ಲದ ಸಲ್ಲದ ಸುಳ್ಳು ಹೇಳಿ ಜಗಳ ಹಚ್ಚುವವನು, ಯುದ್ಧ ಪರಾನ್ಮುಖನು, ಸ್ವಾಮಿದ್ರೋಹಿಯು, ವಿಶ್ವಾಸಘಾತಕನು, ಇವರೆಲ್ಲರೂ ಯಾವ ನರಕಕೂಪದಲ್ಲಿ ಬಿದ್ದು ದುಃಖವನ್ನು ಅನುಭವಿಸುವರೋ, ಆ ದುಃಖವು ನನಗೆ ಪ್ರಾಪ್ತ ವಾಗಲಿ ಎಂದು ರಾಜನು ಅನೇಕ ಪ್ರತಿಜ್ಞಾವಾಕ್ಯಗಳನ್ನು ಹೇಳಿದನು. ಧರ್ಮಶಾಸ್ತ್ರಕ್ಕೆ ವಿರುದ್ಧವಾಗಿ ನಡೆಯುವ ಸುಮಾರು ಇಪ್ಪತ್ತು ದುಷ್ಕರ್ಮಿಗಳಿಗೆ ಯಾವ ಯಾವ ಶಿಕ್ಷೆ ಗಳು ವಿಧಿಸಲ್ಪಟ್ಟಿವೆಯೋ ಅವೆಲ್ಲವೂ ನನಗಾಗಲಿ ಎಂದು ರಾಜನು ಮಾಡಿದ ಪ್ರತಿಜ್ಞಾ ವಾಕ್ಯಗಳನ್ನು ಕೇಳಿ ಮಹಾದೇವಿಯಕ್ಕನ ಮನಸ್ಸಿನಲ್ಲಿ ಪೂರ್ಣವಿಶ್ವಾಸ ಮೂಡಿತು. ಅಬಲೆಯಾದ ನಾನು ಹೇಳಿದುದನ್ನು ನೀನು ಪಾಲಿಸದೇ ಹೋದರೆ ಆ ಕ್ಷಣವೇ ನಿನ್ನ ಅರಮನೆಯನ್ನು ಬಿಟ್ಟುಹೋಗುವೆ. ಇದು ಶತಶಃ ಸತ್ಯವೆನ್ನಲು ಆಗಲಿ ಮಾನಿನಿ ಈ ಮಾತಿಗೆ ತಪ್ಪಲಾರೆ ಪರೀಕ್ಷಿಸಿ ನೋಡು. ನಿನ್ನಮಾತಿನಂತೆ ನಡೆಯದಿದ್ದರೆ ಕೂಡಲೇ ನೀನು ನಿನ್ನ ಮನಸ್ಸಿಗೆ ಬಂದಂತೆ ಮಾಡಬಹುದು ಎಂದು ಹೇಳಿ ರಾಜನು ಅರಮನೆಗೆ ಹೋದನು.

ರಾಜನ ಮಾತಿನಲ್ಲಿ ಸಂಪೂರ್ಣ ವಿಶ್ವಾಸವಿಟ್ಟ ಮಹಾದೇವಿಯು ಕೂಡಲೇ ಅಂದಣ ವನ್ನೇರಿ ಗೆಳತಿಯರೊಡಗೂಡಿ ಅರಮನೆಗೆ ಹೋದಳು. ಅಕ್ಕಮಹಾದೇವಿಯ ಆಗಮನ ವನ್ನೇ ನಿರೀಕ್ಷಿಸುತ್ತ ಕುಳಿತಿದ್ದ ಕೌಶಿಕನು ದೇವಿಯು ಬಂದಾಕ್ಷಣ ಅವಳಿಗಾಗಿ ಸಿದ್ಧಪಡಿಸಿದ ಒಂದು ಸ್ವತಂತ್ರ ಆಸನದಲ್ಲಿ ಕುಳಿತುಕೊಳ್ಳಲು ಹೇಳಿದನು. ರಾಜನು ಮಾನನಿಯೇ ನಿನ್ನ ಮನದಲ್ಲಿ ಯಾವ ಅಭಿಲಾಷೆಯಿದೆ. ಅದನ್ನು ಮರೆಮಾಚದೆ ಹೇಳು. ಅದನ್ನು ಪೂರೈಸಿ ಯೇ ನಿನ್ನ ಕೈಹಿಡಿದು ಸುಖವಾಗಿರುವೆನು ಎನ್ನಲು-ಮಹಾದೇವಿಯು ಮಹಾರಾಜನೇ "ನೀನು ಶಿವಭಕ್ತನಾದೊಡೆ ಕೂಡುವೆನುನಿನ್ನ'' "ಭವಿಯಾದ ನಿನ್ನೊಡನೆ ಶಿವಭಕ್ತಳಾದ ನನಗೆ ಸಂಗ ಸಮನಿಸದು, ಇದು ದಿಟವಾದ ಮಾತು ಎಂದು ಹೇಳಿದಳು.

ಗೂಗೆಗೆ ಬೆಳಕು, ರೋಗಿಗೆ ಔಷಧ, ಮೂಗಿಲ್ಲದವನಿಗೆ ಕನ್ನಡಿ ಸರಿಬಾರದಂತೆ, ಶಿವಭಕ್ತಿ ವಿಹೀನನಾದ ರಾಜನಿಗೆ ಮಹಾದೇವಿಯ ಮಾತು ರುಚಿಸಲಿಲ್ಲ. ಆಗ ರಾಜನು ಲಲನೆಯೇ ಸ್ವಧರ್ಮವನ್ನು ಬಿಟ್ಟು ಪರಧರ್ಮ ಸ್ವೀಕರಿಸುವ ಮಾತೊಂದನ್ನುಬಿಟ್ಟು ಮತ್ತೊಂದ ನ್ನು ಬೇಡು ಎಂದು ರಾಜನು ಪರಿಪರಿಯಿಂದ ಪ್ರಾರ್ಥಿಸಿದನು.'ಶಿವಭಕ್ತಳಾದ ನನಗೆ ಭವಿ ಯಾದ ನಿನ್ನೊಡನೆ ಸಂಗ ಸಮನಿಸದು' ಎಂಬ ದೃಢನಿರ್ಧಾರದಿಂದ ಮಹಾದೇವಿಯು "ಸ್ವಧರ್ಮೇನಿಧನಂ ಶ್ರೇಯಃ ಪರಧರ್ಮೋ ಭಯಾವಹಃ" ಎಂಬುಕ್ತಿಯಂತೆ ಸ್ವಧರ್ಮ

ವನ್ನು ಪ್ರಾಣಕ್ಕಿಂತಲೂ ಪ್ರಿಯವೆಂದು ಭಾವಿಸಿದ್ದ ಕೌಶಿಕನೂ "ಸ್ವಧರ್ಮವನ್ನು ಬಿಟ್ಟು ಪರಧರ್ಮವನ್ನು ಸ್ವೀಕರಿಸಬಾರದು'' ಎಂಬ ದೃಢನಿರ್ಧಾರದಿಂದ ಅತ್ತಿತ್ತ ಸ್ವಲ್ಪು ಹೊಯ್ದಾಡಲಿಲ್ಲ. ಹೀಗಾಗಿ ಆವರೀರ್ವರ ಬಯಕೆಗಳು ಗಾಳಿಗೋಪುರವಾದವು.

"ನಮಗೆ ಶಿವಭಕ್ತಿ, ಶಿವಾಚಾರಗಳನ್ನು ಪರಿಪಾಲಿಸುವದು ಸಾಧ್ಯವಾಗದು" ಎಂದು ಹೇಳಿದ ರಾಜನಿಗೆ ಮಹಾದೇವಿಯು " ನಮಗೆ ಶಿವಭಕ್ತಿಯಿಲ್ಲದ ನಿಮ್ಮ ಯ ಸಂ ಸಮನಿಸದು. ನಾವಿನ್ನು ನಿಮಗೆ ಪರಕೀಯರು ನಮಗೆ ಬಂಧನದಿಂದ ಬಿಡುಗಡೆಯಾಯಿತು" ಎಂದು ವೀರವಿರತಿಯಿಂದ ಹೊರಟಳು.

"ಬಲವಾನಿಂದ್ರಿಯಗ್ರಾಮಃ ವಿದ್ವಾಂಸಮಪಿಕರ್ಷತಿ'' ''ವಿವೇಕ ಭ್ರಷ್ಟಾನಾ ವಿನಿಪಾತಃ ಶತಮುಖಃ'' ಎಂಬುಕ್ತಿಯಂತೆ ಕಾಮನ ಕೈಗೊಂಬೆಯಾದ ಕೌಶಿಕನು ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ ಎಂದು ವಿವೇಕಭ್ರಷ್ಟನಾಗಿ ಕಣ್ಮನಗಳನ್ನು ಸೆಳೆವ ದಿವ್ಯ ಸುಂದರಿಯು ಅರಮನೆಯಿಂದ ನಿರ್ದಾಕ್ಷಿಣ್ಯವಾಗಿ ಹೊರಟು ಹೋಗುವದನ್ನು ನೋಡಿ ಬೆಂಬತ್ತಿ ಮುಟ್ಟಹೋಗಲು-

''ಉಟ್ಟ ಸೀರೆಯ ಸೆಳೆದು ತೊಟ್ಟ ತೊಡಿಗೆಯ ಹರಿದು ।
ಬಿಟ್ಟೆನೋ ನಾನು ಬಿಡುಮುಡಿಯ ಎಲೆದೇವ ।
ಕೊಟ್ಟೇನೊ ಎನ್ನ ತನುಮನವ ॥''

ಉಟ್ಟಸೀರೆಯನ್ನು ಆಗಿಂದಾಗಲೇ ಕಳೆದು, ತೊಟ್ಟ ತೊಡಿಗೆಗಳನ್ನು ಬೀಸಿಒಗೆದು ಕೇಶಗಳನ್ನು ಲೇಸಾಗಿ ಕಟ್ಟದೇ ಹಾಗೇ ಬಿಟ್ಟು ಚನ್ನಮಲ್ಲಿಕಾರ್ಜುನನಿಗೆ ತನುಮನಧನ ಗಳನ್ನು ಕೊಟ್ಟಿರುವೆ. ಕಾಯ ಕರ್ರನೇ ಕಂದಿದರೇನು? ಕಾಯ ಮಿರ್ರನೆ ಮಿಂಚಿದರೇನು ಅಂತರಂಗ ಶುದ್ಧವಾದ ಬಳಿಕ ಕಾಯವೇನಾದಡೇನಯ್ಯ, ಚೆನ್ನಮಲ್ಲಿಕಾರ್ಜುನನೊಲಿದ ಕಾಯವೇನಾದಡೆ ನಿಮಗೇನಯ್ಯಾ-

"ಅಮೇಧ್ಯದ ಹಡಿಕೆ, ಮೂತ್ರದ ಕುಡಿಕೆ, ಎಲುವಿನ ತಡಿಕೆ,
ಕೀವಿನ ಹಡಿಕೆ, ಸುಡಲೀ ದೇಹವ ಒಡಲುವಿಡಿದು
ಕೆಡದಿರು ಚನ್ನಮಲ್ಲಿಕಾರ್ಜುನನರಿಮರುಳೆ''

ಎಂದು ಹೇಳಿ ಕಾಮುಕನಾದ ರಾಜನ ಕಾಮದ ಹುಚ್ಚನ್ನು ಇಳಿಸಿ ಸ್ತ್ರೀವ್ಯಾಮೋಹದ ಮಬ್ಬನ್ನು ತಿಳಿಸಿ ವೀರವಾಣಿಯಿಂದ ಉದ್ಘೋಷಿಸುತ್ತ ಮದಕರಿಯಂತೆ ಮುನ್ನಡೆದು ಉಡಿಗೆ ತೊಡಿಗೆಗಳನ್ನು ಭರಭರನೆ ಬೀಸಾಡಿ ಸರಸರನೆ ಹೊರಟ ಲಲನೆಯನ್ನು ನೋಡಿ ಇವಳಿಗೇನಾದರೂ ಭೂತ-ಪ್ರೇತ-ಪಿಶಾಚಿಗಳ ಬಾಧೆಯಾಗಿರುವದೇ ? ಪಿತ್ತವಿಕಾರ ತಲೆ ಗೇರಿದೆಯೇ ? ಉಂಡುಟ್ಟು ಸುಖವಾಗಿರು ಎಂದು ಹೇಳಿದರೆ ಬಟ್ಟೆಬರೆಗಳನ್ನು ಬಿಟ್ಟು ವಿರಕ್ತೆಯಂತೆ ಹೊರಟಿದ್ದಾಳೆ. ಏನು ಚಮತ್ಕಾರವಿದು ಎಂದು ರಾಜನಿಗೆ ಆಶ್ಚರ್ಯವಾಯಿತು.

ಪಾರ್ವತಿಯ ಸಾತ್ವಿಕ ಕಳೆಯೆನಿಸಿದ ಪರಿಶುದ್ಧಳಾದ ಮಹಾದೇವಿಯ ಪವಿತ್ರ ಸಾನಿಧ್ಯದಿಂದ

" ಮೀಸಲಳಿಯಿತು ಬಯಕೆ ಮನದಭಿ ।
ಲಾಷೆ ಜಾರಿತು ಕಾಮದಾತುರ ।
ವೋಸರಿಸಿತೆಡೆವರಿಯಿತಳಪು ವಿವೇಕವರ್ಧಿಸಿತು ॥
ಭಾಷೆ ಭರವೇರಿತ್ತು ಮತ್ತೆನು ।
ಹೇಶನಾದೊಡೆ ಹೋಗಲೆನುತೆ ನಿ
ರಾಶೆಯಿಂದಲಿ ಹೋಗಬಿಟ್ಟನು ಬಳಿಕ ಬಾಲೆಯನು ॥

ಸೂರ್ಯನ ಕಿರಣಗಳನ್ನು ಸಹಿಸದೇ ಕತ್ತಲೆಯಲ್ಲಿಯೇ ಗೂಗೆಯಂತಿರುವ ಕೌಶಿಕನು ಜ್ಞಾನ ಭಾಸ್ಕರನ ಪ್ರಭೆಯಿಂದ ಬೆಳಗಿ ಕೌಶಿಕ (ವಿಶ್ವಾಮಿತ್ರ) ನಂತೆ ರಾಜರ್ಷಿಯಾಗಿ ಮೆರೆದನು. ಅವನ ಹೃನ್ಮಂದಿರದಲ್ಲಿ ಮುತ್ತಿ ಮುಸುಕಿದ ಅಜ್ಞಾನದ ಕತ್ತಲೆಯು ಹೊರಟುಹೋಗಿ ಸುಜ್ಞಾನದ ಪ್ರಕಾಶವು ಪಸರಿಸಿತು. ರಾಗ ವಿರಾಗವಾಗಿ, ಮೋಹ ನಿರ್ಮೋಹವಾಗಿ, ಕಾಮ ನಿಷ್ಕಾಮವಾಗಿ, ಅಜ್ಞಾನ ಸುಜ್ಞಾನವಾಗಿ ಮಾರ್ಪಟ್ಟವು. ಬಂದ ಅಬಲೆಯನು ಸುಮ್ಮನೇ ಹೋಗಗೊಟ್ಟನು. ಹುಟ್ಟು ಸಾವುಗಳನ್ನು ಮೆಟ್ಟಿ ಶಿವಪದವ ಮುಟ್ಟುವ ಹಂಬಲವುಳ್ಳ ಮಹಾದೇವಿಯು–

" ಒಂದಲ್ಲ ಎರಡಲ್ಲ, ಮೂರಲ್ಲ, ನಾಲ್ಕಲ್ಲ, ಎಂಭತ್ತು ನಾಲ್ಕು ಲಕ್ಷ
ಯೋನಿಯೊಳಗೆ ಬಂದೆ ಬಂದೆ ಬಾರದ ಭವಂಗಳನು
ಉಂಡೆ ಉಂಡೆ ಮುಂದೆ ನೀ ಕರುಣಿಸು ಚನ್ನಮಲ್ಲಿಕಾರ್ಜುನ "

ಎಂದು ಹೇಳುತ್ತ–

" ಒದೆದು ಸಮಸ್ತ ರಾಜ್ಯ ಸುಖಮಂ ಸುಖದಿಂ ಬಿಸುಟಲ್ಪಭೋಗ ಸಂ ।
ಪದವನೆ ನೂಂಕಿ ಸಂಸೃತಿಯ ದಂದುಗಮಂ ಬಿದಿರ್ವಾಸೆಯೆಂಬಿವಂ ॥
ವಿದಳಿಸಿ ಕಾಮ ಮತ್ತ ಗಜಮಸ್ತಕದಾಮದಮಂ ಸಡಿಲ್ಚಿ ಮಾ ।
ಣದೆ ಮಹಾದೇವಿಯೂಹ ಪೊರಮಟ್ಟಳನೂನ ವಿರಕ್ತಿಭಾವದಿಂ " ॥

ಎಂಬ ಹರಿಹರನ ಉಕ್ತಿಯಂತೆ ಭೋಗಭಾಗ್ಯಗಳನ್ನು, ಸಿರಿತನ ದೊರೆತನಗಳನ್ನು ಎಡಗಾಲಿನಿಂದೊದೆದು ವೀರ ವೈರಾಗ್ಯದಿಂದ ಹೊರಟುಬಿಟ್ಟಳು. ಆಗ ತಾಯಿ ತಂದೆಗಳು ಧಾವಿಸಿ ಬಂದು ಮಗಳೇ ಹಡೆದವರ ಹೊಟ್ಟೆಗೆ ಹುಡಿ ಹೊಯ್ದು ಹೋಗಬೇಡ, ನೀನು ಎಳೆವಯದ ಯುವತಿ. ಈವಯದಲ್ಲಿ ಓರ್ವಳೇ ಮನೆಬಿಟ್ಟು ಹೊರಗೆ ತೆರಳುವದು ಒಳಿತಲ್ಲ. ಮನೆಯಲ್ಲಿಯೇ ಲಿಂಗ ಪೂಜೆಯನ್ನು ಮಾಡುತ್ತಾಇರು. ನೀನು ಮಾಡುವ ಜಪ ತಪಾದಿಗಳಿಗೆ ಅಡ್ಡಿ ಆತಂಕಗಳನ್ನು ತರುವದಿಲ್ಲ ಎಂದು ಪರಿಪರಿಯಾಗಿ ಬೇಡಿಕೊಂಡರು. ಉನ್ನತಧ್ಯೇಯವನ್ನು ಸಾಧಿಸುವಾಗ, ಆದರ್ಶ ಪ್ರಾಪ್ಯಸ್ಥಾನವನ್ನು ಮುಟ್ಟುವಾಗ ಭೀಕರದಂತಹ ಗಂಡಾಂತರಗಳು ಬಂದರೂ, ವಿಪತ್ಪರಂಪರೆಗಳು ಮುತ್ತಿದರೂ ಅವಕ್ಕೆ ಧೀರೋದಾತ್ತರು ಅಂಜದೇ ಅಳುಕದೇ ತಮ್ಮ ಗುರಿಯನ್ನು ಸಾಧಿಸಿಯೇ ಬಿಡುವರು ಎಂಬಂತೆ ಮಹಾದೇವಿಯು ತಾನು ನಿಶ್ಚಯಮಾಡಿದ ಗುರಿಯಿಂದ ಸ್ವಲ್ಪೂ ಹಿಂದೆ ಮುಂದೆ ಸರಿಯಲಿಲ್ಲ. ಬಸವಣ್ಣನವರು ತಾಯಿ ತಂದೆಗಳನ್ನು ಅಗಲಿ ಹೋದಂತೆ, ಅಲ್ಲಮ

ಪ್ರಭುದೇವರು ಜನನೀ ಜನಕರನ್ನು ಬಿಟ್ಟು ತೆರಳಿದಂತೆ, ಸಿದ್ಧರಾಮದೇವರು ಮಾತಾಪಿ ರನ್ನು ತ್ಯಜಿಸಿ ಹೊರಟಂತೆ, ಮಹಾದೇವಿಯು ಹೆತ್ತ ತಾಯಿ ತಂದೆಗಳ ಮಾತಿಗೆ ಮಣಿ ಗದೇ–

" ನಡೆವ ಲಿಂಗದ ಕೂಡ ನುಡಿವ ಲಿಂಗದ ಒಡನೆ ।
ಎಡವಿಡದೆ ಬರ್ಪ ವಿಷಯ ಭೋಗಗಳನ್ನು ।
ಕೊಡುವೆನು ಲಿಂಗ ಮುಖದಿಂದೆ " ॥

" ಹತ್ತು ಸಾಗರದೊಳಗೆ ಮತ್ತೆ ಜಳಕವ ಮಾಡಿ ।
ಹತ್ತೊಂದು ವಿಧದ ಉಣಿಸುಗಳ ನಾನುಂಡು ।
ಕಿತ್ತೆನು ಮಾಯದ ಬಲೆಗಳ "

ಎಂದು ಹಾಡುತ್ತ ಅಂಗೈಯಲ್ಲಿ ಲಿಂಗವನ್ನಿರಿಸಿ, ಅಂಗೋಪಾಂಗಗಳಲ್ಲಿ ಭಸ್ಮವನ್ನು ಧ ಚನ್ನಮಲ್ಲಿಕಾರ್ಜುನನ್ನು ಸ್ಮರಿಸಿ –

" ಚಿಲಿಪಿಲಿ ಎಂದೋದುವ ಗಿಳಿಗಳಿರಾ ನೀವು ಕಾಣಿರೇ ನೀವು ಕಾಣಿರೇ !
ಸರವೆತ್ತಿ ಪಾಡುವ ಕೋಗಿಲೆಗಳಿರಾ ನೀವು ಕಾಣಿರೇ ನೀವು ಕಾಣಿರೇ !
ಎರಗಿ ಬಂದಾಡುವ ತುಂಬಿಗಳಿರಾ ನೀವು ಕಾಣಿರೇ ನೀವು ಕಾಣಿರೇ !
ಸರೋವರದೊಳಗಾಡುವ ಹಂಸಗಳಿರಾ ನೀವು ಕಾಣಿರೇ ನೀವು ಕಾಣಿರೇ !
ಗಿರಿ ಗಹ್ವರದೊಳಗಾಡುವ ಪುಳಿಂದರಿರಾ ನೀವು ಕಾಣಿರೇ ನೀವು ಕಾಣಿರೇ !
ಚನ್ನಮಲ್ಲಿಕಾರ್ಜುನನೆಲ್ಲಿದ್ದಾನೆಂದು ಹೇಳಿರೇ !

ಎಂದು ವಿಶ್ವಂಬರನಾದ ವಿಶ್ವನಾಥನ ಸಂದರ್ಶನಕ್ಕಾಗಿ ಹಂಬಲಿಸುತ್ತ–

" ಕಲ್ಯಾಣ ಕೈಲಾಸವೆಂಬ ನುಡಿ ಹಸನಾಯಿತ್ತು,
ಒಳಗೂ ಕಲ್ಯಾಣ ಹೊರಗೂ ಕಲ್ಯಾಣ !
ಇದರಂತವನಾರು ಬಲ್ಲರಯ್ಯ ?
ನಿಮ್ಮ ಸತ್ಯಶರಣರ ಸುಳುಹು ತೋರುತ್ತಿದೆಯಯ್ಯ !
ನಿಮ್ಮ ಶರಣ ಬಸವಣ್ಣನ ಕಾಂಬೆನೆಂಬ ತವಕ
ಘನಗಾಯಿತ್ತು ಕೇಳಾ ಚನ್ನಮಲ್ಲಿಕಾರ್ಜುನ "

ಭೂಕೈಲಾಸವೆನಿಸಿದ ಕಲ್ಯಾಣಕ್ಕೆ ಸರ್ವರಿಗೂ ಕಲ್ಯಾಣವನ್ನುಂಟು ಮಾಡುವ ಕಲ್ಯಾಣ ದೊರೆ ಬಸವರಾಜನ ಸಂದರ್ಶನಕ್ಕಾಗಿ ಕುತೂಹಲದಿಂದ ಹೊರಟೇ ಬಿಟ್ಟಳು.

ಬೇಡನು ಬೀಸಿದ ಬಲೆಯಲ್ಲಿ ಸಿಲುಕಿ ಚಿಗರೆಯು ಒದ್ದಾಡುವಂತೆ, ಕಾಲ ಪುರುಷನು ಬೀ ಮಾಯಾಪಾಶದಲ್ಲಿ ಬಿದ್ದು ಲೋಕವೇ ತತ್ತರಿಸುವದು. ದುಃಖತಪ್ತನಾದ ಜೀವನು ಸು ಸಂತೃಪ್ತನಾಗಲು ಶಾಸ್ತ್ರದಲ್ಲಿ ಭಕ್ತಿ, ಜ್ಞಾನ, ವೈರಾಗ್ಯಗಳೆಂಬ ಮೂರು ಮಾರ್ಗಗ ಹೇಳಲ್ಪಟ್ಟಿವೆ. ಮುಕ್ತಿ ಮಾರ್ಗಕ್ಕೆ ಸಾಧನವೆನಿಸಿದ ಈ ಮೂರು ಮಾರ್ಗಗಳನ್ನು ಕುರಿ ಅನೇಕ ಅನುಭಾವಿಗಳು ವಿವಿಧ ಗ್ರಂಥಗಳನ್ನು ಬರೆದಿದ್ದು ಅವುಗಳಲ್ಲಿ ಭಕ್ತಿಶತಕ

ಸೂತ್ರ, ಭಕ್ತಿ ಸುಧಾರ್ಣವ, ಜ್ಞಾನಶತಕ, ವಿಚಾರ ಸಾಗರ, ವಿವೇಕ ಚಿಂತಾಮಣಿ, ವೈರಾಗ್ಯ ಶತಕ ಮುಂತಾದ ಸದ್ಗ್ರಂಥಗಳು ಸುಪ್ರಸಿದ್ಧವಿರುವವು. ಹಲವು ಶರಣರು ಭಕ್ತಿಯೋಗ ವನ್ನು, ಕೆಲವು ಮಹಾನುಭಾವರು ಜ್ಞಾನಯೋಗವನ್ನು ಹಲವಾರು ಸಂತರು ವೈರಾಗ್ಯ ವನ್ನು ತಾಳಿ ಮುಕ್ತರಾಗಿ ಹೋಗಿರುವರು.

ಭಕ್ತಿ-ಜ್ಞಾನ-ವೈರಾಗ್ಯಗಳನ್ನು ಬೇರೆ ಬೇರೆ ಎಂದು ವಿಂಗಡಿಸಿದರೂ ಅವು ಒಂದಕ್ಕೊಂದು ಹೊಂದಾಣಿಕೆಯಿಲ್ಲದ ವಿಭಿನ್ನ ಮಾರ್ಗಗಳೆಂದು ತಿಳಿಯಬಾರದು. ಭಕ್ತಿ ಯೋಗಿಯಲ್ಲಿ ಜ್ಞಾನವೈರಾಗ್ಯಗಳು ಗೌಣವಾಗಿದ್ದು ಭಕ್ತಿಯು ಪ್ರಾಮುಖ್ಯವಾಗಿರುವದು. ಅದರಂತೆ ಜ್ಞಾನಯೋಗಿಯಲ್ಲಿ ಭಕ್ತಿ ವೈರಾಗ್ಯಗಳು ಗೌಣವಾಗಿದ್ದು ಜ್ಞಾನವು ಮೇಲುಗೈ ಯಾಗಿರುವದು. ಇದರಂತೆ ವೈರಾಗ್ಯ ಶೀಲನಲ್ಲಿ ಭಕ್ತಿ ಜ್ಞಾನಗಳು ಗೌಣವಾಗಿದ್ದು ವೈರಾಗ್ಯ ವು ಪ್ರಥಮ ಸ್ಥಾನದಲ್ಲಿರುವದು. ಅಕ್ಕಮಹಾದೇವಿಯ ವೈರಾಗ್ಯವು ಅಸಮವಾದುದು; ಅಸಾಮಾನ್ಯವಾದುದು.

ವಿವಿಧ ಭೋಗ ವಿಲಾಸಗಳನ್ನು ಭೋಗಿಸುವ ಸಾಮರ್ಥ್ಯವುಳ್ಳ ತುಂಬುಜವ್ವನ, ಒಡೆತನ. ಹೋಗಿ ಅಖಂಡ ಸಾಮ್ರಾಜ್ಯದ ಒಡತಿಯಾಗುವ ಒಡೆತನ, ಸ್ವಯಂ ಮಹಾರಾ ಜನೇ ಮನೆಯ ಬಾಗಿಲಿಗೆ ಬಂದು " ದಿವ್ಯ ಸುಂದರಿಯೇ ನಾನಿನ್ನ ಪಾಣಿಗ್ರಹಣಮಾಡುವೆ ಬಾ ಎಂದು ಗೌರವ ಪುರಸ್ಸರವಾಗಿ ಕೊಟ್ಟ ಆಮಂತ್ರಣ ಇವೆಲ್ಲವೂ ನಾ ನೀ ಎಂದು ಮುಂದೆ ಬಂದು ಕೈಮುಗಿದು ನಿಂತರೂ ಆ ಯೌವನ, ಧನಸಂಪತ್ತು, ಮಹಾರಾಣಿಯಾ ಗುವ ಪದವಿಗಳನ್ನು ತೃಣಪ್ರಾಯವೆಂದು ಬಗೆದು ಧಿಕ್ಕರಿಸಿ-

" ವಿರತಿಯಿಂದಿತರ ಸಂಪದ ಸುಖವುಂಟೇ"
"ಸರ್ವವಸ್ತು ಭಯಾನಿತ್ವಂ ಭುವಿನೃಣಾಂ ವೈರಾಗ್ಯಮೇವಾಭಯಂ"

ಎಂಬುಕ್ತಿಯಂತೆ ನಿರ್ಭಯವಾದ, ದಿವ್ಯಸಂಪತ್ತೆನಿಸಿದ ವೈರಾಗ್ಯದ ವೀರಪಥದಲ್ಲಿ ಓರ್ವ ಷೋಡಶಪ್ರಾಯದ ಯುವತಿಯು ಮುನ್ನಡಿ ಇಟ್ಟದ್ದು ಮಾನವ ಕುಲದ ಮಹಿಳಾ ಮಂಡ ಳಕ್ಕೆ ಆದರ್ಶಪ್ರಾಯವಾಗಿದೆ.

ವೈರಾಗ್ಯವು ಪುರಾಣವೈರಾಗ್ಯ, ಪ್ರಸೂತಿವೈರಾಗ್ಯ, ಶ್ಮಶಾನವೈರಾಗ್ಯ, ಅಭಾವ ವೈರಾಗ್ಯ ಎಂದು ನಾಲ್ದೆರನಾಗಿದ್ದು ಅವುಗಳಲ್ಲಿ ಅಭಾವ ವೈರಾಗ್ಯವು-

" ಒಳ್ಳೆ ಒಲ್ಲಿಯನೊಲ್ಲ ಸೆಲ್ಲಕ್ಕಿ ಬೋನೊಲ್ಲ ।
ನಲ್ಲಳನು ಒಲ್ಲ ಮೊಸರೊಲ್ಲ ಯಾಕೊಲ್ಲ ।
ಇಲ್ಲದಕೆ ಒಲ್ಲ ಸರ್ವಜ್ಞ "

ಎಂಬ ಸರ್ವಜ್ಞನ ಉಕ್ತಿಯಂತೆ ಯಾಕೊಲ್ಲ ಇಲ್ಲದ್ದಕ್ಕೆ ಒಲ್ಲೆ ಎಂಬುದೇ ಅಭಾವ ವೈರಾ ಗ್ಯವು. ಇಲ್ಲದಾಗ ಒಲ್ಲೆನ್ನುವದು ದೊಡ್ಡದಲ್ಲ, ಇದ್ದಾಗ ಒಲ್ಲೆಂದು ಬಿಡುವದು ದೊಡ್ಡದು. ಅಕ್ಕನಲ್ಲಿದ್ದ ವೈರಾಗ್ಯವು ಅಭಾವ ವೈರಾಗ್ಯವಲ್ಲ, ಅಲ್ಲಿದ್ದುದು ಭಾವ ವೈರಾಗ್ಯವು. ಭೋಗ

ಸಾಮಗ್ರಿಗಳ ನಟ್ಟನಡುವಿದ್ದರೂ ಅವನ್ನೆಲ್ಲ ದಿಟ್ಟತನದಿಂದ ಬಿಟ್ಟು ಶಿವಪಥವನ್ನು ಮುಟ್ಟಿ ಯೇತೀರುವೆನೆಂಬ ನಿಷ್ಠೆಯುಳ್ಳವಳು ಮಹಾದೇವಿಯು. ಅಂತೆಯೇ ಅವಳ ವೈರಾಗ್ಯ ಆದರ್ಶಪ್ರಾಯವಾದುದು.

ಮಧ್ಯರಾತ್ರಿಯಲ್ಲಿ ಮುದ್ದು ಮಡದಿಯನ್ನೂ, ಮುದ್ದು ಮಗುವನ್ನೂ ಬಿಟ್ಟು ಎದ್ದು ಹೋದ ಬುದ್ಧನ ವೈರಾಗ್ಯವನ್ನು ಪ್ರಶಂಸಿಸುವರು.

ಹಲ್ಲಿಲ್ಲದ, ಕಣ್ಣಿಲ್ಲದ, ಕಾಲ ಮೇಲೆ ಕೈಯೂರಿ ಎದ್ದು ಕೋಲುಹಿಡಿದು, ಬೆನ್ನು ಬಾಗಿ, ಹಾಗಲ ಹಣ್ಣಿನಂತೆ ಮುಪ್ಪಾನು ಮುದುಕನಾದ ಓರ್ವ ಮಾನವ; ಹೊಯ್ಕೊಳ್ಳುತ್ತ ಬಡ್ಡಕೊಳ್ಳುವ, ಗೋಳಿಟ್ಟು ಗೋಗರೆದ ಜನರ ಮಧ್ಯದಲ್ಲಿ ಸಿದಿಗೆಯ ಮೇಲೆ ಹೊತ್ತು ತರುವ ಹೆಣ; ಸರ್ವಸಂಗ ಪರಿತ್ಯಾಗ ಮಾಡಿ ಕಾಷಾಯಾಂಬರಗಳನ್ನು ಧರಿಸಿದ ತೇಜಃ ಪುಂಜ ಮುಖವುಳ್ಳ ಓರ್ವ ಸನ್ಯಾಸಿ ಈ ಮೂರು ದೃಶ್ಯಗಳನ್ನು ಕಂಡು ಬುದ್ಧನು, ಸಂಸಾ ರವು ದುಃಖಮಯವಾದದ್ದು, ಕ್ಷಣಭಂಗುರವಾದುದು, ಈ ಅನಿತ್ಯ ಸಂಸಾರದಲ್ಲಿರುವುದು ಬೇಡ ಎಂದು ನಿರ್ಧರಿಸಿ ಸಾಮ್ರಾಜ್ಯವನ್ನೇ ಬಿಟ್ಟು ಸನ್ಯಾಸಿಯಾದನು.

ಮೇಲ್ಕಾಣಿಸಿದ ವೃದ್ಧ, ಶವ, ಸನ್ಯಾಸಿ ಈ ಮೂವರು ಬುದ್ಧನಲ್ಲಿದ್ದ ಸುಪ್ತ ವೈರಾಗ್ಯವು ಜಾಗೃತವಾಗಲಿಕ್ಕೆ ಕಾರಣರಾದರೆಂದು ಹೇಳಬಹುದು. ಅನುಕೂಲ ಸಾಧನ ದ್ದಾಗ ಸಾಧ್ಯವು ಸಿದ್ಧಿಸುವದೇನೂ ಅಚ್ಚರಿಯಲ್ಲ. ಆದರೆ ಪ್ರತಿಕೂಲ ಸಾಧನಗಳಿದ್ದು ಸಾಧ್ಯವನ್ನು ಕೈವಶ ಮಾಡಿಕೊಳ್ಳುವುದು ದುಸ್ತರ, ದುಸ್ಸಾಧ್ಯ.

ಮಹಾದೇವಿಗೆ ಇದ್ದ ಪರಿಸ್ಥಿತಿ, ಎದುರಾದ ಘಟನೆಗಳು, ಪ್ರಸಂಗಗಳು; ಅದರ ಮನೋವಿಕಾರವನ್ನುಂಟು ಮಾಡುವ ಯೌವನ, ಮಹಾರಾಣಿಯಾಗುವ ಅಪೂರ್ವಯೋಗ ಧನಸಂಪತ್ತು, ಪ್ರಭುತ್ವ ಮೊದಲಾದವು ವಿರತಿಯನ್ನು ಮಣ್ಣುಗೂಡಿಸತಕ್ಕವುಗಳು. ಚಿತ್ತಸ್ಥೈರ್ಯಕ್ಕೆ ವಿಘ್ನವನ್ನುಂಟು ಮಾಡುವ ವಿವಿಧ ಸಾಮಗ್ರಿಗಳು ಮುಂದಿದ್ದರೂ ಅವಕ್ಕೆ ಬಲಿಬೀಳದೆ ದೇಹತಃ ಗೇಹತಃ ವೈರಾಗ್ಯತಾಳಿದುದು ಅಚ್ಚರಿಯ ಮೇಲಚ್ಚರಿ.

ಯಾಜ್ಞವಲ್ಕ್ಯರ ಸತಿಯಾದ ಮೈತ್ರೇಯಿಯು ಸಂಸಾರದಿಂದ ವಿಮುಖಳಾಗಿ ತನ್ನ ಪತಿದೇವರಿಗೆ ಶಿಷ್ಯಳಾಗಿ ಪತಿದೇವರ ಮುಖದಿಂದ ತತ್ತ್ವಶಾಸ್ತ್ರವನ್ನು ಕೇಳಿ ಭಗವ ಸಾಕ್ಷಾತ್ಕಾರಕ್ಕೆ ಅಭಿಮುಖಳಾದದ್ದು ಉಪನಿಷತ್ತಿನಲ್ಲಿ ಬರುವದು.

ದೇಹಸನ್ಯಾಸ, ಗೇಹಸನ್ಯಾಸ ಎಂದು ಸನ್ಯಾಸವು ಎರಡು ವಿಧ. ತನುವಿನ ನಿರ್ಮೋಹ, ಮನದಲ್ಲಿ ನಿರಹಂಕಾರ, ಪ್ರಾಣದಲ್ಲಿ ನಿರ್ಭಯ, ಚಿತ್ತದಲ್ಲಿ ನಿರಪೇಕ್ಷೆ, ವಿಷಯ ದಲ್ಲಿ ಉದಾಸೀನ, ಭಾವದಲ್ಲಿ ದಿಗಂಬರ ಹೀಗಿದ್ದರೆ ಅದು ದೇಹಸನ್ಯಾಸ. ಹೀಗಿರದೆ ದೇಹ ಮನ ಪ್ರಾಣಗಳಲ್ಲಿ ರಾಗದ್ವೇಷ, ಶೋಕ, ಮೋಹ, ಕಾಮಕ್ರೋಧ, ಅಹಂಕಾರ ಗಳ ಸುಳಿದಾಟ, ಹರಿದಾಟ, ಚೆಲ್ಲಾಟವಿದ್ದರೆ ಅದು ದೇಹಸನ್ಯಾಸವೆನಿಸದೇ. ದೇಹಸನ್ಯಾಸ ವೆನಿಸುವದು, ಅಂದರೆ ದೇಹದಲ್ಲಿ ಇಟ್ಟುಕೊಳ್ಳುವಿಕೆ ಎಂಬುದಾಗಿ ತಿಳಿಯಬೇಕು. ಒಳಗಿ ರುವ ಕಾಮಕ್ರೋಧಾದಿಗಳನ್ನು ಬಿಡದೆ ಅವುಗಳನ್ನೂ ಗಟ್ಟಿಯಾಗಿ ಹಿಡಿದ್ದ ದೇಹ

ಸನ್ಯಾಸವು ತೋರಿಕೆಯ ಸನ್ಯಾಸ ಡಾಂಭಿಕ ಸನ್ಯಾಸವೆನಿಸುವದು.

ಹುತ್ತವ ಬಡಿದರೆ ಹಾವು ಸಾವುದೇ ? ಹೊಟ್ಟೆಯ ಮೇಲೆ ಪುಷ್ಪಾನ್ನವ ಕಟ್ಟಿದರೆ, ಹಸಿವು ಹಿಂಗುವದೇ ? ತಲೆಯ ಮೇಲೆ ಜಲದ ಕುಂಭವನಿರಿಸಿದರೆ ನೀರಡಿಕೆ ಹೋಗುವದೇ ? ವಿಸ್ಯೆ ಕಲಿಯದೇ ವಿದ್ಯಾವಾಚಸ್ಪತಿ, ವಿದ್ಯಾಸಾಗರ ಎಂಬ ಹೆಸರಿಟ್ಟುಕೊಂಡರೆ ಅವನು ನಿಜವಾದ ವಿದ್ವಾಂಸನಾಗಬಲ್ಲನೇ ? ಕೈಯಲ್ಲಿ ಕಾಸಿಲ್ಲದೆ ಕುಬೇರನೆಂದು ಹೆಸರನ್ನಿಟ್ಟುಕೊಂಡಾಕ್ಷಣ ಅವನು ಶ್ರೀಮಂತನಾಗಬಲ್ಲನೇ ? ಹಾಗೆಯೇ ಅಂತರಂಗದ ಶುದ್ಧಿಯಿಲ್ಲದೆ ಹೊರಗಿನ ಉಪವಾಸ, ಜಾಗರಣೆ, ದೇಹದಂಡನ, ಕೇಶಮುಂಡನ, ದಂಡಧಾರಣ ಮೊದಲಾದವುಗಳಿಂದ ಯಾವ ಪ್ರಯೋಜನವೂ ಇಲ್ಲ. ಸೀತೆಯನ್ನು ಅಪಹರಿಸುವದಕ್ಕಾಗಿ ರಾವಣನು ಹಾಕಿದ ಸನ್ಯಾಸವೇಷವು ನಿಜವಾದ ದೇಹಸನ್ಯಾಸವಲ್ಲ ಅದು ಹುಲಿಯು ಚರ್ಮವನ್ನು ಹೊತ್ತ ಕತ್ತೆಯಿದ್ದಂತೆ.

ದೇಹಸ್ಯಾಸಮಾಡಿ ಗೇಹಸನ್ಯಾಸಮಾಡದೇ ಅನಂತ ಮಹಾನುಭಾವರು ಆದರ್ಶಪುರುಷರಾಗಿ ಹೋಗಿರುವರು. ಈ ವಿಷಯದಲ್ಲಿ, ಜನಕಮಹಾರಾಜ, ಶ್ರೀಕೃಷ್ಣ, ಶ್ರೀರಾಮ, ಬಳ್ಳಾರಿಯ ಸಕ್ಕರಿಯ ಕರಡೆಪ್ಪ, ಸೊನ್ನಲಾಪುರದ ವಾರದಮಲ್ಲಪ್ಪ, ನಾಲತವಾಡದ ವೀರೇಶ್ವರಶರಣ, ಪಚನಪಿತಾಮಹ ಡಾ॥ ಫ, ಗು, ಹಳಕಟ್ಟಿ, ತತ್ವಜ್ಞಾನಿ ನಿಂಬಾಳದ ರಾನಡೆ ಮುಂತಾದವರನ್ನು ನಿರ್ದೇಶಿಸಬಹುದು.

ದೇಹಸನ್ಯಾಸವ ಮಾಡದೇ ಗೇಹಸನ್ಯಾಸವ ಮಾಡುವವರು ಎಷ್ಟೋ ಜನರಿರುವರು, ದೇಹಸನ್ಯಾಸ ಗೇಹಸನ್ಯಾಸಗಳೆರಡನ್ನು ಮಾಡದೇ ಮೋಹಕೂಪದಲ್ಲಿ ಬಿದ್ದು ಒದ್ದಾಡುವ ಜನರು—

« ಅಷೆಗೆ ಸತ್ತುದುಕೋಟಿ, ಆಮಿಷಕ್ಕೆ ಸತ್ತುದುಕೋಟಿ
ಹೊನ್ನು ಹೆಣ್ಣು ಮಣ್ಣಿಗೆ ಸತ್ತುದುಕೋಟಿ ಗುಹೇಶ್ವರ
ನಿಮಗಾಗಿ ಸತ್ತವರನಾರನೂ ಕಾಣೆ »

ಎಂದು ಪ್ರಭುದೇವರು ಹೇಳಿರುವರು.

ದೇಹಸ್ಯಾಸ, ಗೇಹಸ್ಯಾಸ ಈ ಉಭಯ ಸನ್ಯಾಸವನ್ನು ಸ್ವೀಕರಿಸಿದ ಮಹಾನುಭಾವರು ದೊರೆವುದು ಅಪರೂಪ. ಶುಕಮುನಿ, ಆದ್ಯಶಂಕರಾಚಾರ್ಯ, ಷಟಸ್ಥಲ ಚಕ್ರವರ್ತಿ ಚನ್ನಬಸವೇಶ್ವರ, ಕಾಯಕಯೋಗಿ ಸಿದ್ಧರಾಮೇಶ್ವರ, ಸಾವಳಗಿಯ ಶಿವಲಿಂಗೇಶ್ವರ,ಅಥಣಿಯ ಮುರುಘೇಂದ್ರಶಿವಯೋಗಿ ಮೊದಲಾದವರನ್ನು ಉಭಯಸನ್ಯಾಸ ಸ್ವೀಕರಿಸಿದ ಮಹಾನುಭಾವರಲ್ಲಿ ಎಣಿಸಬಹುದು.

ಈಷಣತ್ರಯವನ್ನು ರಸಾತಳಕ್ಕೆ ತುಳಿದ ಶಿವಯೋಗಿ ಕುಲಚಕ್ರವರ್ತಿ ಶ್ರೀ ಎಡೆಯೂರ ತೋಂಟದಸಿದ್ಧಲಿಂಗೇಶ್ವರರು ಒಮ್ಮೆ ಏಳನೂರು ಚರಮೂರ್ತಿಗಳೊಡನೆ ಭಕ್ತಾನುಗ್ರಹಕ್ಕಾಗಿ ಲೋಕಸಂಚಾರವ ಕೈಕೊಂಡರಂತೆ. ಆಗ ಜೊತೆಯಲ್ಲಿದ್ದ ಹಲವಾರು ಚರಮೂರ್ತಿಗಳು—

ಸಿದ್ಧಲಿಂಗಯತಿಯೇ ನಿನಗಾರು ಸರಿಯೇ !
ಸರಿ, ಸರಿ, ಎಂದವರ ಹಲ್ಲು ಮುರಿಯೇ !

ಎಂದು ಉದ್ಘೋಷಿಸಿ ಪರಾಕು ಹೇಳಲು ಶ್ರೀಸಿದ್ಧಲಿಂಗೇಶ್ವರರು ಆಗಿಂದಾಗಲೇ ಚರ ರ್ತಿಗಳು ಹೇಳುವ ಪರಾಕನ್ನು ನಿಲ್ಲಿಸಿ ಚರವರ್ಯರೇ, ನಿನಗಾರು ಸರಿಯೇ ಎಂದು ಕನ್ನು ಹೊಡೆಯಬೇಡಿರಿ. ಹರಗುರುಚರಮೂರ್ತಿಗಳೆಲ್ಲರೂ ಸರಿಸಮಾನರು. ಹಿರಿಯರು, ಕಿರಿಯರು ಎಂಬ ಭೇದಭಾವ ಉಂಟೇ ? ಎಂದು ಸಿಟ್ಟುಮಾಡಿ ಹೇಳಿದ ಶ್ರೀ ಸಿದ್ಧಲಿಂಗ ಶಿವಯೋಗಿಗಳು ತಮ್ಮ ಅಂತರಂಗದಲ್ಲಿದ್ದ ಹಮ್ಮುಬಿಮ್ಮುಗಳ ನಿರ್ಮೂಲ ಮಾಡಿದ್ದರು. ಇವರೆಲ್ಲರೂ ಉಭಯವಿಧ ಸನ್ಯಾಸವ ಸ್ವೀಕರಿಸಿದ ವಿಶ್ವವಿ ಗಳು, ಲೋಕೋತ್ತರ ಮಹಾಮಹಿಮರು.

ಅಕ್ಕರೆಯ ಮೂರುತಿಯಾದ ಅಕ್ಕಮಹಾದೇವಿಯ ಜೀವನ ಚರಿತ್ರೆಯನ್ನು ಅವಳಲ್ಲಿ ಉಭಯವಿಧ ಸನ್ಯಾಸವು ನೆಲೆಸಿತ್ತೆಂದು ತಿಳಿದುಬರುವದು.

" ಹಸಿವಾದೊಡೆ ಭಿಕ್ಷಾನ್ನಗಳುಂಟು
ತೃಷೆಯಾದೊಡೆ ಕೆರೆ ಹಳ್ಳ ಭಾವಿಗಳುಂಟು
ಶಯನಕ್ಕೆ ಹಾಳುದೇಗುಲಗಳುಂಟು
ಚನ್ನಮಲ್ಲಿಕಾರ್ಜುನಯ್ಯ ಆತ್ಮಸಂಗಾತಕ್ಕೆ ನೀನೆನಗುಂಟು "

" ಒಡಲ ಕಳವಳಕ್ಕಂಜಿ ಅಡವಿಯಾ ಹೊಕ್ಕೆ
ಗಿಡ ಗಿಡ ತಪ್ಪದೇ ಬೇಡಿದೆನೆನ್ನಂಗಕ್ಕೆಂದು
ಅವು ನೀಡಿದವು ತಮ್ಮ ಲಿಂಗಕ್ಕೆಂದು
ಆನು ಬೇಡಿ ಭವಿಯಾದೆನು ಅವು ನೀಡಿ ಭಕ್ತರಾದವು
ಇನ್ನು ಬೇಡಿದೆನಾದರೆ ಚನ್ನಮಲ್ಲಿಕಾರ್ಜುನಯ್ಯ ನಿಮ್ಮಾಣೆ"

ಇವೇ ಮುಂತಾದ ವಚನಗಳು ಮಹಾದೇವಿಯ ಗೇಹವೈರಾಗ್ಯವನ್ನು ಬಿತ್ತರಿಸಿದರ-

" ಹಣ್ಣು ಮೆದ್ದ ಬಳಿಕ ಆ ಮರವನಾರುತರಿದರೇನು ?
ಹೆಣ್ಣು ಬಿಟ್ಟ ಬಳಿಕ ಆಕೆಯನಾರು ಕೂಡಿಕೊಂಡರೇನು ?
ಮಣ್ಣು ಬಿಟ್ಟ ಬಳಿಕ ಆಕೆಯ್ಯ ನಾರುತ್ತರೇನು ? ಚನ್ನಮಲ್ಲಿಕಾರ್ಜು
ನರಿದ ಬಳಿಕ ಆ ಕಾಯವ ನಾಯಿತಿಂದರೇನು ? ನೀರು ಕುಡಿದ

" ಹಸಿವೇ ನೀನು ನಿಲ್ಲು ನಿಲ್ಲು, ತೃಷೆಯೇ ನೀನು ನಿಲ್ಲು ನಿಲ್ಲು
ನಿದ್ರೆಯೇ ನೀನು ನಿಲ್ಲು ನಿಲ್ಲು ಕಾಮವೇ ನೀನು ನಿಲ್ಲು ನಿಲ್ಲು
ಕ್ರೋಧವೇ ನೀನು ನಿಲ್ಲು ನಿಲ್ಲು ಮೋಹವೇ ನೀನು ನಿಲ್ಲು ನಿಲ್ಲು
ಲೋಭವೇ ನೀನು ನಿಲ್ಲು ನಿಲ್ಲು ಮದವೇ ನೀನು ನಿಲ್ಲು ನಿಲ್ಲು
ಮಚ್ಚರವೇ ನೀನು ನಿಲ್ಲು ನಿಲ್ಲು ಸಚರಾಚರವೇ ನೀನು ನಿಲ್ಲು ನಿಲ್ಲು
ನಾನು ಚನ್ನಮಲ್ಲಿಕಾರ್ಜುನದೇವರ ಅವಸರದ ಓಲೆಯನ್ನೊಯ್ಯು
ಲಿದ್ದೇನೆ ಶರಣಾರ್ಥಿ "

ಮೊದಲ ನುಡಿಮುತ್ತುಗಳು ಅಕ್ಕನ ದೇಹಸನ್ಯಾಸವನ್ನು ಚಿತ್ತರಿಸುತ್ತವೆ.

ಉಪನಿಷತ್ಕಾಲ, ಪೌರಾಣಿಕ ಕಾಲ, ವಚನವಾಙ್ಮಯ ಕಾಲಗಳಲ್ಲಿ ಮೆರೆದುಹೋದ ಮಹಾ ವಿಭೂತಿಗಳ ವೈರಾಗ್ಯ ಸಂಪತ್ತಿಗಿಂತಲೂ ಅಕ್ಕಮಹಾದೇವಿಯ ವಿರಾಗಸಂಪತ್ತು ನಕ್ಷತ್ರ ಮಂಡಲದಲ್ಲಿಯ ಚಂದ್ರಬಿಂಬದಂತೆ ಅತ್ಯಧಿಕವಾದಿ ರಾರಾಜಿಸುವದು.

ಇದೇನೂ ಅಷ್ಟು ಮಹತ್ವದ್ದಲ್ಲ, ಇಳಿಯುತ್ತ ಬಂದಂತೆ ತಿಳಿಯುತ್ತ ಬಂದಿತು ಎಂಬ ಗಾದೆಯಂತೆ ಎಲ್ಲರೂ ಇಳಿವಯದಲ್ಲಿ ತಿಳಿದವರೇ ಆಗುವರು. "ವೃದ್ಧನಾರೀ ಪತಿವ್ರತಾ" ಪೌಢನಾರಿಯ ಪಾತಿವ್ರತ್ಯಕ್ಕೆ ಬೆಲೆಯಿದೆಯಲ್ಲದೆ ವೃದ್ಧನಾರಿಯ ಪಾತಿವ್ರತ್ಯಕ್ಕೆ ಬೆಲೆಯಿದೆಯೇ ? ಎಳೆವಯದ ಮಹಾದೇವಿಯ ವಿರತಿಗೂ ಇಳಿವಯದ ಮೈತ್ರೇಯಿಯ ವಿರತಿಗೂ ಉತ್ತರ ಧ್ರುವ ದಕ್ಷಿಣ ಧ್ರುವದಷ್ಟು ಅಂತರ.

ಶರಣರ ಚರಿತ್ರೆಯಲ್ಲಿ ಬರುವ ಮೋಳಿಗೆಯ ಮಾರಯ್ಯ-ಮಹಾದೇವಿ ಇವರ ಇತಿಹಾಸವು ಹೀಗೆಯೇ ಇದೆ. ಕಲ್ಯಾಣಕ್ಕೆ ಹೋಗುವ ಮುನ್ನ ಮೋಳಿಗೆಯ ಮಾರಯ್ಯನು ಕಾಶ್ಮೀರದ ದೊರೆ ಮಹಾದೇವ ಭೂಪಾಲ ಶರಣೆ ಮಹಾದೇವಿಯು ರಾಣಿ ಗಂಗಾಂಬಿಕೆಯಾಗಿದ್ದಳು. ಮಹಾದೇವ ಭೂಪಾಲನು ಮಗನಿಗೆ ಯುವರಾಜ ಪಟ್ಟವನ್ನು ಕಟ್ಟಿ ಕಲ್ಯಾಣದಲ್ಲಿರುವ ಅನುಭವ ಮಂಟಪಕ್ಕೆ ಹೋಗಿ ವಿರತಿಯಿಂದ ದಂಪತಿಗಳು ಶರಣರಾಗಿ ಮೆರೆದರು. ಇಳಿವಯದ ರಾಜ ರಾಣಿಯರು ರಾಜ್ಯಕೋಶಗಳನ್ನು ಬಿಟ್ಟು ಶರಣೆಯರಾದದ್ದು ಸೋಜಿಗವೇನಲ್ಲ. ನಿಜಗುಣ, ಭರ್ತೃಹರಿ, ಪುರಂದರದಾಸ, ತುಲಸೀದಾಸ, ಗಟ್ಟಿವಾಳಯ್ಯ ಇವರು ಜ್ಞಾನಗರ್ಭ ವೈರಾಗ್ಯತಾಳದೇ ನೈವೇದ್ಯ ವೈರಾಗ್ಯದಿಂದ ಅಂದರೆ ಸಾಂಸಾರಿಕ ದುಃಖಗಳ ವಿಘ್ನಗಳ ಒತ್ತಡದಿಂದ ವೈರಾಗ್ಯ ತಾಳಿದರು. ತಾಗಿದಾಗ ಎಲ್ಲರೂ ಬಾಗುವರು, ತಾಗದೇ ಬಾಗಿ ನಡೆಯುವದು ಮೇಲು. ಮೇಲ್ಕಾಣಿಸಿದ ಮಹಾನುಭಾವರು ಸಂಸಾರ ದುಃಖದ ಉಲ್ಬಣವನ್ನು ತಾಳದೇ ಈ ಸಂಸಾರವೇ ಬೇಡ, ತಾಪತ್ರಯದ ತವರು ಮನೆಯೆನಿಸಿದ ಈ ಸಂಸಾರದ ದಳ್ಳುರಿಯಲ್ಲಿ ಸಿಕ್ಕು ಸುಟ್ಟುಕೊಂಡು ಸುಣ್ಣಾಗಿ ಹೋಗುವದು ಬೇಡ ಎಂದು ನಿರ್ಧರಿಸಿ ಎಲ್ಲವನ್ನುಬಿಟ್ಟು ವೈರಾಗ್ಯ ತಾಳಿದಿರು. ಹೀಗೆ ಅನೇಕ ಸಂತರ ಶರಣರ ಮಹಾನುಭಾವರ ಇತಿಹಾಸ ನೋಡಿದರೆ ಅವರೆಲ್ಲರ ವಿರತಿಗಿಂತಲೂ ಮಹಾದೇವಿಯಕ್ಕನ ವಿರತಿಯು ಮಿಕ್ಕಿನಿಲ್ಲುವದು.

೧೧ ನೇಯ ಗತಿ

# ಗೊಗ್ಗಯ್ಯನ ವೃತ್ತಾಂತ

ಶೂನ್ಯ ಸಂಪಾದನೆಯ ಪ್ರಥಮೋಪದೇಶದಲ್ಲಿ ಪ್ರಭುದೇವರು ಗೊಗ್ಗಯ್ಯ
ಸಂಬೋಧಿಸಿ ತನಗೆ ಗುರುವಾದ ಅನಿಮಿಷ ಶಿವಯೋಗಿಯ ಮಹತ್ವವನ್ನೂ, ಗುರು
ರಲ್ಲಿಯ ಅದ್ವೈತ ಸ್ಥಿತಿಯನ್ನೂ ವಿವಿಧ ದೃಷ್ಟಾಂತಗಳ ಮುಖಾಂತರ ವಿವರಿಸಿರು
ಈ ಪ್ರಥಮೋಪದೇಶದಲ್ಲಿ ಪ್ರಭುದೇವರಿಗೂ—ಗೊಗ್ಗಯ್ಯನಿಗೂ, ಮುಕ್ತಾಯಕ್ಕ
ಸಂಪಾದನೆಯಲ್ಲಿ ಮುಕ್ತಾಯಕ್ಕನಿಗೂ—ಪ್ರಭುದೇವರಿಗೂ, ಸಿದ್ಧರಾಮದೇವರ ಸಂಪಾ
ಯಲ್ಲಿ ಸಿದ್ಧರಾಮೇಶ್ವರರಿಗೂ—ಪ್ರಭುದೇವರಿಗೂ ಸಂವಾದ ನಡೆದಂತೆ, ಸಂವಾದವಿ
ದಿಲ್ಲ. ಅದು ಕಾರಣ ಗೊಗ್ಗಯ್ಯನ ಸಂಪಾದನೆ ಎಂದು ಹೇಳದೆ ಗುರುಮಹತ್ವ
ಹೇಳುವುದರಿಂದ ಇದಕ್ಕೆ "ಗುರುಕರುಣ" ಎಂದು ನಾಮನಿರ್ದೇಶನ ಮಾಡಿರುವರು.

ಬಸವೇಶ್ವರರು ತಮ್ಮ ವಚನಗಳ ಪ್ರಾರಂಭದಲ್ಲಿ "ಗುರು ಕರುಣ" ಎಂಬ ಸ್ಥ
ದೊಳಗೆ ಗುರುವಿನ ಮಹಾತ್ಮ್ಯವನ್ನು ಹೇಳಿರುವರು.

"ಯೋಗುರುಃ ಸಶಿವಃ ಪ್ರೋಕ್ತಃ ಯಃ ಶಿವಃ ಸಗುರುಃ ಸ್ಮೃತಃ।
ಏತಯೋರಂತರಂ ಕುರ್ಯಾತ್ ಜ್ಞಾನಾವಾಪ್ತ್ಯೈ ಮಹಾಮತಿಃ"॥

ಎಂಬುಕ್ತಿಗನುಸಾರವಾಗಿ ಹರ ಗುರುಗಳಲ್ಲಿ ಅಭೇದ ದೃಷ್ಟಿಯುಳ್ಳ ನಿಜಗುಣರು ಕ
ಕೈವಲ್ಯಪದ್ಧತಿಯ ಪ್ರಾರಂಭದಲ್ಲಿ ಶಿವಕಾರುಣ್ಯಸ್ಥಲ ಎಂದು ಹೇಳಿ ಅಲ್ಲಿ ಈರ್ವರ ಪ
ತ್ವವನ್ನು ಪ್ರತಿಪಾದಿಸಿರುವರು. ಸಿದ್ಧಾಂತ ಶಿಖಾಮಣಿಯ ಪ್ರಾರಂಭದಲ್ಲಿ "ಗುರು
ರುಣ್ಯ ಸ್ಥಲ" ಎಂದು ಬರೆದಿದ್ದು ಅಲ್ಲಿ ಶ್ರೋತ್ರೀಯ ಬ್ರಹ್ಮನಿಷ್ಠನಾದ ಗುರುವಿನ ಸ
ಮಾಡಿ ಮುಕ್ತನಾಗಬೇಕೆಂದು ಹೇಳಿದೆ. ಶರಣರಲ್ಲಿ ಗಣ್ಯರಾಗಿ ಪುಣ್ಯಪುರುಷರು
ಮೈಲಾರದ ಬಸವಲಿಂಗ ಶರಣರು ಶ್ರೀಗುರುವಿನ ಕರುಣೆಗಾಗಿ "ಗುರುಕರುಣ ತ್ರಿವಿ
ಎಂಬ ಹಾಡುಗಬ್ಬವನ್ನೇ ಬರೆದಿರುವರು. ಸಂಸ್ಕೃತದಲ್ಲಿ ಗುರುಗೀತೆ ಎಂಬ ಹೊತ್ತಿಗೆಯು
ಅದು ಗುರು ಮಹತ್ವವನ್ನೇ ಎತ್ತಿ ಒತ್ತಿ ಹೇಳುತ್ತದೆ. "ನಾಸ್ತಿತತ್ವಂ ಗುರೋಃ ಪರ
"ತಸ್ಮಾದ್ಗುರುರುಪಾಸ್ಯಃ" "ಗುರುಸಾಕ್ಷಾತ್ ಪರಬ್ರಹ್ಮ" "ನ ಗುರೋರಧಿ
ಶಿವಶಾಸನತಃ" "ದೃಷ್ಟಾಂತೋನೈವದೃಷ್ಟಃ ತ್ರಿಭುವನಜಠರೇ ಸದ್ಗುರೋಃ ಜ್ಞಾ
ದಾತುಃ" "ಶ್ರೀ ಗುರುವ ಸೇವೆ ಶರಣಾಗೆನಗೆ ನಿಜಸುಖದ ಸಾಗರವೆ" ಶ್ರೀ ಗುರುವು
ಪದೇಶವನಾಲಿಸಿದಾಗಳದುದು ನರರಿಗೆಮುಕುತಿ" "ಶ್ರೀ ಗುರುವಚನದಿಂದಧಿಕ
ಯುಂಟೇ" "ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ" "
ಗುರುವೆಮ್ಮಣೆಗೈವರ್ಗ ಚಿಂತಾಮಣಿಯು, ಪರುಷದ ಕಣಿಯು, ಮರುಜೇವಣ
ಮುಕುರಮಣಿಯು, ವೀರಶೈವೋತ್ತಮ ಕುಲಾಗ್ರಣಿಯು"

"ಗುರುವ ನರನೆಂದವಗೆ ಹರನ ಶಿಲೆಯೆಂದವಗೆ।
ಕರುಣ ಪ್ರಸಾದವೆಂಜಲೆಂದವಗೆ।
ನರಕ ತಪ್ಪುವದೆ ಸರ್ವಜ್ಞ"॥

ಹರಮುನಿದರೆ ಗುರುಕಾಯುವ, ಗುರುಮುನಿದರೆ ಹರಕಾಯನು, "ಹರಕೊಲ್ಲಲು ಗುರುಕಾಯುವ" "ಶಿವಪಥವನರಿವಡೆ ಗುರುಪಥವೇ ಮೊದಲು" ಇಂತಹ ನೂರಾರು ಸೂಕ್ತಿಗಳು ಗುರುಮಹತ್ವವನ್ನು ಹೇಳುತ್ತಲಿವೆ.

ಅಷ್ಟಾವರಣಗಳಲ್ಲಿ ಗುರುವಿಗೆ ಅಗ್ರಸ್ಥಾನವು ಕೊಡಲ್ಪಟ್ಟಿದೆ. ಖಣಿಯಲ್ಲಿದ್ದ ಕಾಡುಗಲ್ಲು ಶಿಲ್ಪಿಗನಕೈಯಲ್ಲಿ ನುಣುಪಾದ ಲಿಂಗವಾದರೂ ಅದು ಪೂಜೆಗೊಳ್ಳದೇ ಪುನಃ ಶ್ರೀಗುರುವಿನ ಪರುಷಹಸ್ತದಿಂದ ಮಂತ್ರಸಂಸ್ಕೃತವಾಗಿ ಪ್ರಾಣಪ್ರತಿಷ್ಠೆಯಾದಾಗ ಅದು ಲಿಂಗವಾಗಿ ಪೂಜೆಗೊಂಬುದು. ಇದನ್ನು ಸರ್ವಜ್ಞನು–

ಕಲ್ಲುಕಲ್ಲೆಂಬುವಿರಿ ಕಲ್ಲೊಳಿರ್ಪುದೆ ದೈವ ।
ಕಲ್ಲಲ್ಲಿ ಕಳೆಯ ನಿಲಿಸಿದಗುರುವಿನಾ
ಸೊಲ್ಲಿನಲಿ ದೇವ ಸರ್ವಜ್ಞ ।"

ಎಂದು ಹೇಳಿರುವನು. ಗುರುಬೋಧೆಯಿಂದಲೇ ನರನು ಹರನಾಗುವನು, ಮಾನವನುಮಹಾಮಾನವನಾಗುವನು, ವಾಯುಪ್ರಾಣಿಯು ಲಿಂಗಪ್ರಾಣಿಯಾಗುವದು. ಭವಿಯು ಭಕ್ತನಾಗುವನು, ಬದ್ಧನು ಶುದ್ಧನಾಗುವನು. ಗುರುಪಾದಸ್ಪರ್ಶದಿಂದಲೇ ಬಾವಿ ಕೆರೆಯೊಳಗಿನ ನೀರು ಪಾವನತೀರ್ಥವೆನಿಸಿ ಸ್ವೀಕರಿಸಲು ಭವಭವಾಂತರಗಳ ಕಳೆವುದು. ಕೇವಲ ಹೊಟ್ಟೆಯ ಹಸಿವಿಗಾಗಿ ಉಣ್ಣುವ ಅನ್ನವನ್ನುಗುರುಚರರಿಗೆ ಅರ್ಪಣಮಾಡಲು ಅದು ಪ್ರಸಾದವೆನಿಸಿ ಜನ್ಮಜನ್ಮಾಂತರಗಳ ಕಳೆವ ದಿವ್ಯೌಷಧಿಯಾಗುವದು. ಮನೆಯ ಅಂಗಳವನ್ನು ಸಾರಿಸುವ ಕುಳ್ಳಾಗಿ ಒಲೆಯಲ್ಲಿ ಸುಟ್ಟುಹೋಗುವ, ತಿಪ್ಪೆಯಲ್ಲಿ ಚೆಲ್ಲಿಕೊಳ್ಳುವ, ಹೊಲಸು ನಾರುವಸಗಣಿಯೇ ಗುರಹಸ್ತಸ್ಪರ್ಶದಿಂದ ಪ್ರಣವಸಂಬಂಧವನ್ನು ಹೊಂದಿ ಗೋಪಿಚಂದನ ಭಂಡಾರಕ್ಕಿಂತ ಅತೀವ ಮೇಲಾದ ವಿಭೂತಿಯಾಗಿ ಅದನ್ನುಧರಿಸುವ ಸಾಧಕನ ಪಾಪ ತಾಪಗಳನ್ನು ಸುಟ್ಟುಭಸ್ಮಮಾಡುವದು. ಸಾಮಾನ್ಯವಾಗಿ ಗಿಡದಲ್ಲಿಹುಟ್ಟಿದ ಬಾರೀಬೀಜದಂತಹ ಒಂದು ಬೀಜವೇ ರುದ್ರಾಕ್ಷಿಯೆನಿಸುವದಿಲ್ಲವೇ? ಆ ರುದ್ರಾಕ್ಷಿಯೇ ಗುರುಹಸ್ತಸ್ಪರ್ಶದಿಂದ ಮಂತ್ರಾನುಷ್ಠಾನಕ್ಕೆಯೋಗ್ಯವಾದ ಜಪಮಾಲೆಯಾಗಿ, ಶರಣಸತಿಯ ಕೊರಳಲ್ಲಿಧರಿಸುವ ಮೈದೊಡಿಗೆಯಾಗಿ ಅಂದರೆ ಕಂಠಮಾಲೆಯಾಗಿ ಒಪ್ಪುತ್ತಿರುವದು.

ವರ್ಣಮಾಲೆಯಲ್ಲಿರುವ ಹಲವಾರು ಅಕ್ಷರಗಳ ಸಮುದಾಯವೇ ಮಹಾಮಂತ್ರವೆನಿಸುವದು. ಶ್ರೀಗುರುವು ಶಿಷ್ಯನಿಗೆ ವಿಧಿಪೂರ್ವಕ-ಸಂಸ್ಕಾರವನ್ನುಮಾಡಿ ಉಪದೇಶಿಸಿದ ಮಹಾಮಂತ್ರವೇ–

" ಕೋಟಿಜಪಂ ಕೋಟಿತಪಂ ।
ಕೋಟಿಮಹಾ ದಾನಧರ್ಮಪರಹಿತಚರಿತಂ ।
ಕೋಟ್ಯಂತರಪಾಪಂಗಳ ।
ದಾಟಿಪ ಜಪ ಓಂನಮಃಶಿವಾಯೆಂಬ ಪದಂ ॥

ಎಂಬುಕ್ತಿಯಂತೆ ಕೋಟಿಕೋಟಿ ಪಾಪರಾಶಿಯನ್ನು ದಾಟಿಸಿ ಆತ್ಯಂತಿಕ ಸುಖವನ್ನು ಕೊಡುವದು. ಹೀಗೆ ಭೌತಗಳೆನಿಸಿ ಜಡವೆನಿಸಿದ ಸಪ್ತಆವರಣಗಳೇ ಗುರು ಅನುಗ್ರಹದಿಂದ ಮಾರ್ಪಾಡಾಗಿ ಮುಕ್ತಿಪಡೆಯಲು ಶ್ರೇಷ್ಠಸಾಧನಗಳಾಗುವವು. ಗುರುಪಥವಿಲ್ಲದೆ ಬೇರೆ ಪಥವಿಲ್ಲವೆಂಬುದನ್ನು ಶ್ರುತಿಗಳು ಶಪಥಮಾಡಿ ಹೇಳುತ್ತವೆ. ಭಗವತ್ ಸಾಕ್ಷಾತ್ಕಾರ ವಾಗುವ ಹೊಲಬನ್ನು ತಿಳಿಸುವವನು ಶ್ರೀಗುರುವೆ ! ಇದನ್ನೇ ಸರ್ವಜ್ಞನು-

''ಮೂರು ಕಣ್ಣೀಶ್ವರನ ತೋರಿಕೊಡಬಲ್ಲ ಗುರು ।
ಬೇರದರೊಳೊಂದು ತೆರನಿಲ್ಲ । ಗುರುಕರುಣ ।
ತೋರುವದು ಹರನ ಸರ್ವಜ್ಞ । ''

''ವಿದ್ಯೆ ಕಲಿತಡೆ ಇಲ್ಲ ಬುದ್ಧಿ ಕಲಿತಡೆ ಇಲ್ಲ ।
ಉದ್ಯೋಗ ಮಾಡಿದಡೆ ಇಲ್ಲ । ಗುರುಮುಖವು
ಇದ್ದಲ್ಲದಿಲ್ಲ ಸರ್ವಜ್ಞ ''
ಮಂಡೆ ಬೋಳಾದೊಡಂ ದಂಡ ಕೋಲ್ವಿಡಿದೊಡಂ ।
ಹೆಂಡತಿಯು ಬಿಟ್ಟು ನಡೆದೊಡಂ । ಗುರುಮುಖವ ।
ಕಂಡಲ್ಲದಿಲ್ಲ ಸರ್ವಜ್ಞ । ''

ಎಂಬ ಪದ್ಯಗಳಿಂದ ಹೇಳಿರುವನು.

ಜಗತ್ಪ್ರಸಿದ್ಧಿಯನ್ನು ಪಡೆದ ಓರ್ವ ಚಿತ್ರಕಾರನು ಒಮ್ಮೆ ದ್ವಾರಕಾ ಪಟ್ಟಣದ ಅರಸ ನಾದ ಶ್ರೀಕೃಷ್ಣ ಪರಮಾತ್ಮನ ಭೆಟ್ಟಿಯಾಗಿ'ಪ್ರಭೋ ನಾನು ಪ್ರಪಂಚದಲ್ಲಿಯೇ ಪ್ರಸಿದ್ಧಿ ಯನ್ನು ಪಡೆದ ಚಿತ್ರವನ್ನುತೆಗೆದು ಸೇವೆಸಲ್ಲಿಸಲು ಆತುರನಿರುವೆನು'ಎನ್ನಲು ಶ್ರೀಕೃಷ್ಣನು 'ಆಗಲಿ, ಏನೇನೂ ವ್ಯತ್ಯಾಸವಾಗದಂತೆ, ನಾನೇ ಪ್ರತ್ಯಕ್ಷ ಕುಳಿತಂತೆ ಕಾಣುವ ಸೊಗಸಾದ ಚಿತ್ರವನ್ನು ತೆಗೆ.ನಿನ್ನ ಹಸ್ತಕೌಶಲ್ಯವನ್ನು ಚಿತ್ರಕಲಾನೈಪುಣ್ಯವನ್ನು ನೋಡೋಣ ಎನ್ನಲು' ಚಿತ್ರಕಾರನು ಸಿಂಹಾಸನಾರೂಢನಾದ ಶ್ರೀಕೃಷ್ಣನ ಭಾವಚಿತ್ರವನ್ನು ಅಲ್ಪಾವಧಿಯಲ್ಲಿ ಯೇ ತೆಗೆದು ಆ ಸುಂದರ ಚಿತ್ರವನ್ನು ಶ್ರೀಕೃಷ್ಣನಿಗೆ ತೋರಿಸಿದನು. 'ಕರ್ತುಂ ಅಕರ್ತುಂ ಅನ್ಯಥಾ ಕರ್ತುಂ, ಸಮರ್ಥನಾದ ಶ್ರೀಕೃಷ್ಣನು ತನ್ನ ಭಾವಚಿತ್ರವನ್ನು ತೆಗೆಯುವ ಕಾಲ ದಲ್ಲಿದ್ದ ತನ್ನ ವಿಶಾಲ ನೇತ್ರ, ವಿಶಾಲ ಫಾಲಗಳನ್ನು ಸಂಕೋಚ ಮಾಡಿಕೊಂಡನು. ಬಹು ಮಾನಪೂರ್ವಕ ಗೌರವ ಪಡೆಯುವ ಆಶೆಯಿಂದ ಚಿತ್ರಕಾರನು ಶ್ರೀಕೃಷ್ಣನ ಬಳಿಗೆಬರಲು ಚಿತ್ರಕಾರನೇ ನೋಡು ನೋಡು ನೀನು ತೆಗೆದಚಿತ್ರಕ್ಕೂ ನನ್ನ ಈ ರೂಪಕ್ಕೂ ಎಷ್ಟು ವ್ಯತ್ಯಾಸವಿದೆ. ನಮ್ಮ ಹಣೆ ಕಣ್ಣುಗಳು ಸಣ್ಣವು ಇವೆ. ನೀನಾದರೊ ಎಷ್ಟು ವಿಶಾಲ ತೆಗೆ ದಿರುವಿ? ನೀನೆಂಥ ಚಿತ್ರಕಾರನು ? ಎಂದು ಕೃಷ್ಣನು ಮೂದಲಿಸಿದನು. ಆಗ ಚಿತ್ರಕಾರನು ಎರಡು ಮೂರು ಸಲ ಭಾವಚಿತ್ರವನ್ನು ಜಾಣತನದಿಂದ ತೆಗೆದರೂ ಶ್ರೀಕೃಷ್ಣನು ತನ್ನ ರೂಪವನ್ನು ಬೇರೆಬೇರೆ ಮಾಡಿಕೊಳ್ಳುತ್ತಿದ್ದುದರಿಂದ ಚಿತ್ರಕಾರನಿಗೆ ಶ್ರೀಕೃಷ್ಣನ ನಿಜವಾದ ಭಾವಚಿತ್ರವನ್ನು ತೆಗೆಯುವದು ಸಾಧ್ಯವಾಗಲಿಲ್ಲ. ಕೊನೆಗೆ ಶ್ರೀಕೃಷ್ಣನು ಚಿತ್ರಕಾರನೇ ನಿನಗೆ ಪ್ರಶಸ್ತಿ ಪತ್ರಿಕೆಯನ್ನು ಕೊಟ್ಟವರಾರು? ನಮ್ಮ ರೂಪ

ವೊಂದು ಬೇರೆ, ನೀನು ತೆಗೆಯುವ ರೂಪವೊಂದು ಬೇರೆ. ಪರ ಚೆಲುವಾದ ರೂಪವ ಬಿಟ್ಟು ಕುರೂಪವ ತೆಗೆದು ಅವರ ಅಪಮಾನ ಮಾಡುವದಕ್ಕಿಂತಲೂ ನೀನೇ ಪ್ರಾಣವನ್ನು ಕಳೆದುಕೊಳ್ಳಬಾರದೇ ಎಂದು ತಿರಸ್ಕರಿಸಿ ನುಡಿಯಲು, ಮಾನವನ್ನು ಪ್ರಾಣಕ್ಕೆ ಸಮಾನ ವೆಂದು ತಿಳಿದ ಆತನು ದ್ವಾರಕಾ ಪಟ್ಟಣದ ಶ್ರೀಕೃಷ್ಣನ ಸಭೆಯಲ್ಲಿ ಮಾನಗೇಡಿಯಾಗಿ ಬೀಳುವದಕ್ಕಿಂತ ಸಾಯುವದೇ ಲೇಸೆಂದು ಒಗೆದು ಹಗ್ಗವನ್ನುತಕ್ಕೊಂಡು ಕಾಡಿಗೆ ಹೋಗಿ ಒಂದು ಮರದಡಿಯಲ್ಲಿ ನಿಂತಿರಲು ಅತ್ತಕಡೆಯಿಂದ ದೇವರ್ಷಿಯಾದ ನಾರದರು ಆಗಮಿಸಿದರು. ಗಿಡದ ಕೊಂಬೆಗೆ ಹಗ್ಗವನ್ನು ತೂಗುಬಿಟ್ಟು ಅದನ್ನು ತನ್ನ ಕುತ್ತಿಗೆಗೆ ಸುತ್ತುಹಾಕಿಕೊಂಡು ಪ್ರಾಣವನ್ನು ಕಳಕೊಳ್ಳುವ ಕುಕರ್ಮವನ್ನು ಕಂಡು ವಿಷಾದಪಟ್ಟು ನವಯುವಕನೇ ಈ ನಿರ್ಜನಾರಣ್ಯದಲ್ಲಿ ನವತರುಣನಾದ ನೀನು ಪ್ರಾಣವನ್ನು ಕಳೆದು ಕೊಳ್ಳುವಂಥ ಗಂಡಾಂತರ ಪ್ರಸಂಗವು ಏನು ಬಂದಿದೆ ? ಸುಮ್ಮಸುಮ್ಮನೇ ಆತ್ಮಹತ್ಯ ಮಾಡಿಕೊಳ್ಳಬೇಡ ನಿಲ್ಲು ಎಂದು ಅವನಿಗೆ ಸಮಾಧಾನಪರವಾದ ಮಾತು ಹೇಳಿ ಸಂತೈಸಿ ದನು. ನವತರುಣನಾದ ಚಿತ್ರಕಾರನು ನಾರದರಿಗೆ ಕೈಮುಗಿದು ಯತಿಪುಂಗವನೇ ನಾನೋರ್ವ ಪ್ರಸಿದ್ಧ ಚಿತ್ರಕಾರನು. ದ್ವಾರಕಾ ಪಟ್ಟಣದಲ್ಲಿರುವ ಶ್ರೀಕೃಷ್ಣನ ಚಿತ್ರವನ್ನು ತೆಗೆದು ಬಹುಮಾನ ಪಡೆಯಬೇಕೆಂದು ಹೋಗಿದ್ದೆನು. ಆದರೆ ದ್ವಾರಕೆಯಲ್ಲಿ ಶ್ರೀಕೃಷ್ಣನ ಭಾವಚಿತ್ರವನ್ನು ಎಷ್ಟುಸಲ ತೆಗೆಯಲು ಯತ್ನಿಸಿದರೂ ಅವನ ನಿಜವಾದ ಚಿತ್ರವನ್ನು ತೆಗೆಯುವದು ಸಾಧ್ಯವಾಗಲಿಲ್ಲ. ಆಗ ಶ್ರೀಕೃಷ್ಣನು ಮೂರ್ಖ ಚಿತ್ರಕಾರನೇ ಚಿತ್ರಕಲಾ ಕೋವಿದ, ಚಿತ್ರಕಲಾಕುಶಲ ಹೀಗೆ ಬಿರುದುಗಳನ್ನು ಕೊಟ್ಟು ನಿನ್ನನ್ನು ಗೌರವಿಸಿದವ ರಾರು ? ಇಂತಹ ಕುರೂಪ ಚಿತ್ರಗಳನ್ನು ತೆಗೆದು ಜನರ ಅಪಮಾನ ಮಾಡುವದಕ್ಕಿಂತ ನೀನೇ ಪ್ರಾಣವನ್ನೇಕೆ ಕಳೆದುಕೊಂಡು ಹೋಗಬಾರದು ? ಎಂದು ತಿರಸ್ಕರಿಸಿದನು. ಕಾರಣ ದ್ವಾರಕೆಯಲ್ಲಿ ಬಹುಮಾನ ದೊರೆಯುವ ಬದಲು ಬಹುಅಪಮಾನವಾಗಿದೆ. ಕಾರಣ ಪ್ರಾಣವನ್ನು ಕಳೆದುಕೊಳ್ಳಬೇಕೆಂದು ಇಲ್ಲಿಗೆ ಬಂದಿರುವೆನು ಎನ್ನಲು ವ್ಯರ್ಥ ವಾಗಿ ಪ್ರಾಣ ಕಳೆದುಕೊಳ್ಳಬೇಡ. ನಾನು ನಿನಗೊಂದು ಯುಕ್ತಿಯನ್ನು ಹೇಳುವೆನು. ಹಾಗೆ ಮಾಡು. ಅಂದರೆ ನಿನಗೆ ದ್ವಾರಕೆಯಲ್ಲಿ ತುಂಬಿದ ಸಭೆಯೊಳಗೆ ತುಂಬಾ ಗೌರವ ದೊರಕುವದು ಎಂದು ಹೇಳಿ ಒಂದು ದೊಡ್ಡ ನಿಲುಗನ್ನಡಿಯನ್ನು ಅವನ ಕೈಯಲ್ಲಿ ಕೊಟ್ಟು ಇದನ್ನು ಶ್ರೀಕೃಷ್ಣನ ಸಮ್ಮುಖದಲ್ಲಿ ಹಿಡಿದುಬಿಡು. ಅವನ ಬಿಂಬವೇ ಈ ಕನ್ನಡಿ ಯಲ್ಲಿ ಮೂಡುವುದು. ಅವನು ಬೇಕಾದ ರೂಪವನ್ನು ತಾಳಲಿ. ಅವನು ಯಾವದೇ ರೂಪ ವನ್ನು ಹೇಳಿದರೂ ಅವನ ಆ ರೂಪವು ಈ ಕನ್ನಡಿಯಲ್ಲಿ ಪ್ರತಿಬಿಂಬಿತವಾಗುವದು ಎಂದು ಹೇಳಿದನು. ಚಿತ್ರಕಾರನು ಈ ಯುಕ್ತಿಯಿಂದ ಸಂತುಷ್ಟನಾಗಿ ಆ ನಿಲುಗನ್ನಡಿಯನ್ನು ತಕ್ಕೊಂಡು ಶ್ರೀಕೃಷ್ಣನ ಬಳಿಗೆ ಹೋದನು. ಈ ಸಲ ಚಿತ್ರಕಾರನು ಶ್ರೀಕೃಷ್ಣನಿಗೆ ತಮ್ಮ ಭಾವಚಿತ್ರವನ್ನು ತೆಗೆಯುವೆನೆಂದು ಹೇಳಿ ಅವನ ಸಮ್ಮುಖದಲ್ಲಿ ನಿಲುಗನ್ನಡಿಯನ್ನು ಹಿಡಿದನು. ಶ್ರೀಕೃಷ್ಣನು ಬೇರೆ ಬೇರೆ ರೂಪಗಳನ್ನು ಧರಿಸುತ್ತಿದ್ದರೂ ಆ ಎಲ್ಲ ರೂಪಗಳು ಆಗಿಂದಾಗಲೇ ಕನ್ನಡಿಯಲ್ಲಿ ಪ್ರತಿಬಿಂಬಿಸುತ್ತಿದ್ದವು. ಶ್ರೀಕೃಷ್ಣನಿಗೆ ಸೋಜಿಗವಾಗಿ ಚಿತ್ರ ಕಾರನೇ ನಿನಗೀ ಯುಕ್ತಿಯನ್ನು ಹೇಳಿದವರಾರು? ಎಂದು ಕೇಳಲು ನಾರದ ಮಹರ್ಷಿಗಳು ಎಂದು ಉತ್ತರವಿತ್ತನು.ವಿವಿಧ ರೂಪಗಳನ್ನು ಧಾರಣ ಮಾಡುವ ಶ್ರೀಕೃಷ್ಣನ ಚಿತ್ರವನ್ನು

ತೆಗೆಯುವದು ಅಸಾಧ್ಯವಾದಾಗ ನಾರದರು ಬಂದು ಚಿತ್ರಕಾರನಿಗೆ ಒಂದು ಮಾರ್ಗವನ್ನು ಹೇಗೆ ತೋರಿಸಿದರೋ ಹಾಗೆಯೇ ಶಿಷ್ಯನಿಗೆ ದೇವರ ನೈಜಸ್ವರೂಪವು ಗೊತ್ತಾಗದೆ ಇದ್ದಾಗ ಶಾಸ್ತ್ರ ಜ್ಞಾನಸಂಪನ್ನನೂ, ಅನುಭಾವಿಯೂ ಆದ ಸದ್ಗುರುವು ಬಂದು ಶಿಷ್ಯನ ಸಕಲ ಸಂಶಯಗಳನ್ನು ಪರಿಹರಿಸಿ ಆತ್ಮಾನುಭೂತಿಯ ತೇಜೋಮಾರ್ಗದಲ್ಲಿ ಅವನನ್ನು ಕರೆದೊಯ್ಯುವನು.

"ಹಿಂದಿನ ಕರ್ಮವನು ಇಂದುಂಡುಡಬೇಕು । ಇಂದಿನ ಕರ್ಮವನು ಮುಂದುಂಡಬೇಕು । ಬಂಧನವೇಕಿದಕೆ ಇಂದುಧರನಾಣ್ಯಾಗಿ ಸಂದೇಹವಿಲ್ಲವೊ ತಿಳಿಕಂಡ್ಯಾ" ಆತ್ಮ ಮುಂತಾದ ಸೂಕ್ತಿಗಳ ಪ್ರಕಾರ ಅವರವರ ಸಂಚಿತಾದಿಕರ್ಮಕ್ಕನುಗುಣವಾಗಿ ಸುಖ ದುಃಖಗಳನ್ನೀಯುವನು. ಇದನ್ನೇ ಶ್ರೀ ಬಸವೇಶ್ವರರು–

''ಧರಣಿಯು ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ
ಹರದ ಕುಳ್ಳಿರ್ದ ನಮ್ಮ ಮಹಾದೇವಶೆಟ್ಟಿ
ಒಮ್ಮನವಾದರೆ ಒಡನೆ ನುಡಿವನು ಇಮ್ಮನವಾದರೆ ನುಡಿಯನು
ಕಾಣಿಯ ಸೋಲ ಅರ್ಧಗಾಣಿಯ ಗೆಲ್ಲ
ಜಾಣ ನೋಡವ್ವ ನಮ್ಮ ಕೂಡಲಸಂಗಮದೇವ''

ಎಂದು ಹೇಳಿರುವರು. ಜಾಣನಾದ ಅಂಗಡಿಕಾರನು ಹಣವನ್ನು ತಕ್ಕೊಂಡು ಆತ್ಮಕ್ಕೆ ಸಲ್ಲುವ ಪದಾರ್ಥಗಳನ್ನು ತಕ್ಕಡಿಯಲ್ಲಿ ತೂಗಿ ಹೇಗೆ ಕೊಡುವನೋ ಹಾಗೆ ಮಹಾದೇವ ನು ಅವರವರ ಕರ್ಮಕ್ಕೆತಕ್ಕಂತೆ ಸುಖದುಃಖಗಳನ್ನು ಎಳ್ಳಷ್ಟೂ ಹೆಚ್ಚು ಕಡಿಮೆ ಮಾಡದೆ ಕೊಡುವನು. ಈ ಕರ್ಮದ ಕೋಟಲೆಯ ಕೋಟೆಯನ್ನು ದಾಟುವದು ಯಾರಿಗೂ ಸಾಧ್ಯವಿಲ್ಲ.

"ಅವಶ್ಯಮನುಭೋಕ್ತವ್ಯಂ ಕೃತಕರ್ಮ ಶುಭಾಶುಭಂ''

"ಹಿಂದೆ ಮಾಡಿದ ಕರ್ಮವೆಂದಿಗೂ ಬೆಂಬಿಡದು ।
ಬಂದ ಭೋಗವದು ತಿಂದು ತೀರಲೆಬೇಕು ।
ನೊಂದೆನೆನಬೇಡ ಸರ್ವಜ್ಞ ॥ "

"ವಾರಣಾಸಿಯುಲಿರಲಿ ವಾರಿಧಿಯ ನಡುವಿರಲಿ ।
ವೀರಭದ್ರನಾನೆರೆಯಿರಲಿ ವಿಧಿಯಾಟ ।
ತೋರದಲೆ ಬಿಡದು ಸರ್ವಜ್ಞ ॥ ''

''ಕರ್ಮದಿಂದಲೆ ಹರನು ಚರ್ಮವನು ತಾನುಟ್ಟ ।
ಹೊಮ್ಮರಾಲತಾನೆಜನಾದ ಗೋವಿಂದ ।
ನೆಮ್ಮಿಯನು ಕಾದ ಸರ್ವಜ್ಞ ॥ "

"ಪುಡಿಯಾದನಂಗಜನು ಹಿಡಿವಡೆದ ಹನುಮಂತ
ಪೊಡವಿಗೀಶ್ವರನು ತಿರಿದುಂಡನುಳಿದವರ ।
ಸಡಗರವು ಏನು ಸರ್ವಜ್ಞ ॥ "

ಮಾಡಿದ್ದುಣ್ಣೋ ಮಹಾರಾಯಾ ಮುಂತಾದ ಸೂಕ್ತಿಗಳು ಮಾಡಿದ್ದನ್ನು ಉಂಡೇ ತೀರಿಸ ಬೇಕೆಂಬುದನ್ನು ಹೇಳುತ್ತವೆ.

ಸಂಚಿತಾದಿ ಕರ್ಮಪಾಶದಿಂದ ಬದ್ಧನಾದಜೀವನು ಸಂಸಾರಕೂಪದಲ್ಲಿ ಬಿದ್ದು ಒದ್ದಾಡಿ ಸುಖದುಃಖಗಳನ್ನು ಅನುಭವಿಸಿ ಕಾಲಕಳೆಯುವನು.

"ವ್ಯಾಘ್ರಬುದ್ಧ್ಯಾ ವಿನಿರ್ಮುಕ್ತಃ ಬಾಣಃ ಪಶ್ಚಾತ್ತುಗೋಮತಾ ।
ನ ತಿಷ್ಠತಿ ಛಿನತ್ಯೇವ ..."

ಓರ್ವ ಬೇಟೆಗಾರನು ಕಾಡಿನೊಳಗೆ ನಸುಕಿನಲ್ಲಿ ಅಡ್ಡಾಡುವ ಆಕಳನ್ನು ಹುಲಿಯೆಂದೇ ತಿಳಿದು ಬಾಣವನ್ನು ಬಿಟ್ಟನು. ಬಾಣಬಿಟ್ಟ ಬಳಿಕ ಅವನಿಗೆ ಅದು ಆಕಳೆಂದು ತಿಳಿದರೆ ಬಿಟ್ಟ ಬಾಣವನ್ನು ತಿರುಗಿ ತಕ್ಕೊಳ್ಳಲು ಬರುವದೇ ? ಬಾರದು. ಹಾಗೆ ಮಾಡಿದ ಕರ್ಮ ಗಳ ಫಲವನ್ನು ಉಂಡೇ ತೀರಿಸಬೇಕಾಗುವದು. ಇದನ್ನೇ ಕನಕದಾಸರು–

"ಪ್ರಾಚೀನ ಕರ್ಮವು ಬಿಡಲರಿಯದು ಮನುಜ !
ಯೋಚನೆಯ ಮಾಡಿ ಬಳಲದಿರು ಮನುಜ ॥"

ಮತ್ತು ಸರ್ವಜ್ಞನು–

"ಅಂತಿರ್ದ ಇಂತಿರ್ದ ಎಂತಿರ್ದನೆನಬೇಡ ।
ಕುಂತಿಯಾ ಸುತರು ತಿರಿದುಣಲು । ಮಿಕ್ಕವರು ।
ಎಂತಿರ್ದರೇನು ಸರ್ವಜ್ಞ ॥"

ಎಂದು ಹೇಳಿರುವರು. ತೂಕದಲ್ಲಿ ಅಳತೆಯಲ್ಲಿ ಏನೇನೂ ಹೆಚ್ಚುಕಡಿಮೆ ಮಾಡದೆ ಹೇಗೆ ಅಂಗಡಿಕಾರನು ತೂಗಿತೂಗಿ ಸಾಮಾನುಗಳನ್ನು ಕೊಡುವನೋ ಜಗದೀಶ್ವರನೂ ಆಯಾ ಪ್ರಾಣಿಗಳ ಕರ್ಮಕ್ಕನುಸರಿಸಿ ನಿಷ್ಪಕ್ಷಪಾತವಾಗಿ ಸುಖ ದುಃಖಗಳನ್ನೀಯುವನು. ಗುರುವು ಹರನಂತಲ್ಲ. ಗುರ್ವನುಗ್ರಹವಾದರೆ ಶಿಷ್ಯನು ಕರ್ಮದ ಕೋಟಲೆಯಿಂದ ಪಾರಾಗಿ ಶಿವನ ಕೂಟದಲ್ಲಿ ನಲಿವನು. ಹರನ ಸೃಷ್ಟಿಯಲ್ಲಿ ಕೊರಡುಕೊನರದು, ಬರಡುಹಯನಾಗದು. ಕುರುಡ ಕಾಣನು. ಗುರುವಿನ ಅನುಗ್ರಹವಾದರೆ ಕೊರಡು ಕೊನರುವದು, ಬರಡು ಹಯ ನಾಗುವದು, ಕುರುಡ ಕಾಣುವನು,ಬಂಜೆ ಹಡೆಯುವಳು, ವಿಧವೆ ಸುಮಂಗಲೆಯಾಗುವಳು.

ನಿಜಗುಣರ ವರದ ಹಸ್ತಸ್ಪರ್ಶದಿಂದ ವಯೋವೃದ್ಧಳಾದ ಕುರುಡಿ ವೇಶ್ಯೆಗೆ ಕಣ್ಣು ಬಂದುದನ್ನೂ, ಬುಳ್ಳಾ ದಂಪತಿಗಳು ಮೊದಲು ಹುಟ್ಟಿದ ಮಗುವನ್ನು ನಮಗೆ ಕೊಡಬೇ ಕೆಂದು ಅಪ್ಪಣೆ ಮಾಡಿ ಆಶೀರ್ವದಿಸಿದ ಮಗುವನ್ನು ಶ್ರೀ ಸಾವಳಗಿ ಶ್ರೀಗಳಿಗೆ ಪುತ್ರ ವ್ಯಾಮೋಹದಿಂದ ಕೊಡದಿರುವಾಗ ಮಗು ತೊಟ್ಟಿಲಲ್ಲಿಯೇ ಸಾಯಲು ಆಗ ಶ್ರೀಗಳು ಬದುಕಿಸಿದ್ದನ್ನೂ, ಟಾಕಳಿ ಕುಲಕರ್ಣಿಯ ಧರ್ಮಪತ್ನಿಯು ಪತಿಯು ಮೃತನಾದಾಗ ಸಹಗಮನಕ್ಕೆ ಹೋಗುವ ಪ್ರಸಂಗದಲ್ಲಿ ಮಧ್ಯಮಾರ್ಗದಲ್ಲಿರುವ ಶ್ರೀರಾಮದಾಸಸ್ವಾಮಿ ಗಳಿಗೆ ನಮಸ್ಕರಿಸಲು ಅವರು " ಅಷ್ಟಪುತ್ರ ಸೌಭಾಗ್ಯವತೀಭವ " ಎಂದು ಆಶೀರ್ವ

ದಿಸಲು, ಮೃತಪತಿಯು ಬದುಕಿ ಆ ಸಾಧ್ವಿಯು ಉದ್ಧವ ಮೊದಲಾದ ಸತ್ಪುತ್ರ
ಪಡೆದುದನ್ನೂ ಸ್ಮರಿಸಬಹುದು.

" ತೀರ್ಥೀಕುರ್ವಂತಿ ತೀರ್ಥಾನಿ, ಎಂಬ ನಾರದರ ಭಕ್ತಿ ಸೂತ್ರವೂ-

" ನಹ್ಯಮ್ಮಯಾನಿ ತೀರ್ಥಾನಿ ನ ದೇವಾ ಮೃಚ್ಛಿಲಾಮಯಾಃ ।
ತೇ ಪುನಂತ್ಯುರುಕಾಲೇನ ದರ್ಶನಾದೇವ ಸಾಧವಃ "

ಎಂಬ ಅಭಿಜ್ಞರ ಉಕ್ತಿಯೂ,

" ಕಪ್ಪೆಗಳು ಸರ್ಪಗಳು ಇಪ್ಪುದದುತೀರ್ಥವೇ ? ।
ತುಪ್ಪೋಗರವನಿಕ್ಕಿ ಸಲಹುವ । ಸತ್ಪುರುಷ ।
ರಿಪ್ಪುದೇ ತೀರ್ಥ ಸರ್ವಜ್ಞ ॥

ಎಂಬ ಸರ್ವಜ್ಞನ ಸೂಕ್ತಿಯೂ,ಸ್ನಾನಮಾಡಿದಾಗ ಭಕ್ತಿಯಿಂದ ಹಾಡಿದಾಗ, ಕಾಣಿಕೆಯನ್ನು
ನೀಡಿದಾಗ ಉದ್ಧಾರ ಮಾಡುವ ತೀರ್ಥ, ದೇವಾಧಿದೇವತೆಗಳಿಗಿಂತಲೂ ಸದ್ಗುರು
ಅಧಿಕಾರಕನು ಎಂದು ಸಾರುತ್ತವೆ.

ಸೂರ್ಯಗ್ರಹಣ, ಚಂದ್ರಗ್ರಹಣ, ಸಂಕ್ರಮಣ, ಶ್ರಾವಣ,ಶಿವರಾತ್ರಿ ಮುಂತಾ
ಪರ್ವಕಾಲಗಳಲ್ಲಿ ಲಕ್ಷೋಪಲಕ್ಷ ಜನರು ಗಂಗಾ ಯಮುನಾ ಕೃಷ್ಣಾ ಮೊದಲಾದ ನದಿಗಳ
ಸ್ನಾನಮಾಡಿ ಪುನೀತರಾಗುವರು. ಈ ನದಿಗಳೂ ಒಮ್ಮೆ ಜನರ ಪಾಪ ರಾಶಿಯನ್ನು ಹ
ತ್ತು ಹೊತ್ತು, ಆಸತ್ತು ಬೇಸತ್ತು ಭಗವಂತನಬಳಿಗೆ ಹೋಗಿ ಜನಗಳ ಪಾಪರಾಶಿಯನ್ನ
ತೊಳೆ ತೊಳೆದು ನಮಗೆ ಬೇಸರ ಬಂದಿದೆ ಇನ್ನು ನಾವು ಭೂಲೋಕಕ್ಕೆ ಹೋಗಲಾರೆ
ಎನ್ನಲು ಭಗವಂತನು, ಗಂಗಾ ಯಮುನಾದಿ ನದಿ ದೇವತೆಗಳೇ ! ನೀವೇನೂ ಯೋಚ
ಮಾಡಬೇಡಿರಿ, ಚಿಂತಿಸಬೇಡಿರಿ, ಕೊರಗಿ ಸೊರಗಬೇಡಿರಿ. ಸರ್ವ ಸಮರ್ಥರಾದ ಸದ್ಗು
ಗಳು, ಶರಣರು; ಸಂತರು ಬಂದು ನಿಮ್ಮಲ್ಲಿ ಪಾವನ ಚರಣವನ್ನು ಎದ್ದಿದಾಗ ನಿಮಗಿರು
ಪಾಪರಾಶಿಯೆಲ್ಲ ಅರೆಕ್ಷಣದಲ್ಲಿ ಬಿಸಿಲಿಗೆ ಮಂಜುಕರಗಿದಂತೆ ಕರಗಿಹೋಗುವದು. ಭೂ
ಲೋಕಕ್ಕೆ ಹೋಗಿರಿ ಎಂದು ಹೇಳಿ ಕಳಿಸಿದನೆಂಬ ಸಂಗತಿಯು ಭಾಗವತದಲ್ಲಿ ಬರುವದು

ಜಗದೀಶ್ವರನೇ ಅಂಗಡಿಕಾರನ ಹತ್ತಿರ ಹಲವಾರು ಸಾಮಾನುಗಳಿರುವಂತೆ ನ
ಬಳಿಯಲ್ಲಿಯೂ, ಸಾರೂಪ್ಯ, ಸಾಲೋಕ್ಯ, ಸಾಮೀಪ್ಯ, ಸಾಯುಜ್ಯ ಎಂಬ ನಾಲ್ಕು
ವಾದ ಪದವಿಗಳಿವೆಯುಲ್ಲವೆ ಧನಾಧಿಪತಿಯಾದ ಕುಬೇರನೂ, ವಿಷ್ಣುವಲ್ಲಭೆಯಾದ ಲ
ಯೂ ನೀನುಹೇಳಿದಂತೆ ಕೇಳುವರು. ಅನೇಕಭಕ್ತರು ಆ ಪದವಿಗಳನ್ನು ಪಡೆಯುವ
ಕ್ಕೋಸ್ಕರ ನಿನ್ನ ತೊತ್ತಾಗಿ ಸೇವೆಗೈದು ತನುಮನ ಧನಗಳನ್ನು ತೆತ್ತರು. ಎಷ್ಟೋ ಭಕ್ತರು
ನಿನ್ನ ಒಲುಮೆಗಾಗಿ ಅಸುಗಳೆವ ವಿಷಕುಡಿದರು, ಸಾಮ್ರಾಜ್ಯವ ತೊರೆದು ಸನ್ಯಾಸಿಗಳಾ
ಕಾಡಿನಲ್ಲಿ ಅಲೆದಾಡಿದರು. ಉಗ್ರ ಕಠೋರವ್ರತಗಳನ್ನು ಮಾಡಿದಾಗ ಮಾತ್ರ

ನೀನು ಚತುರ್ವಿಧ ಪದವಿಗಳನ್ನೋ ಸಂಪತ್ತನ್ನೋ ಕೊಡುತ್ತಿರುವೆ.

ತನು ಮನ ಧನದಲ್ಲಿ ಸ್ವಲ್ಪೇ ವಂಚನೆಯಾದರೆ ಏನೇನೂ ಕೊಡದ ಕಡುಲೋಭಿ, ಕೃಪಣ, ಜಿಪುಣ. ಮೊದಲು ನಾನು ಕೊಟ್ಟಾಗಲೇ ನೀನು ಕೊಡುವೆ, ನೀನು ಮೊದಲು ಮಾತ್ರ ಎಂದೆಂದೂ ಕೊಡಲಾರೆ. ಇದರಲ್ಲಿ ನಿನ್ನದೇನು ಹಿರಿಮೆ ? ಶ್ರೀಗುರುಗಳು ಶರಣರು, ಸಂತರು ಕೊಟ್ಟಾಗ ಮಾತ್ರ ಕೈಬಿಟ್ಟು ಕೊಡುವವರಲ್ಲ. ಅವರು ಉದಾರ ಹೃದಯರು. ಧಾರಾಳವಾಗಿ ಕೊಡುವವರು. ಬೇಡದೇ ನೀಡುವವರು. ಕೈಮುಗಿದರೆ ಸಾಕು ತಮ್ಮ ಸರ್ವಸ್ವವನ್ನೇ ಧಾರೆಯೆರೆಯುವವರು. ಅಂತೆಯೇ ಸರ್ಪಭೂಷಣಶಿವಯೋಗಿಗಳು–

' ಗುರುದೇವ ನೀವಮಾಡಿದುಪಕೃತಿಯನು ನಾನು
ಮರೆಯುವದೆಂದೆಂದಿಗಿಹದೊಳು " ॥

ಎಂದು ಶ್ರೀಷಣ್ಮುಖಸ್ವಾಮಿಗಳು –

" ಎನ್ನ ಕರಕಮಲ ಮಧ್ಯದಲ್ಲಿ ಪರಮ ನಿರಂಜನದ ಕುರುಹತೋರಿದ
ಆ ಕುರುಹಿನ ಮಧ್ಯದಲ್ಲಿ ಅರುಹಿನ ಕಳೆಯತೋರಿದ,
ಆ ಕಳೆಯ ಮಧ್ಯದಲ್ಲಿ ಮಹಾಜ್ಞಾನದ ಬೆಳಗತೋರಿದ,
ಆ ಬೆಳಗಿನ ನಿಲವಿನೊಳಗೆ ಎನ್ನತೋರಿದ,
ಎನ್ನೊಳಗೆ ತನ್ನತೋರಿದ, ತನ್ನೊಳಗೆ ಎನ್ನನಿಂಬಿಟ್ಟುಕೊಂಡ
ಮಹಾಗುರುವಿಂಗೆ ನಮೋ ನಮಃ ಎನುತಿರ್ದೆನಯ್ಯ ಅಖಂಡೇಶ್ವರ".

ಎಂದೂ, ಶ್ರೀಅಲ್ಲಮಪ್ರಭುದೇವರು —

" ಜ್ಯೋತಿಯೊಳಗಿರ್ಪ ಕರ್ಪುರಕ್ಕೆ,
ಅಪ್ಪುವಿನೊಳಡಗಿಪ್ಪ ಉಪ್ಪಿಂಗೆ,
ಶ್ರೀ ಗುರುವಿನೊಳಗಿಪ್ಪ ಶಿಷ್ಯಂಗೆ,
ಬೇರೆ ಬೇರೆ ಕ್ರಿಯಾವರ್ತನೆಯುಂಟೇ ಗುಹೇಶ್ವರ "

ಎಂದೂ ಗುರುಮಹತ್ವವನ್ನು ಕೊಂಡಾಡಿದ್ದಾರೆ.

"ಮೂರಿಟ್ಟರಾರಕ್ಕು ಆರುಹನ್ನೆರಡಕ್ಕು
ಹೋರುವಾಗೊಡ್ಡು ಹಯನಕ್ಕು । ಗುರು ಕರುಣೆ ।
ತೋರುವಾದಿನಕೆ ಸರ್ವಜ್ಞ "

ಹರನಸೃಷ್ಟಿಯಲ್ಲಿ ಮೂರು ಮೂರೇ. ಅದು ಎರಡಾಗದು ನಾಲ್ಕಾಗದು. ಗುರುವಿನ ಅನುಗ್ರಹವಾದರೆ ಮೂರು ಆರಾಗುವದು, ಆರು ಹನ್ನೆರಡಾಗುವದು. ಹರನಸೃಷ್ಟಿಯಲ್ಲಿ ಬರಡು ಬರಡೇ. ಗುರುವಿನ ಸೃಷ್ಟಿಯಲ್ಲಿ ಬರಡು ಹಯನಾಗುವುದು. ಶ್ರೀಮನ್ನಿಜಗುಣಶಿವಯೋಗಿಗಳು –

ಶ್ರೀಗುರುವೆ ನೀನೆಶರಣಾಗೆನಗೆ ನಿಜಸುಖದ
ಸಾಗರನೆ ಸಕಲವಿದ್ಯಾಗುಣನಿವಾಸ...

ಎಂದು ಗುರುವಿನ ಕರುಣೆಗಾಗಿ ಹಂಬಲಿಸಿರುವರು.

ಶ್ರೀಗುರುವೆ ಸತ್ಕ್ರಿಯೆಯಾಗರವೆ ಸುಜ್ಞಾನ ।
ಸಾಗರವೆ ಎನ್ನ ಮತಿಗೆ ಮಂಗಳವಿತ್ತು ।
ರಾಗದಿಂ ಬೇಗ ಕೃಪೆಯಾಗು ॥

ಗುರುವೆ ಭಕ್ತರ ಕಲ್ಪತರುವೆ ಸಜ್ಜನಮ ।
ನೋಹರನೆ ನಿಜಭಕ್ತಿ ಜ್ಞಾನವೈರಾಗ್ಯಮಂ ।
ದಿರವೆ ಮದ್ಗುರುವೆ ಕೃಪೆಯಾಗು ॥

ಎಂದು ಮೈಲಾರಬಸವಲಿಂಗಶರಣರು ಗುರುಕರುಣೆಗಾಗಿ ಪ್ರಾರ್ಥಿಸಿರುವರು.

ಶೂನ್ಯ ಸಂಪಾದನೆಯಲ್ಲಿ ಬರುವ ಮುಕ್ತಾಯಕ್ಕಗಳ ಸಂಪಾದನೆ ಮೊದಲಾದ ಸಂಪಾದನೆಗಳ ಪ್ರಥಮದಲ್ಲಿಯೇ 'ಗುರುಕರುಣ, ಪ್ರಥಮೋಪದೇಶ ಎಂಬ ಶೀರ್ಷಿಕೆಯಿಂದ ಗ್ರಂಥ ಆರಂಭಿಸಲ್ಪಡುವದು. ಗ್ರಂಥಾರಂಭದ ಪ್ರಥಮದಲ್ಲಿಯೇ ಗುರುಕರುಣ ಎಂಬ ಮಹಾವಿಷಯುವನ್ನು ಆಯ್ದುಕೊಂಡದ್ದನ್ನು ನೋಡಿದರೆ ಮುಮುಕ್ಷುಗಳ ಸರ್ವಶ್ರೇಯೋಭಿವೃದ್ಧಿಗೂ ಗಹನ ಗಂಭೀರ ತಾತ್ವಿಕ ವಿವೇಚನದಿಂದ ಕೂಡಿದ ಶೂನ್ಯಸಂಪಾದನೆಯಂತಹ ಬೃಹತ್‌ಗ್ರಂಥದ ಪರಿಸಮಾಪ್ತಿಗೂ ಗುರುಕರುಣವೇ ಪ್ರಥಮದಲ್ಲಿ ಬೇಕು ತಿಳಿಯಬಹುದು.

ವಿದಗ್ಧನಾದ ಅಂದರೆ ತತ್ತ್ವ ಶಾಸ್ತ್ರಕೋವಿದನಾದ ಮಹಾವಿಭುವೆನಿಸಿದ ಮಹಾಪ್ರಭುವು ಮುಗ್ಧನಾದ ಏನೊಂದೂ ಅರಿಯದ ಬದ್ಧನಾದ ಗೊಗ್ಗಯ್ಯನಿಗೆ ಕರುಣಿಸಿದ ಈಗತಿಗೆ ಚಾಮರಸನು ಗೊಗ್ಗಯ್ಯನ ಗತಿ ಎಂದು ಸಂಬೋಧಿಸಿದರೆ ಶೂನ್ಯಸಂಪಾದನಾಕರ್ತೃಗಳು ಅದಕ್ಕೆ ಗುರುಕಿರುಣ ಎಂದು ನಾಮನಿರ್ದೇಶನ ಮಾಡಿರುವರು.

ಓರ್ವ ಮಹಾತಾಯಿಯು ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳನ್ನು ಕಕ್ಕುಲತೆಯಿಂದ ಲಾಲನೆಪಾಲನೆ ಮಾಡುವಂತೆ ಪಾವನ ಮೂರುತಿಯಾದ ಜಂಗಮಮೂರ್ತಿ ಸದ್ಭಕ್ತವೃಂದಕ್ಕೆ ಜ್ಞಾನಾಮೃತವನ್ನು ನೀಡಿ ಮುಕ್ತರನ್ನಾಗಿ ಮಾಡುವನು. ಮಹಾನದಿಗಳು ಕೂಪ ತಟಾಕಾದಿಗಳಂತೆ ಒತ್ತಟ್ಟಿಗಿರದೇ ಒಂದೇಸವನೆ ಹರಿಹರಿದು ಜನರಿಗೆ ಉಪಕಾರ ಮಾಡುವಂತೆ, ಗಾಳಿಯು ಒಂದೇ ಕಡೆಗೆ ಇರದೆ ಎಲ್ಲ ದಿಕ್ಕುಗಳಲ್ಲಿಯೂ ಸುಳಿದಾಡಿ ಜನರ ಕಲ್ಯಾಣವಮಾಡುವಂತೆ, ಮೇಘಮಂಡಲವು ಬಾಂದಳದಲ್ಲೆಲ್ಲ ಸಂಚರಿಸಿ ನೀರುಸುರಿಸಿ ಲೋಕವನ್ನು ಕಾಪಾಡುವಂತೆ, ಸ್ವಯಂಸ್ಥಲ ಚರಸ್ಥಲಗಳನ್ನು ಮೀರಿ ಪರಸ್ಥಲದಲ್ಲಿರುವ ಪ್ರಭುವು ಭಕ್ತೋದ್ಧಾರಕ್ಕಾಗಿ ದೇಶಸಂಚಾರ ಕೈಕೊಳ್ಳುವನು. ಸರಕುಗಳ ಬೇಡಿಕೆಯನ್ನು ತಿಳಿದು ಕಣ್ಣಿಗೆಕಣ್ಣುಹಚ್ಚದೇ ಹಗಲಿರುಳೂ ವ್ಯಾಪಾರಿಯು ದೇಶಸಂಚಾರ ಮಾಡುವದು ಧನ ಪ್ರಾಪ್ತಿಗಾಗಿ. ರಾಜಮಹಾರಾಜರು ಸಮುದ್ರಯಾನ, ವಿಮಾನಯಾನ

ಮಾಡುವದು ವಿರಾಮಕ್ಕಾಗಿ, ಸದ್ಭಕ್ತರು ಕ್ಷೇತ್ರಯಾತ್ರೆಗಳನ್ನು ಮಾಡುವದು ಪಾಪಪರಿಹಾರಕ್ಕಾಗಿ, ಪುಣ್ಯಸಂಪಾದನೆಗಾಗಿ. ವಿಧಾನಸಭೆಯ ಸದಸ್ಯರಾಗಬೇಕೆಂಬ ಕುತೂಹಲವುಳ್ಳ ರಾಜಕಾರಣಿಗಳು ಊರೂರು ತಿರುಗುವದು ಓಟುಗಳನ್ನು ಗಳಿಸುವದಕ್ಕಾಗಿ.

ವಿರಾಗವಿಭುವಾದ ಅಲ್ಲಮಪ್ರಭುದೇವರು ಸಂಚಾರ ಮಾಡುವದು ಪಾಪ ವಿಮೋಚನೆಗಾಗಿ ಅಲ್ಲ. ಹೋಟು, ಅಥವಾ ಧನಪ್ರಾಪ್ತಿಗಾಗಿ ಅಲ್ಲ. ಅವರು ದೇಶಸಂಚಾರ ಕೈಕೊಂಡದ್ದು ಭಕ್ತೋದ್ಧಾರಕ್ಕಾಗಿ.

ಕರ್ನಾಟಕ ರಾಜ್ಯವು ಅಖಂಡ ಕರ್ನಾಟಕವೆಂದು ಹೇಳಲ್ಪಡುತ್ತಿದ್ದರೂ ವ್ಯವಹಾರದಲ್ಲಿ ಉತ್ತರಕರ್ನಾಟಕ, ದಕ್ಷಿಣಕರ್ನಾಟಕ ಎನ್ನುವ ರೂಢಿಯೊಂದಿದೆ. ಈ ಉಭಯ ಕರ್ನಾಟಕಗಳಿಗೆ ಒಂದೊಂದು ವಿಷಯದಲ್ಲಿ ಒಂದೊಂದಕ್ಕೆ ಹಿರಿಮೆಗರಿಮೆಗಳಿದ್ದರೂ ಸರ್ವಜ್ಞನು-

"ಊರು ಸನಿಹದಲಿಲ್ಲ ನೀರೊಂದು ಗಾವುದವು ।
ಸೇರಿ ನಿಲ್ಲುವರೆ ನೆಳಲಿಲ್ಲ । ಬಡಗಣದ ।
ದಾರಿ ಬೇಡೆಂದ ಸರ್ವಜ್ಞ ॥"

ಎಂದು ಉತ್ತರ ಕರ್ನಾಟಕವನ್ನು ಹೀಗಳೆದು-

"ಅಲ್ಲಅರಿಷಿಣ ಉಂಟು ಬೆಲ್ಲಬಿಳಿಎಲೆಯುಂಟು
ಒಳ್ಳೆ ಹಲಸುಂಟು ಮೆಲ್ಲಲ್ಕೆ । ಮಲೆನಾಡ ।
ಅಲ್ಲೆನ್ನಬಹುದೆ ಸರ್ವಜ್ಞ ॥"

ಎಂದು ದಕ್ಷಿಣ ಕರ್ನಾಟಕವನ್ನು ಹೊಗಳಿರುವನು.

"ಉದರನಿಮಿತ್ತಂ ಬಹುಕೃತವೇಷಂ, ಎಂಬುಕ್ತಿಯಂತೆ ಹೊಟ್ಟೆಯಪಾಡಿಗಾಗಿ ಏನಾದರೊಂದು ವೇಷವತಾಳದೇ-

"ನೀರಿಲ್ಲದಲ್ಲಿ ಜಳಕವ ಮಾಡಿ ತರುವಿಲ್ಲದಲ್ಲಿ ಪುಷ್ಪವನೆತ್ತಿ
ಕರವಿಲ್ಲದೆ ಪೂಜಿಸಬಲ್ಲಡೆ ಜಂಗಮನೆಂಬೆ ಕಾಣಾ
ಕಪಿಲಸಿದ್ಧಮಲ್ಲಿಕಾರ್ಜುನದೇವ ಆನು ತ್ರಿಕರಣಶುದ್ಧನಾಗಿ"

ಸಮತೆಯೆಂಬ ಕಂಥೆ ಅಮಿತವೆಂಬ ಭಸ್ಮ
ಸರ್ವಜೀವದಯಾಪಾರಿ ಎಂಬ ವಿಮಲ ರುದ್ರಾಕ್ಷಿ,
ನಿರ್ಮೋಹವೆಂಬ ಕೌಪೀನ ನಿಸ್ಸಂಗವೆಂಬ ಮೇಖಲಾ-
ಪರಿಪೂರ್ಣನೋಡಾ ನಮ್ಮ ಜಂಗಮನು"

ಎಂದು ಸೊನ್ನಲಿಗೆಯ ಸಿದ್ಧರಾಮೇಶ್ವರರು ಹೇಳುವಂತೆ, ಬುಧರ ಚದುರರ ಹೃದಯ ಒಪ್ಪುವಂತಹ ವಿರತಿ ವೇಷವ ಧರಿಸಿದ ಅಲ್ಲಮಪ್ರಭುವು ಪೂಗಳ ಕಂಪಿನಿಂದಲೂ, ಗಿಡಗಳ ಗುಂಪಿನಿಂದಲೂ, ಮಾರುತನ ತಂಪಿನಿಂದಲೂ, ಸೊಗಸಾಗಿ ಅರಳಿದ ಕೆಂದಾವರೆಗಳಿಂದಲೂ

ಕನ್ನೈದಿಲೆಗಳಿಂದಲೂ ಬಗೆಬಗೆಯ ಹೂಹಣ್ಣುಗಳನ್ನು ಬಿಡುವ ಗಿಡಬಳ್ಳಿಗಳಿಂದ ಲತಾಮಂಟಪಗಳಿಂದಲೂ ಒಪ್ಪುವ ಸುಮನೋಹರವಾದ ತೋಟವನ್ನು ಕಂಡ ತೆಗೆಯುವಲ್ಲಿ ಗಳೆ ಹೊಡೆಯುವದರಲ್ಲಿ, ಉತ್ತುವದರಲ್ಲಿ, ಬಿತ್ತುವದರಲ್ಲಿ, ರಂಟೆ ಗಳಿಂದ ಹೊಲವನ್ನು ಹಸನಮಾಡುವಲ್ಲಿ ಜಾಣನಾದ ಗೊಗ್ಗಯ್ಯನೆಂಬ ಶಿವಭಕ್ತ ತೋಟದ ಒಡೆಯ. ಭಕ್ತೋದ್ಧಾರ ಕಾರ್ಯಕ್ಕಾಗಿಯೇ ಲೋಕ ಸಂಚಾರ ಶಿವಯೋಗಿಯಾದ ಅಲ್ಲಮಪ್ರಭುವು ವಿವಿಧ ಹಣ್ಣುಹಂಪಲ ಳ ಅಗಿಗಳನ್ನು ಕ್ಕಾಗಿ ಭೂಮಿಯನ್ನು ಅಗಿದಗಿದು ತಗ್ಗುಮಾಡುವದರಲ್ಲಿ ಮಗ್ನನಾದ ಗೊಗ್ಗ ಸನಿಹದಲ್ಲಿಯೇ ಬಂದರೂ ಅವನು ಕಣ್ಣೆತ್ತಿ ನೋಡಲಿಲ್ಲ; ತಲೆ ಬಾಗಿಸಿ ನಮಿಸಲಿಲ್ಲ

ರೋಗದಿಂದ ಬಳಲುವ ರೋಗಿಯು ತಾನಾಗಿ ಆಸ್ಪತ್ರೆಗೆ ಬಂದಾಗ ಅವನ ಪರೀಕ್ಷೆಮಾಡಿ, ಶರೀರದ ವಿವಿಧ ಭಾಗಗಳನ್ನು ಯಂತ್ರೋಪಕರಣಗಳಿಂದ ನೋಡಿ ತಕ್ಕೊಂಡು ಔಷಧ ಕೊಟ್ಟು ರೋಗ ಕಳೆವವರು ಹಾಗೂ ರೋಗಿಯಿದ್ದಲ್ಲಿಗೆ ಸ್ವತಃ ಹೋಗಿ ಕಳಕಳಿಯಿಂದ ದೇಹದ ಪರೀಕ್ಷೆಮಾಡಿ ನಿಸ್ವಾರ್ಥ ಬುದ್ಧಿಯಿಂದ ಉಚಿತ ಔಷಧಕೊಟ್ಟು ರೋಗವನ್ನು ಕಳೆಯುವವರು ಎಂದು ವೈದ್ಯರಲ್ಲಿ ಎರಡು ವಿಧ. ವ್ಯಾಮೋಹದ ಕೂಪದಲ್ಲಿ ಬಿದ್ದು ಒದ್ದಾಡುವ ಗೊಗ್ಗಯ್ಯನ ಸಮೀಪ ಬಂದ ಪ್ರ ರೋಗಿಗೆ ಉಚಿತವಾಗಿ ಔಷಧಕೊಟ್ಟು ಸಂತೈಸುವ ವೈದ್ಯನಿದ್ದಂತೆ.

ಓರ್ವನು ಸಿದ್ಧನು, ಬುದ್ಧನು; ಮತ್ತೋರ್ವನು ಬದ್ಧನು, ಸಂಸಾರದಲ್ಲಿ ಬದ್ಧ ಓರ್ವನು ವಿರಾಗಿಯು, ಇನ್ನೋರ್ವನು ರಾಗಿಯು. ಒಬ್ಬನು ಭೂಮಿ, ಹೇಮಗಳ ಳಾಗಿ ದುಡಿವ ಸಂಸಾರಿಯು; ಇನ್ನೊಬ್ಬನು ಭೂಮಿ ಹೇಮ ಕಾಮಿನಿ ಕಾಲ್ಕೆಳಗೆ ತುಳಿದು ಮೆಟ್ಟಿದ ವೀರ ಸನ್ಯಾಸಿಯು, ಒಬ್ಬನು ಯೋಗಿ, ಒಬ್ಬನು ಭೋ ಒಬ್ಬನು ಆಧ್ಯಾತ್ಮ ಶಿಖರದ ತುತ್ತ ತುದಿಯಲ್ಲಿ ನಲಿದಾಡುತ್ತಿದ್ದರೆ, ಇನ್ನೊಬ್ಬನು ಸಂ ಹಾಳು ಬಾವಿಯಲ್ಲಿ ಬಿದ್ದು ಗೋಳಾಡುವನು. ಹೀಗೆ ಈರ್ವರ ಸಂಸ್ಕೃತಿ, ಸತ್ಕೃತಿ ಸಚ್ಚಾರಿತ್ರ್ಯಗಳಲ್ಲಿ ಭೂಮ್ಯಾಕಾಶದಷ್ಟು, ಉತ್ತರಧ್ರುವ ದಕ್ಷಿಣ ಧುವ್ರದಷ್ಟು ಅಂತರ ವವು. ಜಂಗಮ ಪುಂಗವನಾದ ಅಲ್ಲಮಪ್ರಭುವು ತಾನು ನಿರಾಭಾರಿಯಾದರೂ ಭಕ್ತ ದ್ಧರಿಸುವ ಭಾರೀ ಭಾರವನ್ನು ಹೊತ್ತು ಭಾರವಾಹಕನಾದನು.

"ಹೊನ್ನಿಗಾಗಿ ಸತ್ತವರು ಕೋಟಿ, ಹೆಣ್ಣಿಗಾಗಿ ಸತ್ತವರು ಕೋಟಿ
ಮಣ್ಣಿಗಾಗಿ ಸತ್ತವರು ಕೋಟಿ, ಅಶನಕ್ಕಾಗಿ ಸತ್ತವರು ಕೋಟಿ
ವಸನಕ್ಕಾಗಿ ಸತ್ತವರು ಕೋಟಿ, ವ್ಯಸನಕ್ಕಾಗಿ ಸತ್ತವರು ಕೋಟಿ
ನಿನಗಾಗಿ ಸತ್ತವರನೊಬ್ಬರನೂ ಕಾಣೆನೆಂದ ಗುಹೇಶ್ವರ"

"ತ್ರಿಭುವನವೆಂಬ ಪಂಜರದೊಳಗೆ, ಸಂಸಾರ ಚಕ್ರದಲ್ಲಿ
ಹೊನ್ನು ಪ್ರಾಣವೇ ಪ್ರಾಣವಾಗಿ. ಹೆಣ್ಣು ಪ್ರಾಣವೇ ಪ್ರಾಣವಾಗಿ,
ಮಣ್ಣು ಪ್ರಾಣವೇ ಪ್ರಾಣವಾಗಿ ಈ ಸುಖದ ಸೊಕ್ಕಿನಲ್ಲಿ ಈಜಾಡು
ತ್ತಿರ್ದರಲ್ಲಾ ಬಹುವಿಧದ ವ್ಯವಹಾರವೇದ್ಧಿಸಿದವರು ಗುಹೇಶ್ವರ"

ಎಂದು ಸಂಸಾರದ ಕೆಗ್ಗೆಸರಿನಲ್ಲಿ ಸಿಕ್ಕ ಗೊಗ್ಗಯ್ಯನವನ್ನು ಕಂಡು ಪ್ರಭುವು ಮರಮರ ಮರುಗಿದನು.

ಬದ್ಧ, ಮುಮುಕ್ಷು, ಮುಕ್ತ ಎಂದು ಜೀವರಲ್ಲಿ ಮೂರು ಬಗೆ. ಬಧ್ಯತೇ ಇತಿ ಬದ್ಧಃ ಅಂದರೆ ಕಟ್ಟಲ್ಪಟ್ಟವನು, ಪೋಲಿಸರು ಹೇಗೆ ಕೈದಿಯನ್ನು ಹೆಡಮುರಿಗೆ ಕಟ್ಟುವರೋ, ಕಟ್ಟಿ ಬಿಗಿಯುವರೋ ಹಾಗೆ ಕಾಮಾದಿ ಷಡ್ರಿಪುಗಳು ಜೀವನನ್ನು ವಿವಿಧ ಆಶಾಪಾಶಗಳಿಂದ ಕಟ್ಟಿಬಿಡುವರು. ಸೆರೆಮನೆಯಲ್ಲಿದ್ದ ಕೈದಿಯು ವಿವಿಧ ಶಿಕ್ಷೆಗಳನ್ನು ಅನುಭವಿಸುವಂತೆ ಸಂಸಾರದಲ್ಲಿದ್ದ ಜೀವನೂ ಬಹುವಿಧದ ಕಷ್ಟಕೋಟಲೆಗಳನ್ನು ಅನುಭವಿಸುವನು.

''ಬಡತನಕ್ಕೆ ಉಂಬುವ ಚಿಂತೆ ಉಣಲಾದರೆ ಉಡುವ ಚಿಂತೆ,
ಉಡಲಾದರೆ ಇಡುವ ಚಿಂತೆ, ಇಡಲಾದರೆ ಹೆಂಡಿರ ಚಿಂತೆ,
ಹೆಂಡಿರಾದರೆ ಮಕ್ಕಳ ಚಿಂತೆ, ಮಕ್ಕಳಾದರೆ ಬದುಕಿನ ಚಿಂತೆ,
ಬದುಕಾದರೆ ಕೇಡಿನ ಚಿಂತೆ, ಕೇಡಾದರೆ ಮರಣದ ಚಿಂತೆ
ಇಂತೀ ಹಲವು ಚಿಂತೆಯಲ್ಲಿಪ್ಪವರನ್ನು ಕಂಡೆನು''
ಶಿವನ ಚಿಂತೆಯಲಿದ್ದವರನೊಬ್ಬರನೂ ಕಾಣೆನೆಂದಾತ ನಮ್ಮ
ಅಂಬಿಗರ ಚೌಡಯ್ಯ ನಿಜಶರಣನು''

ಅಂತ್ಯವಿಲ್ಲದ ಈ ಚಿಂತೆಯ ಸಂತೆಯಲ್ಲಿಯೇ ಸಿಕ್ಕಜೀವನು ಅಂತ್ಯಯಾತ್ರೆಯನ್ನೇ ಮುಗಿಸಿ ಬಿಡುವನು. ಇಂಥವರನ್ನೇ ಕುರಿತು ಸರ್ಪಭೂಷಣ ಶಿವಯೋಗಿಗಳು–

"ಜ್ಞಾನಶೂನ್ಯರಿಗಾತ್ಮ ಬೋಧೆಯದು ಹಿತವಹುದೆ ?
ಹೀನ ಲೌಕಿಕ ವಿಷಯಗಳಿಗೆ ಮೋಹಿಸುವ ।
ಕೀವ ಕುಡಿಯುವ ನೊಣವು ಕುಸುಮರಸಕೆಳಸುವದೆ ?
ಬೇವ ತಿಂಬುವ ಕಾಗೆ ಮಾವಿಗೆರಗುವದೆ ? "

ಎಂದು ಹೇಳಿರುವರು. ಮಹಾಲಿಂಗರಂಗನೆಂಬ ಓರ್ವ ಕವಿಯು–

" ಕಾಣದಗೆ ಕನ್ನಡಿಯು ಯೇತಕೆ ?
ಗಾಣದೆತ್ತಿಗೆ ಗೆಜ್ಜೆಯೇತಕೆ ? ।
ಗೋಣಿಗೇತಕೆ ಗವಸಣಿಕೆ ನರಿಗೇಕೆ ಸುರಲೋಕ ॥
ರಾಣಿಯೇಕೆ ನಪುಂಸಕಗೆ ಗೀ ।
ರ್ವಾಣ ಭಾಷೆಯು ಏಕೆ ಗೊರವಗೆ ।
ಕೇಣವಿಲ್ಲದ ವಿಷಯಲಂಪಟಗೇಕೆ ನಿರ್ವಾಣ " ॥

ಎಂದು ಹಾಡಿರುವನು.

ಮೋಕ್ಷಂ ಇಚ್ಛುಃ ಮುಮುಕ್ಷುಃ ಅಂದರೆ ಬಂಧನದಿಂದ ಬಿಡುಗಡೆಯನ್ನು ಹೊಂದಲು ಇಚ್ಛೆಯುಳ್ಳವನು ಯಾವನೋ ಅವನು ಮುಮುಕ್ಷು ಎನಿಸುವನು, ಮುಮುಕ್ಷುವು ದೇವರಲ್ಲಿ ಯಾವಾಗಲೂ–

" ನೋಡು ನೀನೆನ್ನ ಪರಿಭವದ ಬಾಧೆಯನು ಕೃಪೆ
ಮಾಡು ಬೇಗದೊಳಭಯವಿತ್ತು ಶಂಕರ ॥ "
ಹಸಿವು ತೃಷೆಗಳ ಬಾಧೆ ವ್ಯಸನವೇಳರ ಬಾಧೆ ।
ದೆಸೆಗೆಡಿಸುವರಿಕುಲದ ಬಾಧೆ ಶಂಕರ ।
ಕುಸುಮ ಬಾಣನ ಬಾಧೆ ಮದಶೋಕ ಮೋಹರತಿ ।
ವಿಸರದುರುಬಾಧೆ ಎನಗೆ ಶಂಕರ " ॥

" ಕರುಣಿಸು ನೀನೆನ್ನ ಕರಣ ನಿಕರದೊಳು ವರಪುಣ್ಯವಗಲದಂತೆಲೆದೇವ ।
ಶರಣ ಸಹಜ ಭಾವ ಗಿರಿಜೆಯ ಸುಖಜೀವ ಬೇಗ ಕರುಣಿಸು " ॥
" ನೋಡಲಾಗದೇ ದೇವ ನೋಡಲಾಗದೆ ದೇವ ।
ಕೊಡೆನಿನ್ನ ದಿಟ್ಟಿ ಮೂರು ನಾಡೆಲೇಸು ಮಾಡಲೆನ್ನ " ॥
ಎಂದು ದೈನ್ಯದಿಂದ ದೇವರಲ್ಲಿ ಮೊರೆಯಿಡುವನು.

ಬಂಗಾಲದ ಸುಪ್ರಸಿದ್ಧ ಸಂತರಾದ ರಾಮಕೃಷ್ಣ ಪರಮಹಂಸರು ಬದ್ಧ, ಮುಮು ಕ್ಷು, ಮುಕ್ತ ಈ ಮೂವರನ್ನು ಉಪ್ಪಿನಕಾಯಿ, ತೆಂಗಿನಕಾಯಿ, ಗಿಟಕಾದ ತೆಂಗಿನಕಾ ಈ ಮೂರಕ್ಕೆ ಹೋಲಿಸಿರುವರು.

ಮೂಲತಃ ಸಚ್ಚಿದಾನಂದ ಸ್ವರೂಪನಾದ ಜೀವನು ಜಡ, ದೃಶ್ಯ, ಭೂತಕಾರ್ಯ ನಿಸಿದ ದೇಹಾದಿ ಸಂಬಂಧದಿಂದ ಸ್ವಸ್ವರೂಪವನ್ನು ಮರೆತು ಅಜ್ಞಾನ ಮೂಲಕವಾಗಿ ತಾ ದಾತ್ಮ್ಯ ಭಾವನೆಯಿಂದ ಅದೇ ತಾನಾಗಿ ವರ್ತಿಸುವನು. ಊಟಕ್ಕೆ ಮೊದಲು ಉಪ್ಪಿನಕಾ ಎಂಬಂತೆ ಊಟದಲ್ಲಿ ಮುಖ್ಯವಾಗಿ ಉಪ್ಪಿನಕಾಯಿ ಬಳಸುವರಷ್ಟೇ. ಉಪ್ಪಿನಕಾಯಿ ಎ ರೆ ಉಪ್ಪಿನಿಂದ ಮಾಡಿದ ಕಾಯಿಯೇನೂ ಅಲ್ಲ. ಮಾವಿನಕಾಯಿಯ ಉಪ್ಪಿನಕಾಯಿ, ಲಿಂ ಕಾಯಿಯ ಉಪ್ಪಿನಕಾಯಿ, ಕಂಚೀಕಾಯಿಯ ಉಪ್ಪಿನಕಾಯಿ ಎಂದಿದ್ದರೂ ಉಪ್ಪಿನ ಯಿಯ ಹಿಂದಿರುವ ಮಾವಿನಕಾಯಿ, ಲಿಂಬೀಕಾಯಿ ಮುಂತಾದ ಪದಗಳು ಹೊರಟು ಹೋ ಗಿ ಕೇವಲ ಉಪ್ಪಿನಕಾಯಿ ಎಂಬ ಪದವೇ ಉಳಿದುಬಿಡುವುದು. ಮಾವಿನಕಾಯಿ, ಲಿಂ ಕಾಯಿ, ಮೊದಲಾದವುಗಳು ತಮ್ಮತನವನ್ನು ಕಳೆದುಕೊಂಡು ಉಪ್ಪು ಹಚ್ಚಾಗಿ ಉಪ್ಪಿ ನೊಳಗೆ ಬೆರೆತು ಉಪ್ಪಿನಕಾಯಿಯೆಂದೇ ಹೇಳಲ್ಪಡುವವು. ಯಾತರ ಉಪ್ಪಿನಕಾ ಎಂದು ಕೇಳಿದಾಗ ಮಾತ್ರ ಮಾವಿನಕಾಯಿಯ, ಲಿಂಬೀಕಾಯಿಯ ಎಂಬ ಪದಗಳ ಹೇಳುವರು. ಹೀಗೆಯೇ ಅಜ್ಞಾನಿ ಜೀವನು ತನ್ನ ಮೂಲ ಚಿತ್‌ಸ್ವರೂಪವನ್ನು ಕಳೆ ಕೊಂಡು ದಿಟವನ್ನು ಮರೆತು ಸಟೆಯಾಗಿಯೇ ನಡೆಯುವನು.

ಮುಮುಕ್ಷುವು ತೆಂಗಿನಕಾಯಿಯಿದ್ದಂತೆ. ಜುಬ್ಬರ, ಪರಟೆಗಳಿಗೆ ವಿಲಕ್ಷಣವಾದ ಸ್ ಧರ್ಮವುಳ್ಳ ಕೊಬ್ಬರಿಯು ಪರಟೆಗೆ ಬಲವಾಗಿ ಅಂಟಿಕೊಂಡಿದ್ದರೂ ಕಲ್ಲಿನ ಹೊಡೆತದ ಅಥವಾ ಚಾಕುವಿನಿಂದ ಬೇರ್ಪಡಿಸಿದಾಗ ಬೇರೆಯಾಗಿ ಬರುವದು. ಹಾಗೆಯೇ ಸಾಂಸಾ ಬಂಧನಗಳಿಂದ ಬಂಧಿತನಾದ ಶಿಷ್ಯನು ಗುರೂಪದೇಶದಿಂದ ಎಚ್ಚತ್ತು ತನ್ನ ನಿಜರೂಪವ ರಿತು ಮುನ್ನಡಿ ಇಡುವನು.

ಮುಕ್ತರು ಗಿಟಕಾಲಿದ ತೆಂಗಿನಕಾಯಿಯಂತೆ, ಗಿಟಕು ಆದ ಕೊಬ್ಬರಿಯು ಜುಬ್ಬರ ಪರಟಿಯೊಳಗಿದ್ದರೂ ಆವುಗಳ ಸಂಬಂಧವಿಲ್ಲದೆ ತಾನೇತಾನಾಗಿರುವಂತೆ ಮುಕ್ತರು ಲೋಕದೊಳಗಿದ್ದರೂ ನೇಹ ಹತ್ತದ ನಾಲಗೆಯಂತೆ, ಹಂಡಿ ಹೊದ್ದದ ಗಾಳಿಯಂತೆ, ಕಾಡಿಗೆ ಸೋಂಕದ ಕನೀನಿಕೆಯಂತೆ, ಮೋಡ ಮುಸುಕಿದರೂ ಮಸಕಾಗದ, ಮಳೆಗರೆದರೂ ನೆನೆಯದ ಆಗಸದಂತೆ, ನೀರಲ್ಲಿದ್ದರೂ ನೆನೆಯದ ನೀರಜದಂತೆ ನಿರ್ಲಿಪ್ತರಾಗಿರುವರು. ಇವರೇ ಮುಕ್ತರು.

" ಭೋಗಿಗಳೊಳು ಭೋಗಿಗಳುತಿರ್ಪ ।
ಯೋಗಿಗಳೊಳು ಯೋಗಿಗಳಂತಿರ್ಪ ।
ಜೀವನ್ಮುಕ್ತರವರಿಗವರಂತೆ ।
ಭಾವಿಸುತಿಹರುಪಹಿತ ಮಣಿಯಂತೆ " ॥

ಕಂಡರಿಗೆಲ್ಲರವೊಲೆಸೆವುತ್ತ ।
ಉಂಡುಪವಾಸಿಯೆನಿಸಿ ಚರಿಸುತ್ತ ।

" ಮುತ್ತು ನೀರೊಳುಹುಟ್ಟಿ ಮತ್ತೆನೀರಪ್ಪುದೆ ?
ಸತ್ಯವನುಅರಿದ ಜ್ಞಾನಿ ಸಂಸಾರವನು ।
ಮತ್ತೆ ಹೊದ್ದುವನೆ ? ಸರ್ವಜ್ಞ"

" ತಿಳಿಯಕಾಸಿದ ತುಪ್ಪವಳಿದು ಹಾಲಪ್ಪುದೇ ?
ಕಳೆ ಬೆಳಗನರಿದ ಶಿವಯೋಗಿ ಸಂಸಾರ ।
ದೊಳಗೆ ಸಿಲುಕುವನೆ ಸರ್ವಜ್ಞ "

ಎಂದು ನಿಜಗುಣಶಿವಯೋಗಿಗಳೂ, ಸರ್ವಜ್ಞಕವಿಯೂ ಜೀವನ್ಮುಕ್ತನ ನಿಲವನ್ನು ಚಿತ್ರಿಸಿರುವರು.

ಲೋಕೋದ್ಧಾರಕ್ಕಾಗಿಯೇ ದೇಶಸಂಚಾರ ಕೈಕೊಂಡ ಅನಿಮಿತ್ತ ಬಂಧುವಾದ ಅಲ್ಲಮಪ್ರಭುವಿಗೆ ಲೋಕದವರ ಮಾನಮರ್ಯಾದೆ ಪ್ರತಿಷ್ಠೆಗಳು ಬೇಕಾಗಿರಲಿಲ್ಲ; ಅವನಿಗೆ ಬೇಕಾದದ್ದು ಪತಿತೋದ್ಧಾರಕಾರ್ಯ. ಅದಕ್ಕಾಗಿಯೇ ಮುಂದೆಬಂದುನಿಂತರೂ ಬಾಗದಿರುವ ಗೊಗ್ಗಯ್ಯನನ್ನು ಕಂಡು ರೇಗಲಿಲ್ಲ, ರೇಗಿ ಹೀಗಳೆಯಲಿಲ್ಲ. ಭೂತಾನುಕಂಪವುಳ್ಳ ಪ್ರಭುದೇವರು ಅವನ ವಿಷಯದಲ್ಲಿ ತಾಯಿಯು ಮಕ್ಕಳ ವಿಷಯದಲ್ಲಿ ಮಮತೆ, ತೋರಿಸುವಂತೆ ತೋರಿಸುತ್ತ ಮಹಾವಿರಕ್ತನಾದ ಅಲ್ಲಮಪ್ರಭುಗಳು "ಗೊಗ್ಗಯ್ಯನವರೇ ನಿಮಗೆ ಶರಣಾರ್ಥಿಗಳು ಶರಣಾರ್ಥಿಗಳು " ಎಂದು ಗಟ್ಟಿಯಾಗಿ ನುಡಿಯಲು ಎದುರಿಗೇನಿಂತಿರುವ ಪ್ರಭುವನ್ನುನೋಡಿ ಕೂಡಲೆ ಗೊಗ್ಗಯ್ಯನು ಶರಣು ಶರಣು ಎಂದುನುಡಿದನು.

ಇಲ್ಲಿ ವಾಸ್ತವಿಕವಾಗಿ ಅಜ್ಞನಾದ ಕಿರಿಯನಾದ ಗೊಗ್ಗಯ್ಯನೇ ಹಿರಿಯನೂ ಸುಜ್ಞಾನಿಯೂ ಆದ ಪ್ರಭುವಿಗೆ ಮೊದಲು ಶರಣುಮಾಡಬೇಕಾಗಿತ್ತು, ಆದರೆ ಇಲ್ಲಿ

ಹಾಗಾಗದೇ ಹಿರಿಯನಾದ ಪ್ರಭುದೇವರೇ ಮೊದಲು ಕಿರಿಯನಾದ ಗೊಗ್ಗ... ಶರಣಾರ್ಥಿಮಾಡುವರು. ಅನಂತರ ಗೊಗ್ಗಯ್ಯನು ಪ್ರಭುದೇವರಿಗೆ ಶರಣು ಮಾ...

ಶ್ರೀಗುರುವು ಕಾಲಮಾನಕ್ಕನುಸರಿಸಿ ಶಿಷ್ಯನಿಗೆ ಬುದ್ಧಿವಾದವನ್ನು ಹೇ... ಬಡಿಯಬೇಕು, ಬೈಯಬೇಕು, ಬೆದರಿಸಬೇಕು. ಕಡೆಗೆ ವಂದಿಸಲೂಬೇಕೆಂಬ ವಿ... ಪ್ರಭುದೇವರು–

" ಕೃತಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬಡಿದುಬುದ್ಧಿಯ ಕಲಿಸಿ...
ಆಗಲಿ ಮಹಾಪ್ರಸಾದವೆಂದೆನಯ್ಯಾ !

ತ್ರೇತಾಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬಯ್ದು ಬುದ್ಧಿಯ ಕಲಿಸಿದು
ಆಗಲಿ ಮಹಾಪ್ರಸಾದವೆಂದೆನಯ್ಯ !

ದ್ವಾಪರಯುಗದಲ್ಲಿ ಶ್ರೀಗುರು ಶಿಷ್ಯಂಗೆ ಝಂಕಿಸಿ ಬುದ್ಧಿಯ ಕಲಿಸಿ...
ಆಗಲಿ ಮಹಾಪ್ರಸಾದವೆಂದನಯ್ಯ !

ಕಲಿಯುಗದಲ್ಲಿ ಶ್ರೀ ಗುರು ಶಿಷ್ಯಂಗೆ ವಂದಿಸಿ ಬುದ್ಧಿಯ ಕಲಿಸಿದರ
ಆಗಲಿ ಮಹಾಪ್ರಸಾದವೆಂದೆನಯ್ಯ !

ಗುಹೇಶ್ವರ ನಿಮ್ಮ ಕಾಲದ ಕಟ್ಟಳೆಯಂ ಕಾಲಿತನಕ್ಕೆ ನಾನು ಬೆರಗಾದ..."
ಎಂಬ ವಚನವನ್ನು ಹೇಳಿರುವರು,

ಈ ವಚನವನ್ನು ಓದಿದಾಕ್ಷಣ ಪುರಾಣಗಳಲ್ಲಿ ರೂಢವಾಗಿರುವ ಕೃತಯುಗ, ತ್ರೇತಾ... ದ್ವಾಪರಯುಗ, ಕಲಿಯುಗ ಈ ನಾಲ್ಕು ಯುಗಗಳ ವಿಚಾರವು ಥಟ್ಟನೇ ಹೊ... ನಾಲ್ಕು ಯುಗಗಳಲ್ಲಿ ಗುರುವು ಶಿಷ್ಯನಿಗೆ ಹೇಗೆ ಬುದ್ಧಿಯನ್ನು ಕಲಿಸಬೇಕೆಂಬುದು ತಿ...ತ್ತದೆ. ಮೇಲ್ಕಾಣಿಸಿದ ವಚನದಲ್ಲಿ ಒಂದು ಸಾಮಾನ್ಯಾರ್ಥವಿದೆ.

ಕೃತಕಯುಗದಲ್ಲಿ ಧರ್ಮವು ನಾಲ್ಕು ಕಾಲುಗಳಿಂದಲೂ, ತ್ರೇತಾಯುಗದಲ್ಲಿ ಮೂ... ಕಾಲುಗಳಿಂದಲೂ, ದ್ವಾಪರಯುಗದಲ್ಲಿ ಎರಡು ಕಾಲುಗಳಿಂದಲೂ, ಕಲಿಯುಗ... ಧರ್ಮವು ಒಂದೇ ಕಾಲಿನಿಂದ ಕುಂಟುತ್ತಿದೆಯೆಂದು ಹೇಳುವರು. ನಾಲ್ಕು ಕಾಲು... ಕೃತಕಯುಗದಲ್ಲಿ ಶಿಷ್ಯರು ಅತೀವ ವಿನಯ ಶೀಲರಿದ್ದುದರಿಂದ ಗುರುವು ಬಡಿದರೂ... ರುತ್ತರವೀಯದೇ ಎಡದ ಪಾದದಲ್ಲೊದ್ದರೆ ಬಲದ ಪಾದವ ಹಿಡಿವೆ, ಬಲದ ಪಾ...ದ್ದರೆ ಎಡದ ಪಾದವ ಹಿಡಿವೆ ಎಂದು ಗುರುಪಾದವ ಗಟ್ಟಿಯಾಗಿ ಹಿಡಿದು, ಬುದ್ಧಿ... ತಮ್ಮ ಅನುಗ್ರಹ, ಮಹಾಪ್ರಸಾದ,ನಾನು ತಮ್ಮ ಕರುಣೆಯ ಕಂದ ಎಂದು ಹೇಳುತ್ತಿ...

ತ್ರೇತಾಯುಗದ ಮಾತು ಹಾಗಲ್ಲ. ಕೃತಯುಗದಲ್ಲಿ ಸದ್ಗುರುವು ಶಿಷ್ಯನನ್ನು ... ಯಿಂದ ಥಳಿಸಿದರೂ ಶಿಷ್ಯನು ಬಡಿಗೆಯ ಹೊಡೆತವನ್ನು ಮಹಾಪ್ರಸಾದವನ್ನು... ಆದರೆ ಮೂರು ಕಾಲುಳ್ಳ ತ್ರೇತಾಯುಗದಲ್ಲಿ ಗುರುವು ಶಿಷ್ಯನನ್ನು ಬಡಿಯದೇ ಹಾಗೆ ಮಾಡಬೇಡ, ಮಾನಗೇಡಿ, ಹಾದೀ ಬಿಡಬೇಡ ಎಂದು ಹೇಳಬೇಕಾಗುವದು.

ಮೂರುಕಾಲಿನ ತ್ರೇತಾಯುಗದಲ್ಲಿ ಬಾಯಿಗೆ ಬಂದಂತೆ ಬೈದರೂ ಸುಮ್ಮನಿರುವ ಶಿಷ್ಯನನ್ನು ಎರಡೇ ಕಾಲುಳ್ಳ ದ್ವಾಪರಯುಗದಲ್ಲಿ ಗುರುವು ಶಿಷ್ಯನನ್ನು ಬೈಯದೇ, ಶಿಷ್ಯನೇ ಒಳಿತಾಗಿ ನಡೆಯದಿದ್ದರೆ ನಿನ್ನ ಪರಿಣಾಮ ನೆಟ್ಟಗಾಗಲಿಕ್ಕಿಲ್ಲ. ಬಹಳ ಎಚ್ಚರದಿಂದಿರು, ನಿನಗೆ ಕಠಿಣಶಿಕ್ಷೆಯಾದೀತು ಎಂದು ಮುಂತಾಗಿ ಗಟ್ಟಿಯಾದ ದನಿಯಿಂದ ಬೆದರಿಸಿ ಹೇಳ ಬೇಕಾಗುವದು. ಒಂದೇಕಾಲಿನಿಂದ ಕುಂಟುವ ಕಲಿಯುಗದಲ್ಲಿ, ಕೃತಯುಗದಲ್ಲಿ, ತ್ರೇತಾ ಯುಗದಲ್ಲಿ, ದ್ವಾಪರಯುಗದಲ್ಲಿ ಶಿಷ್ಯನನ್ನು ಬಡಿದು, ಬೈದು, ಬೆದರಿಸಿ ಹೇಳಿದಂತೆ ಹೇಳದೇ ಗುರುವೇ ಶಿಷ್ಯನಿಗೆ ವಂದನೆಯುಮಾಡಿ, ಕೈಮುಗಿದು ಹೇಳಬೇಕಾದ ಪ್ರಸಂಗ ವಿರುವದು. ಕಾಲಕರ್ಮ ಮಾಯೆಗಳನ್ನು ಮೀರಿನಿಂತ ಅಲ್ಲಮನೂ–

"ಗುಹೇಶ್ವರ ನಿಮ್ಮ ಕಾಲದ ಕಟ್ಟಳೆಯುಕಲಿತನಕ್ಕೆ
ನಾನು ಬೆರಗಾದೆನು" ಎಂದು ಉದ್ಗಾರ ತೆಗೆದಿರುವರು.

ಯಾವದೇ ಕಾರ್ಯವಾಗಲಿ ಪೂರ್ಣವಾಗಬೇಕಾದರೆ ಅದಕ್ಕೆ ಸಾಕಷ್ಟು ಸಮಯ ಕಳೆಯಲೇಬೇಕು, ಒಂದು ಮರದಲ್ಲಿ ಸವಿಸವಿಯಾದ ಹಣ್ಣು ಆಗಬೇಕಾದರೆ ಅದು ಮೊದಲು ಹೂಆಗಬೇಕು, ಮಿಡಿಗಾಯಿ ಆಗಬೇಕು, ಪಾಡುಗಾಯಿ ಆಗಬೇಕು, ಆ ಮೇಲೆ ಮಧುರ ಫಲವಲ್ಲವೇ ? ಓರ್ವಯಾತ್ರಿಕನು ಉಗಿಬಂಡಿಯಲ್ಲಿ ಕುಳಿತು ತನ್ನ ಊರನ್ನು ಮುಟ್ಟಬೇಕಾದರೆ ಹಲವಾರು ನಿಲ್ದಾಣಗಳನ್ನು ದಾಟಲು ಸಮಯಬೇಕಲ್ಲವೇ? ಹಾಗೆ ಭವಬಂಧನ ಭವಪಾಶಕ್ಕೊಳಗಾದ ಜೀವನು ಅವುಗಳಿಂದ ವಿಮುಕ್ತನಾಗಲು. ಸಾಧಕನು ಸಾಧನಗಳನ್ನು ಮಾಡಿ ಸಿದ್ಧಿಪಡೆಯಲು ಕಾಲ ಗತಿಸಲೇಬೇಕಾಗುವದು, ಮೇಲ್ಕಾಣಿಸಿದ ವಚನದಲ್ಲಿ ಬರುವ "ಕೃತಯುಗದಲ್ಲಿ" ಎಂಬ ಪದವನ್ನು ಶಿಷ್ಯನ ಆತ್ಮವಿಕಾಸದ ಪ್ರಾರಂಭಾವಸ್ಥೆ ಎಂಬರ್ಥದಲ್ಲಿ ಬಳಸಿರುವರೆಂದು ಹೇಳಬಹುದು. ಸಾಧಕನು–

ಭಕ್ತನೆನಿಸುವೆನಯ್ಯ ಮೆಲ್ಲಮೆಲ್ಲನೆ ;
ಯುಕ್ತನೆನಿಸುವೆನಯ್ಯ ಮೆಲ್ಲಮೆಲ್ಲನೆ ;
ಸಾರಿ ಶರಣನೆನಿಸುವೆನಯ್ಯ ಮೆಲ್ಲಮೆಲ್ಲನೆ ;
ಎಡಹುಗುಳಿಗಳದಾಂಟಿ ಬರಬರ ಲಿಂಗೈಕ್ಯನೆನಿಸುವೆನಯ್ಯ ;
ಕೂಡಲಸಂಗಮದೇವ ನಿಮ್ಮಿಂದಧಿಕನೆನಿಸುವೆನಯ್ಯ.

"ವಿಚಾರವೆಂಬ ಹೂವಾಗಿತ್ತು, ಆಚಾರವೆಂಬ ಕಾಯಿಯಾಯಿತ್ತು,
ನಿಷ್ಪತ್ತಿ ಎಂಬ ಹಣ್ಣಾಯಿತ್ತು, ಅದು ತೊಟ್ಟು ಬಿಟ್ಟು
ಕಳಚಿ ಬೀಳುವಲ್ಲಿ ಕೂಡಲಸಂಗಮದೇವ
ತನಗೆ ಬೇಕೆಂದೆತ್ತಿಕೊಂಡ"

ಎಂಬ ಬಸವೇಶ್ವರರ ವಚನಗಳ ಅಭಿಪ್ರಾಯದಂತೆ ಮೆಲ್ಲಮೆಲ್ಲನೆ ಊರ್ಧ್ವಗಮನವೀವ ಸಾಧನೆಗಳನ್ನು ಮಾಡಿ–

" ಕೂಡಲಸಂಗಮದೇವ ನಿಮ್ಮಿಂದಧಿಕನೆನಿಸುವೆನಯ್ಯ "
ಕೂಡಲಸಂಗಮದೇವ ತನಗೆ ಬೇಕೆಂದೆತ್ತಿಕೊಂಡ "
ಎಂಬುವಂತಹ ಉನ್ನತ ಮಟ್ಟಕ್ಕೆ ಮುಟ್ಟುವನು.

ಕೃತಯುಗ, ತ್ರೇತಾಯುಗ, ದ್ವಾಪರಯುಗ, ಕಲಿಯುಗ ಎಂಬ ನಾಲ್ಕು ಯುಗಗಳು ಪುರಾಣ ಪ್ರಸಿದ್ಧವಿರುವವು. ಆ ನಾಲ್ಕು ಪದಗಳಿಗೆ ಯುಗ ಎಂದು ರೂಢವಾದ ಅರ್ಥ ವಿದ್ದರೂ ಅವನ್ನು ಸಾಧಕನು ಸಿದ್ಧಸ್ಥಿತಿಗೆ ಹೋಗುವ, ಮಾರ್ಗಮಧ್ಯದಲ್ಲಿರುವ ನಿಲ್ದಾ ಗಳೆಂದು ಹೇಳಬಹುದು.

' ತಸ್ಯೈವಾಹಂ ' ' ತವೈವಾಹಂ ' ' ತ್ವಮೇವಾಹಂ ಎಂಬುಕ್ತಿಯಂತೆ, ದ್ವೈತ ದಿಂದ ಆರಂಭವಾದ ಸಾಧಕನ ಉಪಾಸನೆಯು ಅದ್ವೈತದಲ್ಲಿ ಪರ್ಯವಸಾನವಾಗುವದು.

' ಗುರುವೇ ಶಿಷ್ಯನಾದ ತನ್ನ ವಿನೋದಕ್ಕೆ, ಶಿಷ್ಯವೇ ಗುರುವಾದ ತನ್ನ ವಿನೋದಕ್ಕೆ ' ಎಂಬುಕ್ತಿಯಂತೆ ಗುರು ಶಿಷ್ಯರಲ್ಲಿಯ ಭೇದಭಾವವು ಅಳಿದು ಹೋಗುವದು. ಶಿಷ್ಯ ಉನ್ನತವಾದ ನಿಲವಿಗೆ ಗುರುವೇ ವಂದಿಸುವನು. ಇದು ಈ ವಚನದ ವಿಶಿಷ್ಟಾರ್ಥ.

ತೇಜಃಪುಂಜವಾದ ಮುಖಮಂಡಲದಿಂದ ಕೂಡಿ ರಾರಾಜಿಸುವ ಭವ್ಯ ಆಕಾರ ತೇಜೋಮೂರ್ತಿಯಾದ ಶಿವಯೋಗಿ ಸಾರ್ವಭೌಮ ಅಲ್ಲಮಪ್ರಭುವು ಒಮ್ಮೆಲೇ ಬಂದು ಎದುರಿಗೆ ನಿಂತು ಶರಣೆನ್ನಲು ಗೊಗ್ಗಯ್ಯನು ನೀನಾರು ಎಂದು ಕೇಳಿದನು. ಆಗ ಪ್ರಭು ಗೊಗ್ಗಯ್ಯನೇ ಸತಿಸುತಾದಿಗಳ ಸಂಸಾರವನ್ನು ಬಿಟ್ಟು ಲೋಕೋದ್ಧಾರಕ್ಕಾಗಿಯೇ ದೇಶ ಸಂಚಾರವ ಮಾಡುವ ಶಿವಯೋಗಿಗಳು ನಾವು. ಶಿವಭಕ್ತರೇ ಭಕ್ತಿಯಿಂದ ಕರೆದರೆ ಅವ ಕರೆದಲ್ಲಿಗೆ ಹೋಗಿ ಲಿಂಗಾರ್ಚನೆ ಮಾಡಿ ಅವರಿಗೆ ಶುಭಮಸ್ತು, ಕಲ್ಯಾಣಮಸ್ತು ಎಂ ಆಶೀರ್ವದಿಸಿ ಸ್ವಸಂತೋಷದಿಂದ ಸಲ್ಲಿಸುವ ಕಾಣಿಕೆಯನ್ನು ಸ್ವೀಕರಿಸುವವರು ನಾವು ಇದ್ದು ಬದ್ಧರಲ್ಲ, ಸುಳಿದು ಸೂತಕಿಗಳಲ್ಲ, ನಡೆದು ನಿರ್ಗಮನರು, ನುಡಿದು ನಿಶ್ಶಬ್ದ ಮೌನಿಗಳು.

ಎಲ್ಲದರಲ್ಲೂ ಇದ್ದವರು, ಎಲ್ಲದರಲ್ಲೂ ಇಲ್ಲದವರು, ಎಲ್ಲದರಲ್ಲಿ ಇದ್ದೂ ಇಲ್ಲದವ ರು ಎಂದು ಜನರಲ್ಲಿ ಮೂರು ಬಗೆ.

ಹೊನ್ನು-ಹೆಣ್ಣು-ಮಣ್ಣುಗಳ ವ್ಯಾಮೋಹದಲ್ಲಿ ಸಿಲುಕಿ, ಹಗಲಿರುಳೂ ಅದರಲ್ಲಿ ಬಿದ್ದು ಒದ್ದಾಡಿ-

" ಇದ್ದಾಗ ಉಣ್ಣದವನೆದ್ದಾಗ ಉಣ್ಣುವನೇ ।
ಬಿದ್ದದೇಹವನು ಗುದ್ದಿನೊಳಿಡುವಾಗ ।
ಬುದ್ಧಿ ಬಂದಪುದೆ ಸರ್ವಜ್ಞ " ॥

ಎಂಬ ಕವಿಯ ಉಕ್ತಿಯಂತೆ, ಮಣ್ಣಿನ ಗುದ್ದಿನೊಳಗಿಟ್ಟರೂ ತಿಳಿಯದೇ ಬುದ್ಧಿಗೇಡಿಗಳಾಗಿ ಬಾಳುವವರೇ ಎಲ್ಲದರಲ್ಲೂ ಇದ್ದವರು.

ಕಾಂಚನ ಕಾಮಿನಿಗಳನ್ನು ತೊರೆದು ' ತರುತಲ ವಾಸಃ ಕರತಲ ಭಿಕ್ಷಃ ' ಎನ್ನುತ್ತ ಲೋಕಾಂತವ ತೊರೆದು ಏಕಾಂತದ ಅರಣ್ಯದಲ್ಲಿ ಇರುವವರೇ ಎಲ್ಲದರಲ್ಲೂ ಇಲ್ಲದವರು. ಬಡ ಭಕ್ತಜನರಿಗೆ ಬಡವರಾಗಿ, ಕಡುಧನಿಕಭಕ್ತರಿಗೆ ಧನಿಕರಾಗಿ, ಭಕ್ತರು ಸಲ್ಲಿಸುವ ಭಕ್ತಿ ಕಾಣಿಕೆಯನ್ನು ಸ್ವೀಕರಿಸಿ ಲೋಕೋದ್ಧಾರಕ್ಕಾಗಿ ಲೋಕ ಮಧ್ಯದಲ್ಲಿಯೇ

" ಮೌಲಿಸ್ಥ ಕುಂಭ ಪರಿಪಾಲನಧೀರ್ನಟೀವ "

ಎಂಬುಕ್ತಿಯಂತೆ ಸಂಚರಿಸುವ ಮಹಾನುಭಾವರೇ ಎಲ್ಲದರಲ್ಲಿ ಇದ್ದೂ ಇಲ್ಲದವರು.

ನಾನಾದರೋ ಎಲ್ಲದರಲ್ಲಿ ಇದ್ದೂ ಇಲ್ಲದವನು, ನನ್ನನ್ನು ಅಲ್ಲಯ್ಯ, ಅಲ್ಲಮ, ಅಲ್ಲಮಪ್ರಭು, ಅಲ್ಲಮರಾಯ, ಗುಹೇಶ್ವರಾಲ್ಲಮ, ನಿರಂಜನಪ್ರಭು ಮುಂತಾದ ಹೆಸರುಗಳಿಂದ ಕರೆಯುವರು.

ವಿವಿಧ ಬಿರುದುಗಳನ್ನು ಅಂದರೆ ಗೌರವಸೂಚಕ ಪದವಿಗಳನ್ನು ಪಡೆದ ನಾಮೇಲು ನೀಮೇಲು ಎನ್ನುವ ಎದೆಗಾರರೆಲ್ಲರೂ ಹಾಗೂ ದಿಗ್ದಿಗಂತದಲ್ಲಿ ಯಶೋದುಂದುಭಿಯನ್ನು ಮೊಳಗಿಸಿದ ಕೀರ್ತಿಶಾಲಿಗಳೂ ನನ್ನ ಮುಂದೆ ಬಂದು ಈ ಪ್ರಭುವರೇಣ್ಯನ ಮುಂದೆ ನಾವು ಏನೇನೂ ಅಲ್ಲ. ನಾವು ಹೆಮ್ಮೆ ಪಡುವದು ಯೋಗ್ಯವಲ್ಲ, ಒಳಿತಲ್ಲ, ಎಂದು ಹೇಳುವಂತೆ ಮಾಡುವದರಿಂದ ನನ್ನನ್ನು ಅಲ್ಲಯ್ಯನೆಂದೂ ಕರೆಯುವರು. ವನಪಾಲಕನೇ ಈ ಸುಂದರ ಮನೆಯನ್ನು ಕಟ್ಟಿಸಿ, ಸೊಗಸಾದ ತೋಟವನ್ನು ಮಾಡಿ, ಸಮೃದ್ಧ ಸಿರಿಸಂಪತ್ತಿನಿಂದ ಮೆರೆವ ನೀನಾರು ? ನಿನ್ನ ಹೆಸರೇನು ? ಎಂದು ಕೇಳಲು ವನಪಾಲಕನು ಪ್ರಭುವೇ ನನ್ನ ಹೆಸರು ಗೊಗ್ಗಯ್ಯ, ಈ ಮೂರಂತಸ್ತಿನ ಮನೆ ನನ್ನದು. ಮನೆಗೆ ಒಪ್ಪುವಂತಹ ಮಡದಿ, ಮನೆತನದ ಘನತೆ ಗೌರವಗಳನ್ನು ಎತ್ತರಿಸುವಂತಹ ಸತ್ಪುತ್ರರು, ಮುದ್ದುಮುದ್ದಾದ ಮೊಮ್ಮಕ್ಕಳು, ಮರಿಮಕ್ಕಳು, ಸಾವಿರಾರು ಚೀಲ ಜೋಳ ಬೆಳೆವ ಹುಲುಸಾದ ಹೊಲಗಳು, ಕೊಬ್ಬಿ ಬೆಳೆದ ಕಬ್ಬಿನತೋಟ, ಬಾಳೆಯಬನ, ಮಾವಿನತೋಪು, ಸುಮಧುರ ಗೊಂಚಲುಗಳನ್ನು ಬಿಟ್ಟ ದ್ರಾಕ್ಷೆಯ ತೋಟ ಈ ಎಲ್ಲ ಐಹಿಕ ಸುಖಸಂಪತ್ತಿನಲ್ಲಿ ಮುಳುಗಿ ಏಳುತಲಿರುವೆನು ಎಂದು ಹೇಳಿದ ಗೊಗ್ಗಯ್ಯನ ಮಾತು ಕೇಳಿ ಪ್ರಭುವಿಗೆ ಐಹಿಕ ಭೋಗಭಾಗ್ಯಗಳ ಸಮೃದ್ಧಿಯನ್ನು ಕೇಳಿ ಸಂತಸವೂ, ಎಳ್ಳಷ್ಟೂ ಪರಮಾರ್ಥದತ್ತ ಪ್ರವೃತ್ತಿ ಇಲ್ಲದಿರುವದನ್ನು ಕಂಡು ವಿಷಾದವೂ ಆಯಿತು. ಮಾಡುವದನ್ನು ಮಾಡದೇ ಮಾಡದುದನ್ನೇ ಮಾಡುತ್ತ, ಸತಿ ಸುತಾದಿಗಳ ಮೋಹದ ಕಗ್ಗೆಸರಿನಲ್ಲಿ ಸಿಲ್ಕಿದ ಗೊಗ್ಗಯ್ಯನನ್ನು ಕಂಡು ಪ್ರಭುವು ಮಮ್ಮಲ ಮರುಗಿದನು.

ಗೊಗ್ಗಯ್ಯನೇ-ಹೇಮ-ಭೂಮಿ ಕಾಮಿನಿಗಳ ವ್ಯಾಮೋಹದಲ್ಲಿ ಸಿಲುಕಿ ಗುರುಲಿಂಗ ಜಂಗಮರನ್ನು ಮರೆಯಬೇಡ, ಗುರುಲಿಂಗ ಜಂಗಮಾರ್ಚನೆ ಮಾಡಿ ಅವರಿಂದ ಬರುವ ಒಕ್ಕು ಮಿಕ್ಕ ಪ್ರಸಾದವ ಸ್ವೀಕರಿಸಿ ಜನ್ಮವನ್ನು ಪಾವನ ಮಾಡಿಕೊಳ್ಳಬೇಕು. ಅಜ್ಞಾನದಿಂದ ಅಂದರೆ ಮರವೆಯಿಂದ ಮಾನವನು ಪರಿಭವದ ತಿರುಗಣಿಯ ಮಡುವಿನಲ್ಲಿ ತಿರುಗಿ ತಿರುಗಿ ಕೊರಗುವವನು; ಅರಿವಿನ ಜನುಮ ತಾಳಿದ ನರನು ಮರವೆಗೊಳಗಾಗದೇ ತನ್ನಿರವ ತಾನರಿತು ಧನ್ಯನಾಗಬೇಕು.

" ಭೂಮಿ ನಿನ್ನದುಅಲ್ಲ ಹೇಮ ನಿನ್ನದುಅಲ್ಲ
ಕಾಮಿನಿ ನಿನ್ನದು ಅಲ್ಲ ನಿನ್ನೊಡವೆ ಎಂಬುದು ಜ್ಞಾನರತ್ನ
ಅಂತಪ್ಪ ಜ್ಞಾನರತ್ನವನಲಂಕರಿಸಿದೆಯಾದೊಡೆ
ಗುಹೇಶ್ವರ ಲಿಂಗದಲ್ಲಿ ನಿನ್ನಿಂದ ಸಿರಿವಂತರಿಲ್ಲ
ಕಾಣಾ ಎಲೆ ಮನವೆ "

ನಿನ್ನ ಬಳಿಯಲ್ಲಿರುವ ಮುತ್ತು ರತ್ನಗಳ ಬೆಲೆಗಿಂತಲೂ ಕೋಟಿಕೋಟಿ ಪಾಲು ಹೆಚ್ಚು ಬೆಲೆಬಾಳುವ ಒಂದು ಅಮೂಲ್ಯ ರತ್ನವಿದೆ, ಅದುವೇ ಜ್ಞಾನರತ್ನ. ಇದನ್ನು ಕಳ್ಳರು ಕದಿಯರು, ಇತರರು ಹೊಟ್ಟೆಕಿಚ್ಚು ಮಾಡರು. ಅಣ್ಣತಮ್ಮಂದಿರು ನಮ್ಮ ಪಾಲು ಕೇಳರು. ಈ ಜ್ಞಾನರತ್ನವುಳ್ಳವನೇ ನಿಜವಾದ ಶ್ರೀಮಂತನು. ಈ ಸಿರಿತನದ ಮುಂದೆ ಉಳಿದ ಸಿರಿತನ ದೊರೆತನಗಳು ಭಾಸ್ಕರನ ಮುಂದೆ ಬೆಂಕೀ ಹುಳವಿದ್ದಂತೆ, ಕ್ಷೀರಸಾಗರದ ಮುಂದೆ ಕ್ಷಾರನೀರಿದ್ದಂತೆ. ಕೇವಲ ಉದರಂಭರಣಕ್ಕಾಗಿ, ಸತಿಸುತಾದಿಗಳ ಸಂರಕ್ಷಣೆಗಾಗಿ ಕೆಲಸವನ್ನು ಮಾಡಿದರೆ ಅದು ಉದ್ಯೋಗವೆಂದು ಹೇಳಲ್ಪಡುವದು. ಅದೇ ಕೆಲಸವನ್ನು ಶಿವಾರ್ಪಣ ಬುದ್ಧಿಯಿಂದ ಮಾಡಿದರೆ ಅದು ಕಾಯಕ ಎಂದು ಹೇಳಲ್ಪಡುವದು.
" ಕಾಯೇನಧರ್ಮೋನ್ನತಿಃ ಕ್ರಿಯತೇ ಇತಿ ಕಾಯಕಃ " ಎಂದು ಕಾಯಕ ಶಬ್ದದ ಅರ್ಥವಿರುವದು,

ಅಹಂಭಾವನೆಯಿಂದ ಕರ್ಮಮಾಡದೇ ನಿರಹಂಭಾವನೆಯಿಂದ ಅಂದರೆ ಕರ್ತಾಕಾರಯಿತಾ ಕರಣಂ ಶಿವಏವ" ಅಂದರೆ ಮಾಡುವವನೂ, ಮಾಡಿಸುವಾತನೂ, ಮಾಡುವವನೂ ಶಿವನೇ ಎಂಬ ಭಾವನೆಯಿಂದ ಕರ್ಮಮಾಡಿದರೆ ಬಂಧವಿಮೋಚನವಾಗುವದು. ಒಣ ಕೈಯಿಂದ ಕಣಕವನ್ನುಮುಟ್ಟಿದರೆ ಹೇಗೆ ಕಣಕದಜಿಗಿಯು ಕೈಗೆ ಹತ್ತುವದೋ, ಹಾಗೆ ಎಣ್ಣೆಯನ್ನುಹಚ್ಚಿಕೊಂಡ ಕೈಯಿಂದ ಕಣಕವನ್ನ ಮುಟ್ಟಿದರೆ ಅದರ ಜಿಗಿಯುಕೈಗೆಹತ್ತುವದಿಲ್ಲ ಹಾಗೆಯೇ ಶಿವಾರ್ಪಣ ಬುದ್ಧಿಯಿಂದ ಮಾಡಿದಕರ್ಮವು ಬಂಧಕವಾಗದೇ ಬಂಧವಿಮೋಚಕವಾಗುವದು. ಆ ಕರ್ಮವು ಕರ್ಮವೆನಿಸದೇ ಕಾಯಕವೆನಿಸುವದು. ವ್ಯಾಸಕೃತ ಬ್ರಹ್ಮಸೂತ್ರ, ಪತಂಜಲಿಕೃತ ಯೋಗಸೂತ್ರ, ಪಾಣಿನಿಕೃತ ವ್ಯಾಕರಣಸೂತ್ರ, ನಾರದಕೃತ ಭಕ್ತಿಸೂತ್ರಗಳುಹೇಗೆ ಬಹ್ವರ್ಥದಿಂದ ತುಂಬಿಕೊಂಡಿರುವವೋ ಹಾಗೆಯೇ ಶಿವಶರಣರು ವಚನಸಾಹಿತ್ಯಕ್ಕಿತ್ತ ಕಾಯಕ ಎಂಬಶಬ್ದದಲ್ಲಿ ವಿಶಾಲಾರ್ಥವು ತುಂಬಿಕೊಂಡಿರುವದು. ಉದರನಿಮಿತ್ತಕೈಕೊಂಡ ಉದ್ಯೋಗವು ಕಾಯಕವಾಗಲಾರದು. ನಾವು ಕೈಕೊಂಡ ಉದ್ಯೋಗದಲ್ಲಿ ಹೆರವರ ಹಿತಚಿಂತನೆಯು ತುಂಬಿತುಳುಕುತ್ತಿರಬೇಕು. ತಾನುಕೈಕೊಂಡ ಉದ್ಯೋಗದ ಫಲವು ತನಗೆ, ತನ್ನವರಿಗಷ್ಟೇ ಸೀಮಿತವಾಗಿರದೇ ಆ ಫಲವು ಸಮಾಜಕ್ಕೆ ತಟ್ಟುತ್ತಿರಬೇಕು. ಆಗ ಅದು ಕಾಯಕವೆನಿಸುವದು.

" ಸೋಹಂ ಎಂದೊಡೆ ಅಂತರಂಗದಗರ್ವ, ಶಿವೋಹಂ ಎಂದೊಡೆ ಬಹಿರಂಗದ ಅಹಂಕಾರ. ಈ ಉಭಯವನಳಿದು ದಾಸೋಹಂಭಾವದಲ್ಲಿರಬೇಕು. ಮಾಡುವ ಸತ್ಕರ್ಮ ತಿಲಾಂಶವಾದರೂ ಅಹಂಕಾರವಿರಕೂಡದು, ನಂಜೇರಿಸಿದ ಸವಿಯೂಟವು

ಪೋರಕವಾದರೂ ಪ್ರಾಣಾಪಹಾರಕವಿರುವಂತೆ, ಅಹಂಕಾರಪೂರ್ವಕ ಮಾಡಿದ ಕರ್ಮವು ಬಂಧಃಕಾರಕವಿರುವದು, ಅಂತೆಯೇ ಶರಣರು ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನಡಂಗುರ ಎಂದು ಹೇಳಿರುವರು.

ಉಪಾಸಕನಾದ ಶಿವಭಕ್ತನು ನಿಚ್ಚನಿಚ್ಚ ಉಪಾಸ್ಯಮೂರ್ತಿಗಳಾದ ಗುರುಲಿಂಗ ಜಂಗಮರನ್ನು ಆರಾಧನೆಮಾಡಿದಲ್ಲಿ ಅವನು ನಿಜಕ್ಕೂ ಭಕ್ತನೆನಿಸುವನು, ಮಾಡದಿದ್ದಲ್ಲಿ ಆತ ಭವಿ.

ಸೃಷ್ಟಿಕರ್ತನಾದ ಬ್ರಹ್ಮನಾಗಲಿ, ಸ್ಥಿತಿಕರ್ತನಾದ ವಿಷ್ಣುವಾಗಲಿ, ಅನುಗ್ರಹಕರ್ತ ಸದಾಶಿವನಾಗಲಿ ಮರ್ಮವರಿಯದೇ ಕೇವಲ ಕರ್ಮಮಾಡಿದರೆ ಅವರಿಗೂ ಆತ್ಯಂತಿಕ ಶಾಂತಿಯು ದೊರಕದು,

ಬಾಹ್ಯ ಪ್ರಪಂಚ ಪ್ರಜ್ಞಾಹೀನನಾಗಿ ಲಿಂಗದಲ್ಲಿ ಮನೋಲಯವನ್ನು ಸಾಧಿಸಬೇಕು. ಅಂತರ್ಲಿಂಗಾನುಸಂಧಾನವನ್ನು ಅರಿತು ಬಾಹ್ಯ ಪ್ರಪಂಚವನ್ನು ಮರೆತು ಕರದೊಳಗಿರುವ ಪರತರ ಶಿವಲಿಂಗದ ಅಖಂಡ ತೇಜದಲ್ಲಿ ಬೆರೆತಾಗಲೇ ಪರಮಶಾಂತಿಯು. ಹೀಗೆ ಪ್ರಭುವು ಕಾಯಕ, ದಾಸೋಹ, ಮನೋಲಯ ಇವುಗಳ ಬಗಗೆ ತಿಳಿಸಿದರೂ ಇಳಿಯನ್ನು ಹರಗಿ ಕಳೆಯನ್ನು ಕಳೆವ ಕೆಲಸದಲ್ಲಿಯೇ ತೊಡಗಿದ ಗೊಗ್ಗಯ್ಯನಿಗೆ ಏನೂ ತಿಳಿಯಲಿಲ್ಲ; ಮನದಲ್ಲಿ ಉಳಿಯಲಿಲ್ಲ. ಆಗ ಗೊಗ್ಗಯ್ಯನು, ಪ್ರಭುವೇ, ಶಿವಭಕ್ತಿ ಪಥವು ದ್ರಾಕ್ಷಾಪಾಕ, ಮೈಸೂರ ಪಾಕದಂತೆ ಸೇವಿಸಲು ಸುಲಭವಾಗಿರದೇ ಕಲ್ಲಿನಕಡಲೆಯನ್ನು ಮೆದ್ದಂತೆ ಕಠಿಣವಿರುವದು ಎಂದು ಉದ್ಗಾರ ತೆಗೆದನು. ಶಿಕ್ಷಣ ಶಾಸ್ತ್ರದಲ್ಲಿ ಬಲ್ಲಿದನಾದ ಶಿಕ್ಷಕನು ಮಂದ ಮತಿಯ ವಿದ್ಯಾರ್ಥಿಗೆ ಬಗೆಬಗೆಯ ದೃಷ್ಟಾಂತಗಳನ್ನು ಕೊಟ್ಟು ಗಹನ ವಿಷಯವನ್ನು ತಿಳಿಸಲು ಪ್ರಯತ್ನಿಸುವಂತೆ, ಜಾಣನಾದ ವೈದ್ಯನು ಉಲ್ಬಣರೋಗದಿಂದ ನರಳುವ ರೋಗಿಗೆ ವಿವಿಧ ಔಷಧೋಪಚಾರಗಳಿಂದ ಗುಣಪಡಿಸಲು ಚಡಪಡಿಸುವಂತೆ ಪತಿತರ ಉದ್ಧಾರಕ್ಕಾಗಿಯೇ ಅವತರಿಸಿದ ಪ್ರಭು ಗೊಗ್ಗಯ್ಯನ ಉದ್ಧಾರಕ್ಕಾಗಿ ಸುದೀರ್ಘ ವಿಚಾರಮಾಡಿದನು.

ತತ್ತ್ವಶಾಸ್ತ್ರ, ಗಣಿತಶಾಸ್ತ್ರ, ಅರ್ಥಶಾಸ್ತ್ರ, ವೈದ್ಯಶಾಸ್ತ್ರ ಹೀಗೆ ವಿವಿಧ ವಿಭಾಗಗಳಿದ್ದು ಅವುಗಳಲ್ಲಿ ಯಾವ ವಿದ್ಯಾರ್ಥಿಗೆ ಯಾವ ವಿಷಯ ಸೇರುವದೋ, ಯಾರಿಗೆ ಯಾವುದರಲ್ಲಿ ಆಸಕ್ತಿಯಿದೆಯೋ ಆ ವಿಷಯವನ್ನು ಕೊಟ್ಟರೆ ಅವನು ಅದರಲ್ಲಿ ಪ್ರಾವೀಣ್ಯತೆಯನ್ನು ಸಾಧಿಸುವನು. ಅವನಿಗೆ ಬೇಕಾದುದು ಕಲಾ ವಿಷಯ. ನಾವು ಒತ್ತಾಯದಿಂದ ಮೆಡಿಕಲ್ ವಿಭಾಗಕ್ಕೆ ಹಾಕಿದರೆ ಅವನ ಪ್ರಗತಿ ಸಾಧಿಸಲಾರನು. ಆವರವರ ಮನದ ಒಲವನ್ನು ತಿಳಿದುಕೊಂಡು ಆಯಾಯ ವಿಷಯಕ್ಕೆ ಕಳಿಸುವದೇ ಬುದ್ಧಿವಂತಿಕೆಯ ಲಕ್ಷಣ.

ಪ್ರಭುವಿನ ಸಮ್ಮುಖದಲ್ಲಿದ್ದ ಗೊಗ್ಗಯ್ಯನಾದರೋ ಗುರುಲಿಂಗಜಂಗಮರ ನೋಟ, ಮಾಟ, ಕೂಟಗಳನ್ನು ಮರೆತು ಕೇವಲ ತೋಟಗಾರಿಕೆಯ ಕೆಲಸದಲ್ಲಿಯೇ ಮಗ್ನನಾದ ವನು. ತೋಟದ ದೃಷ್ಟಾಂತವನ್ನೇ ಕೊಟ್ಟು ಪಾರಮಾರ್ಥಿಕ ವಿಚಾರವನ್ನು ತಿಳಿಸಬೇಕೆಂದು ವಿಚಾರಿಸಿ ಪ್ರಭುವು, ಗೊಗ್ಗಯ್ಯನೇ, ಕರಿಕೆ ಕಸಕಡ್ಡಿಗಳಿಂದ ಹೊಲಸಾದ ನಿನ್ನ

ಹೊಲವನ್ನು ಗುದ್ದಲಿಯಿಂದ ನಟ್ಟುಕಡಿದು, ಕಂಟೆಕುಂಟೆಗಳನ್ನು ಹೊಡೆದು, ಹಸನವಾಗಿ ದೊಡ್ಡದೊಡ್ಡ ಹೆಂಟೆಗಳನ್ನು ಪುಡಿಮಾಡಿ, ಮಡಿಕಟ್ಟಿ ಸಸಿಗಳನ್ನು ಹಚ್ಚಿ ನೀರುಣಿಸಿ, ದನಕರುಗಳು ತಿನ್ನಬಾರದೆಂದು ಬೇಲಿಹಾಕಿ ಆ ಸಸಿಯನ್ನು ಹೇಗೆ ದೊಡ್ಡದನ್ನಾಗಿ ಮಾಡು ವಿಯೋ ಹಾಗೆಯೇ ನಾನಾದರೂ ಒಂದು ತೋಟವನ್ನು ಮಾಡಿ ಸಸಿಯನ್ನು ಬೆಳೆಯಿಸುತ್ತಿ ರುವೆ. ಸ್ಥೂಲ, ಸೂಕ್ಷ್ಮ, ಕಾರಣಗಳೆಂಬ ತನುತ್ರಯಗಳೇ ಒಂದು ತೋಟ. ಪರಿಶುದ್ಧ ವಾದ ಮನಸ್ಸೇ ಒಂದು ಗುದ್ದಲಿ. ಜನ್ಮಜನ್ಮಾಂತರಗಳಿಂದಲೂ ಸೂಕ್ಷ್ಮಶರೀರದಲ್ಲಿ ಆಳ ವಾಗಿ ಮನೆಮಾಡಿರುವ ದುಷ್ಟವಾಸನೆಗಳು ಅಂದರೆ ಜಾತ್ಯಾದಿ ಷಡ್ಭ್ರಮೆಗಳೇ ಬೇರು ಗಳು. ಇವುಗಳನ್ನು ಶ್ರವಣ, ಮನನ, ನಿದಿಧ್ಯಾಸಗಳಿಂದ ಕಿತ್ತೊಗೆದು, ಸತಿ, ಸುತ, ಧನ ಕನಕಾದಿಗಳ ಮೋಹವೆಂಬ ಹೆಂಟೆಗಳನ್ನು ಒಡೆದೊಡೆದು ಪುಡಿಮಾಡಿ, ಮಡಿಗಳನ್ನು ಕಟ್ಟ ಕುವೆನು. ಶ್ರೀಗುರುವು ತನುತ್ರಯವೆಂಬ ತೋಟದಲ್ಲಿ ಲಿಂಗತ್ರಯವೆಂಬ ಬೀಜಗಳನ್ನು ಬಿತ್ತಿರುವನು. ಅಖಂಡ ಮಂಡಲವೆಂಬ ಬಾವಿ, ಅಂದರೆ-

"ಪಿಂಡಾಂಡಸ್ಥಂ ಯಥಾಕಾಶಂ ನಭಿನ್ನಂ ತದ್ವದಾತ್ಮನಃ
ಅಭಿನ್ನಃ ಪರಮಾತ್ಮೇತಿ ಮಹಾಕಾಶಸ್ಥಳಂವಿದುಃ"

ಎಂದು ಸಿದ್ಧಾಂತ ಶಿಖಾಮಣಿಯಲ್ಲಿ ಹೇಳಿದ ಮಹಾಕಾಶವೇ ಒಂದು ಬಾವಿ. ತನುವು ಳ್ಳರಿಗೆ ಮನವೆಂಬ ಕಟ್ಟೆಯ ಕಟ್ಟಿ, ಬಲಿದು ಷಡ್ವಿಧಭಕ್ತಿಯೆಂಬ ಸೋಪಾನದಿಂದ ಪರ ಮಾನಂದವೆಂಬ ಜಲವತುಂಬಿ ಕೆರೆಯ ಕಟ್ಟಬಲ್ಲವರಾರನೂ ಕಾಣೆ. ನಾನು ಕಟ್ಟಿದ ಪ್ರ ಸ್ಥಿರವಾಯಿತ್ತು ಗುಹೇಶ್ವರ ನಿಮ್ಮಾಣೆ. ಆ ಅಖಂಡಮಂಡಲವೆಂಬ ಬಾವಿಯಲ್ಲಿರುವ ನೀರೆಂದರೆ ಪರಮಾನಂದವೇ. ಮೇಲಿನಿಂದ ಕೆಳಗೂ, ಕೆಳಗಿನಿಂದ ಮೇಲಕ್ಕೂ ಒಂದೇಸಮ ಹಗಲಿರುಳು ಸುತ್ತುತ್ತಿರುವ ಪ್ರಾಣವಾಯುವೇ ಒಂದು ಗಾಲಿ. ಸುಷುಮ್ನಾನಾಡಿಯು ಆ ಗಾಲಿಗೆ ಹಾಕಿರುವ ಹಗ್ಗ. ಈ ಹಗ್ಗದಿಂದ ಚಿಜ್ಜಲವನ್ನು ತಂದು ಸಸಿಗೆ ಎರೆಯುತ್ತಿರು ವೆನು. ಈ ಜ್ಞಾನಾಮೃತ ಧಾರೆಯಿಂದ ಅಂಗವೆಲ್ಲ ಲಿಂಗವಾಗುವದು. ಪಂಚೇಂದ್ರಿಯ ಗಳೆಂಬ ದನಕರುಗಳು ಈ ಸಸಿಯನ್ನು ಕಡಿಯಬಾರದೆಂದು ಯಾವಾಗಲೂ ಸಮತೆ ಸೈರಣೆ ಎಂಬ ಬೇಲಿಯನ್ನು ಹಾಕಿ ಸಸಿಯನ್ನು ಅತೀವ ಜಾಗರೂಕತೆಯಿಂದ ಕಾಯುತ್ತಿರುವೆನು. ಆ ಸಸಿಯು ಸುಳಿದೆಗೆದು ಬೆಳೆದು ಹೆಮ್ಮರವಾಗಲು ಪರತತ್ತ್ವವೆಂಬ ಬೆಳೆಯು ಬರುವದು. ಅದನ್ನುಂಡು ಆನಂದದಲ್ಲಿರುವೆನು.

ನಿರಂಜನ ಮೂರ್ತಿಯಾದ ಅಲ್ಲಮಪ್ರಭುವು ತೋಟಿಗನಾದ ಗೊಗ್ಗಯ್ಯನಿಗೆ ಕಾಯಕ, ದಾಸೋಹ, ಲಿಂಗತತ್ತ್ವ ಮುಂತಾದವುಗಳ ಬಗ್ಗೆ ಎಷ್ಟು ತಿಳಿಸಿಹೇಳಿದರೂ ಅದು ಅವನಿಗೆ ತಿಳಿಯಲಿಲ್ಲ, ಬ್ರಹ್ಮಾಂಡದಲ್ಲಿ ಭೌತಿಕ ತೋಟವನ್ನು ಮಾಡಿದ ಗೊಗ್ಗಯ್ಯ ನಿಗೆ ಪಿಂಡಾಂಡವನ್ನೇ ಒಂದು ಪಾರಮಾರ್ಥಿಕ ತೋಟಕ್ಕೆ ಹೋಲಿಸಿ ರೂಪಕವನ್ನು ಮಾಡಿ ಹೇಳಿದರೂ ತಿಳಿಯಲಿಲ್ಲ; ಅವನ ಮನದಲ್ಲಿ ಇಳಿಯಲಿಲ್ಲ. ಹೇಳಿದ್ದೆಲ್ಲವೂ, ಕಿವುಡನ ಮುಂದೆ ಗಾನಮಾಡಿದಂತೆ, ಕುರುಡನ ಕೈಯೊಳಗೆ ಕನ್ನಡಿ ಕೊಟ್ಟಂತೆ, ರೋಗಿಯ ಮುಂದೆ ಪಂಚಭಕ್ಷ್ಯಾನ್ನವನ್ನಿಟ್ಟಂತೆ, ಹಲ್ಲಿಲ್ಲದವನ ಮುಂದೆ ಮೆಲ್ಲಲು ಕಬ್ಬನ್ನಿಟ್ಟ

ನಿರರ್ಥಕವಾಯಿತು. ಆದರೂ ಪ್ರಭುವು ಹಿಂದೆಗೆಯಲಿಲ್ಲ. ಭಕ್ತೋದ್ಧಾರಕ್ಕಾಗಿಯೇ ಬದ್ಧ ಕಂಕಣನಾದ ಪ್ರಭುವು ಬದ್ಧನಾದ ಈ ಗೊಗ್ಗಯ್ಯನಿಗೆ ಶಬ್ದಪ್ರಮಾಣದಿಂದ, ಪರಾತ್ಪರ ಪರಶಿವನ ಇರವನ್ನು, ಗುರುಲಿಂಗ ಜಂಗಮರ ಪರಿಯನ್ನು, ಲಿಂಗದ ಕೊನೆಗೆ ಬೆರೆಯುವ ಗುರಿಯನ್ನು ಹೇಳುವದು ಬೇಡ. ಅಷ್ಟವಿಧ ಪ್ರಮಾಣಗಳಲ್ಲಿ ಶ್ರೇಷ್ಠಪ್ರಮಾಣವೆನಿಸಿದ ಪ್ರತ್ಯಕ್ಷ ಪ್ರಮಾಣದಿಂದಲೇ ಇವನ ಮನದಲ್ಲಿರುವ ಸಂಶಯಭಾವನೆ, ವಿಪರೀತಭಾವನೆ ಮೊದಲಾದವುಗಳನ್ನು ಕಳೆದು ಪರಿಪೂರ್ಣ ಜ್ಞಾನೋದಯವಾಗುವಂತೆಮಾಡಿ ಭಕ್ತಿಪಥಕ್ಕೆ ಹಚ್ಚಬೇಕು ಎಂದುನಿಶ್ಚಯಿಸಿ ನೆಲವನ್ನು ಬಗಿಬಗಿದು ಹೆಂಟೆಗಳನ್ನು ತೆಗೆತೆಗೆದು ಒಗೆಯುತ್ತಿರುವ ಗೊಗ್ಗಯ್ಯನ ಬಳಿಗೆ ಹೋಗಿ ಗೊಗ್ಗಯ್ಯನೇ ನೀನು ಅಗಿದಗಿದು ಒಗೆಯುತ್ತಿರುವ ಹೆಂಟೆಗಳ ಕೆಳಗೊಂದು ಥಳಥಳ ಹೊಳೆವ ಹೊಂಗಳಸ ಕಾಣುತ್ತಿದೆ. ನೋಡಬಾರದೇ ಎಂದು ಹೇಳಿ ಈರ್ವರೂ ಕೂಡಿಯೇ ಹೆಂಟೆಗಳನ್ನು ತೆಗೆಯಲು ಒಳಗೊಂದು ಭವ್ಯವಾದ ದಿವ್ಯದೇವಾಲಯವು ದೃಗ್ಗೋಚರವಾಯಿತು. ಈರ್ವರೂ ಅಚ್ಚರಿಯಿಂದ ನೋಡಿದರು. ಎವೆಯಿಕ್ಕದೆ ಲಿಂಗದಲ್ಲಿಯೇ ದೃಷ್ಟಿಯಿಟ್ಟು ಧ್ಯಾನಮಗ್ನರಾಗಿ, ಮೌನವಾಗಿ ಕುಳಿತ ಮಹಾಜ್ಞಾನಿಯಾದ ಅನಿಮಿಷ ಎಂಬ ಶಿವಯೋಗಿ ಸಾರ್ವಭೌಮರನ್ನು ಕಂಡು ಕೈಮುಗಿದರು. ಗೊಗ್ಗಯ್ಯನೇ, ಪರತರಾನಂದದಲ್ಲಿ ಪರವಶನಾಗಿ ಕುಳಿತ ಶಿವಯೋಗಿವರೇಣ್ಯರನ್ನು ನೋಡು ನೋಡಿ ಧನ್ಯನಾಗು, ಕೃತಾರ್ಥನಾಗು. ಇಂತಹ ಶಿವಯೋಗ ಸಿದ್ಧಿಯನ್ನು ಪಡೆಯುವದೇ ನರಜನ್ಮದ ಚರಮಗುರಿಯು. ಈ ಶಿವಯೋಗಸಿದ್ಧಿಯನ್ನು ಪಡೆಯದೇ ಏನು ಮಾಡಿದರೂ ಅದೆಲ್ಲವೂ ನಿರರ್ಥಕ. ಶಿವಯೋಗಸಿದ್ಧಿಯನ್ನು ಬಿಟ್ಟು ಅಣಿಮಾದಿ ಅಷ್ಟಸಿದ್ಧಿಗಳನ್ನು ಪಡೆದರೂ ಅದು ತನಿರಸವುಳ್ಳ ಇನಿಗೋಲನ್ನು ತಿನ್ನುವದು ಬಿಟ್ಟು ನೀರಸವಾದ ಬಿದಿರನ್ನು ಮೆಲಿದಂತೆ. ಗೊಗ್ಗಯ್ಯನೇ ಗವಿಯಲ್ಲಿ ಧ್ಯಾನಮಗ್ನನಾಗಿ ಕುಳಿತ ಅನಿಮಿಷ ಶಿವಯೋಗಿಯನ್ನು ಕಂಡ ನಾವೇ ಧನ್ಯರು, ಪುಣ್ಯವಂತರು, ಭಾಗ್ಯಶಾಲಿಗಳು,

« ಪುಣ್ಯವುಳ್ಳ ಕಾಲಕ್ಕೆ ಪಾಷಾಣ ಪರುಷವಪ್ಪುದು ತಪ್ಪದು ನೋಡಯ್ಯ; ಮಣ್ಣು ಹೊನ್ನಪ್ಪುದು, ಮುನ್ನ ಮುನ್ನವೆ ಅಚ್ಚೊತ್ತಿದ ಭಾಗ್ಯವೆನ್ನ ಕಣ್ಣಮುಂದೆ ಕಾಣಬಂದಿತ್ತು ನೋಡಾ ! ಮಣ್ಣ ಮರೆಯ ದೇಗುಲದೊಳಗೊಂದು ಮಾಣಿಕ್ಯವ ಕಂಡಬಳಿಕ ಇನ್ನು ಮುನ್ನಿನಂತಪ್ಪುದೇ ಗುಹೇಶ್ವರ ?

« ಅರಸುವ ಬಳ್ಳಿ ಕಾಲಸುತ್ತಿತೆಂಬಂತೆ, ಬಯಸುವಬಯಕೆ ಕೈಸಾರುವಂತೆ ಬಡವ ನಿಧಾನವನೆಡಹಿ ಕಂಡಂತೆ, ನಾನರಸುತ್ತಲರಸುತ್ತ ಬಂದು ಭಾವಕ್ಕಗಮ್ಯನಕಂಡೆನಯ್ಯ ! ಎನ್ನ ಅರಿವಿನ ಹರಿವ ಕಂಡೆನಯ್ಯ ! ಎನ್ನ ಒಳಹೊರಗೆ ಸರ್ವಾಂಗ ಪರಮ ಪ್ರಕಾಶದೊಳು ಬೆಳಗುವ ಜ್ಯೋತಿಯ ಕಂಡೆ ನೋಡಾ ! ಕುರುಹಳಿದ ಕರಸ್ಥಲದ ನಿಬ್ಬೆರಗಿನ ನೋಟದ ಎನ್ನ ಪರಮ ಗುರುವ ಕಂಡು ಬದುಕಿದೆನು ಕಾಣಾ ಗುಹೇಶ್ವರ » ಎಂದು ಕೊಂಡಾಡಿದನು.

ನಿರಂಜನ ಮೂರ್ತಿಯಾದ ಅಲ್ಲಮಪ್ರಭುವು ಪರಶಿವನವತಾರಿಯೆನಿಸಿದರೂ ಅದನ್ನು ತೋರಿಸದೇ–

" ದೇವತ್ವೇ ದೇವವಚ್ಚೇಷ್ಟಾ ಮಾನುಷತ್ವೇತು ಮಾನುಷೀ ".॥
ಎಂಬುಕ್ತಿಯಂತೆ ನಟಿಸಿ ಪ್ರತಿಯೊಬ್ಬರೂ ಶ್ರೋತ್ರೀಯಃ ಬ್ರಹ್ಮನಿಷ್ಠನಾದ ಗುರುವಿನ ಶಿಷ್ಯರಾಗಿ ಸದುಪದೇಶವನ್ನು ಪಡೆದು ಮುಕ್ತಿಯನ್ನು ಪಡೆಯಬೇಕು ಎಂಬ ಆದರ್ಶಪಾಠವನ್ನು ಶಿವಭಕ್ತರಿಗೆ ತೀಡಿತೋರಿಸುವದಕ್ಕೋಸುಗ ಶಿವಯೋಗೀಶ್ವರನ ಸನ್ನಿಧಿಗೆ ಹೋದನು. ಆ ಕ್ಷಣವೇ ಅನಿಮಿಷ ಶಿವಯೋಗಿಯು ಕೈಯೊಳಗಿದ್ದ ಲಿಂಗವೂ ಸೂಜಿಯು ಸೂಜಿಗಲ್ಲಿಗೆ ಥಟ್ಟನೆ ಹತ್ತಿಕೊಳ್ಳುವಂತೆ ಸನಿಹದಲ್ಲಿಯೇ ನಿಂತಿರುವ ಸಚ್ಚಿದಾನಂದ ಸ್ವರೂಪನಾದ ಪ್ರಭುವಿನ ಹಸ್ತಕಮಲವನ್ನು ಆಶ್ರಯಿಸಿತು. ಮತ್ತು ಅನಿಮಿಷ ಯೋಗಿಯ ಲಿಂಗವೂ ಅಂದರೆ ಶುದ್ಧ ಜೀವಕಳೆಯೂ ಅಲ್ಲಮನ ಅಂಗದಲ್ಲಿ ಪ್ರವೇಶಿಸಿತು. ಎವೆಯಿಕ್ಕದೇ ಧ್ಯಾನಮಗ್ನನಾಗಿ ಶಿವಯೋಗನಿದ್ರೆಯಲ್ಲಿ ತಲ್ಲೀನನಾದ ಅನಿಮಿಷ ಯೋಗಿಯನ್ನು, ಹಾಗು ಆ ಶಿವಯೋಗಿಯ ಅಂಗೈಯೊಳಗಿದ್ದಾಲಿಂಗವು, ಹಾಗು ಆ ಶಿವಯೋಗಿಯ ಜೀವಕಳೆಯೂ ತಾವೇ ಬಂದು ಪ್ರಭುವಿನ ಅಂಗೈ ಅಂಗಗಳೊಳು ಪ್ರವೇಶಿಸುವ ಅಸಾಮಾನ್ಯ, ಅಲೌಕಿಕ, ಲೋಕವಿಲಕ್ಷಣರೀತಿಯನ್ನು ಕಂಡು ಸಾಮಾನ್ಯ ಲೌಕಿಕನಾದ ಗೊಗ್ಗಯ್ಯನು ಅಚ್ಚರಿಪಟ್ಟನು. ಮಹಾಮಹಿಮರಾದ ಈ ಉಭಯ ಮಹಾ ವಿಭೂತಿಗಳ ಮಹಿಮೆಗೆ ಗೊಗ್ಗಯ್ಯನು ತಲೆಬಾಗಿ ಕೈಮುಗಿದನು.

ಬೆಳಕುಬಂದು ಕತ್ತಲೆಚದುರಿ ಹೋಗುವದಕ್ಕೂ, ಪರುಷಮುಟ್ಟಿ ಲೋಹ ಚಿನ್ನವಾಗುವದಕ್ಕೂ ಊಟಮಾಡಿ ನೀರುಕುಡಿದು ಹಸಿವು ತೃಷೆಗಳು ಹಿಂಗಲಿಕ್ಕೂ ಮಧ್ಯದಲ್ಲಿ ವಿಲಂಬವಿಲ್ಲದಿರುವಂತೆ ಮಹಾನುಭಾವರ ಸಂದರ್ಶನವಾದಲ್ಲಿ ಪತಿತರ ಉದ್ಧಾರಕ್ಕೆ ದೀರ್ಘ ಸಮಯಬೇಕಿಲ್ಲ.

ನಿರ್ವಿಕಲ್ಪ ಸಮಾಧಿಸ್ಥನಾದ ಅನಿಮಿಷ ಶಿವಯೋಗಿಯು ಮತ್ತು ನಿರಂಜನ ಮೂರ್ತಿಯಾದ ಅಲ್ಲಮಪ್ರಭುವಿನ ಸಂದರ್ಶನದಿಂದ ಎಗ್ಗನಾದ ಗೊಗ್ಗಯ್ಯನು ಜೀವನದ ಆದರ್ಶ ಧ್ಯೇಯಗಳನ್ನು ಅರಿತು ಪ್ರಪಂಚ ಪರಮಾರ್ಥಗಳನ್ನು ಸಮನ್ವಯ ಮಾಡುವಲ್ಲಿ ಚತುರಮತಿಯಾಗಿ ನೇಗಿಲಯೋಗಿಯೆನಿಸಿ ಕೃತಕೃತ್ಯನಾದನು.

ಡಾ॥ ಫ. ಗು. ಹಳಕಟ್ಟಿಯವರು ಪ್ರಸಿದ್ಧಿಸಿದ " ೭೭೦ ಅಮರ ಗಣಾಧೀಶ್ವರ ಚರಿತ್ರೆಗಳ" ಪುಸ್ತಕದಲ್ಲಿ ಗೊಗ್ಗಯ್ಯ, ಒಕ್ಕಲು ಮುದ್ದಯ್ಯ, ಇಲಿಹಾಳ ಬೊಮ್ಮಯ್ಯ ಎಂಬ ಮೂರು ಚರಿತ್ರೆಗಳು ಬರುತ್ತವೆ. ಇವರೆಲ್ಲರೂ ಆದರ್ಶ ನೇಗಿಲ ಯೋಗಿಗಳು. ಇವರಲ್ಲಿ ಒಕ್ಕಲು ಮುದ್ದಯ್ಯ ನೆಂಬುವನು ಶ್ರೇಷ್ಠ ವಚನಕಾರನಿದ್ದಾನೆ. ಅವನದೊಂದು ವಚನ ಓದಿದರೆ ಆವನು ಪರಮಾರ್ಥಪಥದಲ್ಲಿ ಎಷ್ಟು ಮುಂದುವರಿದಿದ್ದನೆಂಬುದು ತಿಳಿದುಬರುವದು.

" ಭಕ್ತಿ ಎಂಬ ಪೃಥ್ವಿಯಲ್ಲಿ, ಗುರೂಪದೇಶವೆಂಬ ನೇಗಿಲುವಿಡಿದು,
ಅಂತಃಕರಣ ಚತುಷ್ಟಯವೆಂಬ ಪಶುಗಳಂ ಕಟ್ಟಿ ಓಂಕಾರನಾದವೆಂಬ
ಸೆಳೆಗೋಲವಿಡಿದು, ಉತ್ತರ ಕ್ರಿಯೆಯೆಂಬ ಸಾಲಸೆತ್ತಿ,
ದುಷ್ಟ ಮರ್ಗವೆಂಬ ಕರಿಕೆಯ ಗುದ್ದಿಗಳ ಕಡಿದು

ಅರಿವೆಂಬರವಿಯ ಕಿರಣದಿಂದೊಣಗಿಸಿ, ಅವಂಕೂಡಲೊಟ್ಟಿ,
ಜ್ಞಾನವೆಂಬ ಅಗ್ನಿಯಿಂದ ಸುಟ್ಟುರುಹಿ, ಆ ಹೊಲನಂ ಹಸನಮಾಡಿ,
ಬಿತ್ತುವಪರಿಯ ಇನ್ನಾವುದಯ್ಯ ಎಂದಡೆ.......
ಯಮರಾಜನೆಂಬ ಅರಸನಿಗೆ ಕೋರನಿಕ್ಕದೆ,
ಸುಖಂ ಕರೋತಿ ಶಂಕರಃ. ಶಂ ಕರೋತಿ ।
ಎಂಬ ಸುಯಿಧಾನವನುಂಡು ಸುಖಿಯಾಗಿಪ್ಪ ಒಕ್ಕಲು ಮಗನ ತೋರಿಸಿ
ಬದುಕಿಸಯ್ಯ ಕಾಮಭೀಮ ಜೀವನದೊಡೆಯ ಪ್ರಭುವೇ ನಿಮ್ಮ ಧರ್ಮ" ॥

ಒಕ್ಕಲು ಮುದ್ದಯ್ಯನ ಈ ವಚನವು ಆವನ ಆಧ್ಯಾತ್ಮ ಸಾಧನೆಯನ್ನು ತೋರಿಸುವ ಕೈಗನ್ನಡಿಯಂತಿದೆ.

ಇಲಿಹಾಳ ಬೊಮ್ಮಯ್ಯನೆಂಬ ನೇಗಿಲ ಯೋಗಿಯು ಭೀಕರ ಬರಗಾಲದಲ್ಲಿ ಬಿತ್ತಲು ಒಯ್ಯುವ ಕಡಲೆಗಳನ್ನೇ ಶ್ರೀಶೈಲಯಾತ್ರಿಕರು ಬೇಡಿದಾಗ ಅವರ ಮೇಲೆ ಅವನು ಸಿಟ್ಟಾಗದೇ, ಅವರಿಗೆ ತಿರುಗಿ ಒಟ್ಟೆಂದು ನುಡಿಯದೇ ಬುಟ್ಟಿಯಲ್ಲಿರುವ ಕಾಳುಗಳನ್ನು ದಾನ ಮಾಡಿ ಉಳಿದಿರುವ ಸ್ವಲ್ಪೇ ಕಾಳುಗಳನ್ನು ಬಿತ್ತಿಬಿಟ್ಟನು. ಆವನ ಸತ್ಕಾಯಕದ ಮಹತ್ವದಿಂದ ಬಿತ್ತಿದ ಕಾಳುಗಳೇ ಹುಲುಸಾಗಿ ಬೆಳೆದು ಮನೆ ಹಿಡಿಸಲಾರದಷ್ಟು ಕಡಲೆಯ ಬೆಳೆ ಬಂದಿತು. ಉದಾರ ಚರಿತನಾದ ಬೊಮ್ಮಯ್ಯನ ಔದಾರ್ಯ, ವಿಶ್ವಭಾಂಧವ್ಯ, ದಾಸೋಹಂಭಾವ ಮುಂತಾದವುಗಳ ಬಗೆಗೆ ಜಾನಪದರು –

" ಇಲಿಹಾಳ ಬೊಮ್ಮಯ್ಯ ಮನೆಗೆಲಸ ಕಾಯಕವ ।
ನಲುಮೆಯಲಿ ಸುಗ್ಗಿದಾಸೋಹ । ಹರಸೇವೆ ।
ಸಲಿಸಿ ಲಿಂಗದೊಳು ಬಯಲಾದ " ॥

ಎಂದು ಹಾಡಿದ್ದಾರೆ.

ಸರ್ಪಭೂಷಣ ಶಿವಯೋಗಿಗಳು ತಮ್ಮ ಕೈವಲ್ಯಕಲ್ಪವಲ್ಲರಿಯೆಂಬ ಹಾಡುಗಬ್ಬದಲ್ಲಿ ಹೊರಗಣ ಹಸಿವು ತೃಷೆಗಳನ್ನೇ ಕಳೆಯುವ ಕೇವಲ ಹೊರಗಿನ ಕೃಷಿಕರ್ಮವನ್ನೇ ಮಾಡುವ ಕೃಷೀವಲರನ್ನು ಹೇಗೆ ಮಾಡಬೇಕು ? ಈ ಕೃಷಿಯಿಂದ ದೊರೆಯುವ ಆನಂದವಾವುದು? ಮುಂತಾದುದನ್ನು –

" ಶರೀರವೆಂಬುವ ಹೊಲವ ಹಸನ ಮಾಡಿ ।
ಪರತತ್ವ ಬೆಳೆಯನೆ ಬೆಳೆದುಣ್ಣಿರೋ ॥
ಶಮ ದಮ ಎಂದೆಂಬ ಎರಡೆತ್ತುಗಳ ಹೂಡಿ ।
ವಿಮಲ ಮಾನಸವ ನೇಗಿಲವಮಾಡಿ ॥
ಮಮಕಾರವೆಂದೆಂಬ ಕರಿಕೆಯ ಕಳೆದಿಟ್ಟು ।
ಸಮತೆಯೆಂದೆಂಬ ಗೊಬ್ಬರವ ಚೆಲ್ಲಿ ॥ ೧ ॥

ಗುರುವಿನುಪದೇಶವೆಂಬ ಬೀಜವ ಬಿತ್ತಿ ।
ಮೆರೆವ ಸಂಸ್ಕಾರ ವೃಷ್ಟಿಯು ಬಲದಿ ।
ಅರಿವೆಂಬ ಪೈರನೆ ಬೆಳೆಸುತೆ ಮುಸುಕಿರ್ದ ।
ದುರಿತ ದುರ್ಗುಣವೆಂಬ ಕಳೆಯು ಕಿತ್ತು ॥ ೨ ॥

ಸ್ಥಿರಮುಕ್ತಿ ಎಂದೆಂಬ ಧಾನ್ಯವ ಬೆಳೆದುಂಡು ।
ಪರಮಾನಂದದೊಳಂ ದಣ್ಣನೆ ದಣಿದು ।
ಗುರುಸಿದ್ಧನಡಿಗಳಿಗೆರಗುತ್ತ ಭವವೆಂಬ ।
ಬರವನು ತಮ್ಮ ಸೀಮೆಗೆ ಕಳುಹಿ ॥ ೩ ॥

ಎಂಬ ಪದ್ಯದಲ್ಲಿ ಮಾರ್ಮಿಕವಾಗಿ ಹೇಳಿರುವರು.

ತನಗೆ ಈಜು ಬಾರದಿದ್ದರೆ ಹೆರವರನ್ನು ಬೆನ್ನಿಗೆ ಹಾಕಿಕೊಂಡು ಈಸಿ ಹೊಳೆ ದಾಟಲು ಬಂದೀತೇ ? ತನಗೆ ಓದು ಬರಹ ಬಾರದಿದ್ದರೆ ಹೆರವರಿಗೆ ಓದು ಬರಹ ಕಲಿಸಿ ಸುಶಿಕ್ಷಿತರನ್ನಾಗಿ ಮಾಡಲು ಬಂದೀತೇ ? ತನ್ನ ಹೊಟ್ಟೆಗೇನೆ ರೊಟ್ಟಿಯಿಲ್ಲದೆ, ಮೈಗೆ ಬಟ್ಟೆ ಯಿಲ್ಲದೆ ಹಾದಿಬೀದಿಗುಂಟ ಭಿಕ್ಷೆ ಬೇಡುವ ತಿರುಕನು ಹೆರವರಿಗೆ ಅನ್ನವಸ್ತ್ರಗಳನ್ನಿತ್ತಾನೆ? ಹೊಳೆ ದಾಟಿಸಬೇಕೆನ್ನುವವನಿಗೆ ಮೊದಲು ಈಜು ಬರಬೇಕಾದಂತೆ, ಹೆರವರಿಗೆ ಪಾಠ ವಚನಗಳನ್ನು ಹೇಳಬಯಸುವವನಿಗೆ ತಾನು ವಿದ್ಯಾಪಾರಂಗತನಾಗಿರಬೇಕಾದಂತೆ, ದಡ ತೀರಗಳಿಲ್ಲದ ಅಪಾರ ಸಂಸಾರ ಸಾಗರದಲ್ಲಿ ಬಿದ್ದ ಪ್ರಾಣಿಗಳನ್ನು ಉದ್ಧರಿಸುವ ಗುರುವು ಮೊದಲು ತಾನು ಸರ್ವ ಸಮರ್ಥನಾಗಿರಬೇಕು. ಯಾವನಿಗೆ ಧ್ಯೇಯಸಾಕ್ಷಾತ್ಕಾರ ವಾಗಿದೆಯೋ ಯಾವನು ಗುರಿಯನ್ನು ಮುಟ್ಟಿರುವನೋ ಅವನೇ ಗುರುವು. ಗುರಿಯಿಲ್ಲದ ಅಥವಾ ಗುರಿಯನ್ನು ಮುಟ್ಟದ ಗುರುವು ಕಪಾಳಗುರುವೇ ಸರಿ.

" ಗುರವೋ ಬಹವಃಸಂತಿ ಶಿಷ್ಯವಿತ್ತಾಪಹಾರಃ ।
ಶಿಷ್ಯ ಚಿತ್ತಾಪಹಾರಸ್ತು ಗುರುರೇಕೋಪಿದುರ್ಲಭಃ ।

ಎಂಬುಕ್ತಿಯಂತೆ ಶಿಷ್ಯರ ಮನೆ ಮನೆಗುಂಟ ಹೋಗಿ, ದುರಾಶೆ ದುರ್ಮೋಹಕ್ಕೊಳಗಾಗಿ ಏನಾದರೊಂದು ಬೃಹದ್ಯೋಜನೆಯ ವಿಚಾರ ಹೇಳಿ ಗಂಟಿಗೆ ಗಂಟು ಬೀಳುವ ಗುರುಗಳು ಬಹಳ. ಆದರೆ ಸಾಮಾಜಿಕ ಸಂಘಟನೆ, ಧಾರ್ಮಿಕ ಕಾರ್ಯ ನಿರ್ವಹಣೆ, ಧರ್ಮಗ್ರಂಥ ಪ್ರಕಟನೆ ಮುಂತಾದ ಮಹತ್ವದ ಕಾರ್ಯಗಳಿಗಾಗಿ ಹಣವನ್ನು ಸ್ವೀಕರಿಸುವ ಗುರುಗಳು ವಿರಳ. ಗುರುಗಳು ಶಿಷ್ಯರ ಹೃತ್ತಾಪಹಾರಕರಾಗಿರಬೇಕಲ್ಲದೆ ವಿತ್ತಾಪಹಾರಕರಾಗ ಬಾರದು.

ತರ್ಕಶಾಸ್ತ್ರವನ್ನು ಹೇಳುವವನೊಬ್ಬ ಗುರು, ಸಮಾಜಶಾಸ್ತ್ರವನ್ನು ತಿಳಿಸಿಕೊಡುವವ ನೊಬ್ಬ ಗುರು, ಗಣಿತಶಾಸ್ತ್ರವನ್ನು ಬಿಡಿಸಿ ತಿಳಿ ಹೇಳುವವನೊಬ್ಬ ಗುರು, ಸಂಗೀತಶಾಸ್ತ್ರ ವನ್ನು ಹೇಳುವವನೊಬ್ಬ ಗುರು ಹೀಗೆ ಲೌಕಿಕದಲ್ಲಿ ವಿವಿಧ ವಿದ್ಯೆಗಳನ್ನು ಕಲಿಸುವ ಗುರು ಗಳು ಇರುವಂತೆ ಪರಮಾರ್ಥದಲ್ಲಿ ಇರಲಿಕ್ಕಿಲ್ಲ. ಪರಮಾರ್ಥ ಪಥದಲ್ಲಿ ಓರ್ವನೇ ಗುರು

"ಸಂಶಯನಿರಸನ ದ್ವಾರಾ ನಿತ್ಯಮುಕ್ತಿ ಪ್ರದನೇವಿಹಿತ ಗುರುವಕ್ಕುಂ''
ಎಂದು ಗುರುಲಕ್ಷಣವನ್ನು ಹೇಳಿ–

"ಕರುಣೆ, ಸತ್ಕಲೆ, ಶಾಸ್ತ್ರಪರಿಣತೆ, ನಿರಾಶೆ, ಸೌಂದರತೆ, ಸುಮುಖತ್ವ
ಸುಗುಣ ಸುಜ್ಞಾನಂಗಳಿರಲವನೇ ಸೇವ್ಯ ಗುರುವಕ್ಕುಂ''

ಎಂದು ಸೇವ್ಯಗುರುವಿನ ಲಕ್ಷಣವನ್ನು ಹೇಳಿರುವರು.

ಈ ಗೊಗ್ಗಯ್ಯನ ಗತಿಯಲ್ಲಿ ವಿಹಿತ ಗುರುವೆನಿಸಿದ ಅಥವಾ ನಿರಾಭಾರಿ ಗುರುವೆನಿಸಿದ ಅಲ್ಲಮಪ್ರಭುವು ಗೊಗ್ಗಯ್ಯನ ಸಂಶಯಾದಿಗಳು ಶಾಬ್ದಿಕ ಜ್ಞಾನದಿಂದ ಪರಿಹಾರವಾಗದಿದ್ದಾಗ ಶಿವಯೋಗಾನುಷ್ಠಾನದಲ್ಲಿ ಮೈಮರೆತು ಕುಳಿತ ಅನಿಮಿಷ ಮಹಾಶಿವಯೋಗಿಯ ದಿವ್ಯದರ್ಶನ ಮುಖೇನ ಲಿಂಗಾಂಗ ಸಾಮರಸ್ಯದ ಇಂಗಿತವನ್ನೆಲ್ಲ ತಿಳಿಸಿ ಕೇವಲ ನೇಗಿಲ ಹೊಡೆದು ಭೂಸಾಗುವಳಿ ಮಾಡುವ ಒಕ್ಕಲಿಗನನ್ನು ಒಳಗೂ ಹೊರಗೂ ಕೊಡಿಯೇ ಬೇಸಾಯ ಮಾಡುವ ಮರ್ಮವನ್ನು ತಿಳಿಸಿ ಆದರ್ಶ ನೇಗಿಲಯೋಗಿಯನ್ನಾಗಿ ಮಾಡಿದನು ಎಂಬ ವಿಷಯವು ಸ್ಪಷ್ಟವಾಗಿ ಬಂದಿದೆ.

ಅಜ್ಞಾನದ ಕಗ್ಗತ್ತಲೆಯಲ್ಲಿ ಮುಗ್ಗುರಿಸಿ ಬೀಳುವ ಗೊಗ್ಗಯ್ಯನ ಹೃದಯದ ಹಣತೆಯಲ್ಲಿ ಅಲ್ಲಮಪ್ರಭುವು ಜ್ಞಾನದ ಜ್ಯೋತಿಯನ್ನು ಹೊತ್ತಿಸಲು ಕತ್ತಲೆಯ ಮನೆಯಲ್ಲಿ ಥಳಥಳ ಹೊಳೆಯುವ ದೀಪವನ್ನು ಹಚ್ಚಿದಂತಾಯಿತು. ಹುಟ್ಟುಗುರುಡನಿಗೆ ಕಣ್ಣುಬಂದಂತಾಯಿತು.ಬೆಲೆಯಿಲ್ಲದ ಶೂನ್ಯಗಳ ಹಿಂದೆ ಒಂದಂಕಿಯನ್ನು ಬರೆದಂತಾಯಿತು. ಸಾವವನಿಗೆ ಸಂಜೀವಿನಿಯನ್ನು ಕೊಟ್ಟಂತಾಯಿತು, ಕಗ್ಗನಾದ ಗೊಗ್ಗಯ್ಯನು ಅಲ್ಲಮಪ್ರಭುವಿನ ಉಪದೇಶದಿಂದ ಅಗ್ಗಳಿಕೆಯನ್ನು ಪಡೆದು ಆದರ್ಶಶರಣನಾದನು.

" ಅಲ್ಲಪ್ಪನೂರಲ್ಲಿ ಬಲ್ಲಪ್ಪನಲ್ಲಪ್ಪ
ಬಲ್ಲಪ್ಪನಿಪ್ಪ ಊರಲ್ಲಿ ಅಲ್ಲಪ್ಪ
ಬಲ್ಲಪ್ಪನಪ್ಪ ಸರ್ವಜ್ಞ ||

ಎಂಬ ಸರ್ವಜ್ಞನ ಉಕ್ತಿಯಂತೆ ಬಲ್ಲಿದನಾದ ಅಲ್ಲಮಪ್ರಭುವಿನ ಸದ್ಬೋಧೆಯಿಂದ ಅಲ್ಲಪ್ಪನೆನಿಸಿದ ಅಂದರೆ ಮಂದಮತಿಯೆನಿಸಿದ ಗೊಗ್ಗಯ್ಯನು ಸದುಹೃದಯ, ಸದುವಿನಯವುಳ್ಳವನಾಗಿ ಸದಾಶಿವನ ಒಲುಮೆಯನ್ನು ಪಡೆದು ನಿತ್ಯಮುಕ್ತನಾದನು.



## ೧೨ನೆಯ ಗತಿ

# ಮುಕ್ತಾಯಕ್ಕಗಳ ವೃತ್ತಾಂತ

ಭಕ್ತಿಯನು ಮುಕ್ತಾಯಿಗರುಹಿಸಿ ।
ಮುಕ್ತನಾದಜಗಣ್ಣನಿರವನು ।
ವ್ಯಕ್ತದಲಿ ವಿರಚಿಸಿದನೆಮ್ಮಯ ಗುರುಗುಹೇಶ್ವರನು ॥

ಹಗಲಿರುಳು ಎಡೆವಿಡದೆ ಹೊಳೆ ಹರಿಯುವದು ಹೆರವರ ಸುಖಕ್ಕಾಗಿ, ಆಕಳು ಹಾ ಕೊಡುವದು ಅನ್ಯರು ಕುಡಿಯುವದಕ್ಕಾಗಿ, ದೀಪ ಉರಿಯುವದು ಮನೆಯಲ್ಲಿ ಬೆಳ ಯುವದಕ್ಕಾಗಿ, ಗಿಡಮರಗಳು ಹಣ್ಣು ಹಂಪಲಗಳನ್ನೀಯುವದು ಪರಹಿತಕ್ಕಾಗಿ, ಊ ಕಡ್ಡಿಯು ತನ್ನ ಮೈಯನ್ನು ಸುಟ್ಟುಕೊಂಡು ಬೂದಿಯಾಗಿ ನೆಲಕ್ಕೆ ಬೀಳುವದು ಪ ಮಂದಿ ಸುಗಂಧಮಯವಾಗುವದಕ್ಕಾಗಿ.

" ಪರೋಪಕಾರಾಯ ಸತಾಂ ವಿಭೂತಯಃ " ಎಂಬುಕ್ತಿಯಂತೆ ಮಹಾಪುರು ಸ್ವಾರ್ಥಕ್ಕೆ ನೀರೆರೆದು ಲೋಕಕಲ್ಯಾಣಕ್ಕಾಗಿಯೇ ತಮ್ಮ ಜೀವನವನ್ನು ಮೀಸಲಾ ವರು. ವಿರಾಗವಿಭು, ಮಹಾಪ್ರಭು ಎನಿಸಿದ ಅಲ್ಲಮಪ್ರಭುವಿನ ಪ್ರಭಾವಕ್ಕೊಳ ಕಗ್ಗದಾದ ಗೊಗ್ಗಯ್ಯನೂ ಅಗ್ಗಳಿಕೆಯುಳ್ಳ ಆದರ್ಶ ಶರಣಶಿರೋಮಣಿಯಾಗಲಿಲ್ಲವೆ!

ಸ್ವಯಸ್ಥಲ, ಚರಸ್ಥಲ ದಾಟಿ ಪರಸ್ಥಲದಲ್ಲಿ ನಿಂದ ಮಹಾಮಹಿಮನಾದ ಅಲ್ಲ ಪ್ರಭುವು ದಕ್ಷಿಣ ಕರ್ನಾಟಕದಿಂದ ಪಾದಯಾತ್ರೆಯನ್ನು ಮಾಡುತ್ತ ಉತ್ತರ ಕರ್ನಾ ದಲ್ಲಿ ಮಹಾನಗರವೆನಿಸಿದ "ದಗಿನ ಬಳಿಯಿರುವ ಲಕ್ಕುಂಡಿಗೆ ಆಗಮಿಸಿದನು. ೧೨ ಶತ ಮಾನದಲ್ಲಿ ಬಸವೇಶ್ವರ, ಅಕ್ಕನಾಗಮ್ಮ ಎಂಬ ಸಹೋದರ ಸಹೋದರಿಯರು ಒಪ್ಪಿ ಲಕ್ಕುಂಡಿಯಲ್ಲಿ ಅಜಗಣ್ಣ ಮುಕ್ತಾಯಿಯೆಂಬ ಸಹೋದರ ಸಹೋದರಿಯರು ಇದ್ದ ವೀರವಿರಾಗಿಯಾದ ಅಲ್ಲಮಪ್ರಭುವಿಗೂ, ಮುಕ್ತಾತ್ಮಳಂತಿರುವ ಮುಕ್ತಾಯಿಗೂ ನ ಸಂವಾದದಲ್ಲಿ ಅಂತರಂಗದ ಅರಿವೇ ಗುರು; ಹಾಗೂ ಅದನ್ನು ಜಾಗೃತಗೊಳಿಸುವ ಬಹಿ ಗದ ಗುರು. " ತನ್ನ ವಿನೋದಕ್ಕೆ ಗುರುವೇ ಶಿಷ್ಯನಾದ " ಮುಂತಾದ ತಾತ್ವಿಕ ವಿಷ ಗಳ ವಿವೇಚನೆ ನಡೆದಂತೆ ಮಹಾರಾಷ್ಟ್ರದ ನಾಮದೇವ ಮುಕ್ತಾಬಾಯಿಯ ಸಂವಾದ ದೇವರ ಸಗುಣ ನಿರ್ಗುಣ ರೂಪಗಳ, ವ್ಯಾಪ್ಯಭಕ್ತಿ, ವ್ಯಾಪಕಭಕ್ತಿಗಳ ಪ್ರಯೋಜ ವರ್ಕ ವಿಚಾರವುನಡೆಯುವದು.

೧೨ ನೇ ಶತಮಾನದ ಶರಣ ಸಂಕುಲದಲ್ಲಿ ಮುಕ್ತಾಯಿಯು ಸುಪ್ರಸಿದ್ಧಳಿದ್ದ ಅಜಗಣ್ಣನು ಬಹಿರಂಗದಲ್ಲಿ ನೇಗಿಲಯೋಗಿಯಾಗಿ ಕೆಲಸ ಮಾಡುತ್ತಿದ್ದರೂ ಅಂತರಂ ಶ್ರೇಷ್ಠ ಶಿವಯೋಗಿಯಾಗಿದ್ದನು.

ಅಜಗಣ್ಣನು ಎತ್ತುಗಳಿಂದ ಉತ್ತು ಬಿತ್ತುವ ಕೆಲಸ ಮಾಡುತ್ತಿದ್ದರೆ ಚಿತ್ತಶುದ್ಧಿಯ ಮು ಯಿಯು ಆಕಳ ಕಾಯ್ವ ಕಾಯಕ ಕೈಗೊಂಡಿದ್ದಳು. ಅವರ ದೈನಂದಿನ ಜೀವನವು ವಾಗಿ ಆದರ್ಶಮಯವಾಗಿತ್ತು.

ಸ್ವಾಧ್ಯಾಯ ಪ್ರವಚನಾಭ್ಯಾಂ ನಪ್ರಮದಿತವ್ಯಂ "

ಎಂಬುಕ್ತಿಯಂತೆ ದಿನದಿನದಲ್ಲಿಯೂ ಅಜಗಣ್ಣನು ತಂಗಿಮುಕ್ತಾಯಿಗೆ ಸ್ವಾನುಭಾವ ಪೂರ್ವಕವಾದ ಶಿವಾನುಭವವನ್ನು ಹೇಳುತ್ತಿದ್ದನು. ಜ್ಯೋತಿರ್ಲಿಂಗದಂತಹ ಅವನ ಮಾತುಗಳು ಚಿಜ್ಯೋತಿಯನ್ನು ಬೀರಿ ಚಿತ್ತಚಾಂಚಲ್ಯವನ್ನು ಕಳೆಯುತ್ತಿದ್ದವು. ಅವನ ಮಂಗಲವಾಣಿಯಿಂದ ಅಂಗಗುಣಗಳೆಲ್ಲ ಅಳಿದು ಲಿಂಗಗುಣಗಳೇ ಬೆಳಗುತ್ತಿದ್ದವು.ಅಂತೆಯೆ ಷಟ್ಸ್ಥಲ ಚಕ್ರವರ್ತಿಯೆನಿಸಿದ ಶ್ರೀ ಚನ್ನಬಸವಣ್ಣನವರು —

" ಆದ್ಯರ ಅರವತ್ತು ವಚನಕ್ಕೆ ದಂಡನಾಯಕರ ಇಪ್ಪತ್ತು ವಚನ,
ದಂಡನಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ,
ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ "

ಎಂದು ಹೇಳಿರುವರು.

ಆದ್ಯರು, ಪುರಾತನರು, ಪ್ರಾಚೀನಮಹಂತರು ಯಾವ ಅನುಭವವನ್ನು ಅರವತ್ತು ಮಾತುಗಳಲ್ಲಿ ಹೇಳುವರೋ, ಅವುಗಳನ್ನು ಸಂಕ್ಷೇಪಿಸಿ, ಸಂಗ್ರಹಿಸಿ ಶ್ರೀ ಬಸವೇಶ್ವರರು ಇಪ್ಪತ್ತೇ ನುಡಿಗಳಲ್ಲಿ ಹೇಳುವರು. ಆದ್ಯರು ಅರವತ್ತು ವಚನಗಳಲ್ಲಿ, ಶ್ರೀ ಬಸವೇಶ್ವರರು ಇಪ್ಪತ್ತು ವಚನಗಳಲ್ಲಿ ಹೇಳುವದನ್ನು ಶ್ರೀ ಪ್ರಭುದೇವರು ಹತ್ತೇ ವಚನಗಳಲ್ಲಿ ಹೇಳುವರು. ಆದ್ಯರು ಅರವತ್ತು ವಚನಗಳಲ್ಲಿ ಹೇಳುವ, ದಂಡನಾಯಕರು ಇಪ್ಪತ್ತು ವಚನಗಳಲ್ಲಿ ಉದಾಹರಿಸುವ,ಪ್ರಭುದೇವರು ಹತ್ತು ಸೊಳ್ನುಡಿಗಳಲ್ಲಿ ಬಿತ್ತರಿಸುವ ತತ್ವಾರ್ಥವನ್ನು ಅಜಗಣ್ಣನು ಐದೇ ವಚನಗಳಲ್ಲಿ ಹೇಳುವನು ಎಂದು ಷಟ್ಸ್ಥಲ ಚಕ್ರವರ್ತಿ ಮಹಾಜ್ಞಾನಿ ಚನ್ನಬಸವಣ್ಣನವರು ಕೊಂಡಾಡಬೇಕಾದರೆ ಅಜಗಣ್ಣನ ವಚನಗಳು ಎಷ್ಟು ಅರ್ಥಗರ್ಭಿತವಿರಬಹುದು ಎಂಬುದು ಊಹೆಗೂ ನಿಲುಕದಮಾತು. ಅಜಗಣ್ಣನ ವಚನಗಳು ದೊರೆಯದಿದ್ದುದು ವಿಷಾದದಸಂಗತಿ.

ಅನುಭವ ಮಂಟಪದ ಅಧ್ಯಕ್ಷನಾಗಿ, ಬಸವಾದಿ ಪ್ರಮಥರಿಗೆಲ್ಲ ಸಲ್ಲಲಿತ ಸನ್ಮಾರ್ಗ ತೋರಿಸಿದ ಮಾಯಾಕೋಲಾಹಲ, ಮಾಯಾಮದಗಜಸಿಂಹ ಎನಿಸಿದ ಮಹಾಜ್ಞಾನಿಯೊಡನೆ ವಾದ, ವಿವಾದ ಸಂವಾದಗಳನ್ನು ಮಾಡಿದ ಅಜಗಣ್ಣನ ತಂಗಿಯಾದ ಮುಕ್ತಾಯಿಯ ಯೋಗ್ಯತೆಯೂ ಬಹಳ ಎತ್ತರವಾದುದು.

" ಮುಕ್ತಾಯಕ್ಕ ಅಂಗನೆಯರ ಇತಿಹಾಸದಲ್ಲಿಯೇ ಅಪೂರ್ವ ವ್ಯಕ್ತಿ, " ಗಾರ್ಗಿಯ ಸಂವಾದ ಶಕ್ತಿ, ಮಹಾದೇವಿಯ ವಿರಕ್ತಿ, ದ್ರೌಪದಿಯ ಅಗ್ರಜಾನುರಕ್ತಿ, ಮೈತ್ರೇಯಿಯ ಆತ್ಮದರ್ಶನ ಶಕ್ತಿ, ಏಕಲವ್ಯನ ಗುರುಭಕ್ತಿಗಳೆಲ್ಲ ಮುಕ್ತಾಯಿಯಾಗಿ ಮೂರ್ತಿಭವಿಸಿದಂತಿದೆ " ಎಂದು ಸುಪ್ರಸಿದ್ಧ ಸಾಹಿತಿಗಳಾದ ಡಾ|| ಸಿದ್ಧಯ್ಯ ಪುರಾಣಿಕ ಅವರು ಬರೆದುದು ಅತ್ಯಂತ ಯೋಗ್ಯವಿದೆ.

" ಅರ್ಥೋಹಿಕನ್ಯಾ ಪರಕೀಯ ಏವ "

" ಪಿತಾರಕ್ಷತಿ ಕೌಮಾರೇ ಭರ್ತಾರಕ್ಷತಿ ಯೌವನೇ "

ಎಂಬ ಕಾಲಿದಾಸ ಮನುಗಳ ಉಕ್ತಿಯಂತೆ ಮಗಳು ತನ್ನ ಮನೆಯಲ್ಲಿ ಹುಟ್ಟಿ ಬೆಳೆ
ದರೂ ಆಕೆಯು ಅನ್ಯರವಳೇ. ಹೆರವರು ಸುರಕ್ಷಿತವಾಗಿರಲೆಂದು ಇಟ್ಟ ಹಣವನ್ನು
ಅವರಿಗೆ ಕೊಡಬೇಕಲ್ಲವೇ ? ಕನ್ಯೆಯು ದೊಡ್ಡವಳಾದ ಮೇಲೆ ಆಕೆಯನ್ನು ಯೋಗ್ಯ
ತನಕ್ಕೆ ಕೊಡಬೇಕು.ಲಕ್ಕುಂಡಿಯ ಬಳಿಯಿರುವ ಮುಸಳೀಕಲ್ಲು ಎಂಬ ಊರೊಳಗಿನ
ಯೋಗ್ಯಮನೆತನಕ್ಕೆ ಕೊಟ್ಟು ಮದುವೆಮಾಡಿದರು. ಗಂಡನ ಮನೆಗೆ ಹೋಗುವಾಗ

« ಒಂಭತ್ತು ತಿಂಗಳ ತುಂಬಿಕೊಂಡು ತಿರಗೀನಿ ।
ಹಂಬಲಿಸಿ ನಿನ್ನ ಹಡದಿನಿ । ಚಿತ್ರದ ಗೊಂಬಿ ।
ನಿನ್ನ ಒಪ್ಪಿಸಿ ಕೊಡಲ್ಹ್ಯಾಂಗ ॥

'' ಹೆಣ್ಣು ಮಕ್ಕಳ ಕಳುವಿ ಕಣ್ಣೀಗಿ ನೀರ ತಂದು ।
ಸಣ್ಣಶೆಲ್ಲೆಲಿ ಮುಸುಕ್ಹಾಕಿ । ಹಡೆದಪ್ಪ ।
ಹೆಣ್ಣು ಸಾಕೆಂದ ಜನುಮಕ ॥ "

ಎಂದು ತಾಯಿ ತಂದೆಗಳು ದುಃಖಿಸುವರು. ತಾಯಿ-ತಂದೆಗಳನ್ನಗಲಿ ಹೋಗುವ
ಮಗಳೂ ಕಂಬನಿಗರೆಯುತ್ತಿರಲು —

" ಆಲಕ್ಕೆ ಹೂವಿಲ್ಲ ಬೇವಿಗೆ ಸಿಹಿಯಿಲ್ಲ ।
ಜಾಣಾರ ಮಾತಿಗೆ ಎದುರಿಲ್ಲ । ತಂಗೆವ್ವ ।
ಹೆಣ್ಣಿಗೆ ತವರು ಸ್ಥಿರವಲ್ಲ "

ಎಂದು ಸಮಾಧಾನ ಹೇಳಿ ಕಳಿಸಲಣಿಯಾಗುವರು. ಅಣ್ಣನಾದ ಅಜಗಣ್ಣನು ಬಡಪು
ಅಣ್ಣನಷ್ಟೇ ಆಗಿರದೆ ಜ್ಞಾನೋಪದೇಶದಿಂದ ಜ್ಞಾನದ ಕಣ್ಣನ್ನು ತೆರೆಯಿಸುವ ಪೂಜ್ಯ
ಷನಾಗಿದ್ದನು. ಮರವೆಯ ಕಳೆದು ಅರಿವಿನ ಮಾರ್ಗವ ತೋರುವ ಗುರುವಿನಂತಿರುವ
ಗಣ್ಣನಲ್ಲಿ ಮುಕ್ತಾಯಿಗೆ ಅಚಲವಾದ ಶ್ರದ್ಧೆ ವಿಶ್ವಾಸಗಳು.ಪುಣ್ಯದ ಪುತ್ಥಳಿಯಾದ ಅ
ನ್ನಗಲಿ ಹೋಗದೇ ಕಣ್ಣೀರು ಹಾಕಲು ಅಜಗಣ್ಣನು – ತಂಗೀ ಅಳಬೇಡ. ಪತಿಗೃ
ಹೋಗುವ ಮಂಗಲ ಸಮಯದಲ್ಲಿ ಕಂಬನಿಗರೆವುದು ಒಳಿತಲ್ಲ. ಆಂತರಿಕ ಮೌಲ್ಯಗಳ
ಶೀಲ ಸಚ್ಚಾರಿತ್ರ್ಯಗಳಿಂದ ನೀನು ಪಿತೃಗೃಹಕ್ಕೂ ಪತಿಗೃಹಕ್ಕೂ ಸತ್ಕೀರ್ತಿಯನ್ನು ತ
ಮಂಗಲ ಮಾತೆಯಾಗು ಎಂದು ಆಶೀರ್ವದಿಸಿ ಕಳುಹಲು – ' ಅಣ್ಣಾ ಹೋಗಿ ಬರು
ಎಂದು ಹೇಳಿ ಮುಂದಡಿ ಇಡುವ ಮುನ್ನ ಮುಕ್ತಾಯಿಯು ಅಣ್ಣಾ —
ನಿನಗೇನಾದರೂ ಅನಾರೋಗ್ಯವಾದರೆ, ಆಕಸ್ಮಿಕವಾಗಿ ದುರ್ಘಟನೆ ಸಂಭವಿಸಿದರೆ
ನಾದರೆ ಅದು ನನಗೆ ತಿಳಿಯುವದುಹೇಗೆ ' ? ಎಂದು ಕೇಳಲು ' ತಂಗೀ ನ
ಕುರುಹುಹೇಳುವೆ.ನೀನುಟ್ಟಸೀರೆಯು ನಿರಿಗೆ ಕಳಚುವದು,ತೋರಮುಡಿಗಟ್ಟುಬಿಚ್ಚು
ಕಡೆವ ಮೊಸರು ಕಲ್ಲಾಗುವದು. ಈ ಮೂರಾದಾಗ ನಾನು ಲಿಂಗೈಕ್ಯನಾದನೆಂದು
ಎಂದು ಹೇಳಿದನು. ಮುಕ್ತಾಯಿಯು ಗುರುಹಿರಿಯರ ಚರಣಕ್ಕೆರಗಿ ಅವರ
ಯೊಡನೆ ಪತಿಗೃಹಕ್ಕೆ ತೆರಳಿದಳು. ಅತ್ತ ಪತಿಗೃಹದಲ್ಲಿ ಮುಕ್ತಾಯಿ ಸಾಧ್ವಿಶಿರೋ

ಯಾಗಿ ಕಾಲಕಳೆದರೆ ಇತ್ತ ಅಜಗಣ್ಣನು ಯಾವಾಗಲೂ ಶಿವಮಂತ್ರಪಠಿಸುತ್ತ ಶರಣಶಿರೋಮಣಿಯಾದನು. ಅಜಗಣ್ಣನು ಹೊರಗೆ ಕೃಷಿಕರ್ಮದಲ್ಲಿ ನಿರತನಾದಂತೆ ಕಂಡರೂ ಅವನ ಅಂತರಂಗಜೀವನವು ಋಷಿಜೀವನದಂತೆ ಪರಮಾರ್ಥಮಯವಾಗಿತ್ತು. ಹುಲುಸಾಗಿಬೆಳೆದ ಹೊಲವನ್ನು ನೋಡುತ್ತ ಒಡ್ಡಿನಮೇಲೆ ಕುಳಿತಾಗ ಒಂದು ವಿಚಿತ್ರಘಟನೆಯನ್ನು ಕಂಡನು. ನಾಗರಹಾವೊಂದು ಹುತ್ತದಿಂದ ಹೊರಬಂದು ತನ್ನ ಹೆಡೆಯನ್ನುಬಿಚ್ಚಿ ರತ್ನವನ್ನು ಭೂಮಿಯಮೇಲಿಟ್ಟು ಅದರ ಬೆಳಕಿನಲ್ಲಿ ಆಹಾರವನ್ನು ಹುಡುಕುತ್ತಿರಲು ತಾನು ಉಚ್ಚರಿಸುವ ಮಂತ್ರಕೇಳಿ ಸರಸರನೆ ಬಂದು ರತ್ನವನ್ನು ಹೆಡೆಯಲ್ಲಿ ಮುಚ್ಚಿಕೊಂಡು ಹುತ್ತಿನೊಳಗೆ ಹೋದಂತೆ ತೋರಿತು. ಆಗ ಅಜಗಣ್ಣನು ಹಾವು ಹೆಡೆಯಲ್ಲಿ ರತ್ನವನ್ನು ಮುಚ್ಚಿಕೊಂಡಂತೆ, ನಾನೂ ನನ್ನ ಜೀವರತ್ನದಂತಿರುವ ಲಿಂಗವನ್ನು ಗುಪ್ತವಾಗಿಯೇ ಇಟ್ಟುಕೊಳ್ಳಬೇಕೆಂದು ನಿರ್ಧರಿಸಿ ಯಾರಿಗೂ ಕಾಣದಂತೆ ಧರಿಸಹತ್ತಿದನು. ಅಜಗಣ್ಣನು ಬಾಲಕನಿದ್ದಾಗ ಜೊತೆಯಬಾಲಕರು ಅಜಗಣ್ಣಾ ನಿನ್ನ ಲಿಂಗವನ್ನು ಕೊಡು ಸಕ್ಕರೆಯನ್ನು ಕೊಡುವೆವು ಎಂದು ಕೇಳಿದಂತೆಯೂ ಆಗ ಅಜಗಣ್ಣನು ಲಿಂಗವನ್ನು ಎಲ್ಲಿ ಕಸಿದುಕೊಳ್ಳುವರೋ ಎಂದು ಅಂಜಿ ಲಿಂಗವನ್ನು ನುಂಗಿದನೆಂದೂ ವಿರಶೈವಾಮೃತ ಮಹಾಪುರಾಣ ಹಾಗೂ ಶೂನ್ಯಸಂಪಾದನೆಗಳಲ್ಲಿ ಬರುವದು.

ದಿವಂಗತರಾದರು, ಕೈಲಾಸವಾಸಿಗಳಾದರು, ವೈಕುಂಠವಾಸಿಗಳಾದರು ಮುಂತಾದ ಶಬ್ದಗಳು ಅಸುನೀಗಿದ ಅರ್ಥವನ್ನೇ ಹೇಳುತ್ತಿದ್ದರೂ ಹಾವು ತನ್ನ ಫಣಾಮಣಿಯನ್ನು ಜತನ ಮಾಡುವದಕ್ಕಾಗಿ ಹೆಡೆಯಲ್ಲಿ ಮುಚ್ಚಿಕೊಂಡ ದೃಶ್ಯವನ್ನು ನೋಡಿದಾಗಿನಿಂದ ಅಜಗಣ್ಣನ ಚಿತ್ರವೇ ಪಲ್ಲಟವಾಗಿ ಹೋಯಿತು.

ಅಜಗಣ್ಣನಿಗೆ ಯೌವನವು ಪ್ರಾಪ್ತವಾಗಲು ಸೋದರಮಾವನೇ ಮಗಳನ್ನು ಕೊಟ್ಟು ಮದುವೆ ಮಾಡಿದನು. ಅಜಗಣ್ಣನು ಗುಪ್ತ ಭಕ್ತನಿದ್ದುದನ್ನು ಆತನ ಹೆಂಡತಿ ತಿಳಿಯದೇ ಶಿವಭಕ್ತನಲ್ಲದವನನ್ನು ಮದುವೆಯಾದೆನಲ್ಲ ಎಂದು ದುಃಖಪಡುತ್ತಿದ್ದಳು, ಅಜಗಣ್ಣನು ಹುಚ್ಚನೆಂದು ಮನೆಯವರು ತಿಳಿದು ಮೂಟೆಗಳನ್ನು ಹೊರಿಸುತ್ತಿದ್ದರು. ಒಂದು ದಿನ ಗೋದಿಯ ಚೀಲವನ್ನು ಹೊತ್ತುಕೊಂಡು ಮನೆಯೊಳಗೆ ಹೋಗುವಾಗ ತಲೆಗೆ ಬಾಗಿಲು ಬಲವಾಗಿ ಬಡಿಯಿತು. ಆಗ ಅಜಗಣ್ಣನು ಶಿವಮಂತ್ರವನ್ನುಜಪಿಸುತ್ತ ಲಿಂಗೈಕ್ಯನಾದನು.

"ಎಚ್ಚರವಿರಬೇಕು ನಡೆನುಡಿಯಲ್ಲಿ, ಮಚ್ಚರವಿರಬೇಕು ಭವದಲ್ಲಿ
ಹುಚ್ಚನಾಗಿರಬೇಕು ಜನರ ಕಣ್ಣಲ್ಲಿ, ಮನ ಅಚ್ಚೊತ್ತಿದಂತಿರ
ಬೇಕು ಲಿಂಗದಲ್ಲಿ ಇಂತೀ ಗುಣವುಳ್ಳಾತನೇ ಅಚ್ಚಶರಣನೆಂಬೆನಯ್ಯ ಅಖಂಡೇಶ್ವರ"

ಎಂಬ ಅನುಭಾವಿಗಳ ಉಕ್ತಿಯಂತೆ ಸಂಸಾರದಲ್ಲಿ ಅನಾಸಕ್ತ ಬುದ್ಧಿಯುಳ್ಳವನಾಗಿ, ಲೌಕಿಕ ವಿಷಯುಗಳಲ್ಲಿ ಹೇಯಬುದ್ಧಿಯನ್ನು ತಳೆದು, ನಡೆನುಡಿಗಳಲ್ಲಿ ಒಂದೇ ಪ್ರಕಾರವಾಗಿದ್ದು, ನೋಡುವವರ ಕಣ್ಣಿಗೆ ಹುಚ್ಚನೆನಿಸಿ ಶರಣಶಿರೋಮಣಿಯಾಗಿ ಮೆರೆದನು.

ಬಾಹ್ಯದೃಷ್ಟಿಗೆ ತೋರಿ ಸಕಲವೆನಿಸಿದ ಇಷ್ಟಲಿಂಗವನ್ನು ಪೂಜೆಮಾಡುವದಲ್ಲ ಕೇವಲ ಮಾನಸಕ್ಕೆ ಗೋಚರವಾದ ಸಕಲ ನಿಷ್ಕಲ ಲಿಂಗವನ್ನು ಕೇವಲ ಮಾನ ಚಾರಗಳಿಂದ ಅಂತರಂಗದಲ್ಲಿಯೇ ಪೂಜೆ ಮಾಡಹತ್ತಿದನು.

ಶ್ರೀಗುರುವು ಶಿರಸ್ಥಲದಲ್ಲಿಯ ಪಶ್ಚಿಮಶಿಖಾಚಕ್ರದಲ್ಲಿರುವ ನಿರಾಕಾರವಾದ ಯನ್ನೇ ಶಿವದೀಕ್ಷಾ ಸಂಸ್ಕಾರದಿಂದ ಜಲಲವಣ ನ್ಯಾಯದಂತೆ, ಘೃತಕಾಠಿಣ್ಯ ದಂತೆ ಸಾಕಾರವಾದ ಇಷ್ಟಲಿಂಗವನ್ನಾಗಿ ಮಾಡಿ ಕರಸ್ಥಲಕ್ಕೀಯುವನು. ದೀಪ ಕಿರಣ, ದೀಪದಪ್ರಭೆ; ಹಣ್ಣು, ಹಣ್ಣಿನೊಳಗಿನರಸ, ರಸದೊಳಗಣ ರುಚಿಯಂತೆ ಪ್ರಾಣ, ಭಾವಲಿಂಗಗಳ ಪರಸ್ಪರ ಸಂಬಂಧವಿರುವದು. ಲಿಂಗಧಾರಣವು ಬಾಹ್ಯ ಎಂದು ಎರಡು ಪ್ರಕಾರವಾಗಿರುವದು.

"ವಿಶಿಷ್ಟಂ ಕೋಟಿಗುಣಿತಂ ಬಾಹ್ಯಲಿಂಗಸ್ಯ ಧಾರಣಾತ್ ।"

"ವೈರಾಗ್ಯ ಜ್ಞಾನಯುಕ್ತಾನಾಂ ಯೋಗಿನಾಂ ಸ್ಥಿರಚೇತಸಾಂ ।
ಅಂತರ್ಲಿಂಗಾನುಸಂಧಾನೇ ರುಚಿರ್ಬಾಹ್ಯೇನಜಾಯತೇ ॥"

"ಚಿದ್ರೂಪಂ ಪರಮಂ ಲಿಂಗಂ ಶಾಂಕರಂ ಸರ್ವಕಾರಣಂ ।
ಯತ್ತಸ್ಯ ಧಾರಣಂ ಚಿತ್ತೇತದಾಂತರಮುದಾಹೃತಂ ॥"

ಸಕಲ ವಿಶ್ವೋತ್ಪತ್ತಿಗೆ ಕಾರಣೀಭೂತವಾಗಿ ಸಚ್ಚಿದಾನಂದ ಸ್ವರೂಪವಾದ ಯಾವ ಲಿಂಗವುಂಟೋ ಆದನ್ನು ಹೃದಯ ಕಮಲದಲ್ಲಿ ಸದಾಧ್ಯಾನ ಮಾಡುವದೇ ಅಂತ ಧಾರಣವೆನಿಸುವದು. ಈ ಅಂತರ್ಲಿಂಗಧಾರಣವು ಬಾಹ್ಯಲಿಂಗಧಾರಣಕ್ಕಿಂತಲೂ ಪಾಲು ಮಿಗಿಲಾದುದು. ಸಕಲವೆನಿಸಿದ ಇಷ್ಟಲಿಂಗವನ್ನು ಹೊರಗಿರುವ ಜಲ, ಗಂಧ, ಅಕ್ಷತೆ, ಧೂಪ, ದೀಪ, ನೈವೇದ್ಯಾದಿಗಳಿಂದ ಉಪಚರಿಸುವಂತೆ, ಸಕಲ ವೆನಿಸಿದ ಪ್ರಾಣಲಿಂಗವನ್ನು ಅಂತರಂಗದಲ್ಲಿರುವ ಭಕ್ತಿ, ವಿರತಿ, ಜ್ಞಾನ, ಸಂಯಮ, ಆತ್ಮಸಮರ್ಪಣೆ ಮುಂತಾದ ಮಾನಸೋಪಚಾರಗಳಿಂದ ಪೂಜೆ ಮಾ ಗುಡಿ, ಗುಡಿಯೊಳಗಿರುವ ಲಿಂಗ, ಪೂಜಾರಿ, ಪೂಜಾದ್ರವ್ಯಗಳು ಮುಂತಾದುವ ಅಲ್ಲಮಪ್ರಭು ಮುಪ್ಪಿನ ಷಡಕ್ಷರಿಗಳು, ಸರ್ಪಭೂಷಣ, ಶಿವಯೋಗಿಗಳು ಮುಂತಾ

"ಕಾಲೇಕಂಭಗಳಾದವೆನ್ನ
ದೇಹವೇ ದೇಗುಲವಾಯಿತ್ತಯ್ಯ ।
ಎನ್ನ ನಾಲಿಗೆಯೇ ಘಂಟೆ । ಶಿರ ಸುವರ್ಣದ ಕಳಶ ।
ಇದೇನಯ್ಯ ? ಸ್ವರವೇ ಲಿಂಗಕ್ಕೆ ಸಿಂಹಾಸನವಾಗಿರ್ದಿತಯ್ಯ ।
ಗುಹೇಶ್ವರ ನಿಮ್ಮ ಪ್ರಾಣಲಿಂಗ ಪ್ರತಿಷ್ಠೆ
ಪಲ್ಲಟವಾಗದಂತಿಪ್ಪೆನಯ್ಯಾ ॥"

"ಎನ್ನ ಕಾಯವು ನಿನಗೆ ಉನ್ನತಾಲಯವಾ ।
[illegible] ॥ಪ॥

ಎನ್ನ ಕಾಲುಗಳೆರಡು । ಉನ್ನತದ ಕಂಬವೈ ।
ಎನ್ನ ಒಡಲೇ ನಿಮಗೆ ದೇವಾಲಯ ।
ಎನ್ನ ತೋಳುಗಳೆರಡು ಉನ್ನತದ ಮದನಕ್ಕಿ
ಎನ್ನ ಶಿರ ಸೌವರ್ಣ ಕಲಶವಯ್ಯ ॥೧॥

ಎನ್ನ ಕಿವಿ ಕೀರ್ತಿಮುಖ । ಎನ್ನ ನಾಲಿಗೆ ಘಂಟೆ
ಎನ್ನ ನಯನಗಳೆರಡು ಜ್ಯೋತಿ ನಿಮಗೆ ।
ಎನ್ನ ಮುಖವೇ ದ್ವಾರ । ಎನ್ನ ದಂತವೇ ಅದಕೆ ।
ಮಿನ್ನುತಿಹ ಮೌಕ್ತಿಕದ ಸೂಸಕಗಳು ॥೨॥

ಎನ್ನಧರ ಜವಳಿಗದ । ಎನ್ನನಾಸಾಪುಟವು ।
ನನ್ನಿಯಿಂ ಸೌರಭ್ಯ ರಸಘಟಿತವು
ಚೆನ್ನಾಗಿ ಬೀಸುವ । ಹೊನ್ನಜಾಳೇಂದ್ರವೈ ।
ಇನ್ನುಳ್ಳ ಉಪಕರಣವೆಂತೆಂದೆನೆ ॥೩॥

ಎನ್ನ ಸಮತೆಯ ಜಲವು । ಎನ್ನ ಸದ್ಗುಣ ಗಂಧ
ಎನ್ನ ನಿತ್ಯತ್ವವೆ ಅಕ್ಷತೆಗಳು ।
ಎನ್ನ ಜ್ಞಾನವೆ ಪುಷ್ಪ । ಎನ್ನ ಭಕ್ತಿಯೆ ಬೋನ ।
ಎನ್ನ ಮನವೇ ನಿಮಗೆ ಪೂಜಾರಿಯು ॥೪॥

ಇಂತಪ್ಪ ಪೂಜೆಯನು । ಸಂತಸದಿ ಕೈಕೊಳುತ ।
ಕಂತುಹರ ಶಿವಷಡಕ್ಷರಿ ಲಿಂಗವೇ ।
ಮುಂತೆ ಎನ್ನೊಳಗೆನಿ । ಶ್ಚಿಂತನಾಗಿರುತಿರಲು ।
ಚಿಂತೆಯುಂಟೇ ಹಲವು ಭವಭೀತಿಯ ॥೫॥

"ಲಿಂಗಪೂಜೆಯ ಮಾಡಿರೋ ನಿಮ್ಮೊಳು ಪ್ರಾಣಲಿಂಗ ಪೂಜೆಯ ಮಾಡಿರೋ ।
ಗಂಗೆಯಮುನೆಗಳ ಸಂಗಮದೊಳುಮಿಂದು । ಶೃಂಗಾಟದುಪರಿಯ ।
ರಂಗಮಂಟಪದೊಳು ॥ಪ॥

ವರಭಕ್ತಿಜಲವ ನೀಡಿ । ಮಜ್ಜನಗೈಯ್ದು ವಿರತಿ ಗಂಧವನೆ ತೀಡಿ ।
ಕರಣೇಂದ್ರಿಯಗಳೆಂಬ ಮಿರುಗುವಕ್ಷತೆಯು ನಿ । ಟ್ಟರಿಮೆಂಬ ನಿರ್ಮಲ ಸರಸಪುಷ್ಪವ
ಸೂಡಿ ॥೧॥

ಎಂದು ಸುಂದರವಾಗಿ ಹೇಳಿರುವರು. ಇವುಗಳಲ್ಲಿ ಬೇರೆ ಬೇರೆ ಅರ್ಥ ತುಂಬಿದೆ.

ಪ್ರಯಾಣಿಕರಿಗೆ ಬೆಲೆಗೊಟ್ಟಂತೆ ಕೂಡಲು ಅಧಿಕಾಧಿಕ ಸೌಕರ್ಯವುಳ್ಳ ಡಬ್ಬಿಗಳಿರುವಂತೆ, ಭಗವಂತನ ಆರಾಧಕರಿಗೂ ಅವರವರ ವಿಶಿಷ್ಟ ಕರ್ಮಾನುಸಾರವಾಗಿ ಸೌಖ್ಯಾತಿಶ

ಯವುಳ್ಳ ಸಾಯುಜ್ಯ, ಸಾಲೋಕ್ಯ, ಸಾಮೀಪ್ಯ,ಸಾರೂಪ್ಯ ಎಂದು ನಾಲ್ಕಿರನಾದ ಪ
ಗಳು ಹೇಳಲ್ಪಟ್ಟಿವೆ. ದೈವತ ಸಿದ್ಧಾಂತಕ್ಕನುಗುಣವಾಗಿ ಮುಕ್ತಿದೆಸೆಯಲ್ಲಿಯೂ ಪ
ಮಾರ್ಥಿಕ ಭೇದವು ಹೇಳಲ್ಪಡುತ್ತದೆ.

ವಿಷ್ಣುವು ಹಸ್ತದಲ್ಲಿ ಶಂಖಚಕ್ರಧರ, ಕೊರಳಲ್ಲಿ ಕೌಸ್ತುಭಮಣಿಯನ್ನು ಧರಿ
ಪೀತಾಂಬರಧಾರಿ, ಲಕ್ಷ್ಮೀಕಾಂತ ಎಂದು ವೈಷ್ಣವರು ತಿಳಿದರೆ, ಶೈವರು ಶಿವನನ್ನು ಪ
ಮುಖ, ದಶಭುಜ, ಪಾರ್ವತೀಪತಿ ನಂದಿವಾಹನನೆಂದು ಭಾವಿಸಿ ಆರಾಧಿಸುವರು. ವೈ
ವರು ವಿಷ್ಣು ಉಪಾಸನೆಯಿಂದ ಚತುರ್ವಿಧ ಮೋಕ್ಷಗಳನ್ನು ಪಡೆಯುವಂತೆ ಶಿವೋಪಾ
ರಾದ ಶೈವರು ಶಿವೋಪಾಸನೆಯಿಂದ ಕೈಲಾಸ ಪಡೆಯುವರೆಂಬ ನಂಬಿಗೆ ಇರುವದು.
ಶೈವರು ಈ ಬಗೆಯ ಕೈಲಾಸವನ್ನು ಪರಮಪದವಿಯೆಂದು ಭಾವಿಸದೇ ಲಿಂಗಾಂಗ ಸಾ
ರಸ್ಯವನ್ನೇ ತಮ್ಮ ಜೀವನದ ಅಂತಿಮ ಗುರಿಯೆಂದು ತಿಳಿದಿರುವರು.

ಶೂನ್ಯ ಸಿಂಹಾಸನದ ಅಗ್ರಪೀಠವನ್ನಲಂಕರಿಸಿದ ಅಲ್ಲಮಪ್ರಭುದೇವರು-

''ಕೈಲಾಸಕೈಲಾಸವೆಂದು ಬಡಿದಾಡುವ ಅಣ್ಣಗಳಿರಾ
ಕೈಲಾಸವೆಂಬುದೊಂದು ಹಾಳುಬೆಟ್ಟ ಅಲ್ಲಿರುವ ಶಿವನು ಬಲುಹೆಡ್ಡ"

ಎಂದು ಕೈಲಾಸಕ್ಕಾಗಿ ಬಾಯ್ಬಿಡುವ ಕೈಲಾಗದ ಹೇಡಿಗಳನ್ನು ಕಠೋರವಾಗಿ
ಸಿರುವರು.

ಶಿವಾನುಭವಮಂಟಪದಲ್ಲಿರುವ ಶರಣರ ಶಿವಪೂಜೆಗೆ ಹೂಗಳನ್ನು ತಂದೀವ ಕಾ
ಕೈಕೊಂಡ ಮಾದಯ್ಯನು ಚಳಿಗಾಲದಲ್ಲಿ ಗದಗದ ನಡಗುತ್ತ ಹೂಗಳನ್ನು ಎತ್ತು
ಸ್ವತಃ ಶಿವನೇ ಬಂದು ಮಾದಯ್ಯನೇ ಮೈಕೈಗಳು ಕೊರೆಯುವ ಈ ಪ್ರಚಂಡ ಚ
ಹೂಗಳನ್ನು ಎತ್ತುವ ಕಾಯಕವೇಕೆ ಬೇಕು ? ಕೈಲಾಸಕ್ಕೆ ನಡೆ ಎನ್ನಲು ಮಾದಯ್ಯ

''ಕಾಯಕವೆ ಕೈಲಾಸ ಮಾಯೆ ಕೊಲ್ಲುವ ಕೆಲಸ ।
ಆಯು ಬೆಳೆಸುದಕೆ ಸಾಹಸವು । ಜಗದೊಳಗೆ ।
ಜೀಯ ಸಂಸಾರ ನೀಗುದಕೆ ॥

ಎಂದು ಕೊಟ್ಟ ಉತ್ತರವು ಅತ್ಯಂತ ಮಾರ್ಮಿಕವಾದುದು. ಸಮಾಜಕ್ಕೆ ಮಾರಕ
ಸ್ವ ಹಾಗು ಪರರ ಶ್ರೇಯೋಭಿವೃದ್ಧಿಗೆ ಕಾರಣವಾದ ದುಡಿಮೆಯನ್ನು ಕಾಯ
ಪವಿತ್ರಪದದಿಂದ ಶರಣರು ಕರೆದರು.

ಶ್ರೀ ಬಸವೇಶ್ವರರು–

"ಕಾಯಕವೆ ಕೈಲಾಸ"
"ದೇವಲೋಕ ಮೃತ್ಯುಲೋಕವೆಂಬುದು ಬೇರಿಲ್ಲ ಕಾಣಿರೋ
ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ
ಮೃತ್ಯುಲೋಕ, ಆಚಾರವೇ ಸ್ವರ್ಗ, ಅನಾಚಾರವೇ
ನರಕ ಇದಕ್ಕೆ ನೀವೇ ಪ್ರಮಾಣು ಕೂಡಲಸಂಗಮದೇವ"

ಎಂದು ಹೇಳಿರುವರು. ದೇವಲೋಕ, ಮರ್ತ್ಯಲೋಕ ಸ್ವರ್ಗ, ಕೈಲಾಸ, ನರಕ ಎಲ್ಲವೂ ನಮ್ಮ ಬಳಿಯಲ್ಲಿಯೇ ಇವೆ. ನಾವು ಸತ್ಯಸಂಧರಾಗಿ, ಸತ್ವಶೀಲರಾಗಿ, ತತ್ತ್ವಾಚರಣೆಯಲ್ಲಿ ತಲ್ಲೀನರಾಗಿ ನಡೆದರೆ ಎಲ್ಲವೂ ನಮ್ಮ ಸನಿಹದಲ್ಲಿಯೇ ಇರುತ್ತವೆ.

"ನಾನು ನೀನುಗಳಳಿದು ತಾನು ಲಿಂಗದಿ ಉಳಿದು ।
ನಾನಾ ಭ್ರಮೆಗಳ ಅತಿಗಳೆದು । ನಿಂದಾತ ।
ತಾನೈಕ್ಯ ನೋಡು ಸರ್ವಜ್ಞ ॥''

ಎಂಬ ಉಕ್ತಿಯಂತೆ ನಾನು ನಾನಾಗಿಯೇ ಉಳಿಯದೇ ನಾನಳಿದು ನೀನಾಗುವದೇ ಐಕ್ಯಸ್ಥಲವು. ಅಂಗನು ಶುದ್ಧನಾಗಿ ಲಿಂಗದಲ್ಲಿ ಬೆರೆಯುವದೇ ಲಿಂಗಾಂಗ ಸಾಮರಸ್ಯವು.

ಸಿದ್ಧಾಂತ ಶಿಖಾಮಣಿಯಲ್ಲಿ ಪ್ರತಿಪಾದಿಸಲ್ಪಟ್ಟ ನೂರೊಂದು ಸ್ಥಲಗಳಲ್ಲಿ ಕೊನೆಯ ಸ್ಥಲ ಜ್ಞಾನಶೂನ್ಯಸ್ಥಲ,

''ಸರ್ವಶೂನ್ಯಂ ನಿರಾಭಾಸಂ ಸಾಮರಸ್ಯಂ ತಥಾಭವೇತ್ ।
ಘೃತೇಘೃತಂ ಯಥಾನ್ಯಸ್ತಂ ಕ್ಷಿರೇಕ್ಷೀರಂ ಯಥೈವಚ ॥
ಜಲೇ ಜಲಮಿವನ್ಯಸ್ತಂ ವನೌವಹ್ನಿರಿವಾರ್ಪಿತಂ ।
ಪರೇಬ್ರಹ್ಮಣಿಲೀನಾತ್ಮಾ ವಿಭಾಗೇನ ನದೃಶ್ಯತೇ ।

ಭೇದಪ್ರತೀತಿಗೆ ಕಾರಣವಾದ ಜ್ಞಾನವು ಆತನಲ್ಲಿರುವದರಿಂದ ಆ ಶಿವಯೋಗಿಯು ಜ್ಞಾನಶೂನ್ಯ ಸಂಪನ್ನನೆನಿಸಿಕೊಳ್ಳುವನು ಎಂದು ಆ ಸ್ಥಲದ ಲಕ್ಷಣವನ್ನು ಮಾಡುವರು. ನೀರಿನಲ್ಲಿ ನೀರೂ, ಹಾಲಿನಲ್ಲಿ ಹಾಲೂ,ಬೆಂಕಿಯಲ್ಲಿ ಬೆಂಕಿಯೂ ಕೂಡಿ ಒಂದಾಗಿ ಹೋಗುವಂತೆ ಶಿವಯೋಗಿಯು ಶಿವನಲ್ಲಿ ಬೆರೆತು ಐಕ್ಯವನ್ನು ಹೊಂದುವನು. ಅಂದರೆ-

"ಮಾನವಃ ಶಿವಯೋಗೇನ ಶಿವೋಭವತಿ ನಿಶ್ಚಯಾತ್''

ಎಂಬುಕ್ತಿಯಂತೆ ಶಿವನಯೋಗದಿಂದ ಶಿವನೇ ಆಗುವನು. ಈ ಅಭಿಪ್ರಾಯವನ್ನೇ ಉಪನಿಷತ್ತು- ''ಯಥಾನದ್ಯಃ ಸ್ಯಂದಮಾನಾಃ ಸಮುದ್ರೇ
ಅಸ್ತಂಗಚ್ಛಂತಿ ನಾಮರೂಪೇ ವಿಹಾಯ
ತಥಾವಿದ್ವಾನ್ ನಾಮರೂಪಾದ್ವಿಮುಕ್ತಃ
ಪರಾತ್ಪರಂ ಪುರುಷಮುಪೈತಿ ದಿವ್ಯಂ''

ಎಂದು ಹೇಳುತ್ತದೆ.

ಅಂದರೆ ಹೇಗೆ ಮಹಾನದಿಗಳು ಹರಿಹರಿದು ಕಟ್ಟಕಡೆಗೆ ಮಹಾಸಾಗರದಲ್ಲಿ ಕೂಡುವವೋ ಹಾಗೆ ಮಹಾನುಭಾವರೂ ಲೀಲಾವಿನೋದದಿಂದ ಲೋಕೋದ್ಧಾರ ಕಾರ್ಯಮಾಡಿ ಕೊನೆಗೆ ಶಿವನಲ್ಲಿ ಐಕ್ಯರಾಗುವರು.

ಯೋಗವು ಸಂಕರಯೋಗ, ಸಂಸೃಷ್ಟಿಯೋಗ, ಸಮರಸಯೋಗ ಎಂದು ಮೂರು ಬಗೆಯಾಗಿರುವದು. ಜೋಳದಲ್ಲಿ ವಿಜಾತೀಯ ಧಾನ್ಯವೆನಿಸಿದ ಗೋದಿ ಕೂಡಿದರೆ ಅದು

ಸಂಕರಯೋಗ. ವರ್ಗ,ರುಚಿ ಗುಣಗಳಿಂದ ಬೇರೆಯಾದ ಹಾಲಿನಲ್ಲಿ ತದ್ಭಿನ್ನವಾದ ... ಕೂಡಿದರೆ ಅದು ಸಂಸೃಷ್ಟಿಯೋಗ ಎನಿಸಿಕೊಳ್ಳುವದು. ಹಾಲಿನಲ್ಲಿ ಸಮಾನಧರ್ಮ... ಹಾಲೇ ಕೂಡಿದರೆ ಅದು ಸಮರಸಯೋಗ ಎನಿಸಿಕೊಳ್ಳುವದು. ಜೋಳದಲ್ಲಿ ಕೂ... ಗೋದಿಯನ್ನು ಬೇರ್ಪಡಿಸಲು ಬರುವದು. ಹಾಲಿನಲ್ಲಿ ನೀರು ಕೂಡಿದರೂ ಅದ... ಯಂತ್ರದಿಂದ ಪೃಥಕ್ಕರಣ ಮಾಡಲುಬರುವದು. ಹಾಲಿನಲ್ಲಿ ಹಾಲು ಕೂಡಿದರೆ ಕೂ... ಹಾಲು, ಕೂಡಿಸಿಕೊಂಡ ಹಾಲು ಎಂದು ಬೇರೆಮಾಡಲು ಬರುವದಿಲ್ಲ. ಆ ಹಾಲು ... ಹಾಲು ಕೂಡಿ ಒಂದೇಒಂದಾಗಿ ಸಮರಸವಾಗಿ ಬಿಡುವವು. ಇದೇ ಸಮರಸಯೋ... ಇದೇ ಸಾಮರಸ್ಯ.

> "ಜ್ಯೋತಿ ಮುಟ್ಟಿದ ಬತ್ತಿ ಎಲ್ಲಾ ಜ್ಯೋತಿಯಪ್ಪವಯ್ಯ
> ಸಾಗರವ ಮುಟ್ಟಿದ ನದಿಗಳೆಲ್ಲ ಸಾಗರವಪ್ಪವಯ್ಯ ।
> ಪ್ರಸಾದ ಮುಟ್ಟಿದ ಪದಾರ್ಥವೆಲ್ಲ ಪ್ರಸಾದವಪ್ಪವಯ್ಯ ।
> ಲಿಂಗವ ಮುಟ್ಟಿದ ಅಂಗವೆಲ್ಲ ಲಿಂಗವಪ್ಪವಯ್ಯ ।
> ಸಕಲೇಶ್ವರದೇವ ನಿಮ್ಮ ಮುಟ್ಟಿದವರೆಲ್ಲ ನಿಮ್ಮಂತಪ್ಪರಯ್ಯ ।"

> "ಆಕಾಶದಲ್ಲಿ ತೋರಿದ ಇಂದ್ರಧನುಸ್ಸು ಅಡಗುವದಕ್ಕೆ
> ಆಕಾಶವೇ ಆಶ್ರಯವಲ್ಲದೆ ಬೇರೆ ಆಶ್ರಯವುಂಟೇ ಅಯ್ಯಾ ।
> ಗಾಳಿಯಲ್ಲಿ ತೋರಿದ ಸುಳಿಗಾಳಿ ಅಡಗುವದಕ್ಕೆ
> ಆ ಗಾಳಿಯೇ ಆಶ್ರಯವಲ್ಲದೆ ಬೇರೆ ಆಶ್ರಯವುಂಟೇ ಅಯ್ಯಾ ।
> ಅಗ್ನಿಯಿಂದ ತೂರಿದ ಕಿಡಿಗಳು ಅಡಗುವದಕ್ಕೆ
> ಅಗ್ನಿಯೇ ಆಶ್ರಯವಲ್ಲದೆ ಬೇರೆ ಆಶ್ರಯವುಂಟೇ ಅಯ್ಯಾ ।
> ಸಮುದ್ರದಲ್ಲಿ ತೋರಿದ ನೊರೆತೆರೆ ಅಡಗುವದಕ್ಕೆ
> ಆ ಸಮುದ್ರವೇ ಆಶ್ರಯವಲ್ಲದೆ ಬೇರೆ ಆಶ್ರಯವುಂಟೇ ಅಯ್ಯಾ ।
> ಆದಿಅನಾದಿಯಿಂದತ್ತತ್ತಲಾದ ಮಹಾಘನವಸ್ತುವಿನಲ್ಲಿ
> ರೂಪಿಸಿ ತೋರಿದ ನಿಜೈಕ್ಯನಡಗುವದಕ್ಕೆ ಆ ಪರವಸ್ತುವೇ
> ಆಶ್ರಯವಲ್ಲದೆ ಬೇರೆ ಆಶ್ರಯವುಂಟೇ ಅಯ್ಯಾ ಅಖಂಡೇಶ್ವರ"

ಮುಂತಾದ ವಚನಗಳು ಮೇಗಣ ಅಭಿಪ್ರಾಯವನ್ನೇ ಸ್ಪಷ್ಟೀಕರಿಸುತ್ತವೆ. ಬಸವ... ಪ್ರಭುದೇವ, ಚನ್ನಬಸವಣ್ಣ, ಸಿದ್ಧರಾಮ, ನಿಜಗುಣ ಮೊದಲಾದ ಮಹಿಮರು ... ಸ್ಥಲ, ಜಂಗಮಸ್ಥಲ, ಆರೂಢಸ್ಥಲ, ಮುಂತಾದ ಸ್ಥಲಗಳಲ್ಲಿ ಬಲ್ಲಿದರಾಗಿದ್ದರೆ ಅಜಗಣ್ಣ... ನು ಐಕ್ಯಸ್ಥಲದಲ್ಲಿ ಅಗ್ರೇಸರನು ಎಂಬುದನ್ನು–

> "ಬಸವಣ್ಣನ ಭಕ್ತಿ, ಚನ್ನಬಸವಣ್ಣನ ಜ್ಞಾನ,
> ಮಡಿವಾಳಯ್ಯನ ನಿಷ್ಠೆ, ಪ್ರಭುದೇವರ ಜಂಗಮಸ್ಥಲ,
> ಅಜಗಣ್ಣನ ಐಕ್ಯಸ್ಥಲ ..."

ಎಂಬವ ವಚನದಿಂದ ಅಕ್ಕಮಹಾದೇವಿಯು ಸಾರಿದ್ದಾಳೆ.

ಲಿಂಗಾಂಗ ಸಾಮರಸ್ಯದ ಬಗ್ಗೆ–ಅಂಗನು ಲಿಂಗದಲ್ಲಿ ಸಮರಸವಾಗುವ ಬಗ್ಗೆ–ಸರ್ವಜ್ಞನು ಒಂದು ಸುಂದರ ದೃಷ್ಟಾಂತ ಕೊಟ್ಟು ಹೇಳಿರುವನು. ಲೋಕದಲ್ಲಿ ಲಗ್ನಮಂಟಪದೊಳಗೆ ವಧುವರರನ್ನು ಕೂಡಿಸಿ ಲಗ್ನಸಮಾರಂಭ ನೆರವೇರಿಸುವಂತೆ ಕಪ್ಪುರದಿಂದ ಮಾಡಿದ ಕನ್ಯೆಗೂ, ಕೆಂಡದಿಂದ ಮಾಡಿದ ವರನಿಗೂ ವಿವಾಹಸಮಾರಂಭ ನಡೆಯಿತಂತೆ. ವರನ ವಾಮಭಾಗದಲ್ಲಿ ಕಪ್ಪುರ ಕನ್ಯೆಯನ್ನು ಕೂಡಿಸಿ ವೈದಿಕರು ತದೇವಲಗ್ನಂ ಸುದಿನಂತದೇವ, ಎಂದು ಮಂತ್ರ ಪಠನಮಾಡಿ ಅಕ್ಷತೆ ಒಗೆಯಬೇಕೆನ್ನುವಷ್ಟರಲ್ಲಿ ಕನ್ಯೆಯು ಕಾಣದಾಗಿತ್ತಂತೆ. ಅಂದರೆ ಶಿಖಿಕರ್ಪೂರ ನ್ಯಾಯದಂತೆ ಕಪ್ಪುರದ ಕನ್ಯೆಯು ಜ್ಯೋತಿಪುರುಷನಲ್ಲಿ ಬೆರೆತುಹೋಗಿತ್ತು.

ಲಿಂಗೈಕ್ಯರಾದರು, ಲಿಂಗದೊಳಗಾದರು, ಲಿಂಗದಲ್ಲಿ ಅಡಗಿದರು, ಲಿಂಗದಲ್ಲಿ ಬೆರೆತರು ಮುಂತಾದ ಪಾರಿಭಾಷಿಕ ಶಬ್ದಗಳು ಶರಣರು, ಶಿವಯೋಗಿಗಳು, ಮಹಂತರು ಶಿವನಲ್ಲಿ ಸಾಮರಸ್ಯ ಹೊಂದಿರುವದನ್ನು ನಿರೂಪಿಸುತ್ತವೆ. ಈ ಹೊತ್ತಿಗೂ ಲಿಂಗವಂತರು ಅಸುನೀಗಿದರೆ, ಲಿಂಗೈಕ್ಯರಾದರೆ ಒಂದು ಬೆಳ್ಳಿಯ ಹೊಸ ಲಿಂಗವನ್ನು ಮಾಡಿಸಿ ಜಗಲಿಯ ಮೇಲಿಟ್ಟು ಅಥವಾ ಸಮಾಧಿಯ ಮೇಲಿಟ್ಟು ಪೂಜಿಸುವ ಸತ್ಸಂಪ್ರದಾಯವಿದೆ. ಈ ಸತ್ಸಂಪ್ರದಾಯವು ಲಿಂಗವಂತನು ಅಂಗೈಯಲ್ಲಿ ಲಿಂಗವನ್ನು ಪೂಜಿಸಿ ಪೂಜಿಸಿ ತಾನೇ ಲಿಂಗವಾದನು ಎಂಬುದನ್ನೇ ಸೂಚಿಸುತ್ತದೆ. ಅನೇಕ ಮುಕ್ತಾತ್ಮರ ಅವಸಾನ ಕಾಲದ ತಾತ್ತ್ವಿಕೋಕ್ತಿಗಳನ್ನು ಓದಿದರೆ ಅವರು ಲಿಂಗದಲ್ಲಿ ಸಾಮರಸ್ಯಪಡೆದ ಕಲ್ಪನೆಯು ಬಾರದಿರದು.

> "ಅಂತೇಮತಿಃ ಸಾಗತಿಃ"
>
> "ಅಂತಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾಕಲೇವರಂ।
> ಯಃ ಪ್ರಯಾತಿ ಸಮದ್ಭಾವಂ ಯಾತಿ ನಾಸ್ತ್ಯತ್ರಸಂಶಯಃ"
>
> "ತನುವಿಯೋಗದೊಳೀನ ನೆನೆವನಂತಹನಾಗಿ।
> ತನಗಲ್ಲಿ ನಿಜದೆಚ್ಚರಿರಬೇಕು"

ಮೃತ್ಯುವು ತನ್ನ ಕರಾಳ ನಾಲಿಗೆಯನ್ನು ಚಾಚಿ ಮಾನವನನ್ನು ಎತ್ತಿಕೊಂಡು ಒಯ್ಯುವ ಕಾಲ ಸತ್ವಪರೀಕ್ಷೆಯ ಕಾಲ. ಆ ದುಸ್ತರ, ದುರಂತ ಸನ್ನಿವೇಶದಲ್ಲಿ ನಾನೇ ಎಂದು ಮೇಲಾಡುವ ಅತಿರಥಿ ಮಹಾರಥಿಗಳೆಲ್ಲರೂ ದಿಙ್ಮೂಢರಾಗುವರು. ಶಿವಭಕ್ತಿ, ಶಿವಾಚಾರ, ಶಿವಜ್ಞಾನಗಳಲ್ಲಿಯೇ ತನು-ಮನ-ಧನಗಳನ್ನು ಸವೆಸುವ ಸತ್ವಶೀಲರಾದ ಶಿವಯೋಗಿಗಳು ಶಿವೈಕ್ಯರಾಗುವ ಸಮಯದಲ್ಲಿಯೂ ಸ್ವಸ್ವರೂಪಾನುಸಂಧಾನದಲ್ಲಿ ತಲ್ಲೀನರಾಗಿ, ತನ್ಮಯರಾಗಿ ತದಾಕಾರವೃತ್ತಿಯುಳ್ಳವರಾಗಿ ಶಿವಸ್ವರೂಪಿಗಳೇ ಆಗಿಹೋಗುವರು.

> "ಶಿವನೊಳಗೆ ವಿಶ್ವಾಸ ಶಿವನೊಳಗೆ ನಂಬಿಗೆಯು ಶಿವನೊಳಗೆ
> ಮೋಹವಿರೆ ತಾನೆ ಶಿವನು"

ಎಂಬುಕ್ತಿಯಂತೆ ಯಾವಾಗಲೂ ಶಿವಮಂತ್ರವನ್ನೇ ಜಪಿಸುವ ಅಜಗಣ್ಣನು ತಲೆಗೆ ತಲೆ

ಬಾಗಿಲು ತಾಕಿ ಪ್ರಾಣೋತ್ಕ್ರಮಣವಾಗುವ ಅಂತಿಮ ಪ್ರಸಂಗದಲ್ಲಿಯೂ ಶಿವಮಂತ್ರವನ್ನೇ ಜಪಿಸುತ್ತ ಶಿವನೊಳಗೈಕ್ಯನಾದನು.

ಮಹಿಳಾ ಮಂಡಳಕ್ಕೆ ಮುಕುಟ ಮಣಿಯಂತಿರುವ ವೀರವಿರಾಗಿಣಿ ಅಕ್ಕಮಹಾದೇವಿಯ

"ಮೂಲದ್ವಾರದ ಬೇರಮೆಟ್ಟಿ ಭೂಮಂಡಲವನೇರಿದೆ ।
ಆಚಾರದ ಬೇರ ಹಿಡಿದು ಐಕ್ಯದ ತುದಿಗೇರಿದೆ ।
ವೈರಾಗ್ಯದ ಸೋಪಾನದಿಂದ ಶ್ರೀಗಿರಿಯನೇರಿದೆ ।
ಕೈವಿಡಿದು ಕರೆದುಕೊಳ್ಳಾ ಚನ್ನಮಲ್ಲಿಕಾರ್ಜುನ"

"...... ಜಗದಾದಿಶಕ್ತಿಯೊಳು ಬೆರಸಿಯೊಡನಾಡುವ
ಪರಮಗುರು ಚನ್ನಮಲ್ಲಿಕಾರ್ಜುನನ ನಿಲವ
ಕಂಡು ಬದುಕಿದೆನು''

ಎಂಬುದನ್ನೂ, ಬಸವಣ್ಣನವರ ನಲ್ಮೆಯ ನಲ್ಲೆಯಾದ ನೀಲಮ್ಮನವರು, ಲಿಂಗೈಕ್ಯರಾಗುವ ಮುನ್ನ ಅಂಗೈಯಲ್ಲಿ ಲಿಂಗಯ್ಯನನ್ನು ಹಿಡಿದುಕೊಂಡು ಹಾಡಿದ್ದ-

"ನೋಡುನೋಡುನೋಡುನೋಡುನೋಡು ಲಿಂಗವೇ ।
ನೋಡು ಬಸವಯ್ಯನವರು ಮಾಡಿದಾಟವ ।
ಸಂಗನ ಬಸವಣ್ಣನೆಂದ ನಿರೂಪಕೆ ।
ಹಿಂಗದೇ ಕರವೆತ್ತಿ ಮುಗಿಯುತಲಿ ।
ಸಂಗಮನಾಥನೆ ಈತನೆಂದು ಎ ।
ನ್ನಂಗೈಯ ಲಿಂಗದೊಳಡಗುವೆ"

ಈ ಹಾಡನ್ನೂ, ಹಡಪದಪ್ಪಣ್ಣನ ಧರ್ಮಪತ್ನಿಯಾದ ಲಿಂಗಮ್ಮ ಹೇಳಿದ-

"ನೋಡಿಹೆನೆಂದರೆ ನೋಟವಿಲ್ಲ ಕೇಳಿಹೆನೆಂದರೆ ಕಿವಿಯಿಲ್ಲ. ವಾಸಿಸಿಹೆನೆಂದರೆ ನಾಸಿಕವಿಲ್ಲ. ನುಡಿದಿಹೆನೆಂದರೆ ಬಾಯಿಯಿಲ್ಲ, ಹಿಡಿದಿಹೆನೆಂದರೆ ಹಸ್ತವಿಲ್ಲ, ನಡೆದಿಹೆನೆಂದರೆ ಕಾಲಿಲ್ಲ, ನೆನೆದಿಹೆನೆಂದರೆ ಮನವಿಲ್ಲ. ಇಂತು ನೆನಹು ನಿಷ್ಪತ್ತಿಯಾಗಿ ಶರಣರ ಪಾದದಲ್ಲಿ ಬೆರೆದು ಸುಖಿಯಾದೆನಯ್ಯ"

"--- ತೊಟ್ಟುಬಿಟ್ಟು ಬಿಟ್ಟ ಬಯಲೊಳಗೆ ಬಿದ್ದು ನಾನೆತ್ತ ಹೋದೆನೆಂದರಿಯೆನಪ್ಪ ಅಪ್ಪಣ್ಣಪ್ರಿಯ ಚನ್ನಬಸವಣ್ಣ" ಈ ಅನುಭಾವದ ಅಮೃತವಾಣಿಯನ್ನು ಗಮನಿಸಬಹುದು. ನಿಜಗುಣರ ಸಮಕಾಲೀನರಾದ ಮುಪ್ಪಿನಷಡಕ್ಷರಿಗಳು ಲಿಂಗೈಕ್ಯರಾಗುವ ಆ ಪ್ರಸಂಗದಲ್ಲಿ-

ನಮ್ಮ ದೇಶಕೆ ಹೋದದಿನ ಬಂದು ಮುಂದೆ ।
ಗಮನ ನೆಲ್ಲವ ತೊಟ್ಟಿ[illegible] ।

ಬಿಡು ತನುವಿನ ಮೇಲಣಾಸೆಯನು ಮುಂದೆ ।
ಹಿಡಿ ಶಿವಶರಣರ ಭಾಷೆಯನು ॥
ಮೃಡಕ್ಷಡಕ್ಷರಾಧೀಶನನು ಮುಂದೆ ।
ಯೊಡಗೂಡು ಭವಪಾಶನಾಶನನು ॥"

" ಹಾರು ಕಂಡ್ಯಾ ಹಂಸ ಹಾರುಕಂಡ್ಯಾ ನೀನು ।
ಮೂರು ಬಲೆಯೊಳಗೆ ಸಿಲುಕದೆ "

ಎಂಬ ಹಾಡನ್ನು ಹಾಗೂ ಮೈಲಾರದ ಬಸವಲಿಂಗ ಶರಣರು ಶಿವೈಕ್ಯರಾಗುವಾಗ -

" ತಾನೆ ಬೆಳಗುತಿದೆ ಸ್ವಯಂಜ್ಯೋತಿ ತಾನೆ ಬೆಳಗುತಿದೆ "

ಎಂಬ ಪದ್ಯವನ್ನು ಮತ್ತು ಹತ್ತೊಂಬತ್ತನೆಯ ಶತಮಾನದಲ್ಲಿ ಆಗಿಹೋದ ಘನಮಠ ಶಿವಯೋಗಿಗಳು ಎಚ್ಚರಿಸುವ-

" ಹೊತ್ತಿರಲಿಕೆ ಊರಿಗೆ ಸೇರೋ । ದಾರಿ
ಕತ್ತಲೆಯೊಳಗಿರುಪ್ಪವರಾರೋ "

ಎಂಬ ಗೀತವನ್ನು ನೆನಪಿಸಿಕೊಳ್ಳಬೇಕು,

ಕುಸ್ತಿಯ ಕಣಕ್ಕಿಳಿದು ಸಡ್ಡುಹೊಡೆದು ಎದುರಾಳಿಗಳನ್ನು ಮಣ್ಣು ಮುಕ್ಕಿಸಿ ವಿಜಯಶ್ರೀಯನ್ನು ಗಳಿಸಬೇಕಾದರೆ ಜಟ್ಟಿಯು ಮೊಟ್ಟಮೊದಲು ಗರಡಿಯ ಮನೆಯಲ್ಲಿ ಬಗೆ ಬಗೆಯ ಹಿಡಿತಗಳನ್ನು ಕಲಿಯಬೇಕಲ್ಲವೇ ? ಪರೀಕ್ಷೆಯಲ್ಲಿ ಒಂದನೇ ತರಗತಿಯಲ್ಲಿ ಉತ್ತೀರ್ಣನಾಗಬೇಕೆಂಬ ವಿದ್ಯಾರ್ಥಿಯು ಶಾಲೆ ಕಾಲೇಜುಗಳಲ್ಲಿ ಊಟ ನಿದ್ರೆಗಳ ಪರಿವೆಯಿಲ್ಲದೆ ಮನಃಪೂರ್ವಕ ಓದಬೇಕಲ್ಲವೇ ? ಚುನಾವಣೆಯ ಕಣಕ್ಕಿಳಿದು ಪ್ರಚಂಡ ಬಹುಮತದಿಂದ ಆರಿಸಿ ಬರಬೇಕೆಂಬ ಮಹತ್ವಾಕಾಂಕ್ಷೆಯುಳ್ಳ ಅಭ್ಯರ್ಥಿಯು ಮೊದಲು ತನ್ನಲ್ಲಿ ಸ್ವಾರ್ಥತ್ಯಾಗ, ಸೇವಾಭಾವನೆ, ಜನಾನುರಾಗ ಮೊದಲಾದ ಲೋಕೋತ್ತರ ಗುಣಗಳನ್ನು ಮೈಗೂಡಿಸಿಕೊಳ್ಳಬೇಕಲ್ಲವೇ ? ಭಕ್ತನು ಮುಕ್ತನಾಗಬೇಕಾದರೆ, ಸಾಧಕನು ಸಿದ್ಧಿಯನ್ನು ಪಡೆಯಬೇಕಾದರೆ-

" ಸತುದೀರ್ಘಕಾಲನೈರಂತರ್ಯ ಸತ್ಕಾರಸೇವಿತೋದೃಢಭೂಮಿಃ "

ಎಂಬ ಪಾತಂಜಲಯೋಗ ಸೂತ್ರದಂತೆ ಬಿಟ್ಟೂಬಿಡದೆ ದೀರ್ಘ ಸಮಯದವರೆಗೆ ಸಾಧನೆ ಮಾಡಬೇಕು. ಆಳವಾದ ಸಮುದ್ರದ ತಳದಲ್ಲಿರುವ ಮುತ್ತು ದೊರೆಯಬೇಕಾದರೆ ಮತ್ತೆ ಮತ್ತೆ ಮುಳುಗಬೇಕು; ಮುಳುಮುಳುಗಿ ಏಳಬೇಕು. ಆಗ ಮುತ್ತು ದೊರೆಯುವದಲ್ಲದೇ ದಂಡೆಯ ಮೇಲೆ ಕೈಕಟ್ಟಿಕೊಂಡು ಕುಳಿತರೆ ಮುತ್ತು ದೊರೆಯುವದೇ? ತೇಯುದೇ ಗಂಧ ಬರುವದೇ ? ದಿಟ್ಟತನದಿಂದ ಏರದೇ ಬೆಟ್ಟದತುದಿ ಸಿಕ್ಕೀತೇ ? ಕಡೆಯದೇ ಬೆಣ್ಣೆ ಬಂದೀತೇ ? ಸಮರ ಭೂಮಿಯಲ್ಲಿ ಅಸಮ ಸಾಹಸ ಮಾಡದೇ ವಿಜಯ ದೊರಕೀತೇ ? ಕರ್ತಾರನ ಕಮ್ಮಟವೆನಿಸಿದ ಈ ಲೋಕದಲ್ಲಿ ಪ್ರತಿಯೊಬ್ಬ ಮಾನವನೂ ವಿಶ್ವಪ್ರಯತ್ನ ಮಾಡಿ ವಿಜಯ ಸಂಪಾದನೆ ಮಾಡಬೇಕು. ಇಲ್ಲಿ ಸಲ್ಲಿದರೇನೇ ಅಲ್ಲಿ ಸಲ್ಲುವರು, ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರು ಎಂದು ಶರಣರ ಅಮರವಾಣಿಯುಂಟು. ಟಂಕಸಾಲೆಯಲ್ಲಿ ಅಧಿಕೃತ ಮುದ್ರೆಯನ್ನು ಪಡೆದ ನಾಣ್ಯವೇ ವ್ಯವಹಾರದಲ್ಲಿ ಚಲಾಯಿಸುವದಕ್ಕೆ ಬರುವ

ದಲ್ಲದೇ ಅನಧಿಕೃತ ನಾಣ್ಯವು ಬಂದೀತೇ ? ಅದು ಖೋಟಾನಾಣ್ಯ ಎಂದು
ಹಾಕಲಾಗುವದು.

" ಶರಣರಗುಣ ಮರಣದಲ್ಲಿ" ಎಂಬುದೊಂದು ನಾಣ್ಣುಡಿ ಸುಪ್ರಸಿದ್ಧ
ವಿದ್ಯಾರ್ಥಿಯ ಅಭ್ಯಾಸದ ಪರೀಕ್ಷೆಯು ಪ್ರಶ್ನಪತ್ರಿಕೆಗಳಲ್ಲಿ, ವೀರಯೋಧನ ಪರೀಕ್ಷೆ
ರಣರಂಗದಲ್ಲಿ, ಪೈಲವಾನನ ಪರೀಕ್ಷೆಯು ಕುಸ್ತಿಯ ಕಣದಲ್ಲಿ, ತಪಸ್ವಿಯ ತಪಃಪರೀಕ್ಷೆ
ಸಾಧಿಸಿದ ಸಿದ್ಧಿಯಲ್ಲಿ ಕಂಡು ಬರುವಂತೆ ಶರಣರ ಸತ್ವ ಪರೀಕ್ಷೆಯಾಗುವದು ಮರಣಪ್ರ
ಗದಲ್ಲಿ. ಸಂತರು, ಶರಣರು, ಶಿವಯೋಗಿಗಳು, ಪ್ರಾಣೋತ್ಕ್ರಮಣದಂತಹ ವಿಷಮ
ವೇಶದಲ್ಲಿಯೂ ತಮ್ಮ ಧ್ಯೇಯ ಚಿಂತನೆಯಿಂದ ವಿಮುಖರಾಗುವದಿಲ್ಲ ಎಂಬುದು ಅ
ಹೇಳಿದ ಹಾಡುಗಳಿಂದ ತಿಳಿದುಬರುವದು. ಇಡೀ ವಿಶ್ವವೇ ಮರಣ ಎಂಬ ಶಬ್ದ ಕೇ
ಅಂಜುವದು ಅಳುಕುವದು, ಹೆದರಿ ಗಡಗಡ ನಡುಗುವದು. ಇಂತಹ ಮರಣಕ್ಕೇ -
ಶ್ರೀ ಬಸವೇಶ್ವರರು " ಮರಣವೇ ಮಹಾನವಮಿಯೆನಗೆ " ಎಂದು ಕರೆದರು. ನವ
ಮಹೋತ್ಸವವು, ವಿಜಯ ದಶಮಿಯು ನನಗೆ ಎಷ್ಟು ಸಂತೋಷದಾಯಕವೋ ಅ
ಮರಣವೂ ಆನಂದದಾಯಕ ಎಂದು ಹೇಳಿರುವರು.

'' ಕಿಡಿಕಿಡಿ ಕೆದರಿದಡೆ ಎನಗೆ ಹಸಿವು ತೃಷೆ ಅಡಗಿತೆಂಬೆನು,
ಮುಗಿಲು ಹರಿದು ಬಿದ್ದಡೆ ಎನಗೆ ಮಜ್ಜನಕ್ಕೆರೆದರೆಂಬೆನು !
ಗಿರಿ ಮೇಲೆ ಬಿದ್ದಡೆ ಎನಗೆ ಪುಷ್ಪವೆಂಬೆನು !
ಚೆನ್ನಮಲ್ಲಿಕಾರ್ಜುನಯ್ಯ ಶಿರಹರಿದು ಬಿದ್ದೊಡೆ
ಪ್ರಾಣ ನಿಮಗರ್ಪಿತವೆಂಬೆನು ! "

" ಆರೂ ಇಲ್ಲದವಳೆಂದು ಆಳಿಗೊಳಲು ಬೇಡ ಕಂಡಯ್ಯ !
ಏನು ಮಾಡಿದಡೆಯೂ ನಾನಂಜುವವಳಲ್ಲ !
ತರಗೆಲೆಯ ಮೆಲಿದು ನಾನಿಹೆನು !
ಸುರಿಗೆಯ ಮೇಲೊರಗಿ ನಾನಿಹೆನು !
ಚೆನ್ನಮಲ್ಲಿಕಾರ್ಜುನಯ್ಯ ಕರೆಕಡೆ ಕಾಡಿದೊಡೆ
ಒಡಲನು ಪ್ರಾಣವನು ನಿಮಗೊಪ್ಪಿಸಿ ಶುದ್ಧಳಹೆನು ! "

ಈ ವಚನಗಳಲ್ಲಿ " ಪ್ರಾಣ ನಿಮಗರ್ಪಿತವೆಂಬೆನು " " ಒಡಲನು ಪ್ರಾಣವನು ನಿಮಗೊ
ಪ್ಪಿಸಿ ಶುದ್ಧಳಹೆನು " ಎಂದು ಬರುವದು, ಇಲ್ಲಿರುವ ಅರ್ಪಿತ, ಒಪ್ಪಿಸುವ ಎಂಬ ಶ
ಗಳು ಅತೀವ ಮಹತ್ವವಾದವುಗಳು,

ವೀರಶೈವ ಷಟಸ್ಥಲ ಸಿದ್ಧಾಂತದಲ್ಲಿ ಕಾಯಾರ್ಪಿತಸ್ಥಲ, ಕರಣಾರ್ಪಿತಸ್ಥಲ, ಭಾವಾ
ರ್ಪಿತಸ್ಥಲ, ಲಿಂಗಾರ್ಪಣ, ಮಿಶ್ರಾರ್ಪಣ, ಮುಂತಾದ ಶಬ್ದಗಳು ಬರುತ್ತಿದ್ದು ಅಲ್ಲ
ರುವ ಅರ್ಪಿತ ಅಥವಾ ಅರ್ಪಣ ಶಬ್ದದ ಅರ್ಥವು ಒಪ್ಪಿಸುವಿಕೆ, ಸಮರ್ಪಣಾಭಾವ
ಗುತ್ತದೆ. ಇದೇ ರೀತಿಯಿಂದ ವೈದಿಕವಾಙ್ಮಯದಲ್ಲಿ ವ್ಯವಹಾರದಲ್ಲಿ ಬರುವ ಜಲ

ಅನ್ನಸಂತರ್ಪಣ, ಮುಂತಾದ ಶಬ್ದಗಳಲ್ಲಿಯು ತರ್ಪಣ ಶಬ್ದಾರ್ಥವು ತೃಪ್ತಿಪಡಿಸುವಿಕೆ ಎಂದಾಗುವದು.

ಅಕ್ಕಮಹಾದೇವಿಯು ಎಂತಹ ವಿಪತ್ಪರಂಪರೆಗಳು ಬಂದರೂ ಅವಕ್ಕಂಜದೇ ಅಳುಕದೇ ಅವನ್ನೆಲ್ಲ ಸಂತೋಷದಿಂದ ಸ್ವಾಗತಿಸಿ–

" ವಿತ್ತಾತ್ಪುತ್ರಃ ಪ್ರಿಯಃ ಪುತ್ರಾತ್ ಪಿಂಡಃ ಪಿಂಡಾತ್ತಥೇಂದ್ರಿಯಂ,
ಇಂದ್ರಿಯಾಚ್ಚ ಪ್ರಿಯಾಃ ಪ್ರಾಣಾಃ "

ಎಂಬುಕ್ತಿಯಂತೆ ಎಲ್ಲಕ್ಕಿಂತಲೂ ಪ್ರಿಯವಾದ ಪ್ರಾಣವನ್ನೇ ನಿಮಗರ್ಪಿಸಿ ಶುದ್ಧಳಾಗುವೆನು ಎಂದು ಹೇಳಿರುವಳು. ಅಶುದ್ಧ ಬಂಗಾರವನ್ನು ಬೆಂಕಿಯಲ್ಲಿ ಹಾಕಿ ಸುಟ್ಟಾಗ ಅದು ಚೊಕ್ಕ ಚಿನ್ನವಾಗುವಂತೆ, ಸಾಂಸ್ಕಾರಿಕ ವೈಷಯಿಕ ವಾಸನೆಗಳಿಂದ ದೂಷಿತಗಳಾದ ಕಾಯ, ಮನ, ಭಾವಂಗಳು ಶಿವಾರ್ಚನ, ಶಿವಾರ್ಪಿತ, ಶಿವಾನುಭವಗಳಿಂದ ಪರಿಶುದ್ಧವಾಗುವವು. ಆಗ ವಾಯುಪ್ರಾಣಿಯು ಲಿಂಗಪ್ರಾಣಿಯಾಗುವನು, ಜಂಗಮ ಪ್ರಾಣಿಯಾಗುವನು. ಶ್ರೀ ಬಸವಣ್ಣನವರು ಜಂಗಮ ಪ್ರಾಣಿಗಳೂ, ಗಂಗಾಂಬಿಕೆಯು ಗುರುಪ್ರಾಣಿಯೂ, ನೀಲಾಂಬಿಕೆಯು ಲಿಂಗಪ್ರಾಣಿಯೂ ಆಗಿದ್ದರೆಂಬುದು ಅವರವರ ಜೀವನಚರಿತ್ರೆಯಿಂದ ತಿಳಿದು ಬರುವದು.

ಆರಂಭದಲ್ಲಿ ಅಮೃತ ಕುಂಭದಂತೆ ತೋರಿ, ಅಂತ್ಯದಲ್ಲಿ ವಿಷಕುಂಭದಂತಿರುವ ದುರ್ವಿಷಯಗಳ, ದುರ್ವ್ಯಸನಗಳ, ದುಶ್ಚಟಗಳಿಗೇನೇ ಅಂಟಿಕೊಂಡು ಅವೇ ಜೀವನದ ಮೌಲ್ಯಗಳೆಂದು ಭ್ರಮಿಸಿ ಸತ್ತು ಹೋಗುವ ಜನರು ಅಸಂಖ್ಯ. ಇದನ್ನೇ ಪ್ರಭುದೇವರು–

" ಹೊನ್ನಿಗಾಗಿ ಸತ್ತವರು ಕೋಟಿ, ಹೆಣ್ಣಿಗಾಗಿ ಸತ್ತವರು ಕೋಟಿ,
ಮಣ್ಣಿಗಾಗಿ ಸತ್ತವರು ಕೋಟಿ. ಅಶನಕ್ಕಾಗಿ ಸತ್ತವರು ಕೋಟಿ.
ವಸನಕ್ಕಾಗಿ ಸತ್ತವರು ಕೋಟಿ, ವ್ಯಸನಕ್ಕಾಗಿ ಸತ್ತವರು ಕೋಟಿ,
ನಿನಗಾಗಿ ಸತ್ತವರನೊಬ್ಬರನೂ ಕಾಣೆನೆಂದ ಗುಹೇಶ್ವರ "

ಎಂದು ಹೇಳಿರುವರು,

" ಮತ್ತು ದೇವತೆಯೆತ್ತಿ ಹೊತ್ತುತಾನಾಡಿಸುತ ।
ತುತ್ತು ಇದ್ದಲ್ಲಿ ಒಯ್ದುಣಿಸಿ । ಕಡೆಯಲ್ಲಿ ।
ಹೊತ್ತು ಚೆಲ್ಲುವಳು ಸರ್ವಜ್ಞ ॥ "

ಎಂಬ ಉಕ್ತಿಯಂತೆ, ಈ ಮೃತ್ಯುಲೋಕದಲ್ಲಿ ಮೃತ್ಯು ದೇವತೆಯು ಎತ್ತಿಕೊಳ್ಳುವಳು. ಹೊತ್ತುಕೊಂಡು ಮುದ್ದಿಕ್ಕಿ ತುತ್ತುಮಾಡಿ ಉಣಿಸಿದಂತೆ ನಟನೆಮಾಡಿ ಕಟ್ಟಕಡೆಗೆ ಟಿ.ಬಿ., ಹಾರ್ಟಫೇಲ, ಕ್ಯಾನ್ಸರ ರೋಗಗಳಿಗೆ ಆಹುತಿಯಾಗಿಯೋ, ಉರುಲು ಹಾಕಿಕೊಂಡೋ, ವಿಷಕುಡಿದ್ದೋ, ಮೋಟಾರ ವಿಮಾನಗಳ ಅಪಘಾತದಿಂದಲೋ, ಸಿಡಿಲು ಬಡಿದ್ದೋ, ಹಾವು ಕಡಿದೋ, ಸತ್ತು ಹೋಗುವಂತೆ ಮಾಡುವಳು. ಹೀಗೆ ಕುತ್ತಿಗೆ ಹಿಸುಕಿ ಎತ್ತಿಕೊಂಡೊಯ್ವ ದಾರುಣ ದುರಂತ ಪ್ರಸಂಗದಲ್ಲಿಯೂ–

"ಪುತ್ರಾಣಿಮೇ ಮೇ ದಾರಾಣಿಮೇ ಮೇ
ಗೃಹಾಣಿಮೇ ಮೇ ಪಶವಶ್ಚಮೇಮೇ ।
ಮೇಮೇ ಬ್ರುವನ್ ಕಾಲವೃಕೇನ ನೀತಃ"

ಎಂಬುಕ್ತಿಯಂತೆ ತೋಳದ ಬಾಯಿಗೆ ಸಿಕ್ಕ ಕುರಿಯು ಮ್ಯಾ ಮ್ಯಾ ಎಂದು ಒದರಿ ಸತ್ತು ಹೋಗುವಂತೆ ಕಾಲನೆಂಬ ತೋಳದ ಬಾಯಿಗೆಸಿಕ್ಕ ಈ ನರಕುರಿಯೂ ಮೇ, ಮೇ, ಎಂದರೆ ನನ್ನದು ನನ್ನದು ಎಂದು ಹಲುಬಿ ಸತ್ತುಹೋಗುವದು.

ಸಾಯುವ ಪ್ರಸಂಗದಲ್ಲಿಯೂ ದೇವರನ್ನು ನೆನೆಯದೇ ಕ್ಷುದ್ರವಸ್ತುಗಳ ವ್ಯಾಮೋಹದಲ್ಲಿಯೇ ಬಿದ್ದು ಒದ್ದಾಡುವವರ ಬಗ್ಗೆ ಒಂದು ಚಮತ್ಕಾರ ಕಥೆಯಿದೆ.ಹಲ್ಲು ಹೋಗಿ,ಬೆನ್ನುಬಾಗಿ ಕಾಲಮೇಲೆ ಕೈಯೂರಿ ನಡೆಯುವ ಓರ್ವಜಿಪುಣನಾದ ಮುದುಕ ಮುಪ್ಪಿನ ಕಾಲದಲ್ಲಿಯೂ ಮಕ್ಕಳ ಕೈಯಲ್ಲಿ ತಿಜೋರಿಯ ಕೈಯನ್ನು ಕೊಡದೇ ಸೊಂಟ ದಲ್ಲಿಯೇ ಕಟ್ಟಿಕೊಳ್ಳುತ್ತಿದ್ದನು. ಇಳಿವಯಸ್ಸಿನ ಮೂಲಕ ಅಶಕ್ತತೆಯುಂಟಾಗಿ ಆ ಸಾಹುಕಾರನು ಜ್ವರದ ಬಾಧೆಯಿಂದ ಬಳಲಹತ್ತಿದನು. ತಂದೆಯ ಜ್ವರದ ಬಾಧೆಯನ್ನು ಕಳೆಯುವದಕ್ಕಾಗಿ ವಿವೇಕಸಂಪನ್ನರಾದ ಮಕ್ಕಳು ಬಹಳ ಪ್ರಯತ್ನ ಮಾಡಿದರು.ಆದರೂ ಗುಣವಾಗಲಿಲ್ಲ.ರೋಗವು ದಿನೇ ದಿನೇ ಹೆಚ್ಚಾಗಿ ಸಾಹುಕಾರನ ಮಾತೇ ನಿಂತು ಹೋದವು. ಸಾಹುಕಾರನು ಮಲಗಿದ ವಿಶಾಲವಾದ ಕಟ್ಟೆಯ ಬಳಿಯಲ್ಲಿಯೇ ದನಕರುಗಳನ್ನು ಕಟ್ಟುವ ಮನೆಯಿತ್ತು.ಕೊಟ್ಟಿಗೆಯಲ್ಲಿದ್ದ ಎಮ್ಮೆಯ ಕರುವುಒಂದು ಮೊಂಡ ಕಸಬರಿಗೆಯನ್ನು ತಿನ್ನು ತ್ತಿತ್ತು.ಅದನ್ನುಕಂಡು ಸಾಹುಕಾರನ ಹೊಟ್ಟೆಯಲ್ಲಿ ಕಸಿವಿಸಿಯಾಗಹತ್ತಿತು.ಎಮ್ಮೆಯು ಕಸ ಬರಿಗೆ ತಿಂದು ಹಾಳು ಮಾಡುವದು. ಅದನ್ನು ಅದರ ಬಾಯಿಂದ ಕಸಿದು ತೆಗೆದಿಡಿರಿ ಎಂದು ಹೇಳಲು ಬಾರದ್ದಕ್ಕಾಗಿ ಎಮ್ಮೆಯ ಕರುದ ಕಡೆಗೆ ಸನ್ನೆಮಾಡಹತ್ತಿದನು. ತಂದೆಯು ಕೈ ಸನ್ನೆ ಮಾಡಿದ್ದರ ನಿಜಾರ್ಥವನ್ನರಿಯದೇ ಮಕ್ಕಳು, ನಮ್ಮ ತಂದೆಯು ಎಲ್ಲಿಯೋ ಹಣ ಹೂಳಿಟ್ಟಿರುವನು. ಅದನ್ನು ಹೇಳಲು ಬಾರದ್ದಕ್ಕಾಗಿ ಕೈಸನ್ನೆ ಮಾಡುವನು ಎಂದು ಊಹಿಸಿ ಮಾತಾಡಲು ಬರುವಂತಹ ಮಾತ್ರೆಗಳನ್ನು ಕೊಡುವ ವೈದ್ಯನನ್ನು ಕರೆದು ಕೊಂಡು ಬಂದು ಅವನಿಗೆ ಹೇರಳವಾದ ಹಣಕೊಟ್ಟು ಮಾತ್ರೆತೇಯ್ದು ನಾಲಿಗೆಗೆ ಹಚ್ಚಿ ದರು. ಕೂಡಲೇ ಮಾತು ಬಂದು ಸಾಹುಕಾರನು ಎಲೇ ಮೂರ್ಖ ಮಕ್ಕಳಿರಾ ಎಮ್ಮೆ ಕರುವು ಕಸಬರಿಗೆಯನ್ನು ತಿನ್ನುತ್ತಿದೆ, ಕಾಣುವದಿಲ್ಲವೇನು ? ಕಸಬರಿಗೆಯನ್ನು ಕಸಿದಿಡಿ ಎಂದು ಹೇಳಿದನು. ಈ ಮಾತುಕೇಳಿ ಮಕ್ಕಳು ವಿಷಾದಿಸಿದರು. ವೈದ್ಯನಿಗೆ ಕೈತುಂಬ ಹಣ ಕೊಟ್ಟು ಮಾತ್ರೆಯನ್ನು ತೇದು ನಾಲಿಗೆಗೆ ಹಚ್ಚಿದ್ದು ಈ ಹರಕು ಕಸಬರಿಗೆಯ ಸಲು ವಾಗಿಯೇ ಎಂದು ಹಳಹಳಿಸಿದರು.

ಪ್ರಾಣೋತ್ಕ್ರಮಣ ಸಮಯದಲ್ಲಿ ಏನನ್ನು ಜಾಪಿಸುವರೋ ಅದೇ ಆಗುವರು ಬಗೆಗೂ ಹಲವಾರು ಕಥೆಗಳು ತತ್ತ್ವಸಾಹಿತ್ಯದಲ್ಲಿ ಬರುತ್ತವೆ.

ಕವಿಸಾರ್ವಭೌಮನಾದ ಕಾಲಿದಾಸನು ತನ್ನ ರಘುವಂಶ ಕಾವ್ಯದಲ್ಲಿ ರಘು, ದಿಲೀಪ ಮೊದಲಾದ ಮಹಾರಾಜರನ್ನು "ಶೈಶವೇಭ್ಯಸ್ತವಿದ್ಯಾಃ'' "ಯೌವನೇ ವಿಷಯೈಷಿಣಾಂ

"ವಾರ್ಧಕೇ ಮುನಿವೃತ್ತಯಃ ಯೋಗೇನಾಂತೆ ತನುತ್ಯಜ" ಎಂದು ಕೊಂಡಾಡಿರುವನು. ಬಾಲ್ಯಾವಸ್ಥೆಯಲ್ಲಿ ಅಧ್ಯಯನ ಮಾಡಿ, ಯೌವನದಲ್ಲಿ ಲೋಕೋಪಕಾರಕವಾದ ಗೃಹಸ್ಥಾಶ್ರಮವನ್ನು ಸ್ವೀಕರಿಸಿ, ಮುಪ್ಪಿನಕಾಲದಲ್ಲಿ ಮುನಿಗಳಂತೆ ಜಪತಪಾದಿಗಳಲ್ಲಿ ತಲ್ಲೀನರಾಗಿ, ದೇಹಾವಸಾನಕಾಲದಲ್ಲಿ ಭಗವಂತನ ಧ್ಯಾನಮಾಡಿ ಭಗವತ್ ಸಾನಿಧ್ಯಪಡೆಯುವರು ಎಂದು ರಾಜರ ವಂಶವನ್ನು ಪ್ರಶಂಸಿಸಿರುವನು.

ಒಮ್ಮೆ ಭರತನೆಂಬ ಮಹಾರಾಜನು ಇಳಿವಯಸ್ಸಿನಲ್ಲಿ ಸಾಮ್ರಾಜ್ಯವನ್ನು ತೊರೆದು ಗಂಗಾತೀರದೊಳಗೆ ಧ್ಯಾನಮಗ್ನನಾಗಿ ಕುಳಿತನು. ಆ ಪ್ರಸಂಗದಲ್ಲಿ ಹೆದೆಯೇರಿಸಿ ಬಾಣ ಪ್ರಯೋಗ ಮಾಡಿ ಪ್ರಾಣಾಪಹರಣ ಮಾಡಲು ಯತ್ನಿಸುವ ಬೇಡನಿಂದ ಹಿಂಬಾಲಿಸಲ್ಪಟ್ಟ ತುಂಬುಗರ್ಭಿಣಿಯಾದ ಜಿಂಕೆಯೊಂದು ಧ್ಯಾನಮಗ್ನನಾದ ಭರತನ ಮುಂದೆಯೇ ಹಾಯ್ದು ಅಂಜಿ ಗಂಗಾನದಿಯಲ್ಲಿ ಹಾರಿತು. ತುಂಬು ಗರ್ಭಿಣಿಯಾದ ಆ ಚಿಗರೆಯು ಜಿಗಿದಾಗ ಗರ್ಭದಲ್ಲಿದ್ದ ಮರಿಯು ಭರತನ ಮುಂದೆ ಬಿದ್ದಿತು. ದಯಾರ್ದ್ರಹೃದಯನಾದ ಭರತನು ಈ ದೃಶ್ಯವನ್ನು ಕಂಡು ಮರುಗಿ ತಾಯಿಯಿಲ್ಲದ ತಬ್ಬಲಿಯಾದ ಆ ಚಿಗರೆಯ ಮರಿಯನ್ನು ಕಣ್ಣುತೆರೆಯುವತನಕ ಹಾಲ್ಕುಡಿಸಿ, ತರುವಾಯ ಎಳೆಹುಲ್ಲು ತಿನ್ನಿಸಿ ಹೊಟ್ಟೆಯಿಂದ ಹುಟ್ಟಿದ ಮಗುವಿನಂತೆ ಜೋಪಾನಮಾಡಿದನು. ಚಿಗರೆಯ ಮೇಲಿನ ವ್ಯಾಮೋಹದಿಂದ ಭರತನಲ್ಲಿರುವ ಯೋಗ, ಯಾಗ, ವಿರಾಗಗಳೆಲ್ಲ ಹೋಗಿ ಅನುರಾಗ ಮನೆ ಮಾಡಿತು. ಹಗಲಿರುಳೂ ಭಗವಚಿಂತನ ಮಾಡುವ ಭರತರಾಜನು ಮೃಗಚಿಂತನ ಮಾಡಹತ್ತಿದನು. "ಯೋಗೇನಾಂತೇ ತನುತ್ಯಕ್" ಹೋಗಿ "ಮೃಗಾನುರಾಗೇಣ ತನುತ್ಯಕ್" ಅನ್ನುವ ಪರಿಸ್ಥಿತಿ ಒದಗಿತು. ಮೃಗಾನುರಾಗಿಯಾದ ಭರತನು ದೇಹಾವಸಾನ ಕಾಲದಲ್ಲಿ ಭಗವಚ್ಚಿಂತನ ಮಾಡದೇ ಮೃಗದ ಚಿಂತನೆಯನ್ನೇ ಮಾಡಿದನು, ''ರಾಗದಿಂ ಬೇರಿನ್ನು ಭವಬೀಜಮುಂಟೇ'' ಎಂಬ ನಿಜಗುಣರ ಉಕ್ತಿಯಂತೆ, ಆ ಮೃಗಾನುರಾಗವೇ ಭರತನ ಪುನರ್ಜನ್ಮಕ್ಕೆ ಕಾರಣವಾಯಿತು. ಅಂದರೆ ಭರತನು ಒಂದು ಜನ್ಮದಲ್ಲಿ ಚಿಗರೆಯಾಗಿ ಹುಟ್ಟಿ ಮರುಜನ್ಮದಲ್ಲಿ ಮುಕ್ತನಾದನೆಂಬುದು ಪುರಾಣಪ್ರಸಿದ್ಧವಿದೆ.

ಲೋಕದಲ್ಲಿ ಕೊನೆಯದಕ್ಕೆ ಬಹಳ ಬೆಲೆಯಿದೆ. ಸಣ್ಣ ಕೋರ್ಟುಗಳಲ್ಲಿ ನೀಡಿದ ನ್ಯಾಯಕ್ಕಿಂತ ಕೊನೆಯದಾಗಿ ಸುಪ್ರೀಂಕೋರ್ಟಿನಲ್ಲಿ ನೀಡಿದ ನ್ಯಾಯಕ್ಕೆ ಮಹತ್ವವಲ್ಲವೇ? ಪೂರ್ವವಯಸ್ಸಿನ ಅಂದರೆ ಎಳೆವಯದ ತರುಣರು ಹೇಳುವ ಮಾತಿಗಿಂತ ಇಳಿವಯದ ಹಿರಿಯರು ಹೇಳುವ ಮಾತಿಗೆ ಬೆಲೆಯಲ್ಲವೇ ? ಫೋಟೋಗ್ರಾಫರನ ಮುಂದೆ ಕುಳಿತ ಅಥವಾ ನಿಂತ ವ್ಯಕ್ತಿಯು ಮೊದಮೊದಲು ಹೇಗೆ ಮಾಡಿದರೂ ನಡೆಯುವದು. ಆದರೆ ಫೋಟೋ ತೆಗೆಯುತ್ತಿರುವವನು ಒಂದು, ಎರಡು, ಮೂರು ಅಂದಾಗ ಕೊನೆಯ ಮೂರು ಅನ್ನುವಾಗ ಮಾತ್ರ ಫೋಟೋ ತೆಗೆಯಿಸಿಕೊಳ್ಳುವ ವ್ಯಕ್ತಿಯು ಬಹಳ ನಿಶ್ಚಲನಾಗಿ, ನಿಲ್ಲಬೇಕು. ಆಗ ಫೋಟೋ ಸರಿಯಾಗಿ ಮೂಡುವದು. ಪ್ರಪಂಚದ ಅನೇಕಾನೇಕ ವ್ಯವಹಾರಗಳಲ್ಲೂ ಅಂತಿಮಸ್ಥಿತಿಗೆ ಬಹಳ ಬೆಲೆಯುಂಟು.

ಅಜಗಣ್ಣ ಮುಕ್ತಾಯಿ ಬಾಳಿ ಬದುಕಿದ ಕಾಲ ೧೨ನೇಯ ಶತಮಾನ, ಅಂದರೆ ೮೦೦

ವರ್ಷಗಳ ಹಿಂದೆ. ಇಂದಿನ ವೈಜ್ಞಾನಿಕ ಕಾಲದ ವಿಶಿಷ್ಟ ಪ್ರಸಂಗದಲ್ಲಿ ನಡೆಯುವ ಶಬ್ದ ಸನ್ನಿವೇಶಗಳನ್ನು ತೋರಿಸುವ, ಇಲ್ಲವೇ ಆಕಸ್ಮಿಕವಾಗಿ ಸಂಭವಿಸಿದ ದುರ್ಘಟನೆಗಳನ್ನು ಕೇಳಿಸುವ ದೂರದರ್ಶನ, ಟೆಲಿಫೋನ್ ಮೊದಲಾದ ಸೌಲಭ್ಯಗಳು ಆಕಾಶದಲ್ಲಿ ಹಾರಾಡುವ ವಿಮಾನ, ಹೆಲಿಕ್ಯಾಪ್ಟರ್ ಮೊದಲಾದ ಮಹತ್ತರ ಸಾಮಗ್ರಿಗಳು ಇಲ್ಲದ ಪುರಾಣ ಕಾಲವದು.

ವಾಯುಮಂಡಲದ ದೃಶ್ಯತರಂಗವ ತೋರಿಸುವ ದೂರದರ್ಶನ, ವಾಯು ಮಂಡಲದ ಶಬ್ದ ತರಂಗವ ಕೇಳಿಸುವ ಫೋನು, ರೇಡಿಯೋ, ವಿಮಾನ, ಹೆಲಿಕ್ಯಾಪ್ಟರಗಳು ಆಕಾಶದಲ್ಲಿ ಹಾರಾಡುವಂತೆ ಮಾಡುವ ಯಂತ್ರ ಇದಾವವೂ ಇಲ್ಲದ ಪೂರ್ವಕಾಲದ ಯೋಗಿಗಳು ಆಂತ ರಿಕ ಯೋಗಸಾಧನೆಯಿಂದಲೂ, ಅತೀಂದ್ರಿಯ ಧ್ಯಾನ ಮುದ್ರಾದಿಗಳಿಂದಲೂ ಕುಳಿತಲ್ಲಿಯೇ ನವಖಂಡ ಪೃಥ್ವಿಯೊಳಗಿನ ಸಮಾಚಾರವನ್ನು ತಿಳಿಯುತ್ತಿದ್ದರೆಂಬುದು ಹಾಗೂ ಗಗ ಯಾನ ಮಾಡುತ್ತಿದ್ದರೆಂಬುದು –

" ನವದ್ವಾರಗಳ ಕಟ್ಟಿ ಶಿವಧ್ಯಾನದೊಳಗಿರಲು !
ನವಖಂಡ ಪೃಥ್ವಿಯೊಳಗಿನ । ಮಾತೆಲ್ಲ ।
ಕಿವಿಯೊಳಗೆ ಇಹುದು ಸರ್ವಜ್ಞ ॥ "

"ಖೇಚರದ ಮುದ್ರೆಯನು ಆಚರಿಸಲರಿದಿಹರೆ ।
ಲೋಚನವು ಮೂರು ತನಗಕ್ಕು । ಭೂಚರನು ।
ಖೇಚರನೆಅಕ್ಕು ಸರ್ವಜ್ಞ ॥ "

ಈ ಅನುಭಾವಿಗಳ ವಚನಗಳಿಂದ ತಿಳಿದುಬರುವದು.

ದೂರದರ್ಶನ, ಟೆಲಿಫೋನು, ವಿಮಾನ ಮೊದಲಾದವು ವರ್ತಮಾನ ಕಾಲದ ಸಂಗತಿಯ ನ್ನಷ್ಟೇ ತಿಳಿಸುತ್ತಿದ್ದರೆ, ನಿರ್ದಿಷ್ಟಸ್ಥಲದಲ್ಲಿ ಮಾತ್ರ ಸಂಚರಿಸುತ್ತಿದ್ದರೆ ಮಹಾಮಹಿಮ ಯೋಗೀಶ್ವರರು –

" ಕ್ರಿಯಾ ಸಿದ್ಧಿಃ ಸತ್ವೇವಸತಿ ಮಹತಾಂ ।
ಬಾಹ್ಯನೋಪಕರಣೇ ॥ "

ಎಂಬ ಆರ್ಯೋಕ್ತಿಯಂತೆ ಏನೊಂದೂ ಸಾಧನಸಾಮಗ್ರಿಗಳಿಲ್ಲದೆ ತಮ್ಮ ಅಂತಃಶಕ್ತಿ ಯಿಂದ ತ್ರಿಕಾಲದಲ್ಲಿ ಸಂಭವಿಸುವ ಸಂಗತಿಗಳನ್ನೆಲ್ಲ ಅರಿಯುತ್ತಿದ್ದರು. ಏನೊಂದೂ ಪ್ರತಿ ಬಂಧಕವಿಲ್ಲದೆ ಎಲ್ಲೆಡೆಗೂ ಅಲೆಯುತ್ತಿದ್ದರು. ಅನೇಕ ದಿವ್ಯ ವಿಭೂತಿಗಳು ತಮ್ಮ ಮರಣದ ಮುನ್ಸೂಚನೆಯನ್ನು ಹಾಗೂ ತಮ್ಮ ಬಳಿಗೆ ಬಂದ ಅನೇಕ ಭಕ್ತರ ಆಗುಹೋಗುಗಳನ್ನು ದಿವ್ಯದೃಷ್ಟಿಯಿಂದ ತಿಳಿದು ಹೇಳಿದುದು ಪುರಾಣೇತಿಹಾಸಗಳಲ್ಲಿ ಸುಪ್ರಸಿದ್ಧವಿದೆ. ಮಹಾ ಮಹಿಮರ ನಿಗ್ರಹಾನುಗ್ರಹ ಶಕ್ತಿಯಿಂದ ಬಲ್ಲಿದರು ಬಡವರಾದುದೂ, ಬಡವರು ಬಲ್ಲಿದ ರಾದುದೂ ಚರಿತ್ರೆಯಿಂದ ತಿಳಿದುಬರುವದು.

ಬುದ್ಧನು ಹುಟ್ಟಿದಾಗ ಅಸಿತನೆಂಬ ಮಹಾಮುನಿಯು ಬಂದು ರಾಜಕುಮಾರನ ಹಸ್ತರೇಖೆಯನ್ನು ನೋಡಿ ಈತನು ಲೋಕವನ್ನೇ ಉದ್ಧರಿಸುವ ಮಹಾಪುರುಷನಾಗುವನು

ಎಂದು ಭವಿಷ್ಯ ಹೇಳಿದನಂತೆ. ಕನ್ನಡ ನಾಡಿನಲ್ಲಿ ಸುಪ್ರಸಿದ್ಧರಾದ ಸರ್ಪಭೂಷಣಶಿವಯೋಗಿಗಳು ತಮ್ಮ ಶಿಷ್ಯರಾದ ನೀಲಲೋಚನರನ್ನು ಕುರಿತು ನೀಲಲೋಚನರೇ ಈ ಗುಡಿಗೆ ಗೋಪುರವನ್ನು ಕಟ್ಟಿಸಿ ಅದರ ಮೇಲೆ ಕಳಸವನ್ನೇಕೆ ಇಡುವಿರಿ ? ನಡೆಯುವ, ನುಡಿಯುವ, ನಮ್ಮ ದೇಹವೆಂಬ ಗುಡಿಯ ಕಳಸವೇ ಇನ್ನೊಂದು ವಾರದೊಳಗಾಗಿ ಕೆಳಗೆ ಬೀಳುವದು ಎಂದು ಭವಿಷ್ಯ ಹೇಳಿ ಆ ಪ್ರಕಾರ ಲಿಂಗೈಕ್ಯರಾಗಿ ಬಿಟ್ಟರಂತೆ. ಶಿವಯೋಗ ಸಾಮ್ರಾಜ್ಯದ ಸಾರ್ವಭೌಮರೆಂದು ಕೀರ್ತಿವೆತ್ತ ಮುರುಘೇಂದ್ರಶಿವಯೋಗಿಗಳು ಲಿಂಗೈಕ್ಯರಾದುದು ಬೆಳಗಾವ ಜಿಲ್ಲೆಯ ಅಥಣಿಯ ಗಚ್ಚಿನಮಠದಲ್ಲಿ. ಸಮಾಜೋದ್ಧಾರಕ್ಕಾಗಿ ಹಗಲಿರುಳೂ ದುಡಿದ ಹಾನಗಲ್ಲ ಕುಮಾರಮಹಾಸ್ವಾಮಿಗಳು ವಿಜಾಪುರ ಜಿಲ್ಲೆಯ ಬಾದಾಮಿ ತಾಲೂಕಿನಲ್ಲಿರುವ ಮಲಾಪಹಾರಿ ನದೀತೀರದಲ್ಲಿಯ ದಟ್ಟಡವಿಯ ಮಧ್ಯದ ಶಿವಯೋಗ ಮಂದಿರದಲ್ಲಿ. ನದಿಯಲ್ಲಿಮಿಂದು ಮಡಿಯುಟ್ಟು ಲಿಂಗಪೂಜೆಗೆ ಕುಳಿತು ಬಲಹಸ್ತದಿಂದ ವಿಭೂತಿಯನ್ನು ತಕ್ಕೊಂಡು ವಾಮಹಸ್ತದಲ್ಲಿಟ್ಟು ಶುಕ್ತಿ ಮುದ್ರೆಯಿಂದ ಮುಚ್ಚಿ ತೆಗೆದು ನೋಡುವಷ್ಟರಲ್ಲಿ ವಿಭೂತಿಯು ಒಮ್ಮಿಂದೊಮ್ಮೆ ಪಳಕ್ಕನೇ ಸೀಳಿ ಇಭ್ಭಾಗವಾಗಿತ್ತು. ಕೈಯಿಂದ ನೆಲಕ್ಕೆ ಬೀಳದೇ, ಅದರ ಮೇಲೆ ಏನೊಂದೂ ಬೀಳದೇ ಆ ಕ್ರಿಯಾ ವಿಭೂತಿಯು ಒಮ್ಮಿಂದೊಮ್ಮೆ ಇಬ್ಭಾಗವಾದುದನ್ನು ಕಂಡು ಶ್ರೀಗಳು ಹೌಹಾರಿದರು. ಮನದಲ್ಲಿ ಏನೂ ತೋಚದೇ ಮೂಕ ವಿಸ್ಮಿತರಾಗಿ ಚಿಂತಾಮಗ್ನರಾದರು.ಕ್ರಿಯಾವಿಭೂತಿಯ ಧಾರಣದ ನಂತರ ಮಾಡುವ ಜಪ, ಅಭಿಷೇಕಾದಿಗಳನ್ನು ಬಿಟ್ಟೇ ಕುಳಿತರು. ಅಷ್ಟರಲ್ಲಿ ಶಿವಪೂಜಾ ಮಂಟಪದ ಹೊರಗಡೆಗೆ ಪೋಸ್ಟಮನ್ನನು ಬಂದು 'ಯಾರಿದ್ದೀರಿ ಒಳಗೆ, ತಂತಿ ಬಂದಿದೆ ತಕ್ಕೊಳ್ಳಿರಿ' ಎಂದು ಕೂಗಿದನು. ಹೊರಗೆ ಬಂದು ನೋಡುವಷ್ಟರಲ್ಲಿ,ಮುರುಘೇಂದ್ರ ಶಿವಯೋಗಿಗಳು ಲಿಂಗೈಕ್ಯರಾದರು ಎಂಬ ತಂತಿಇತ್ತು.

ಹಾನಗಲ್ಲ ಶ್ರೀಗಳವರ ಜೊತೆ ಜೊತೆಯಲ್ಲಿಯೇ ಇದ್ದು ಶಿವಯೋಗ ಮಂದಿರ ಸಂಸ್ಥೆಗೆ ಆಜೀವಪರ್ಯಂತ ಅಧ್ಯಕ್ಷರಾಗಿ, ತ್ರಿಕಾಲ ಶಿವಲಿಂಗಪೂಜೆ, ಪಂಚಾಮೃತಾಭಿಷೇಕ, ಗೋಕ್ಷೀರ, ಗೋಘೃತಗಳನ್ನು ಸೇವಿಸುವಿಕೆ, ಶೀಲಾಚಾರ ಮೊದಲಾದ ವೀರ ನಿಯಮ ವ್ರತಗಳನ್ನು ಪಾಲಿಸುವ ಹಾವೇರಿ ಹುಕ್ಕೇರಿ ಮಠದ ಶಿವಬಸವಮಹಾಸ್ವಾಮಿಗಳವರು ಶಿವಯೋಗ ಮಂದಿರದ ಪಕ್ಕದಲ್ಲಿಯೇ ಇರುವ ಚಿಕ್ಕದಾದ ಬೆಟ್ಟದಲ್ಲಿ ಶಿವಪೂಜೆಗೆ ಕುಳಿತಿದ್ದರು. ಸಮಾಜ ಸೇವೆಯೇ ಶಿವಪೂಜೆಯೆಂದು ಹಾನಗಲ್ಲ ಶ್ರೀಗಳವರು ಭಾವಿಸಿದ್ದರೆ ಶಿವಲಿಂಗ ಪೂಜೆ ಮಾಡಿ ಸಂದರ್ಶನ ಸಂಭಾಷಣೆಗಳಿಂದ ಭಕ್ತರನ್ನು ಉದ್ಧರಿಸುವದೇ ಮಹಾ ಪೂಜೆಯೆಂದು ಹಾವೇರಿ ಶ್ರೀಗಳವರು ಭಾವಿಸಿದ್ದರು.

ಚಿಕ್ಕ ಬೆಟ್ಟದ ನಡುವೆ ಮಂಜುಳ ನಿನಾದ ಮಾಡುತ್ತ ಜುಳು ಜುಳು ಹರಿವ ಪ್ರವಾಹದ ಬದಿಯಲ್ಲಿಯೇ ಚಿಕ್ಕದೊಂದು ತಿಳಿಗೊಳ, ಅದರ ಸನಿಹದಲ್ಲಿಯೇ ಹಾವೇರಿ ಶ್ರೀಗಳವರ ಲಿಂಗಪೂಜೆಯ ಪರ್ಣಕುಟೀರ, ಆಗ ನಾನು ಚಿಕ್ಕ ವಟುವಾಗಿದ್ದು ಹಾವೇರಿ ಶ್ರೀಗಳವರ ಸೇವೆಗೈಯುತ್ತಿದ್ದೆನು. ಗುಡಿಸಲಿನೊಳಗೆ ಲಿಂಗಪೂಜೆಗೆ ಕುಳಿತ ಹಾವೇರಿ ಶ್ರೀಗಳವರ ಬಲಭಾಗದ ಮೇಲಿರುವ ಕಾಲು ದೀಪದ ಮೇಲೆ ಎಣ್ಣೆ ತುಂಬಿದ ಹಣತೆಯಲ್ಲಿ ದೀಪವೊಂದು ಥಳಥಳ ಬೆಳಗುತ್ತಿತ್ತು. ನಿರ್ವಾತಸ್ಥ ದೀಪದಂತೆ ಚಿತ್ತೈಕಾಗ್ರತೆಯಿಂದ ಮಂತ್ರ

ಜಪ ಮಾಡಿ ಕಣ್ದೆರೆದು ಅರ್ಘ್ಯಪ್ರದಾನ ಮಾಡಬೇಕೆಂಬುವಷ್ಟರಲ್ಲಿ ಬಲಗಡೆಯಲ್ಲಿ ಉರಿಯುವ ದೀಪವು ಥಕ್ಕನೇ ಶಾಂತವಾಯಿತು.ಹಿಂಜಿದ ಅರಳೆಯೂ ಅಲುಗಾಡದಷ್ಟು ನಿವಾತ ಸ್ಥಿತಿಯಲ್ಲಿದ್ದ ದೀಪವು ಒಮ್ಮಿಂದೊಮ್ಮೆ ಶಾಂತವಾದುದನ್ನು ಕಂಡು ಶ್ರೀಗಳು ಗಾಬರಿಯಾದರೂ, ದೀಪಕ್ಕೆ ಎಣ್ಣೆಯೇ ಇಲ್ಲವೇ ಎಂದು ನೋಡಿದರು. ಹಣತಿಯ ತುಂಬ ಎಣ್ಣೆ ತುಂಬಿ ತುಳುಕುತ್ತಿದೆ. ನಿಸ್ತಬ್ಧವಾದ ಪ್ರಶಾಂತ ವಾತಾವರಣ.ಬತ್ತಿಯೂ ಅತ್ಯುತ್ತಮವಾಗಿದೆ. ಹೀಗಿದ್ದೂ ದೀಪವೇಕೆ ಆರಿತು ಎಂಬುದೇ ಶ್ರೀಗಳಿಗೆ ತಿಳಿಯಲಿಲ್ಲ. ಲಿಂಗಪೂಜೆಗೆ ಕುಳಿತಾಗ ದೀಪಪಾರಿದುದು ಅಪಶಕುನವೆಂದು ಬಗೆದು ಶ್ರೀಗಳವರು ಮನದಲ್ಲಿ ಬಹಳ ಕಳವಳಗೊಂಡರು. ಕಗ್ಗತ್ತಲೆಯನ್ನು ಕಳೆವ ಜ್ಯೋತಿಯು ನಂದಿ ಹೋದಂತೆ ಸಮಾಜವನ್ನು ಆತ್ಮಪ್ರಭೆಯಿಂದ ಬೆಳಗುವ ಒಂದು ದಿವ್ಯಜ್ಯೋತಿಯು ಕಣ್ಮರೆಯಾಗುವದೆಂದು ಊಹಿಸಿದರು. ಅಷ್ಟರಲ್ಲಿ ಓರ್ವ ಶಿಷ್ಯನು ಹೊರಗಡೆಗೆ ಬಂದು ಬುದ್ಧೀ " ಅಥಣಿಯ ಮುರುಘೇಂದ್ರ ಶಿವಯೋಗಿಗಳು ಲಿಂಗೈಕ್ಯರಾದರು,-ಎಂದು ತಂತಿ ಬಂದಿದೆ. ಈಗ ಅಥಣಿಗೆ ಪಯಣ ಮಾಡಬೇಕಾಗಿದೆ. ಹಾನಗಲ್ಲ ಶ್ರೀಗಳವರು ತಮ್ಮನ್ನ ಕರೆದುಕೊಂಡು ಬರಲು ಅಪ್ಪಣೆ ಮಾಡಿರುವರು" ಎಂದು ಹೇಳಿದನು.

ವಿಶಿಷ್ಟ ಸಂಸ್ಕಾರವನ್ನು ಹೊಂದಿದ ಮಹಾಶಿವಯೋಗಿಗಳು ಧರಿಸುವ ಕ್ರಿಯಾಭೂತಿಯು ತನ್ನಷ್ಟಕ್ಕೆ ತಾನೇ ಭಿನ್ನವಾದುದು, ಸಮ್ಯಕ್ ಜ್ಞಾನ, ಸಮ್ಯಕ್ಕ್ರಿಯೆ, ಸದ್ಭಕ್ತಿಗಳೇ ಘಟ್ಟಿಯಾಗಿ ನಿಂತಂತಿರುವ ಶ್ರೀ ಮುರುಘೇಂದ್ರ ಶಿವಯೋಗಿಗಳು ಲಿಂಗೈಕ್ಯರಾದುದನ್ನು ಮತ್ತು ಶಿವಪೂಜೆಗೆ ಕುಳಿತಾಗ ಬ್ರಹ್ಮಾಂಡದ ಕತ್ತಲೆಯನ್ನು ಕಳೆವ ಜ್ಯೋತಿಯು ಆರಿದುದು, ಪಿಂಡಾಂಡದಲ್ಲಿರುವ ಅಜ್ಞಾನದ ಕತ್ತಲೆಯಿಂದ ಬಳಲುವ ಭಕ್ತಕೋಟಿಗೆ ಸುಜ್ಞಾನದ ಸತ್ಪ್ರಭೆಯುನ್ನೀಯುವ ದಿವ್ಯ ಜ್ಯೋತಿಯು ಕಣ್ಮರೆಯಾದುದೆಂಬುದನ್ನು ಸಾಂಕೇತಿಕವಾಗಿ ಸೂಚಿಸುತ್ತವೆ. ಲೌಕಿಕದಲ್ಲಿಯೇ ಆಗಲಿ ಪರಮಾರ್ಥದಲ್ಲಿಯೇ ಆಗಲಿ ವಿಭೂತಿ ಮತ್ತು ದೀಪಗಳಿಗೆ ಅತೀವ ಮಹತ್ವವಿದೆ.

ಭಗವದ್ಗೀತೆಯ ೧೦ ನೆಯ ಅಧ್ಯಾಯದಲ್ಲಿ ಅರ್ಜುನನು ಶ್ರೀಕೃಷ್ಣನನ್ನು ಕುರಿತು- 'ಕೃಷ್ಣನೇ ಭಗವಂತನ ಅಧಿಷ್ಠಾನವಿರುವ ವಿಭೂತಿ ವಿಶೇಷಗಳ ಲಕ್ಷಣವೇನು ?' ಎಂದು ಕೇಳಿದಾಗ-

"ಯದ್ಯತ್ ವಿಭೂತಿಮತ್ ಸತ್ವಂ ಶ್ರೀಮದೂರ್ಜಿತಮೇವವಾ ॥
ತತ್ತ ದೇವಾವಗಚ್ಛತ್ವಂ ಮಮತೇಜೋಂಶ ಸಂಭವಂ"

ಯಾವದೇ ಚೇತನವಾಗಲಿ, ಅಚೇತನವಾಗಲಿ ಅಲ್ಲಿ ಕ್ರೌರ್ಯ, ಧೈರ್ಯ, ಔದಾರ್ಯ ಶಮನಮಾಡಿ ಸದ್ಗುಣಸಂಪತ್ತು, ಓಜಸ್ಸು, ಸತ್ವಬಲಗಳು ತುಂಬಿತುಳುಕುತ್ತಿದ್ದರೆ ಅದು ನನ್ನ ಅಂಶವೆಂದೇ ತಿಳಿ ಎಂದು ಹೇಳಿರುವನು. ಆಸ್ತಿಕ ಮಹಾಜನಗಳಲ್ಲಿಯಂತೂ ವಿಭೂತಿಗೆ ಅತ್ಯಂತ ಪ್ರಾಮುಖ್ಯತೆ ಇದೆ. ವೀರಶೈವ ಷಟಸ್ಥಲ ಸಿದ್ಧಾಂತದಲ್ಲಿರುವ ನೂರೊಂದು ಸ್ಥಲಗಳಲ್ಲಿ ವಿಭೂತಿ ಧಾರಣಸ್ಥಲ ಒಂದಿದೆ.

".. ಭೂತಿರ್ಭೂತಿ ಕರೀಪವಿತ್ರ ಜನನೀ ಪಾಪೌಘವಿಧ್ವಂಸಿನೀ ।
ಸರ್ವೋಪದ್ರವನಾಶಿನೀ ಶುಭಕರೀ ಶೋಕಂಚ ವಿಚ್ಛೇದಿನೀ ।
ಭೂತಪ್ರೇತ ಪಿಶಾಚ ರಾಕ್ಷಸಹರೀ ... "

ಮುಂತಾಗಿ ವಿಭೂತಿಯ ಮಹಿಮೆಯು ಶಿವಾಗಮಗಳಲ್ಲಿ ಬಂದಿದೆ. ಶ್ರೀಮನ್ನಿಜಗುಣರು-

''ಶಿವನ ಮೈಬೆಳಗಂತಾನಾದ ಭಸಿತವನು ।
ದಿನದಿನದುಚಿತ ವೇಳೆಯೊಳುಪಚರಿಪುದು
ನಿನಗೆ ಕುಳವೆಲೆಯೋಗಿ ಬಿಡದಿವನು ।। ''

ಎಂದು ವಿಭೂತಿಯ ಬಗ್ಗೆ ಹೇಳಿರುವರು. ಪರಮಾರ್ಥಪಥದಲ್ಲಿ ವಿಭೂತಿಗೆ ಪ್ರಾಮುಖ್ಯತೆ ಇರುವಂತೆ ಅಗ್ನಿಗೂ ಶ್ರೇಷ್ಠತಮ ಸ್ಥಾನವಿದೆ. ವೈದಿಕ ಪ್ರಕ್ರಿಯೆಯಲ್ಲಿ ಬರುವ ಯಜ್ಞ ಯಾಗಾದಿಗಳಲ್ಲಿ ಅಗ್ನಿಯೇ ಪ್ರಥಮದಲ್ಲಿ ಬೇಕಲ್ಲವೇ ? "ಅಗ್ನಿಮುಖಾವೈದೇವಾಃ" ಎಂದು ಪೂರ್ವಮೀಮಾಂಸಕರು ಹೇಳುವರು. ಶಿವನಿಗೆ ಇರುವ ಅಷ್ಟತನುಗಳಲ್ಲಿ ಅಗ್ನಿಯೂ ಒಂದು ನೇತ್ರವಾಗಿರುವದರಿಂದಲೇ ಶ್ರೀಮನ್ನಿಜಗುಣರು-

"ನೋಡಲಾಗದೇ ದೇವ ನೋಡಲಾಗದೇ ಕೂಡೆನಿನ್ನದಿಟ್ಟಿ ಮೂರು
ನಾಡೆಲೇಸು ಮಾಡಲೆನ್ನ ನೊಸಲವಹ್ನಿನೇತ್ರದಿಂದ ......"

ಎಂದು ಹೇಳಿರುವರು.

ಶಿವನಿಗೆ ಸಲ್ಲಿಸುವ ಷೋಡಶೋಪಚಾರಗಳಲ್ಲಿ ದೀಪವೂ ಒಂದು ಉಪಚಾರವೆನಿಸಿದೆ. ದೇಗುಲಗಳಲ್ಲಿ ದೇವರ ಮುಂದೆ ನಂದಾದೀಪವನ್ನಿಡುವ ಸತ್‌ಸಂಪ್ರದಾಯವಿದೆ. ಸೂರ್ಯೋಪಾಸಕರು ಬ್ರಹ್ಮಾಂಡವನ್ನೇ ಬೆಳಗುವಸೂರ್ಯನನ್ನು ಬೆಳಗುವರು ಎಂಬಬಗ್ಗೆ

"ದೀಪೇನ ಸೂರ್ಯಂ ಪ್ರತಿಬೋಧಯಂತಿ"

ಎಂಬ ಆರ್ಯೋಕ್ತಿಯುಂಟು. ಪ್ರತಿ ಸಂವತ್ಸರದಲ್ಲಿ ಬರುವ ದ್ವಾದಶಮಾಸಗಳಲ್ಲಿ ಕಾರ್ತಿಕ ಮಾಸದ ಆರಂಭದಲ್ಲಿ ದೀಪಾವಳಿ ಬರುತ್ತದೆ. ಆ ಮಾಸದಲ್ಲಿ ಮುತ್ತೈದೆಯರಾದ ಅಕ್ಕ ತಂಗಿಯರು ಅಣ್ಣತಮ್ಮಂದಿರಿಗೆ ಆರತಿಯನ್ನು ಬೆಳಗುವದೂ ತಮ್ಮ ಆರತಿಗಳನ್ನು ಧನ ಕನಕಾದಿಗಳಿಂದ ತುಂಬಿಸಿಕೊಳ್ಳುವದೂ ಜಗತ್ಪ್ರಸಿದ್ಧವಿದೆ. ಗುರುಗಳಿಂದ ಗುರುಮಠಕ್ಕೂ ಅರಸರಿರುವ ಅರಮನೆಗೂ, ಸೆರೆಯಾಳುಗಳಿರುವ ಸೆರೆಮನೆಗೂ, ಅರಣ್ಯದಲ್ಲಿರುವ ಋಷಿ ಮುನಿಗಳ ಪರ್ಣಕುಟೀರಕ್ಕೂ ದೀಪಬೇಕು. ಪರಮಾರ್ಥದಲ್ಲಿಯೂ, ಪ್ರಪಂಚದಲ್ಲಿಯೂ ಪ್ರಾಶಸ್ತ್ಯವನ್ನು ಪಡೆದಿರುವ ದೀಪವು ಆರಿದರೆ, ಅದರಲ್ಲಿಯೂ ಶಿವಪೂಜೆ ಮಾಡುವ ಸುಪ್ರಸಂಗದಲ್ಲಿ ಶಾಂತವಾದರೆ ಅಮಂಗಲವೆಂದು ಭಾವಿಸುವದು ಸಹಜ.

ಮುಕ್ತಾಯಿಯು ಮದುವೆಯಾಗಿ ತವರುಮನೆಯಿಂದ ಗಂಡನಮನೆಗೆ ಹೋಗುವಾಗ ಅಣ್ಣನೂ ಪುಣ್ಯಪಥಪ್ರದರ್ಶಕನೂ ಆದ ಅಜಗಣ್ಣನನ್ನು ಕುರಿತು ಅಜಗಣ್ಣಾ ನಿನಗೇನಾದರೂ ದೈಹಿಕವಾದ ಆಸರಿಕೆ, ಬೇಸರಿಕೆಗಳು ಬಂದರೆ ತಿಳಿವ ಬಗೆಯೆಂತು ? ಎಂದು ಕೇಳಿದಾಗ ಮೂರು ಕುರುಹುಗಳನ್ನು ಹೇಳಿದ್ದನು. ಭಕ್ತಿಯ ಬೀಡಾಗಿದ್ದ ಮುಕ್ತಾಯಿಯು ಒಂದು ದಿನ ಪ್ರಾತಃಕಾಲದಲ್ಲಿ ಎದ್ದು ಮಿಂದು ಮಡಿಯುಟ್ಟು ಶಿವಲಿಂಗಪೂಜೆ ಮಾಡಿ, ಹೆಪ್ಪು ಹಾಕಿದ ಮೊಸರಿನ ಗಡಿಗೆಯನ್ನು ಸಿಂಬೆಯ ಮೇಲಿಟ್ಟು ಕಡಗೋಲಿನಿಂದ ಮೊಸರು ಕಡೆಯ ಬೇಕೆನ್ನುವಷ್ಟರಲ್ಲಿ ಮೊಸರು ಕಲಾಗಿ, ಉಟ್ಟ ಸೀರೆಯ ನಿರಿಗೆ ಕಳಚಿ, ಕಟ್ಟಿದ

ಮುಡಿಯು ಒಮ್ಮಿಂದೊಮ್ಮೆ ಕಳಚಿತು. ತವರು ಮನೆಯಿಂದ ಬರುವಾಗ ಅಣ್ಣ ಅ
ಗಣ್ಣನು ಹೇಳಿದ ಮೂರು ಕುರುಹುಗಳು ಥಕ್ಕನೇ ನೆನಪಾದವು. ಆಗ ಮುಕ್ತಾಯಿ ಅ
ಕಿತ್ತೆಸೆದ ಬಳ್ಳಿಯಂತಾಗಿ ಕೆಂಡದ ಕುಂಡದಲ್ಲಿ ಬೀಸಾಡಿದ ಮಲ್ಲಿಗೆಯ ಮಾಲೆಯಂತಾ
ಅಣ್ಣನಿಗೆ ಏನೋ ಒಂದು ದುರಂತವು ಒದಗಿದೆ ಎಂದು ಊಹಿಸಿ ದಿಙ್ಮೂಢಳಾ
ಲಕ್ಕುಂಡಿಗೆ ಧಾವಿಸಿ ಬಂದಳು.

ಅಸುನೀಗಿದ ಅಣ್ಣನನ್ನು ಗೋಡೆಗೆ ಕೂಡಿಸಿದುದನ್ನು ಕಂಡು ದುಃಖದ ಭಾರ ತಾ
ಲಾರದೇ ಧೊಪ್ಪನೇ ನೆಲಕ್ಕೆ ಬಿದ್ದು ಮತ್ತೆ ಚೇತರಿಸಿಕೊಂಡು ಎದ್ದು ಅಣ್ಣನ ಎದುರಿ
ಕುಳಿತು 'ಅಣ್ಣಾ, ಅಣ್ಣಾ, ಎನ್ನ ಪುತ್ಥಳಿ ಅಣ್ಣಾ, ಕಣ್ಣು ತೆರೆದು ಮಾತಾಡಣ್ಣಾ, ತಂ
ಮುದ್ದಾದ ಬುದ್ಧಿಯ ಮಾತುಹೇಳಿ ಉದ್ಧರಿಸಿದ ಅಜಗಣ್ಣ, ಎದ್ದು ಒಂದಾದರೂ ಮಾತ
ಡಣ್ಣಾ ತಂಗಿಯ ಹಲಬುವದನಿಯನ್ನು ಕೇಳಿ ಮರುಮಾತಾಡದೇ ಸುಮ್ಮನೇ ಮೌ
ದಿಂದ ಏಕೆ ಇರುವೆಯಣ್ಣಾ, ಮಾತಾಡು ಅಣ್ಣಾ, ಮಾತಾಡು, ಎಂದು ಒಗೆಬಗೆಯ
ಹಲುಬಿದಳು.

> "ನಾನೆಂತು ಬದುಕುವೆನಣ್ಣಾ ! ಕತ್ತಲೆಬೆಳಗ ಕಾಂಬ ಸಂದೇಹಿ ನಾನೊ
> ಬ್ಬಳು, ಎನ್ನ ಕಣ್ಣಕಟ್ಟಿ ಕನ್ನಡಿಯ ತೋರಿತ್ತು ಅಜಗಣ್ಣಾ ನಿನ್ನ
> ಯೋಗ ! ನಿಮ್ಮನುಡಿಗಳೆಲ್ಲವೂ ಪ್ರತಿಬಿಂಬಗಳಾದುವೆ ಅಣ್ಣಾ''

ಎಂದು ಅಣ್ಣನ ಅಗಲುವಿಕೆಯ ದುಃಖದಲ್ಲಿ ಮುಳುಗಿದ ಮುಕ್ತಾಯಿಯು ಜೀವನದ
ಜರುಗಿದ ಘಟನೆಗಳನ್ನೆಲ್ಲ ನೆನೆನೆನೆದು ರೋಧಿಸುತ್ತಿದ್ದಳು.

ಲೋಕದಲ್ಲಿ ಮೃತ್ಯುವಿಗೆ ಸಮಾನವಾದ ದುಃಖ ಬೇರೊಂದಿಲ್ಲ. ಕಾನೂನು ಉಲ್ಲಂ
ಘನೆ ಮಾಡಿ ಸ್ವಚ್ಛಂದದಿಂದ ನಡೆಯುವ ಅಪರಾಧಿಗಳಿಗೆ ಮಾಡುವ ವಿವಿಧ ಶಿಕ್ಷೆಗಳ
ಮರಣದಂಡನೆಯೇ ಕೊನೆಯ ಕಠಿಣ, ಕ್ರೂರ ಶಿಕ್ಷೆಯಲ್ಲವೇ ? ಮದುವೆ, ಮುಂಜಿ
ಮುಂತಾದ ಮಂಗಲ ಕಾರ್ಯಗಳಲ್ಲಿ ಸತ್ತ ಸುದ್ದಿಯನ್ನು ಎತ್ತುವದಿಲ್ಲ. ಆಕಸ್ಮಿಕವಾ
ಯಾರಾದರೂ ಸತ್ತರೆ ಅವರ ಸುದ್ದಿಯನ್ನು ಬೇರೆ ಕಡೆಗೆ ತಿಳಿಸುವ ಪ್ರಸಂಗ ಬಂದಾ
ಬರೆಯುವ ಪತ್ರವನ್ನು ಅರ್ಧಬರೆದು ತಿಳಿಸುವರು. ಊರಿಗೆ ಹೊರಟ ಪಯಣಿಗ
ಹೋಗುವಾಗ ಬರುವೆನೆಂದು ಕೇಳಿ ಹೋಗುವನಲ್ಲದೆ ಹೋಗುವೆನೆಂದು ಹೇಳುವದಿಲ್ಲ
ಹೋಗುವೆನೆಂದು ಹೇಳಿದರೆ ಬಾರದಹಾದಿಗೆ, ಸಾವಿಗೆ ತುತ್ತಾಗುವೆನೆಂದು ಭಾವಿಸಿ ಹೋ
ಬರುವೆನೆಂದು ಹೇಳುವರು. ಶಾಸ್ತ್ರಗಳಲ್ಲಿ ಸುಪ್ರಸಿದ್ಧವಿರುವ ಪಂಚಸೂತಕಗಳಲ್ಲಿ ಮರ
ಸೂತಕವು ಒಂದಾಗಿರುವದು. ಊಟಕ್ಕೆ ಕುಳಿತಾಗ "ಸತ್ತನು'' ಎಂದು ಫೋನು ಅಥ
ತಂತಿ ಬಂದರೆ ಶಬ್ದಶ್ರವಣಮಾತ್ರದಿಂದ ಅಪವಿತ್ರ ಎಂದು ಭಾವಿಸಿ ಊಟವನ್ನು
ಮಾಡದೆ ಬಿಟ್ಟೇಳುವರು. ಮರಣದ ವಿಷಯವು ಭೀಕರ, ಭಯಾನಕ, ದಾರುಣವಿದ್ದ
ಬಾಳಿನ ಹಲವಾರು ಕಹಿ ಅನುಭವಗಳನ್ನು, ದುರಂತಗಳನ್ನು ಸಹಿಸುವದು ಅಸಾಧ್ಯ
ದಾಗ ಬಾಳುವದಕ್ಕಿಂತಲೂ ಸಾಯುವದೇ ಲೇಸೆಂದು ಬಗೆದು ಉರುಲು ಹಾಕಿಕೊಂ
ವಿಷಕುಡಿದೋ, ನದೀಕೂಪತಟಾಕಾದಿಗಳಲ್ಲಿ ಬಿದ್ದೋ, ಅಸುನೀಗಿದವರ ಎಣಿಕೆಗೆ ಕೊ

ಯಿಲ್ಲ. ತಾಯಿ ಸತ್ತಾಗ ಹಡೆದವ್ವಾ ನಮ್ಮನ್ನು ನಡುನೀರಲ್ಲಿ ಕೈಬಿಟ್ಟು ಹೋದೆಯಾ! ಉಣಿಸಿ-ತಿನಿಸಿ, ಸಾಕಿಸಲುಹಿದ ನಿನ್ನನ್ನು ಹೇಗೆ ಮರೆಯುವದು ಅವ್ವಾ ಎಂದು ಮಕ್ಕಳು ಅಳುವರು. ಗಂಡನು ಸತ್ತಾಗ ಹೆಂಡತಿಯು ನನ್ನ ರಾಜಾ, ನನ್ನ ದೊರೆ, ನನ್ನ ಭಾಗ್ಯದ ನಿಧಿಯೇ ಬಿಟ್ಟು ಹೋದೆಯಾ ? ನಾನು ಇನ್ನು ಹೇಗೆ ಬದುಕಲಿ ? ನನ್ನ ಮಾಂಗಲ್ಯದ ಸಿರಿಯೇ ಹೇಗೆ ಮಾಡಲಿ ಎಂದು ಕೈಬೀಸಿ ಗಂಡನ ಕಡೆಗೆ ಕೈಮಾಡಿ ಅಳುವಳು. ಮಕ್ಕಳು ಸತ್ತಾಗ ತಂದೆಯು ನನ್ನ ಬಂಗಾರದ ಗಿಣಿಯೇ! ಮುದ್ದಿನಕಣಿಯೇ! ಕೈಬಿಟ್ಟು ಹೋದೆಯಾ! ನನ್ನಿಂದ ನಿನಗೆ ಮಣ್ಣು ಬೇಕಾಗಿತ್ತೇ! ನನ್ನ ಹಣೆಬರಹ ಎಷ್ಟು ಕೆಟ್ಟದ್ದೋ ದೇವಾ! ಎಂದು ಬಗೆಬಗೆಯಾಗಿ ಅಳುವನು. ವಿವಿಧ ಲೌಕಿಕ, ವ್ಯಾವಹಾರಿಕ ಜೀವನಕ್ಕೆ ಸಂಬಂಧಪಟ್ಟ ಸಿಹಿಕಹಿ ಅನುಭವಗಳನ್ನು ನೆನೆನೆನೆದು, ಕಣ್ಣೀರು ಸುರಿಸುವ ಬದ್ಧಜೀವರ ಪರಿ ಇಂತಾದರೆ ದೈಹಿಕ, ವಾಚಿಕ, ಮಾನಸಿಕ ಸ್ತರಗಳನ್ನು ದಾಟಿ ಆತ್ಮಿಕ ಭೂಮಿಕೆಯಲ್ಲಿ ವಿಹರಿಸುವ ಮುಕ್ತಾತ್ಮರ ಪರಿಯೇ ಬೇರೆ.ಸಾಂಸಾರಿಕ ಜಂಜಾಟದಲ್ಲಿ ಸಿಕ್ಕ ನರರ ಪ್ರಳಾಪ, ಪಾರಮಾರ್ಥಿಕದ ಪವಿತ್ರಪಥದಲ್ಲಿ ನಡೆವ ಶರಣರಪ್ರಳಾಪ ಇವುಗಳಲ್ಲಿ ಅಜಗಜಾಂತರವಿದೆ.

ಲಿಂಗಪೂಜಾನಿಷ್ಠಳಾದ ನೀಲಲೋಚನೆಯು ಪ್ರಾಣಪ್ರಿಯನಾದ ಬಸವರಸರು ಲಿಂಗೈಕ್ಯರಾದಾಗ-

"ನಿಜದರಿವನರುಹಿಸಿಕೊಟ್ಟ ಗುರುವೆ, ನಿರ್ಮಳ ಪ್ರಭೆಯ
ತೋರಿದ ಗುರುವೆ, ನಿಜವನನುಭವಕ್ಕೆ ತಂದ ಗುರುವೆ, ಸುಖ
ದುಃಖವನೊಂದುರೂಪ ಮಾಡಿದ ಗುರುವೇ! ನಿಮ್ಮ ಘನವ ಕಾಂಬ
ಕಣ್ಣು ಕ್ರಮಗೆಟ್ಟಿತ್ತು! ಭಕ್ತಿ ಬಯಲಾಯಿತ್ತೆ ಬಸವಾ! ಎತ್ತಲಡ
ಗಿದೆಯಯ್ಯಾ ಸಂಗಯ್ಯನ ಗುರುಬಸವಾ! ಅಡವಿಯಲ್ಲಿ ಕಂಗೆಟ್ಟ
ಪಶುವಿನಂತೆ ನಾನು ಪ್ರಳಾಪಿಸುತ್ತಿರ್ದೆನಯ್ಯಾ!"

ಎಂದು ಕಲ್ಲುಕರಗುವಂತೆ ಆಕ್ರಂದನಗೈದುದನ್ನೂ ಮತ್ತು ಬಸವಣ್ಣನವರ ಅವಸಾನ ಕಾಲದಲ್ಲಿ ಅವರ ಆಪ್ತಕಾರ್ಯದರ್ಶಿಯಂತಿದ್ದ ಹಡಪದಪ್ಪಣ್ಣನವರು-

"ಎನ್ನ ತನು ನಿಮ್ಮ ಸೇವೆಯಲ್ಲಿ ಸವೆದು ಎನ್ನಮನ ನಿಮ್ಮನೆನಹಿನಲ್ಲಿ ಸವೆದು,
ಎನ್ನ ಅರಿವು ನಿಮ್ಮ ಘನದೊಳಗೆ ಸವೆದು ನಿಶ್ಚಲ ನಿಜೈಕ್ಯನಾಗಿ-
ಬಸವಪ್ರಿಯ ಕೂಡಲ ಚೆನ್ನಸಂಗಯ್ಯ ನೀನಾನೆಂಬುದು ಏನಾಯಿತ್ತೆಂದರಿಯೆ"

ಎಂದು ದುಃಖಸಾಗರದಲ್ಲಿ ಮುಳುಗಿ ಎಚ್ಚರತಪ್ಪಿ ಅತ್ತದ್ದನ್ನು ನೆನೆಯಬಹುದು.

" ಅಯ್ಯಾ ನಿಮ್ಮ ಶರಣರು ನುಡಿದುದೇ ಪರತತ್ತ್ವ ಕಾಣಿರೋ "

ಎಂಬುಕ್ತಿಯಂತೆ ಶರಣರು ಸುಖದಲ್ಲಿಯೇ ನುಡಿಯಲಿ ದುಃಖದಲ್ಲಿಯೇ ನುಡಿಯಲಿ ಅವರ ಚೆನ್ನುಡಿಗಳಲ್ಲಿ ಆಧ್ಯಾತ್ಮದ ಹೊಳಹುಇದ್ದೇಇರುವದು.

ಅಣ್ಣನ ಅಗಲಿಕೆಯನು ತಾಳದೇ " ನಾನೆಂತು ಬದುಕುವೆನಣ್ಣಾ ಕತ್ತಲೆ ಬೆಳಗ

ಕಾಂಬ ಸಂದೇಹಿ ನಾನೊಬ್ಬಳು, ಎನ್ನ ಕಣ್ಣ ಕಟ್ಟಿ ಕನ್ನಡಿಯ ತೋರಿತ್ತು ಅಜಗಣ್ಣ ನಿನ್ನ ಯೋಗ " ಎಂದು ಹಲುಬಿ ದುಃಖಿಸುವ ಮುಕ್ತಾಯಿಯ ಬಳಿಗೆ-ಹೊಟ್ಟೆ ಹಸಿದು ಅಳುವ ಕೂಸಿನ ಬಳಿಗೆ ಮೊಲೆಗುಡಿಸಲು ತಾಯಿಯು, ಮಗನ ಮರಣದಿಂದ ಪರಿತಪಿಸುವ ಕಿಸಾಗೋತಮಿಯ ಬಳಿಗೆ ಬುದ್ಧದೇವರು ಬಂದಂತೆ–ಪ್ರಭುದೇವರು ಬಂದರು. ಸಕಲ ಜೀವರಿಗೆ ಲೇಸನೇ ಬಯಸಿ ದೇಶ ಸಂಚಾರವ ಕೈಗೊಂಡ ದೇಸಿಗನಾದ ಪ್ರಭುವು ಮುಕ್ತಾಯಿಯ ಪ್ರಲಾಪ ಕೇಳಿ ಮರುಗಿದನು. ಲೋಕಕಲ್ಯಾಣಕ್ಕಾಗಿ ಪಾದಯಾತ್ರೆಯನ್ನು ಕೈಕೊಂಡ ಪ್ರಭುದೇವರು ಆಗಮಿಸಲು, ದುಃಖ ಸಂತಪ್ತಳಾದ ನನ್ನ ಅಳಲನ್ನು ಕಳೆವ ಓರ್ವ ಮಹಾ ಮಹಿಮರು ದಯಮಾಡಿದರು, ನನ್ನ ಪುಣ್ಯಕ್ಕೆ ಎಣೆಯುಂಟೇ ' ಎಂದು ಸತ್ಕರಿಸಿ ಭಕ್ತಿಪೂರ್ವಕ ವಂದಿಸಿದಳು.

ಲೋಕದಲ್ಲಿಯ ಸಾಮಾನ್ಯ ತಂಗಿಯರು ಅಣ್ಣನನ್ನು ಕಳೆದುಕೊಂಡು ಲೌಕಿಕ ಸಂಬಂಧಗಳನ್ನು ಕಲ್ಪಿಸಿ ಅಳುವಂತೆ ಅಳುತ್ತಿಲ್ಲ ಈ ತಂಗಿ. ಈ ಅಸಾಮಾನ್ಯ ಸಾಧಕಿಯ ಶೋಕದಲ್ಲಿ ಗುರುವಿರಹಭಾವ, ಧ್ಯೇಯವನ್ನು ತಲುಪುವ ದೃಢನಿಷ್ಠೆ,ತತ್ತ್ವ ಜಿಜ್ಞಾಸೆ ಮುಂತಾದ ಆದರ್ಶಗುಣಗಳು ತುಂಬಿತುಳುಕುತ್ತವೆ.

ನಮ್ಮ ಮುಖದ ಸೌಂದರ್ಯವನ್ನು ನೋಡಲಿಕ್ಕೆ ಕಣ್ಣು ಬೇಕು, ನೋಡಿಕೊಳ್ಳುವ ಕನ್ನಡಿಯೂಬೇಕು. ನೋಡುವ ಕಣ್ಣಿದ್ದು ನೋಡಿಕೊಳ್ಳುವ ಕನ್ನಡಿಯಿಲ್ಲದಿದ್ದರೆ ಆಗದು. ಕನ್ನಡಿಯಿದ್ದೂ ನೋಡುವ ಕಣ್ಣಿಲ್ಲದಿದ್ದರೆ ಆಗದು. ಎರಡೂ ಇದ್ದು ನೋಡುವ ಕಣ್ಣಿಗೆ ಕಟ್ಟು ಇದ್ದರೆ ಆವೆರಡೂ ಇದ್ದೂ ಇಲ್ಲದಂತೆ. ಕಣ್ಣನ್ನು ಕಟ್ಟಿಕೊಂಡು ಕನ್ನಡಿಯನು ನೋಡುವದು ಹೇಗೆ ವ್ಯರ್ಥವೋ, ಹಾಗೆಯೇ ಜ್ಞಾನಮಾರ್ಗದ ಪರಿಪೂರ್ಣತೆಯನ್ನು ತಿಳುಹುವ ನೀನಿಲ್ಲದೇ ನನ್ನ ಬಾಳು ಹಾಳಾಗಿದೆ. ಹೀಗೆ ನೇತ್ರ ಜಲಧಾರೆಯೊಡಗೂಡಿ ಜ್ಞಾನಾಮೃತ ಧಾರೆಸುರಿಸುವ ದಿವ್ಯೋಕ್ತಿಗಳನ್ನು ಕೇಳಿ ಚಕಿತರಾಗಿ ಪ್ರಭುದೇವರು-

" ಅಂಗೈಯೊಳಗೊಂದು ಅರಳ್ದ ತಲೆಯ ಹಿಡಿದುಕೊಂಡು
ಕಂಗಳ ಮುತ್ತು ಪವಣಿಸುವಾಕೆ ನೀನಾರು ಹೇಳಾ ?
ಅರಿವಿನೊಳಗಣ ಮರಹಿದೇನು ಹೇಳಾ ? ॥ "

ಎಂದು ಕೇಳಲು, ಮುಕ್ತಾಯಿ–

" ಆರೆಂದು ಕುರುಹ ಬೆಸಗೊಳಲು ಏನೆಂದು ಹೇಳುವೆನಯ್ಯಾ ?
ತಲೆಯಳಿದು ತಲೆಗಟ್ಟು ಬೆಳಗುವ ಜ್ಯೋತಿ ಎನ್ನ
ಅಜಗಣ್ಣ ತಂದೆಯ ಬೆನ್ನ ಬಳಿಯವಳಾನಯ್ಯ, ಚಿದ್ಘನದೊಳಗೆ
ಅವಿರಳೈಕ್ಯವಾದ ಎನ್ನ ಅಜಗಣ್ಣ ತಂದೆಯನ್ನರಿತು ಶರಣೆಂಬುವಾತ
ನೀನಾರು ಹೇಳಯ್ಯ ? "

ಎಂದು ಪ್ರಭುವಿನ ಪ್ರಶ್ನೆಗೆ ಉತ್ತರವಿತ್ತು, ಪುನಃ ಪ್ರಶ್ನಿಸಲು ಮುಕ್ತಾಯಿಗೆ ಪ್ರಭು-

" ಶರಣು ಶರಣಾರ್ಥಿ ಎಲೆತಾಯೆ ನಾ ನಿಮ್ಮ ಭಾವನಲ್ಲಯ್ಯನು
ನೀನೆನಗೆ ನಗೆವೆಣ್ಣು ಕಳವಳದ ಕಂದೆರೆವಿದೇನು ಹೇಳಾ ? "

ಎಂದು ಪ್ರಭುದೇವರು ಮುಕ್ತಾಯಿಯ ಪ್ರಶ್ನೆಗೆ ಉತ್ತರವಿತ್ತು ಪುನಃ ಪ್ರಶ್ನೆಮಾಡಲು ಮುಕ್ತಾಯಿಯು–

"ಮದವಳಿದು ಮಹವನೊಡಗೂಡಿದ ಎನ್ನ
ಅಜಗಣ್ಣನನಗಲಿದ ದುಃಖ ಪ್ರಭುವೇ"

ಎಂದು ಉತ್ತರಿಸಿದಳು. ಆಗ ಪ್ರಭುವು–

"ಅರಿವಂತು ಮರಹುಗೆಟ್ಟ ತನ್ನಲ್ಲಿ ತಾನು ಸನ್ನಿಹಿತನಾದವಂಗೆ
ದುಃಖಿಸುವರೇ ಹೇಳಾ ?"

ಸ್ವಸ್ವರೂಪ ಜ್ಞಾನವಿಲ್ಲದೆ ಮರವೆಗೊಳಗಾದ ಬದ್ಧನಿಗೆ ದುಃಖ ಮಾಡಬೇಕಲ್ಲದೆ ಸ್ವರೂಪಾನುಸಂಧಾನದಿಂದ ಮುಕ್ತನಾದವಂಗೆ ಚಿಂತಿಸುವರೇ ಎಂದು ಪ್ರಭುವು ಸಮಾಧಾನ ಹೇಳುವನು. ಆದರೂ ಮುಕ್ತಾಯಿಯು ದುಃಖದ ಭಾರದಿಂದ–

"ಅಜಗಣ್ಣ ಎನ್ನಮತಿಗೆ ಮರವೆಯ ಮಾಡಿ ಹೋದ ಪ್ರಭುವೇ
ಎಂತು ಮರೆವೆನಯ್ಯ ಎನ್ನ ಅಜಗಣ್ಣ ತಂದೆಯನು ?"

ತಂಗೀ ಅಜಗಣ್ಣನು ಮಹಿಮಾಪುರುಷನು. ಹುಟ್ಟು ಸಾವುಗಳಿಲ್ಲದವನು. ಶರಣರನ್ನು ಲೌಕಿಕ ನರರೊಡನೆ ಹೋಲಿಸಬೇಡ. ಹಾಲಿನಲ್ಲಿ ಹಾಲು, ನೀರಿನಲ್ಲಿ ನೀರು, ಘೃತದಲ್ಲಿ ಘೃತ ಬೆರೆದಂತೆ ಶರಣರು ಪರಶಿವನಲ್ಲಿ ಐಕ್ಯರಾಗುವರು. ಅವರು ಲಿಂಗೈಕ್ಯರು–

"ಕಂಡೆ, ಕಾಣೆ, ಕೂಡಿದೆ, ಅಗಲಿದೆನೆಂಬುದು ಭ್ರಾಂತಿ ತಾಯೆ
ಒಮ್ಮೆ ಕಂಡೆ, ಒಮ್ಮೆ ಕಾಣೆ, ಒಮ್ಮೆ ಕೂಡಿದೆ, ಒಮ್ಮೆ ಅಗಲಿದೆ
ನೆಂದರೆ ಕರ್ಮ ಬೆಂಬತ್ತಿ ಬಿಡದು. ನಿನ್ನೊಳಗೆ ನಿನ್ನ ತಿಳಿದು
ನೋಡಲು ಭಿನ್ನಉಂಟೇ ?"

ನೋಡಿದೆ–ನೋಡಲಿಲ್ಲ, ಕೇಳಿದೆ–ಕೇಳಲಿಲ್ಲ, ಹೋದೆ–ಹೋಗಲಿಲ್ಲ, ಕೂಡಿದೆ–ಅಗಲಿದೆ, ಹುಟ್ಟುವೆ–ಸಾಯುವೆ ಮುಂತಾದ ದ್ವೈತಭಾವವು ಕರ್ಮಮೂಲವಾದದ್ದು. ಕರ್ಮವು ಬೇತಾಳನಂತೆ ಬೆಂಬತ್ತಿ ಕಾಡುವದು. ಕರ್ಮದ ಭ್ರಾಂತಿಯಳಿದಾಗ ಅಚ್ಚಳಿಯದ ಶಾಂತಿಯು ದೊರೆಯುವದು. "ದ್ವೈತಾದ್ವೈತಭಯಂ" "ಅದ್ವೈತ ಪರಮಂ ಸುಖಂ" ದ್ವೈತ ಭಾವನೆಯು ಭವ ಮೂಲವು. ಭಯ ಮೂಲವು. ಅದ್ವೈತವು ನಿರ್ಭಯವು, ನಿತ್ಯಾನಂದ ಪ್ರದವು. "ಆತ್ಮವಿತ್ ಶೋಕಂತರತಿ" ತನ್ನ ತಾನರಿದೊಡೆ ಮುಕ್ತನೆಂದೂ, ತನ್ನ ತಾನರಿಯದೊಡೆ ಆತ ಬದ್ಧನೆಂದೂ ವೇದಾಗಮ ಶಾಸ್ತ್ರಗಳು ಸಾರಿ ಹೇಳುತ್ತವೆ ಎಂದು ಮುಂತಾಗಿ ಪ್ರಭುದೇವರು ಹೇಳಲು, ಮುಕ್ತಾಯಿಯು 'ಪ್ರಭುವೇ ನಿನ್ನೊಳಗೆ ನೀ ತಿಳಿದು ನೋಡು ನೋಡು ಎಂಬ ಮಾತು ದಿಟ. ಆದರೆ ನನ್ನೊಳಗಿರುವ ನನ್ನನ್ನು ತಿಳಿಸಿಕೊಡಲು ಅಜಗಣ್ಣನೆಂಬ ಗುರುವಿಲ್ಲದೆ ಆ ರೂಢಿಯ ಕೂಟ ಸಮನಿಸದು ಪ್ರಭುವೇ ! "ಮುಕ್ತಿಮೂಲಂ ಗುರೋಃಕೃಪಾ" "ಶಿವಪಥವನರಿವೊಡೆ ಗುರುಪಥವೇ ಮೊದಲು" ಎಂಬುಕ್ತಿ

ಯಂತೆ ಸನ್ಮಾರ್ಗ ಸಂದರ್ಶಕನಾದ ಸದ್ಗುರುವು ಆತ್ಮಗತ್ಯಬೇಕೆಂದು ಹೇಳಿವಳು, ಆಗ ಪ್ರಭುವು-

"ನಿನಗೆ ನೀನೆ ಗುರುವಲ್ಲದೆ ನಿನ್ನಿಂದಧಿಕವಪ್ಪ ಗುರುವುಂಟೇ ತಾಯೆ ?"
ಎಂದು ಸಮಾಧಾನ ಪಡಿಸುವರು.

ಶೌಚದಲ್ಲಿ ಅಂತರ್‌ಶೌಚ ಬಹಿರ್‌ಶೌಚವೆಂದು, ಸನ್ಯಾಸದಲ್ಲಿ ಅಂತರ್‌ಸನ್ಯಾಸ ಬಹಿರ್‌ಸನ್ಯಾಸವೆಂದು, ಪೂಜೆಯಲ್ಲಿ ಅಂತರಂಗಪೂಜೆ ಬಹಿರಂಗಪೂಜೆಯೆಂದು ಎರಡು ವಿಭಾಗ ಮಾಡಿದಂತೆ, ಅಷ್ಟಾವರಣಗಳಲ್ಲಿಯೂ ಅಂತರಂಗ ಅಷ್ಟಾವರಣ, ಬಹಿರಂಗ ಅಷ್ಟಾವರಣ ಎಂದು ಎರಡು ವಿಭಾಗ ಮಾಡಿರುವರು. ಶಾಸ್ತ್ರೋಕ್ತ ಸರ್ವಲಕ್ಷಣಗಳಿಂದ ಕೂಡಿದ ಬ್ರಹ್ಮಾಂಡದೊಳಗಿರುವ ಶ್ರೀಗುರುವಿಗಿಂತಲೂ ಪಿಂಡಾಂಡದೊಳಗಿರ್ದು ಅಂತ ರಂಗ ಗುರುವೆನಿಸಿದ ಈ ಅರಿವು ಬಹಳೇ ಮುಖ್ಯವಾದುದು. ಒಳಗಣ ಅರಿವಿಗೆ ಮುಸು ಕಿದ ಮರವೆಯು ಪರದೆ ಹರಿಯಲು ಗುರುವು ಬೇಕಲ್ಲದೆ ಅರಿವು ಕಣ್ದೆರೆದ ಬಳಿಕ ಗುರುವು ಬೇಕಿಲ್ಲ. ದೀಪಕ್ಕೆ ಬಂದ ಮಂಕು ತೆಗೆಯಲು ದೀಪ ನಿಚ್ಚಳವಾಗಿ ಬೆಳಗುವಂತೆ, ತಿಕ್ಕಿತಿಕ್ಕಿ ಬೆಳಗಿದಾಗ ದರ್ಪಣ ಥಳಥಳ ಹೊಳೆಯುವಂತೆ, ಕಂಗಳಿಗೆ ಬಂದ ಪರೆಯು ಹೋಗಲು ಕಣ್ಣು ಸುಸ್ಪಷ್ಟವಾಗಿ ಕಾಣುವಂತೆ, ಅರಿವಿಗೆ ಮುಸುಕಿದ ಪರದೆಯು ಸರಿಯಲು ಅದು ಭವ್ಯ ದಿವ್ಯ ಪರಂಜ್ಯೋತಿಯಾಗಿ ಬೆಳಗುವದು. ಅಂತರಂಗದ ಅಷ್ಟಾವರಣಗಳಲ್ಲಿ ಈ ಅರಿವೇ ಗುರುವು. ಈ ಅರಿವು ಸಾಧಕನಲ್ಲಿ ಕರಿಗೊಂಡು ನಿಂತರೆ ಬಹಿರಂಗ ಗುರುವಿನ ಅವ ಶ್ಯಕತೆಯಿಲ್ಲ. ಶಸ್ತ್ರಾಸ್ತ್ರಗಳನ್ನು ಹಿಡಿದು ಕಾದುವ ಕಡುಗಲಿಗೆ ಶತ್ರುಗಳು ಏನೇನೂ ಮಾಡ ದಂತೆ ಜ್ಞಾನಾಸ್ತ್ರವನ್ನು ಹಿಡಿದ ಮುಮುಕ್ಷುವಿಗೆ ಕಾಮಾದಿ ಷಡ್ವೈರಿಗಳು, ಷಡ್ವಿಕಾರ ಗಳು ಏನೇನೂ ಮಾಡಲಾರವು. ಕಗ್ಗತ್ತಲೆಯೊಳಗೆ ನಡೆಯುವ ಮನುಷ್ಯನ ಕೈಯಲ್ಲಿ ದೀಪವಿದ್ದರೆ ಹಾವು ಚೇಳುಗಳ ಭಯವಿಲ್ಲದೆ ದಾರಿಯು ಸುಗಮವಾಗಿ ಸಾಗುವಂತೆ ಸಂಸಾರದಲ್ಲಿದ್ದು ಮುಕ್ತಿ ಮಂದಿರದತ್ತ ಹೊರಟ ಮುಮುಕ್ಷುವಿಗೆ ಜ್ಞಾನದೀಪವೊಂದಿ ದ್ದರೆ ಅವನ ದಾರಿ ಸುಗಮವಾಗಿ ಸಾಗುವದು. ತನ್ನ ಅರಿವಿನಿಂದ ತನ್ನ ಉದ್ಧಾರವನ್ನು ತಾನೇ ಮಾಡಿಕೊಳ್ಳಬೇಕಲ್ಲದೆ ಅನ್ಯರಿಂದ ತನ್ನ ಉದ್ಧಾರವಾಗದು. ಈ ಮಾತನ್ನೇ ಭಗವ ದ್ಗೀತೆಯಲ್ಲಿ ಶ್ರೀಕೃಷ್ಣನು ಅರ್ಜುನನನ್ನು ಕುರಿತು-

" ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್ ।
ಆತ್ಮೈವ ಹ್ಯಾತ್ಮನೋ ಬಂಧು ರಾತ್ಮೈವರಿಪುರಾತ್ಮನಃ ॥ "

ಎಂದು ಹೇಳಿರುವನು. ತಲೆಯ ಮೇಲೆ ಹೊತ್ತ ಹೊರೆ ಭಾರವಾಗಿ ಅದನ್ನು ತಾಳದೆ ಬೇರೊಬ್ಬರಿಗೆ ಹೊರಿಸಿದಂತೆ, ರೋಗ ಬಂದಾಗ ಔಷಧ ತಕ್ಕೊಳ್ಳುವದು, ನೀರಡಿಸಿದಾಗ ನೀರು ಕುಡಿಯುವುದು, ಹಸಿವಾದಾಗ ಉಣ್ಣುವದು, ಬೇರೊಬ್ಬರಿಂದ ಮಾಡಿಸಿದರೆ ನಡೆದೀತೇ ? ಇದನ್ನೇ ಓರ್ವ ಪಂಡಿತರು –

" ಮಸ್ತಕನ್ಯಸ್ತ ಭಾರಾದೇರ್ದುಃಖ ಮನ್ಯೈರ್ನಿವಾರ್ಯತೇ ।
ಕ್ಷುಧಾಧಿಕೃತ ದುಃಖಂತು ವಿನಾಸ್ವೇನ ನಕೇನಚಿತ್ ॥ "

ಎಂದು, ಮತ್ತು ಬಸವೇಶ್ವರರು –

" ತನ್ನಾಶ್ರಯದ ರತಿ ಸುಖವನು, ತಾನುಂಬ ಊಟವನು
ಬೇರೊಬ್ಬರ ಕೈಯಲ್ಲಿ ಮಾಡಿಸಬಹುದೇ ? ...... "

ಎಂದೂ ಹೇಳಿರುವರು. ಪ್ರಯುಕ್ತ ನಿನಗೆ ನೀನೇ ಗುರು, ನಿನ್ನ ಉದ್ಧಾರ ನಿನ್ನಿಂದಲೇ ಮಾಡಿಕೊ ಎನ್ನಲು –

ಮುಕ್ತಾಯಕ್ಕ ; ಗುರುತಾನಾದರೂ ಗುರುವಿಡಿದಿರಬೇಕು ಪ್ರಭುವೇ.

ಪ್ರಭುದೇವ : ಸಹಜಸಂಬಂಧಕ್ಕೆ ಗುರುವಲ್ಲದೆ ಅಸಹಜಕ್ಕೆ ಗುರುವುಂಟೇ ತಾಯಿ ?

ಮುಕ್ತಾಯಕ್ಕ ; ನೆರೆಯರಿತು ಮರೆಯ ಬಲ್ಲರೆ ಎನ್ನ ಅಜಗಣ್ಣ ತಂದೆಯಂತೆ ಶಬ್ದ ಮುಗ್ಧವಾಗಿರಬೇಕಲ್ಲದೆ ಶಬ್ದ ಸಂದಣಿಯ ಮಾತು ಸಮಯವಲ್ಲ ನೋಡಾ ಪ್ರಭುವೆ !

ಪ್ರಭುದೇವ : ಮಾತೆಂಬುದು ಜ್ಯೋತಿರ್ಲಿಂಗ, ಸ್ವರವೆಂಬುದು ಪರತತ್ತ್ವ, ಗುಹೇಶ್ವರನ ಶರಣರು ನುಡಿದು ಸೂತಕಿಗಳಲ್ಲ ತಾಯೆ !

ಮುಕ್ತಾಯಕ್ಕ : ನುಡಿಯ ಹಂಗಿನ್ನೂ ನಿಮಗೆ ಹಿಂಗದು ನಡೆಯನೆಂತು ಪರರಿಗೆ ಹೇಳುವಿರಿ ?

ಪ್ರಭುದೇವ ; ಶರಣ ನಡೆದರೆ ನಿರ್ಗಮನಿ, ನುಡಿದರೆ ನಿಶ್ಶಬ್ದ ತಾಯೆ !
ತನ್ನಲ್ಲಿ ತಾನು ತದ್ಗತಮಾಗಿಪ್ಪ ಶಿವಯೋಗಿಗೆ ಭಿನ್ನವಿಲ್ಲನೋಡಾ,

ಮುಕ್ತಾಯಕ್ಕ ; ಅಹುದಹುದು ಶಿವಶರಣರ ಮಹಿಮೆ ಆರಿಗೆಯೂ ಕಾಣಬಾರದು. ಅರಿವಡೆ ಮತಿಯಿಲ್ಲ, ನೆನೆವಡೆ ಮನವಿಲ್ಲ, ಎನ್ನ ಅಜಗಣ್ಣ ತಂದೆಯನೊಳಕೊಂಡಿಪ್ಪ ನಿಮ್ಮ ಮಹಿಮೆಗೆ ನಮೋ ನಮೋ ಎನುತಿರ್ದೆನು.

ಮನದಲ್ಲಿ ಅನುಪಮ ಶಾಂತಿಯನ್ನು ತಳೆದ ಅನ್ವರ್ಥಕ ನಾಮದ ಮುಕ್ತಾಯಿ ಪ್ರಭುವಿಗೆ ಬಾಗಿ ಬೇಡಿಕೊಳ್ಳುತ್ತಾಳೆ–

" ದೇವ ನಿಮ್ಮವರುಗಳ ಪರಿಯನು ।
ನೀವೆ ಬಲ್ಲಿರಿ ಹಾವಿನಡಿಯನು ।
ಹಾವುಗಳು ನೆರೆಬಲ್ಲವಲ್ಲದೆ ನಮಗೆ ಗೋಚರವೆ ?
ಭಾವಿಸುವೊಡೆಮಗಿನ್ನು ಗತಿಮತಿ ।
ಯಾವುದೆಂದೆನುತಲ್ಲಮ ಪ್ರಭು ।
ದೇವರಿಗೆ ಮುಕ್ತಾಯಿ ಬಿನ್ನೈಸಿದಳು ಭಕ್ತಿಯಲಿ ॥ "

ಅಧ್ಯಾತ್ಮ ವಿದ್ಯೆಯಲ್ಲಿ ಪಾರಂಗತರಾದ ನಾ ನೀ ಎನ್ನುವ ಅತಿರಥ ಮಹಾರಥಿಗಳೆಲ್ಲರೂ ಅಚ್ಚರಿಯಾಗುವಂತೆ ಹೇಳಿದ, ಮುಕ್ತಾಯಿಯ ಗೂಢಾತಿಗೂಢ, ರಹಸ್ಯಾತಿರಹಸ್ಯವಾದ ತಾತ್ವಿಕ ವಿಚಾರ ವೈಭವವನ್ನು ಕೇಳಿ ನಿರಂಜನ ಪ್ರಭುವು ಪರಮಸಂಪ್ರೀತನಾದನು. ಕ್ಷೀಣ

ಸಾಗರಭಟ್ಟ ಎಂಬ ಹೆಸರಿದ್ದು ಕುಡಿಯಲು ಗುಟುಕು ಹಾಲಿಲ್ಲ, ಲಕ್ಷ್ಮೀಕಾಂತ ಎಂಬ ಹೆಸ ರಿದ್ದು ಕಿಸೆಯಲ್ಲಿ ಒಡಕು ಕವಡಿಯಿಲ್ಲ ಎಂಬಂತಿರದೇ, ನಿನ್ನ ಮುಕ್ತಾಯಿ ಎಂಬ ನಾಮ ಅಂಕಿತ ನಾಮವಾಗಿರದೇ ಸಾರ್ಥಕ ನಾಮವಾಗಿರುವದು. ನೀನು ನಿಜವಾಗಿ ಮುಕ್ತ ಬದ್ಧಳಲ್ಲ ಶುದ್ಧಳು, ಅನುರಕ್ತೆಯಲ್ಲ ವಿರಕ್ತೆಯು. ಹೆಸರಿಗೆ ತಕ್ಕಂತೆಯೇ ನೀನು ಉ ತ್ತೋನ್ನತವಾದ ಪಾರಮಾರ್ಥಿಕ ಬಯಕೆಯನ್ನು ಬಯಸಿದೆ. ಹರಿಗೋಲಲ್ಲಿ ಕುಳಿತು ತುಂಬಿದ ಹೊಳೆಯನ್ನು ದಾಟಿ ಆಚೆಯ ದಡವನ್ನು ಸೇರುವರೋ ಹಾಗೆ ಸಂಸಾರ ದಾಟುವದಕ್ಕೋಸ್ಕರ ಲಿಂಗಾನುಭಾವಿಗಳು ಅಹಂಭಾವಪೂರಿತ ಕರ್ಮಗಳನ್ನು ತೊ ನಿರಹಂಭಾವದಿಂದ, ದಾಸೋಹಂಭಾವದಿಂದ ಸಹಜ ಮಾಟಸ್ಥಲದಲ್ಲಿ ನಿಂದು ಸ ಕ್ರಿಯೆಗಳನ್ನು ಮಾಡುತ್ತ ಅಂತರ್ಮಾರ್ಗವನ್ನೇ ಆಶ್ರಯಿಸುವರು.

ಮಗುವು ಮೊಲೆಹಾಲನ್ನು ಬಯಸುವದು, ಗಾಳಿ ಬೀಸುವದು, ನೀರು ಕೆಳಗೆ ಹ ಯುವುದು, ಅಗ್ನಿ ಮೇಲ್ಮುಖವಾಗಿ ಉರಿಯುವದು, ಮೇಲಕ್ಕೆಸೆದ ಕಲ್ಲು ಕೆಳಗೆ ಬೀಳುವ ಹೇಗೆ ಸ್ವಾಭಾವಿಕವೋ ಹಾಗೆ ಮನ ಇಂದ್ರಿಯಗಳು ವಿಷಯಗಳತ್ತ ಧಾವಿಸುವ ಸ್ವಾಭಾವಿಕ. ತಾಯಿಯಾದವಳು ಮೊದಲು ಮಗುವಿಗೆ ಅವಶ್ಯವೆನಿಸಿದ ಮೊಲೆಹಾಲ ಕುಡಿಸಿದರೂ ಸ್ಥೂಲದಿಂದ ಸೂಕ್ಷ್ಮಕ್ಕೆ, ಸಾವಯವದಿಂದ ನಿರವಯಕ್ಕೆ, ಸಾಕಾರದಿಂ ನಿರಾಕಾರಕ್ಕೆ, ಸಗುಣದಿಂದ ನಿರ್ಗುಣಕ್ಕೆ ಎಂಬಂತೆ ಬರಬರುತ್ತ ಹಸುವಿನ ಹಾಲನ್ನು ಮೆಲ್ಲ ಮೆಲ್ಲನೆ ಅನ್ನವನ್ನು ಉಣ್ಣಲು ಹೇಗೆ ಅಭ್ಯಾಸಮಾಡಿಸುವಳೋ ಹಾಗೆಯೇ ಗುರುವು ಶಿವಯೋಗಾನುಸಂಧಾನದಿಂದ ವಿಷಯಗಳತ್ತ ಧಾವಿಸುವ ಶಿಷ್ಯನ ಇಂದ್ರಿ ಯಗಳನ್ನೆಲ್ಲ ಲಿಂಗೇಂದ್ರಿಯಗಳನ್ನಾಗಿ ಮಾರ್ಪಡಿಸಿ ಬಾಹ್ಯ ಲಿಂಗಾರ್ಚನೆಯ ಮುಖ ಅಂತರ್ಲಿಂಗಾನು ಸಂಧಾನಮಾಡಿ ನಿರಾಳದಲ್ಲಿ ನಿಲ್ಲುವ ನಿಲವನ್ನು ಕಲಿಸುವನು. ಇ ಚರಮಗುರಿ, ಇದೇ ಪರಮ ಗುರಿ.

" ಯದ್ಗತ್ವಾನನಿವರ್ತಂತೇ ತದ್ಧಾಮ ಪರಮಂಪದಂ "
ಪರಾತ್ಪರಂ ಪುರುಷಮುಪೈತಿದಿವ್ಯಂ "

ಇದೇ ಪರಮ ಪದ, ಇದೇ ದಿವ್ಯ ಪದವಿ.

ಬಾಹ್ಯ ಲಿಂಗಾರ್ಚನೆ, ಬಾಹ್ಯ ಲಿಂಗಧಾರಣ, ಬಾಹ್ಯ ಲಿಂಗಾನುಸಂಧಾನಗಳಿ ತಲೂ ಅಂತರ್ಲಿಂಗಾರ್ಚನೆ, ಅಂತರ್ಲಿಂಗಧಾರಣ, ಅಂತರ್ಲಿಂಗಾನುಸಂಧಾನಗಳು ಮಹ ನವು ಎಂಬುದು —

" ನಿರುಪಾಧಿಕ ಮುಖ್ಯಾತಂ ಲಿಂಗಸ್ಯಾಂತರ ಧಾರಣಂ ।
ವಿಶಿಷ್ಟಂಕೋಟಿಗುಣಿತಂ ಬಾಹ್ಯಲಿಂಗಸ್ಯಧಾರಣಾತ್ ।
ಅಂತರ್ಲಿಂಗಾನು ಸಂಧಾನಂ ಆತ್ಮವಿದ್ಯಾಪರಿಶ್ರಮಃ ।
ಗುರೂಪಾಸನ ಶಕ್ತಿಶ್ಚ ಕಾರಣಂ ಮೋಕ್ಷ ಸಂಪದಾಂ । "

ಈ ಪ್ರಮಾಣಗಳಿಂದ ತಿಳಿದು ಬರುವದು.

"ಹೊರಗನೇ ಪೂಜಿಸಿ, ಹೊರಗನೇ ಕೊಯ್ದು, ಹೊರಗಾಗಿ ಹೋಯಿತ್ತು ಶ್ರೀ ಜಗನ್ನ

" ಅಮರತೆಯ ಹೊಲಬನರಿಯದೇ ಜಗವೆಲ್ಲ ಬರಡಾಯಿತ್ತು "
" ರೂಪವನೆ ಕಂಡರು, ನಿರೂಪವನೆ ಕಾಣರು, ಅನುವನೆ ಕಂಡರು
ಘನವನೇ ಕಾಣರು, ಆಚಾರವನೆ ಕಂಡರು, ವಿಚಾರವನೆ ಕಾಣರು,
ಗುಹೇಶ್ವರಾ ನಿಮ್ಮ ಕುರುಹನೇ ಕಂಡರು ಕೂಡಲರಿಯದೆ ಕೆಟ್ಟರು "

ಎಂದು ಪ್ರಭುದೇವರು ಅಂತರ್ಲಿಂಗಾನುಸಂಧಾನದ ಮಹತ್ವವನ್ನು ಬಿತ್ತರಿಸಿ ನಿಜನಿರಾಳ ದಲ್ಲಿ ನಿಂತಾಗಲೇ ಅನುಪಮ ಶಾಂತಿ ದೊರೆವುದೆಂದು ಉಪದೇಶಿಸಿದರು.

ಆಗ ಮುಕ್ತಾಯಿಯು – ಪ್ರಭುವೇ ನಿಮಗೆ ಮನೋವಾಕ್ಕಾಯಕರ್ಮಗಳು ಇರುವಾಗ ನಮಗೆ ಉನ್ನತೋನ್ನತವಾದ ನಿರವಯದ ಪಥವನ್ನು ವಾಕ್ಚಾತುರ್ಯವನ್ನು ಪ್ರದರ್ಶಿಸಿ ಹೇಳಿದರೆ ನಿಮ್ಮಲ್ಲಿ ನಮಗೆ ವಿಶ್ವಾಸ ಹುಟ್ಟುವದಿಲ್ಲ ಎನ್ನಲು, ಪ್ರಭುವು ಮುಕ್ತಾಯಿಯೇ ಕೇಳು —

ಸುಟ್ಟ ನೂಲು ಹಾಗೂ ಸುಡದ ನೂಲು ಎರಡೂ ಒಂದೇ ವಿಧವಾಗಿ ಕಂಡರೂ ಸುಡಲಾರದ ನೂಲೇ ಹುರಿಹಾಕಲು ಮತ್ತು ಹೊಸೆಯಲು ಬರುವದಲ್ಲದೆ, ಕೇವಲ ಕಣ್ಣಿಗೆ ಹಗ್ಗದಂತೆ ತೋರುವ ಸುಟ್ಟ ನೂಲು ಹುರಿಹಾಕಲು ಹೊಸೆಯಲು ಬಂದೀತೇ ? ಸುಟ್ಟ ಬಟ್ಟೆ, ಮತ್ತು ಸುಡಲಾರದ ಬಟ್ಟೆ ಎರಡೂ ಒಂದೇ ವಿಧವಾಗಿ ಕಂಡರೂ ಸುಡಲಾರದ ಬಟ್ಟೆಯೇ ಅಗಸನ ಕ್ಷಾಲನಾದಿಕ್ರಿಯೆಗಳಿಗೆ ಬಂದೀತಲ್ಲದೆ, ಕೇವಲ ಹೊರಗಣ್ಣಿಗೆ ಬಟ್ಟೆಯಂತೆ ತೋರುವ ವಸ್ತ್ರ ತೊಳೆಯಲು ಬಂದೀತೇ ? ಹಾಗೆ ಶಿವಯೋಗಿಯು ದೇಹ ಧಾರಣ ಮಾಡಿಯೂ ನಿರ್ದೇಹಿಯು. ದೈಹಿಕ ವಿಕಾರಕ್ಕೊಳಪಡದವನು.

" ಕಾಲಿಲ್ಲದ ಗಮನ ಕೈಯಿಲ್ಲದ ಸೋಂಕು ಬಾಯಿಲ್ಲದ ರುಚಿ "
" ನಾಮವಿಲ್ಲದ ದೇವರಿಗೆ ನೇಮವೆಲ್ಲಿಯದೋ "
" ಬಂದು ಬಾರದ ನಿಂದ ನಿರಾಳ ಗುಹೇಶ್ವರ "
" ಬಯಲು ಬಯಲನೆ ಬಿತ್ತಿ, ಬಯಲು ಬಯಲನೆ ಬೆಳೆದು,
ಬಯಲು ಬಯಲಾಗಿ ಬಯಲಾಯಿತ್ತಯ್ಯ, ಬಯಲ ಜೀವನ
ಬಯಲ ಭಾವನೆ, ಬಯಲು ಬಯಲಾದೆ ಗುಹೇಶ್ವರ "

" ಆಸ್ತೇ ದಗ್ಧಪಟನ್ಯಾಯಾತ್ ಕ್ರಿಯಾಮಾತ್ರಾಹಿನಕ್ರಿಯಾ "
ಮುಕ್ತಾಯಿಯೇ ನಾನು ನಿರ್ಗುಣ, ನಿರಂಜನ, ನಿರವಯನು.

" ಯೇಯಥಾಮಾಂಪ್ರಪದ್ಯಂತೇ ತಾಂಸ್ತಥೈವಭಜಾಮ್ಯಹಂ "

ಎಂಬುಕ್ತಿಯಂತೆ ಅವರವರ ಭಕ್ತಿಭಾವಗಳಿಗನುಸಾರವಾಗಿ ತನುಮನಾದಿಗಳಿಂದ ತೋರಿಯೂ ತೋರದಂತಿರುವನು ಎನ್ನಲು, ಮುಕ್ತಾಯಿಯು ಪ್ರಭುವೇ ನಿನ್ನ ಮಾತು ನೂರಕ್ಕೆ ನೂರು ದಿಟ. ಆದರೂ ಒಂದು ಸಂಶಯ ತೋರುವದು.

ಸತಿ-ಪತಿಗಳ ಸಂಯೋಗದಿಂದಲೇ ಪಿಂಡೋತ್ಪತ್ತಿಯಾಗುವದು ಲೋಕ ಪ್ರಸಿದ್ಧ, ಆ ಪಿಂಡಕ್ಕೆ ಅಂದರೆ ದೇಹಕ್ಕೆ ಇಂದ್ರಿಯಾದಿಗಳಿದ್ದರೇನೇ ನೋಡುವ, ಮಾತಾಡುವ,

ಮೂಸುವ, ಆಸ್ವಾದಿಸುವ ಮೊದಲಾದ ಕ್ರಿಯೆಗಳು ನಡೆಯುವವು. ನನಗೆ ದೇಹವೇ ಇಲ್ಲ; ನಾನು ನಿರ್ಗುಣ, ನಿರಂಜನ, ನಿರವಯ, ನಿರ್ದೇಹಿ, ನಿರಾಳ ಎಂದು ಹೇಳುವಿ. ದೇಹವೇ ಇಲ್ಲದ ಮೇಲೆ ಅದಕ್ಕೆ ಸಂಬಂಧ ಪಟ್ಟ ಇಂದ್ರಿಯಗಳು, ಕಂಠ, ತುಟಿ, ನಾಲಿಗೆ, ಪ್ರಾಣಾಪಾನಾದಿ ವಾಯುಗಳು ಇಲ್ಲದಂತಾಯಿತು.

ಮಾತು ಹುಟ್ಟಬೇಕಾದರೆ ನಾಲಿಗೆ, ಕಂಠ, ತುಟಿ ಮೊದಲಾದವುಗಳ ಕೂಟವಾಗಬೇಕು, ನೀನಾದರೋ ಮಾತನಾಡುವಿ, ಮಾತನಾಡಿಯೂ ದೇಹವಿಲ್ಲೆನ್ನುವಿ. ದೇಹವಿಲ್ಲದೆ ಮಾತಾಡಲು ಬರುವದೇ ? ಇವು ಒಂದಕ್ಕೊಂದು ವಿರೋಧವಾಗುವವು. ಈ ಜಟಿಲ ಸಮಸ್ಯೆಗೆ, ಸಮಾಧಾನಕಾರಕ ಉತ್ತರವನ್ನು ನಿರೂಪಿಸೆನ್ನಲು ಪ್ರಭು–ಮಗಳೇ ಕೇಳು ಶಬ್ದೋತ್ಪತ್ತಿಯಾಗಬೇಕಾದರೆ ಪಂಚಭೂತಗಳಿಂದ ನಿರ್ಮಿತವಾದ ದೇಹವೇಬೇಕೆಂಬ ಕಟ್ಟಳೆಯಿಲ್ಲ. ಪಂಚಭೂತಗಳ ಒಕ್ಕೂಟವೆನಿಸಿದ, ಬಯಲೆನಿಸಿದ ಆಕಾಶವು ಗದ್ದರಿಸುವದನ್ನು ಕೇಳಿಲ್ಲವೇ ? ಅಲ್ಲಿ ಶಬ್ದೋತ್ಪತ್ತಿಯಾಗುವದು ಲೋಕಪ್ರಸಿದ್ಧವಿದೆ. ಶಿವಯೋಗಿಯ ದೇಹವು ಅಂತು ಇಂತು ಎಂಬ ಭ್ರಾಂತಿಯನ್ನು ಬಿಟ್ಟುಬಿಡು. ಶಿವಯೋಗ ಸಮಾಧಿಯಲ್ಲಿದ್ದ ಅನಿಮಿಷಯೋಗಿಯು ರಕ್ತಮಾಂಸಾದಿ ಸಪ್ತ ಧಾತುಗಳಿಂದ ಕೂಡಿದ ದೇಹವುಳ್ಳವನಾಗಿರದೆ ಕೇವಲ ಅಸ್ತಿಮಾತ್ರ ದೇಶವುಳ್ಳವನಾಗಲಿಲ್ಲವೇ ?

ದ್ವಿತೀಯ ಶಂಭುವೆನಿಸಿದ ಬಸವಣ್ಣನವರು ಸಪ್ತಧಾತುಗಳಿಂದ ಕೂಡಿದ ದೇಹವುಳ್ಳವರಾಗಿರಲಿಲ್ಲವೇ ? ಪ್ರಭುವಾದ ನಾನೂ ನೆಳಲೂ ಹೆಜ್ಜೆಯೂ ಇಲ್ಲದ ಅವಯವ ರಹಿತ ದೇಹಿಯಾಗಿದ್ದೇನೆ. ಶಿವಸಂಸ್ಕಾರದಿಂದ ಸಂಸ್ಕೃತನಾದ ಶಿವಯೋಗಿಯ ದೇಹವು ಯಾವದೇ ರೀತಿಯಿಂದ ತೋರಿದರೂ ಅದು ಏಕ ಪ್ರಕಾರವಾದುದೆಂದೇ ತಿಳಿ, ಸಕ್ಕರೆಯ ಗೊಂಬೆಯಲ್ಲಿ ಇಂಪು ಕಪ್ಪುರದ ಗೊಂಬೆಯಲ್ಲಿ ಕಂಪು, ಬೆಳ್ದಿಂಗಳೊಳು ತಂಪು ತುಂಬಿ ತುಳುಕುವಂತೆ–

« ಹರಿವ ನದಿಗೆ ಮೈಯೆಲ್ಲಾ ಕಾಲು,<br>
ಉರಿವ ಅಗ್ನಿಗೆ ಮೈಯೆಲ್ಲಾ ನಾಲಿಗೆ,<br>
ಬೀಸುವ ಗಾಳಿಗೆ ಮೈಯೆಲ್ಲಾ ಕೈ,<br>
ಗುಹೇಶ್ವರ ನಿಮ್ಮ ಶರಣಂ ಸರ್ವಾಂಗ ಲಿಂಗ »

ಎಂಬಂತೆ ಶಿವಯೋಗಿಯ ಸರ್ವಾಂಗದಲ್ಲಿ ಲಿಂಗಭಾವವು ತುಂಬಿ ತುಳುಕುತ್ತದೆ. ಲೋಹಾದಿ ಧಾತುಗಳಿಂದ ನಿರ್ಮಿತವಾದ ಧನುಸ್ಸಿಗೆ ಕಟ್ಟಿದ ಸಿಂಜಿನಿಯನ್ನು ಆಕರ್ಣ ಪರ್ಯಂತ ಎಳೆದು ಬಾಣಗಳನ್ನು ಹೂಡಿ ಹೊಡೆಯಲು ಬಂದೀತಲ್ಲದೆ, ಆಕಾಶದಲ್ಲಿ ವಿವಿಧ ಬಣ್ಣಗಳಿಂದ ಕಣ್ಣಿಗೆ ತೋರಿ ಅಡಗುವ, ತುದಿಮೊದಲಿಲ್ಲದ ಕಾಮನಬಿಲ್ಲಿಗೆ ಬಾಣಗಳನ್ನು ಹೂಡಿ ಹೊಡೆಯಲು ಬರುವದೇ ? ಕಣ್ಣಿಗೆ ಕಾಣುವ ಕೈಯೊಳಗೆ ಸಿಲುಕುವ ಸಕ್ಕರೆಯ ಬೊಂಬೆ ಮತ್ತು ಕಪ್ಪುರದಗೊಂಬೆಗಳು ಜಲಾಗ್ನಿಗಳ ಸಂಪರ್ಕದಿಂದ ಕಣ್ಮರೆಯಾಗಿ ಹೋಗುವಂತೆ ಜಡಶಿಲಾ ಜಡಮೃತ್ತಿಕೆಯಿಂದ ಮಾಡಿದ ಗೊಂಬೆಗಳು ಅವುಗಳ ಸಂಪರ್ಕದಿಂದ ಕಣ್ಮರೆಯಾಗಿ ಹೋಗುವವೇ ? ಮೊದಲಿನವೆರಡು ಗೊಂಬೆಗಳು ಸಾಮಾನ್ಯರ ದೃಷ್ಟಿಗೆ ಮೊದಲು ತೋರಿ ನಂತರ ತೋರದುದು ವಿನಾಶವೆಂದು ಕಂಡಂತಾದರೂ ವಿವೇಕಿಗಳಿಗದು

ಮೂಲ ಸ್ವರೂಪವನ್ನೇ ತಳೆದುದು ಎಂದು ತಿಳಿದು ಬರುವದು; ಹಿಂದುಗಡೆಯ ಎರಡು ಗೊಂಬೆಗಳನ್ನು ನೂರಾರು ವರುಷ ನೀರಲ್ಲಿ ಇಡಲಿ, ರಾಶಿರಾಶಿಯಾಗಿ ಒಟ್ಟಿದ ಕಟ್ಟಿಗೆಯ ಬೆಂಕಿಯಲ್ಲಿ ಸುಡಲಿ ಏನು ಮಾಡಿದರೂ ಅವು ಇದ್ದಕ್ಕಿದ್ದಂತೆ ಇರಬಹುದು ಅಥವಾ ಬೇರೊಂದು ವಿಕೃತ ರೂಪ ತಳೆಯಬಹುದು. ಶರಣರು ಸಕ್ಕರೆಯ ಗೊಂಬೆ ಕರ್ಪೂರದಗೊಂಬೆ ಗಳದ್ದಂತೆ, ಇದನ್ನೇ ವಚನಕಾರರು —

" ನೀರಲಫಲ, ಉತ್ತತ್ತಿ, ಮಾವಿನ ಹಣ್ಣಿನಂತೆ
ಇರುವವರು ಮರ್ತ್ಯರು,
ಹಲಸು, ತೆಂಗು, ದಾಳಿಂಬೆಯಂತೆ
ಇರುವವರು ಸ್ವರ್ಗದವರು.
ಹಾಲು ತುಪ್ಪ ಸಕ್ಕರೆ ಬೆಲ್ಲದಂತಿರುವವರು
ನಿಮ್ಮವರು ಕಾಡಿನೊಳಗಾದ ಶಂಕರ ಪ್ರಿಯ
ಚನ್ನಕದಂಬಲಿಂಗ ನಿರ್ಮಾಯಪ್ರಭುವೇ "

ಎಂದು ಹೃದಯಂಗಮವಾಗಿ ಹೇಳಿರುವರು.

" ಬಯಲ ರೂಪ ಮಾಡಬಲ್ಲಾತನೇ ಶರಣನು,
" ಆ ರೂಪ ಬಯಲ ಮಾಡಬಲ್ಲಾತನೇ ಲಿಂಗಾನುಭಾವಿ,
ಬಯಲ ರೂಪ ಮಾಡಲರಿಯದಿದ್ದರೆ ಎಂತು ಶರಣನೆಂಬೆ ?
ಆ ರೂಪ ಬಯಲ ಮಾಡಲರಿಯದಿದ್ದರೆ ಎಂತು ಲಿಂಗಾನುಭಾವಿ ಎಂಬೆ ?
ಈ ಉಭಯವೊಂದಾದರೆ ನಿಮ್ಮಲ್ಲಿ ತೆರಹುಂಟೇ ಕೂಡಲಸಂಗಮದೇವಾ ? "

ರೂಪ – ಬಯಲು, ಸಾವಯವ – ನಿರವಯವ, ಸಗುಣ–ನಿರ್ಗುಣ,
ಸೋಪಾಧಿಕ - ನಿರುಪಾಧಿಕ, ಮೂರ್ತ–ಅಮೂರ್ತ,
ಸಕಲ - ನಿಷ್ಕಲ, ಸ್ಥೂಲ – ಸೂಕ್ಷ್ಮ ಈ ಉಭಯ ಒಂದಾಗಬೇಕು.

ಲಿಂಗಾನುಭಾವಿಗೆ ಎಲ್ಲೆಲ್ಲಿಯೂ, ಎಲ್ಲದರಲ್ಲಿಯೂ ದಿವ್ಯ ಚೈತನ್ಯದ ಅನುಭವವಾಗ ಬೇಕು. ಸೋಪಾಧಿಕ, ಸಗುಣ, ಮೂರ್ತಗಳ ಮುಖಾಂತರ ಬಯಲನ್ನು ಅಂದರೆ ಪರಿಪೂರ್ಣತೆಯನ್ನು ಸಾಧಿಸಬೇಕು, ನಾವು ರೂಪಾತ್ಮಕವಾದ ವಿಶ್ವದ ವೈವಿಧ್ಯದ ಹಿಂದಿರುವ ನಿರಂಜನ ತತ್ವವನ್ನು ಅರಿಯಬೇಕು ಎಂದು ಮುಂತಾಗಿ ಹೇಳಿದ ಪ್ರಭುವಿನ ಉಪದೇಶದಿಂದ ಮುಕ್ತಾಯಿಯ ಮನದ ಸಂಶಯಗಳೆಲ್ಲ ಬಿರುಗಾಳಿಗೆ ಮೋಡಗಳು ಚದುರಿ ಹೋಗುವಂತೆ ಹೋದವು. ಆಗ ಮುಕ್ತಾಯಿಯು, ಸಗುಣನೂ, ನಿರ್ಗುಣನೂ, ಉಪಮಾತೀತನೂ, ಅತರ್ಕ್ಯಮಹಿಮನೂ ಆದ ನಿನ್ನ ಮಹಿಮೆಯು ಮಹೋನ್ನತವಾದುದು. ನಿಮ್ಮಂತಹ ಮಹಾನುಭಾವರ ಮಹಿಮೆಯನ್ನು ನಾವೇನುಬಲ್ಲೆವು ? ವೇದ ಶಾಸ್ತ್ರ ಪುರಾಣಗಳಿಗೂ ತಿಳಿಯದ ಅಗಾಧ ಮಹಿಮೆಯುಳ್ಳ ನಿಮ್ಮ ಕೂಡ ವಾದಮಾಡಲು ನಾವು ಸಮರ್ಥರೇ ?

ಶಿವಯೋಗಿಗಳು ದೇಹವಿದ್ದ ನಿರ್ದೇಹಿಗಳು
ನುಡಿದರೂ ನಿಶ್ಶಬ್ದರು, ನಡೆದೂ ನಿರ್ಗಮನರು,
ಕೈಯಿದ್ದೂ ಸೋಂಕದವರು, ಉಂಡೂ ಉಪವಾಸಿಗಳು,
ಮಾಡಿಯೂ ನಿಷ್ಕ್ರಿಯರು, ನೋಡಿಯೂ ನೋಡದವರು,
ರೂಪಗಳಿದ್ದೂ ನಿರೂಪಿಗಳು, ನಾಮವಿದ್ದೂ ನಿರ್ನಾಮರು,

ಮುಂತಾದ ಮಾರ್ಮಿಕ, ಸಮರ್ಪಕ ಮಾತುಕೇಳಿ ಮುಕ್ತಾಯಿಯು ಸಂತಸಪಟ್ಟಳು.

"ನೂಲಹಿಡಿದೋಜೆಯಲಿ ಬೆಟ್ಟದ ।
ಮೇಲನಡರುವರಂತೆ ಭಕ್ತಿಯ ।
ಕೀಲನುಪದೇಶಿಸಿದ ಗುರುವಚನಾಜ್ಞೆಯನು ಪಿಡಿದು ।
ಲೀಲೆಯಿಂದಾ ಬ್ರಹ್ಮರಂಧ್ರವ ।
ನಾಲಿಸುತಲೊಡಹಾಯ್ದು ಸಿಜದ ನಿ ।
ರಾಳದಲಿ ನಿಂದಿರ್ದಳಾ ಮುಕ್ತಾಯಿ ಭಕ್ತಿಯಲಿ ॥

ಹಗ್ಗವನ್ನುಹಿಡಿದು ಜಾಣತನದಿಂದ ಬೆಟ್ಟವನ್ನೇರುವಂತೆ, " ಮರಗೈಗಳ ಅಥವಾ ಮೈಲಿ ಕಲ್ಲುಗಳಮೇಲೆ ಬರೆದ ಬರಹನೋಡಿ ಮೆಲ್ಲಮೆಲ್ಲನೆ ನಡೆದು ಊರುಮುಟ್ಟುವಂತೆ, ಡೋಣಿಯಲ್ಲಿಕುಳಿತು ಸಾವಧಾನದಿಂದ ತುಂಬಿದಹೊಳೆಯ ದಾಟುವಂತೆ ಮುಕ್ತಾಯಿಯು ಭಕ್ತಿಯಿಂದ ಲಿಂಗಪಥದಲ್ಲಿ ಮುಂದುವರಿದು ಬ್ರಹ್ಮರಂಧ್ರದ ಊರ್ಧ್ವಮಾರ್ಗದ ಅಖಂಡ ಅದ್ವಯ, ಪರಿಪೂರ್ಣ ನಿರವಯದ ಬ್ರಹ್ಮದಲ್ಲಿ ಬೆರೆತಳು. ಉರಿಯೊಳಿಟ್ಟ ಕಪ್ಪುರದಂತೆ, ನಿಜಲಿಂಗದಸುಪ್ರಭಾಂತದೋಳ್ ಬೆರೆದಳೆಂಬ ವಿಷಯವು, ಮುಕ್ತಾಯಿ ಹೇಳಿದ-

"ಘನಮಹಿಮಶರಣರ ಸಂಗದಿಂದ
ಘನಕ್ಕೆ ಘನವೇದ್ಯವಾದ ಬಳಿಕ
ಅರಿಯಲಿಲ್ಲ ಮರೆಯಲಿಲ್ಲ, ಕೂಡಲಿಲ್ಲ ಅಗಲಲಿಲ್ಲ,
ಮನ ಮೇರೆದಪ್ಪಿ ನಿರವಯಲಾದ ಸುಖವ
ಶೂನ್ಯ ನಿಶ್ಶೂನ್ಯವೆಂದು ನುಡಿಯಲುಂಟೇ ?
ಶಬ್ದ ಮುಗ್ಧವಾಗಿ ಎನ್ನ ಅಜಗಣ್ಣ ತಂದೆಯ
ಬೆರೆಸಿದ ಬಳಿಕ ಉರಿಯುಂಡ
ಕರ್ಪೂರದಂತಾದೆನಯ್ಯ" ॥

ಈ ವಚನದಿಂದಲೇ ತಿಳಿದು ಬರುವದು.

"ಜ್ಯೋತಿಯೊಳಗಿನ ಕರ್ಪೂರಕ್ಕೆ, ಅಪ್ಪುವಿನೊಳಗಿಪ್ಪ ಉಪ್ಪಿಂಗೆ,
ಶ್ರೀ ಗುರುವಿನೊಳಗಿಪ್ಪ ಶಿಷ್ಯಂಗೆ ಬೇರೆ ಕ್ರಿಯಾವರ್ತನ
ಉಂಟೇ ಗುಹೇಶ್ವರ"

ಜ್ಯೋತಿಯು ಮುಟ್ಟಿಸಿದ ಬತ್ತಿಯೆಲ್ಲ ಜ್ಯೋತಿಯೇ ಆಗಿ ಹೋಗುವಂತೆ, ನೀರಿನೊಳಿಟ್ಟ

ಉಪ್ಪು ನೀರೇ ಆಗಿ ಹೋಗುವಂತೆ ಶ್ರೀ ಗುರುವಿನ ಸನ್ನಿಧಿಯಲ್ಲಿದ್ದು; ಉಪದೇಶವ ಪಡೆದು, ಗುರು ತಿಳಿಸಿದ ಮಾರ್ಗದಂತೆ ನಡೆದು, ಲಿಂಗಾನುಸಂಧಾನದಿಂದ ಲಿಂಗವೇ ತಾವಾಗಿ ಹೋಗುವವನು.

" ಮುತ್ತು ನೀರಲಾಯಿತ್ತು, ವಾರಿಕಲ್ಲು ನೀರಲಾಯಿತ್ತು
ಉಪ್ಪು ನೀರಲಾಯಿತ್ತು,
ಉಪ್ಪು ಕರಗಿತ್ತು, ವಾರಿಕಲ್ಲು ಕರಗಿತ್ತು, ಮುತ್ತು ಕರಗಿದುದನಾರೂ
ಕಂಡವರಿಲ್ಲ, "
ಈ ಸಂಸಾರಿ ಮಾನವರು ಲಿಂಗವ ಮುಟ್ಟದೇ ಭವಭಾರಿಗಳಾದರು,
ನಾ ನಿಮ್ಮ ಮುಟ್ಟಿ ಕರಿಗೊಂಡೆನಯ್ಯ ಚನ್ನಮಲ್ಲಿಕಾರ್ಜುನಯ್ಯ ..."

ಒಂದು ನೀರ ಹನಿಯೇ ಸ್ವಾತೀ ನಕ್ಷತ್ರದ ವಿಶಿಷ್ಟ ಪ್ರಸಂಗದಲ್ಲಿ ಕಪ್ಪೇಚಿಪ್ಪಿನಲ್ಲಿ ಬಿದ್ದು ಅಮೂಲ್ಯ ಮುತ್ತಾಗುವದು. ಆಣೇಕಲ್ಲು ಉಪ್ಪುಗಳೂ ನೀರಿನಿಂದಲೇ ಆಗುವವು, ಈ ಮೂರೂ ನೀರಿನಿಂದಲೇ ಆದರೂ ಮುತ್ತಿನ ಬೆಲೆಯು ಆಣೇಕಲ್ಲು ಉಪ್ಪುಗಳಿಗೆ ಬಂದೀತೇ ? ಒಂದು ಕಾಸು ಕೊಟ್ಟರೆ ಬೊಗಸೆ ಉಪ್ಪನ್ನು, ಬೊಗಸೆ ತುಂಬುವಷ್ಟು ಆಣೇ ಕಲ್ಲನ್ನು ಕೊಡುವರು. ಲಕ್ಷಾಂತರ ಬೆಲೆ ಬಾಳುವ ಮುತ್ತು ಬಿಡಿ ಕಾಸಿಗೆ ಬಂದೀತೇ ? ಉಪ್ಪು ಉಪ್ಪೇ, ಮುತ್ತು ಮುತ್ತೇ. ಎಲ್ಲವೂ ನೀರಿನಿಂದಲೇ ಹುಟ್ಟಿದರೂ ಅವೆಲ್ಲವುಗಳ ಗುಣಧರ್ಮಗಳೇ ಬೇರೆ. ಅವೆಲ್ಲವುಗಳ ಅರ್ಹತೆಯೇ ಬೇರೆ. ನೀರಿನಿಂದುದಿಸಿದ ಉಪ್ಪು ಆಣೇಕಲ್ಲುಗಳು ಮರಳಿ ಕರಗಿ ನೀರಾದಂತೆ, ನೀನಿಂದುದಿಸಿದ ಮುತ್ತು ಹೊರಳಿ ನೀರಾಗು ವದೇ ? " ಮುತ್ತು ನೀರೊಳು ಹುಟ್ಟಿ ಮತ್ತೆ ನೀರಾಗುವದೆ ? ಎಂದು ಸರ್ವಜ್ಞನು ಹೇಳುವನು. ಬೆಣ್ಣೆ ಕರಗಿ ತುಪ್ಪವಾದದ್ದು, ಮರಳಿ ಬೆಣ್ಣೆಯಾದೀತೇ ? ಕಟ್ಟಿಗೆಯಿಂದಾದ ಕೆಂಡ ಮರಳಿ ಕಟ್ಟಿಗೆಯಾದೀತೇ ? ನಾಮರೂಪಗಳನ್ನು ತೊರೆದು ಮಹಾಸಾಗರದಲ್ಲಿ ಕೂಡಿದ ನದಿಗಳು ಮತ್ತೆ ನಾಮ ರೂಪಗಳನ್ನು ಧರಿಸಿ ನದಿಗಳಾಗಬಲ್ಲವೇ ?

ತಾಪತ್ರಯಾಗ್ನಿಯಿಂದ ಬೆಂದ ನೊಂದ ಬದ್ಧಜೀವರು ಗುರುಲಿಂಗ ಜಂಗಮಾರ್ಚನೆ ಮಾಡದೆ ವಿಷಯ ವ್ಯಾಮೋಹಕ್ಕೆ ಸಿಕ್ಕು ಭವಚಕ್ರದಲ್ಲಿ ಬಿಟ್ಟೂಬಿಡದೆ ತಿರುಗುವರು. ಅವರು ಉಪ್ಪು ಆಣೇಕಲ್ಲುಗಳಿದ್ದಂತೆ. ಮುಕ್ತರು ಹಾಗಲ್ಲ. ಅವರು ಮರಳಿ ಸಂಸಾರಕ್ಕೆ ಬಾರರು.

ಶ್ರೀ ನಿರಂಜನ ಪ್ರಭುವಾದ ಅಲ್ಲಮನಿಂದ ಉಪದೇಶ ಪಡೆದ ಮುಕ್ತಾಯಿಯು ಸಚ್ಚಿದಾನಂದ ಸ್ವರೂಪನಾದ ಪರಶಿವನ ಮತ್ತು ಸಂಸಾರದಲ್ಲಿದ್ದೂ ಇಲ್ಲದಂತಿರುವ ಶರಣರ ಇರವನ್ನರಿತು ನಿತ್ಯ ಮುಕ್ತಳಾದಳು.

## ೧೩ನೆಯ ಗತಿ

# ಶ್ರೀ ಸಿದ್ಧರಾಮ ವೃತ್ತಾಂತ

ವೀರಶೈವ ಶರಣ ಸಾಹಿತ್ಯದಲ್ಲಿರುವ ಅನೇಕ ಮಹಾನುಭಾವರ ಮಧ್ಯದಲ್ಲಿ ಶ್ರೀಸಿದ್ಧರಾಮನ ಪಾತ್ರವು ಅತ್ಯಪೂರ್ವವಾದುದು. ಕಾಯಕಯೋಗಿಯಾದ ಶ್ರೀ ಸಿದ್ಧರಾಮನ ಚರಿತ್ರೆಯನ್ನು ಪ್ರಾಚೀನ ಕವಿಯಾದ ಚಾಮರಸನೂ, ಆಧುನಿಕ ಕವಯಿತ್ರಿಯೆನಿಸಿದ ಶ್ರೀಮತಿ ಜಯದೇವಿತಾಯಿ ಲಿಗಾಡೆಯವರೂ—

" ನೆರೆದ ಸೊಗಸಿನ ಸುಗ್ಗಿ, ರಸದ ಮಡು, ಪುಣ್ಯದಾಗರ, ...

" ಯೋಗಿ ಬಂದಾರೇನು ಬಾಗಿ ಶರಣಾದೇನ
ಯೋಗದ ಕೀಲ ತಿಳಿಸುವರೇನು !
ಯೋಗದ ಕೀಲ ತಿಳಿಸುವರೇನ ಸಿದ್ಧರಾಮ
ರಾಗದ ಭೋಗದ ಆಚೆ ಒಯ್ವರೇನ ?

ಎಂದು ಮುಂತಾಗಿ ಹಾಡಿರುವರು.

ರಾಮ ಎಂಬ ವಿಶೇಷ್ಯ ಪದಕ್ಕೆ ಬಲ, ಪರಶು ಏಕಾಂತ, ಮೈದುನ, ಏಕ, ಗಿಣಿ, ಮುಂತಾದ ವಿಶೇಷಣಗಳು ಬಂದರೆ ಬಲರಾಮ, ಪರಶುರಾಮ, ಏಕಾಂತರಾಮ, ಮೈದುನ ರಾಮ, ಏಕೋರಾಮ, ಗಿಣಿರಾಮ ಎಂಬ ಪದಗಳು ರಾಮಾಯಣದಲ್ಲಿ, ಮಹಾಭಾರತ ದಲ್ಲಿ ,ಶರಣ ಸಾಹಿತ್ಯದಲ್ಲಿ ಶಿವಾಚಾರ್ಯರ ಐತಿಹ್ಯದಲ್ಲಿ, ಜನಪದ ಸಾಹಿತ್ಯದಲ್ಲಿ ದೊರೆ ಯುತ್ತವೆ. ಬಲ, ಪರಶು, ಮುಂತಾದ ವಿಶೇಷಣಗಳುಳ್ಳ ರಾಮ ಪದಕ್ಕಿಂತಲೂ ಸಿದ್ಧ ಎಂಬ ವಿಶೇಷಣವುಳ್ಳ ರಾಮ ಪದವು, ಅಂದರೆ ಸಿದ್ಧರಾಮ ಪದವು ಅರ್ಥ ಪೂರ್ಣವಾ ದುದು. ಆಯಾಯ ಶಾಸ್ತ್ರೋಕ್ತ ಸಾಧನೆಗಳನ್ನು ದೀರ್ಘಕಾಲ, ನೈರಂತರ್ಯ, ಅಚಲ ಶ್ರದ್ಧೆಯಿಂದ ಮಾಡಿದನಂತರವೇ ಅವರು ಸಿದ್ಧಿಯನ್ನು ಪಡೆದು ಸಿದ್ಧರಾಗುವರು. ಅಷ್ಟಾಂಗ ಯೋಗದಿಂದ ಯೋಗದಲ್ಲಿ ಪರಿಣತರಾದವರು ಯೋಗಸಿದ್ಧರೆಂದೂ, ಸುಜ್ಞಾನಪೂರ್ವಕ ಸತ್ಕ್ರಿಯಾಚರಣೆಯಿಂದ ಕ್ರಿಯಾಸಿದ್ಧರೆಂದೂ ಹೇಳಲ್ಪಡುವರು. ಪಂಚ ಪೀಠಾಚಾರ್ಯ ರಲ್ಲೊಬ್ಬರು,ಸಿದ್ಧೇಶ್ವರ ಲಿಂಗದಿಂದ ಉದ್ಭವಿಸಿದರೆಂಬುದು ಹಾಗೂ ಬುದ್ಧನಿಗೆ ಸಿದ್ಧಾರ್ಥ ಎಂಬ ಹೆಸರಿದ್ದುದು ಸಿದ್ಧ ಶಬ್ದದ ಮಹತಿಯನ್ನು ಎತ್ತಿತೋರಿಸುತ್ತವೆ.

೧೨ನೆಯ ಶತಮಾನದ ಬಸವಾದಿ ಪ್ರಮಥರಲ್ಲಿ ಮೆರೆದ ಶ್ರೀಸಿದ್ಧರಾಮನ ಚರಿತೆಯು ವಿಸ್ಮಯಕಾರಕವಿದ್ದು ವಿಲಕ್ಷಣವಿದೆ.

ಗುರುಕುಲ ಸಾರ್ವಭೌಮರೆನಿಸಿದ ರೇವಣಸಿದ್ಧ ಶಿವಾಚಾರ್ಯರು ಒಮ್ಮೆ ಲೋಕ ಸಂಚಾರ ಕೈಕೊಂಡು ಸೊನ್ನಲಾಪುರಕ್ಕೆ ದಯಮಾಡಿಸಿದರು. ಗುರುಗಳ ಆಗಮನ ಶಿಳಿದ ರಾಣಿ ಚಾಮಲಾದೇವಿಯು ವಿವಿಧ ವಾದ್ಯವೈಭವದೊಡನೆ ಆಂದೋಲಿಕಾ ಮಹೋತ್ಸವ ದಲ್ಲಿ ಬರಮಾಡಿಕೊಳ್ಳಬೇಕೆಂದು ಬಿನ್ನೈಸಿ ಬಳಿಕ ರೇವಣಸಿದ್ಧ ಶಿವಾಚಾರ್ಯರು

ಜಾನಲಾದೇವಿಯೋ ಮುದ್ದಯ್ಯನೆಂಬ ಬಡಭಕ್ತನು ಸತಿಸುಗ್ಗವ್ವೆಯೊಡನೆ ಶಿವನು ಮೆಚ್ಚುವಂತೆ ಸಂಸಾರ ಮಾಡುತ್ತ ಸಂತಾನವಿಲ್ಲದ ಚಿಂತೆಯಿಂದ ಕೊರಗುತ್ತಲಿದ್ದಾನೆ. ಆ ಸತ್ಪುತ್ರ ಶಿರೋಮಣಿಗೆ ಪ್ರತ್ಯಕ್ಷ ಪರಶಿವನೇ ಮಗುವಾಗಿ ಹುಟ್ಟಲಿರುವನು. ಅಂಥ ಮಹಾ ಮಹಿಮನ ಮನೆಗೆ ನಾವು ಮೇಣೆ ಪಲ್ಲಕ್ಕಿಗಳಲ್ಲಿ ಕುಳಿತು ಹೋಗಬೇಕೇ? ಶಿವಯೋಗೀಶ್ವರರು ಉದಯಿಸುವ ಮಂಗಲ ಭವನಕ್ಕೆ ಪಾದಚಾರಿಯಾಗಿ ಹೋಗುವದೇ ವಿಹಿತ ಎಂದು ನಡಿಗೆಯಿಂದ ಅವರಲ್ಲಿಗೆ ಹೋಗಿ, ಮುಪ್ಪಡರಿ ತಲೆ ನಡುಗುವ ಆ ಶರಣದಂಪತಿಗಳನ್ನು ಕುರಿತು "ಶರಣದಂಪತಿಗಳೇ, ನಿಮಗೆ ಶಿವಸ್ವರೂಪಿಯಾದ ಓರ್ವ ಸತ್ಪುತ್ರನು ಹುಟ್ಟುವನು. ಅವನಿಗೆ ಸಿದ್ಧರಾಮನೆಂದು ಹೆಸರಿಡಿರಿ" ಎಂದು ಅಪ್ಪಣೆ ಮಾಡಿದರು. ಇತ್ತ ರೇವಣಸಿದ್ಧರ ಆದೇಶದಂತೆ ಆ ಶರಣ ದಂಪತಿಗಳಿಗೆ ತೇಜಃಪುಂಜವಾದ ಮುಖಕಮಲವುಳ್ಳ ಓರ್ವ ತನಯನು ಜನಿಸಿದನು. ಶ್ರೀರೇವಣಸಿದ್ಧ ಶಿವಾಚಾರ್ಯರು ಹುಟ್ಟಿದ ಮಗುವಿಗೆ ಸಿದ್ಧರಾಮನೆಂದು ಹೆಸರಿಡಲು ಹೇಳಿ ಹೋದರೂ ಮುಗ್ಧ ಸಂಗಯ್ಯನಂತಿರುವ ಆ ಮುಗ್ಧ ದಂಪತಿಗಳು ತಮ್ಮ ಕುಲದೇವತೆಯಾದ ಧೂಳಿಮಾಕಾಳಯ್ಯನ ಹೆಸರಿಟ್ಟರು. ಶ್ರೀ ರೇವಣಸಿದ್ಧರ ಆಶೀರ್ವಾದ ಪ್ರಭಾವದಿಂದ ಹುಟ್ಟಿದ ಆ ಕಾರಣಿಕಶಿಶುವು ಧೂಳಿಮಾಕಾಳಯ್ಯ ಎಂದು ಕರೆದಾಗ ಮಾತ್ರ ಓಗೊಡುತ್ತಿತ್ತಂತೆ! ಸಿದ್ಧರಾಮನು ಲೌಕಿಕರ ಮಕ್ಕಳಂತೆ ತಾನಾಗಿ ಎದ್ದು ಹೋಗಿ ಏನಾದರೂ ತಿನ್ನಲು ಬೇಡಲಿಲ್ಲ, ಹೆಚ್ಚು ಮಾತಾಡಲಿಲ್ಲ. ಚೆಂಡು, ಗುಂಡು ಮೊದಲಾದ ಆಟದ ಸಾಮಾನುಗಳನ್ನು ಬೇಡಿ ಹಟಮಾಡಲಿಲ್ಲ.

ಆಟ, ಊಟ, ನೋಟಗಳಲ್ಲಿ ಆಸಕ್ತಿಯಿಲ್ಲದೆ, ಕಣ್ಮುಚ್ಚಿಕೊಂಡು ಏನನ್ನೋ ಧ್ಯಾನಿಸುತ್ತ ಸಾಮಾನ್ಯ ಜನರಿಗೆ ಅಚ್ಚರಿಯಾಗುವಂತೆ ಒಂದು ಮೂಲೆಯಲ್ಲಿ ಕುಳಿತುಬಿಡುತ್ತಿತ್ತು. ಯಾರೊಡನೆಯೂ ಮಾತಾಡದೆ, ಏನೊಂದೂ ಬೇಡದೇ-ಕಾಡದೇ, ಕೇಳದೇ-ಕೇಳದೇ ಮೂಕನಂತಿರುವ ಮಗನನ್ನು ಕಂಡು ತಂದೆ ತಾಯಿಗಳು ಮುಪ್ಪಿನಲ್ಲಿ ನಮಗೆಲ್ಲಿ ಮಕ್ಕಳು ಬೇಕಾಗಿದ್ದವು? ಕೊಟ್ಟರೆ ಶಿವನು ಇಂಥ ಜಡ, ಮಂದಮತಿ ಮಗನನ್ನು ಕೊಡಬೇಕೇ? ಮಕ್ಕಳಾಗಲಿಲ್ಲ ಎಂಬ ಒಂದೇ ಒಂದು ಚಿಂತೆಯಿಂದ ಕೊರಗುತ್ತಿದ್ದೆವು. ಈಗ ಈ ಜಡ ಮಂದಮತಿ ಮಗನಿಂದ ಮತ್ತಷ್ಟು ಚಿಂತೆಯಿಂದ ಬಳಲಬೇಕಾಯಿತಲ್ಲ ಎಂದು ಕಳವಳಿಸಿದರು. ಮನೆಯಲ್ಲಿದ್ದರೆ ಮತ್ತಷ್ಟು ಮಂದಮತಿಯಾದಾನು! ಹೊರಗಿನ ಗಾಳಿ ಬಡಿದರೆ, ಹೊರಗೆ ತಿರುಗಾಡಿದರೆ, ಹೊಟ್ಟೆ ಹಸಿದು ಉಣ್ಣಲು ತಿನ್ನಲು ಬೇಡ್ಯಾನು ಹೊರಗಿನ ಮಕ್ಕಳ ಸಹವಾಸದಿಂದ ಚುರುಕು ಬುದ್ಧಿಯುಕ್ತನಾದಾನು ಎಂದು ಹಲವು ಬಗೆಯಾಗಿ ವಿಚಾರಿಸಿ ಸಿದ್ಧರಾಮನನ್ನು ದನಕಾಯುವ ಕೆಲಸಕ್ಕೆ ಹಚ್ಚಿದರು.

ಒಂದು ಸಾಯಂಕಾಲ ಸಿದ್ಧರಾಮನು ತನ್ನ ತಂದೆಯು ಬಿತ್ತಿದ ನವಣೆಯ ಹೊಲದಲ್ಲಿ ನಿಂತಾಗ ಕಣ್ಣು ಕುಕ್ಕುವಂತಹ ಕಾವಿಯ ಕಫನಿಯನ್ನು ಧರಿಸಿದ, ಗಂಭೀರ ಮುಖಮುದ್ರೆಯ, ಕೊರಳಲ್ಲಿ ರುದ್ರಾಕ್ಷಮಾಲೆ, ಹಣೆಯಲ್ಲಿ ವಿಭೂತಿ, ಕಾಲಲ್ಲಿ ಹಾವುಗೆ ಕೈಯಲ್ಲಿ ಯೋಗದಂಡವಿರುವ ಓರ್ವ ಜಂಗಮಮೂರ್ತಿಯು ಕಾಣಿಸಲು ಕೂಡಲೇ ಸಿದ್ಧರಾಮನು ಭಾವಪರವಶನಾಗಿ ಓಡುತ್ತ ಹೋಗಿ ಆವರ ಪಾದಪದ್ಮಗಳಿಗೆ ವಂದಿಸಲು

ಜಂಗಮವರೇಣ್ಯರು ಶುಭಮಸ್ತು, ಕಲ್ಯಾಣಮಸ್ತು ಎಂದು ತಮ್ಮ ಅಭಯಹಸ್ತವನ್ನು ಅವನ ಮಸ್ತಕದ ಮೇಲಿಟ್ಟು ಆಶೀರ್ವದಿಸಿದರು.

ಸಿದ್ಧರಾಮನು ಹಾಸಿದ ಕಂಬಳಿಯ ಮೇಲೆ ಕುಳಿತು ಅವನು ಆಯ್ದು ತಂದ ಕಿಚ್ಚಿನಲ್ಲಿ ಹದವರಿತು ಸುಟ್ಟು ಉದುರಿಸುವ ಎಳೆತೆನೆಗಳ ಬೆಳಸಿಯನ್ನು ಹಸಿವು ಹಿಂಗುವ ತನಕ ತಿಂದು ತೇಗಿದನು. ಮಗುವೇ ನೀನುದುರಿಸಿಕೊಟ್ಟ ಬಿಸಿಬಿಸಿ ಬೆಳಸಿಯನ್ನು ತಿಂದು ನನ್ನ ಹಸಿವು ಹಿಂಗಿತು. ಇನ್ನು ಕುಡಿಯಲು ತಂಪಾದ ಮಜ್ಜಿಗೆ ಅಂಬಲಿ ತಂದು ಕೊಡುವಿಯಾ ? ಎಂದು ಕೇಳಲು ಆ ಮಾತು ಕೇಳಿ ಓ ! ಈಗಿಂದೀಗಲೇ ಮನೆಗೆ ಹೋಗಿ ತರುವೆ. ತಾವು ಮಾತ್ರ ನಾನು ಬರುವ ತನಕ ಬೇರೆ ಕಡೆಗೆ ಹೋಗಬಾರದೆಂದು ಹೇಳಿ ಗುರುವೇ ! ತಮ್ಮ ಹೆಸರೇನು ? ಎಂದಾಗ ನನ್ನ ಹೆಸರು ಮಲ್ಲಯ್ಯ; ತಾವಿರುವದಲ್ಲಿ ? ಎಂದಾಗ ಶ್ರೀಶೈಲದಲ್ಲಿ ಎನ್ನಲು ಶ್ರೀಶೈಲ ಮಲ್ಲಯ್ಯ ಎಂಬ ಶಬ್ದಗಳನ್ನು ಕೇಳುತ್ತಲೇ ಮಂತ್ರಮುಗ್ಧನಾದ ಸಿದ್ಧರಾಮನು ಆನಂದ ಸಾಗರದಲ್ಲಿ ತೇಲಾಡಿ ನಾನೂ ತಮ್ಮ ಜೊತೆಗೆ ಶ್ರೀಶೈಲಕ್ಕೆ ಬರಲೇ ? ಬರುವಿಯಂತೆ. ಮೊದಲು ಮನೆಗೆ ಹೋಗಿ ಮಜ್ಜಿಗೆ ಅಂಬಲಿ ತಕ್ಕೊಂಡು ಬಾ ಎನ್ನಲು ಸಿದ್ಧರಾಮನು ಅತ್ತಿತ್ತ ನೋಡದೇ ಮಾತಾಡದೇ ಮನೆಗೆ ಓಡಿ ಹೋಗಿ "ಅವ್ವಾ ಅವ್ವಾ ಅಂಬಲಿ ಮಜ್ಜಿಗೆ ಬೇಗಕೊಡು. ತಡಮಾಡಬೇಡ" ಎಂದು ಆತುರದಿಂದ ಕೇಳಿದ ಮಗನ ಮಾತು ಕೇಳಿ ಎಂದೆಂದೂ ಏನೇನೂ ಕೇಳದ ಮಗ ಇಂದು ಇಷ್ಟು ಆತುರದಿಂದ ಕೇಳುವನಲ್ಲಾ ಎಂದು ಆನುದಭರಿತಳಾಗಿ ಅವನು ಕೇಳಿದಂತೆ ಅಂಬಲಿ ಮಜ್ಜಿಗೆಗಳನ್ನು ಕೊಡುವದಲ್ಲದೆ ಬಿಸಿ ರೊಟ್ಟಿಯ ಮೇಲೆ ಮೊಸರು ಕಲಿಸಿದ ಅನ್ನದ ಉಂಡಿಗಳನ್ನಿಟ್ಟು ಬುತ್ತಿಯ ಗಂಟು ಕಟ್ಟಿಕೊಟ್ಟಳು. ಯಾವಾಗ ಮಲ್ಲಯ್ಯನಿಗೆ ಅಂಬಲಿ ಮಜ್ಜಿಗೆ ಕುಡಿಸೇನು ! ಯಾವಾಗ ಮೊಸರು ಕಲಿಸಿದ ಅನ್ನವನ್ನು ಉಣ್ಣಿಸೇನು ಎಂದು ಹಂಬಲದಿಂದ ಸಿದ್ಧರಾಮನು ಕಣ್ಮುಚ್ಚಿ ಕಣ್ಣು ತೆರೆಯುವಷ್ಟರಲ್ಲಿ ಮರಳಿ ಬಂದು ನೋಡುವಷ್ಟರಲ್ಲಿ ಮಲ್ಲಯ್ಯನೇ ಅಲ್ಲಿರಲಿಲ್ಲ.

" ದೇವನಿಂತವನೆಂದು ನಂಬಲಾಗದಯ್ಯ !
ಬಾ ಎಂದು ಹೇಳಿ ಬಯಲಾದ ದೇವರು ಒಳ್ಳೆದನೇ ?
ದೇವನಿಂತವನೆಂದು ನಂಬಲಾಗದಯ್ಯ !
ತನ್ನ ಕಾರ್ಯಕ್ಕೆ ಹೆಣಗಾಡಿಸಿದವ ನೊಳ್ಳಿದನೇ ?
ಕಪಿಲಸಿದ್ಧಮಲ್ಲಯ್ಯ ನಿನ್ನ ಲೀಲೆ ತಿಳಿಯದಾರಿಂಗೆ ! "

ನೀ ಬರುವತನಕ ಇಲ್ಲಿಯೇ ಇರುವೆನೆಂದು ಹೇಳಿ ಬರುವಷ್ಟರಲ್ಲಿ ಬಯಲಾದವನು ಒಳ್ಳಿದನೇ ? ಹೊಟ್ಟೆ ಹಸಿದಿದೆಯೆಂದು ಹಸುಳೆಯ ಮುಂದೆ ಹುಸಿಹೇಳಿ ಸುಮ್ಮನೆ ಮನೆಗೆ ಕಳುಹಿಸಿದ, ಓಡಾಡಿಸಿದ ದೇವರು ಒಳ್ಳೆಯವನೇ ? ಅಂಥ ಮೋಸಗಾರ ಮಲ್ಲಯ್ಯನನ್ನು ಎಂದೂ ನಂಬಲಾಗದು ಎಂದು ಪ್ರೇಮದ ಸಿಟ್ಟಿಯಿಂದ, ಮಮತೆಯ ಮುನಿಸಿನಿಂದ, ದೇವರ ಮೇಲೆಯೇ ಹರಿಹಾಯ್ದನು, ಮೆಲ್ನುಡಿಗಳಿಂದಲೇ ಬಯ್ಯುತ್ತ ಅಲ್ಲಿ, ಇಲ್ಲಿ ಎಲ್ಲೆಲ್ಲಿಯೂ ಮಲ್ಲಯ್ಯನನ್ನು ಕಾಣದೇ ತಲ್ಲಣಗೊಂಡು

ಗಿಡಗಳೊಳು ಹೊಕ್ಕು ಮಲ್ಲಯ್ಯ ಮಲ್ಲಯ್ಯ ಕ।
ಮ್ಮಡುಗಳೊಳು ಹೊಕ್ಕು ಮಲ್ಲಯ್ಯ ಮಲ್ಲಯ್ಯ ಪೇ।
ರಡವಿಯೊಳು ಹೊಕ್ಕು ಮಲ್ಲಯ್ಯ ಮಲ್ಲಯ್ಯ ಮಾರ್ದನಿಗೊಡುವ ಗುಹೆ ಗುಹೆಗಳ ॥
ನಡುವೆ ಹೊಕ್ಕಯ್ಯ ಮಲ್ಲಯ್ಯ ಮಲ್ಲಯ್ಯ ಹೊದ।
ರೆಡೆಯು ಹೊಕ್ಕಯ್ಯ ಮಲ್ಲಯ್ಯ ಮಲ್ಲಯ್ಯ ಬಾ।
ತಡೆಯದೋಯೆನ್ನ ಮಲ್ಲಯ್ಯ ಮಲ್ಲಯ್ಯಯೆಂದೊದರಿ ಕರೆದಂಕರೆದನು ॥

ಮಾತೆಯನ್ನು ಕಳೆದುಕೊಂಡ ಮಗು ಅವ್ವಾ ಅಪ್ಪಾ ಎಂದು ಹಲುಬುವಂತೆ ತಾಯ್ಕಳೆದು ಕೊಂಡ ಕರು ಅಂಬಾ ಅಂಬಾ ಎಂದು ಹಂಬಲಿಸುವಂತೆ ಕಂಬನಿದುಂಬಿ ಹಲುಬಿಯೇ ಹಲುಬಿದನು. ಏನಾದರೂ ಎಂತಾದರೂ ಎತ್ತಕಡೆಯಿಂದಲೂ ಉತ್ತರವೇಬರಲಿಲ್ಲ; ದೃಢನಿಷ್ಠೆಯುಳ್ಳ ಸಿದ್ಧರಾಮಯ್ಯನು ಮಲ್ಲಯ್ಯನನ್ನು ಕಂಡೇ ತೀರುವೆನೆಂಬ ಅಚಲ ಶ್ರದ್ಧೆಯಿಂದ ಸ್ವಲ್ಪೂ ಹಿಂದೆ ಮುಂದೆ ಸರಿಯಲಿಲ್ಲ.

"ಕೈಗಳ ಬಿಚ್ಚಿ ಬಿಸಾಟರೆ ಬಿಡೆನು।
ಮೈಗಳ ಕಡಿದು ಹರಹಿದಡೆ ಬಿಡೆ ಬಿಡೆನು ನಿಮ್ಮ ಚರಣ।
ನೀನು ಎನ್ನ ತನುವಳಿದರೆ ನಿಮ್ಮ ಜ್ಞಾನ ತನುವಿನಿಂದ
ಹೊದ್ದುವೆನು ಕಾಣಾ ಕಪಿಲಸಿದ್ಧಮಲ್ಲಿಕಾರ್ಜುನಾ ॥"

ಎಂದು ವೀರಪ್ರತಿಜ್ಞೆ ಮಾಡಿದನು.

"ಮಗನಿಗಾದ ನೋವು ತಂದೆ-ತಾಯಿಗಳಿಗಾಗದೆ ಅನ್ಯರಿಗಲ್ಲಹುದೋ
ಕಪಿಲಸಿದ್ಧ ಮಲ್ಲಯ್ಯ ನಮ್ಮ ನೋವೆ ನಿಮ್ಮ ನೋವು"

ಹೊಟ್ಟೆಯಿಂದ ಹುಟ್ಟಿದ ಮಗನಿಗೆ ನೋವು ಸಾವುಗಳು ಬಂದರೆ ಹಡೆದ ತಾಯಿತಂದೆಗಳಿಗೆ ದುಃಖವಾಗದಿರುವದೇ ?

ಶಿಷ್ಯನಿಗೆ ಸಂಕಟ ಬಂದರೆ ಸದ್ಗುರುವು ನೊಂದದಿರುವನೇ ?
ಭಕ್ತರಿಗೆ ಎಡರು ತೊಡರು ಬಂದರೆ ದೇವರು ಚಿಂತೆಗೊಳಗಾಗದಿರುವನೇ ?

"ತಂದೆ ನೀನು ತಾಯಿ ನೀನು ಬಂಧು ನೀನು ಬಳಗ ನೀನು,
ನೀನಲ್ಲದೆ ಮತ್ತಾರೂ ಇಲ್ಲವಯ್ಯ ಕೂಡಲಸಂಗಮದೇವಾ".

ಎಂಬಂತೆ, ಮಲ್ಲಯ್ಯಾ ನನಗೆ ಎಲ್ಲವೂ ನೀನೆ; ಮಗುವಿಗೆ ತಾಯಿಯೇ ಗತಿ ಎಂಬಂತೆ ನನಗೆ ನೀನೇ ಗತಿ ಎಂದು ಹಲವು ಪರಿಯಲ್ಲಿ ಹಲುಬುವ ಸಿದ್ಧರಾಮನನ್ನು ಶ್ರೀಶೈಲ ಯಾತ್ರೆಗೆ ಹೊರಟ ಯಾತ್ರಿಕರು ನೋಡಿ ಮರ ಮರ ಮರುಗಿದರು. ಅವನ ಮೈದಡವಿ ಮಾತಾಡಿಸಿದರು, ಆ ಚಿಕ್ಕ ಮಗುವಿನ ಚೊಕ್ಕ ಭಕ್ತಿಯನ್ನು ಕಂಡು ಅಚ್ಚರಿಗೊಂಡರು; ಮಗುವೇ ನಾವು ಶ್ರೀಶೈಲ ಮಲ್ಲಿಕಾರ್ಜುನನ ಸಂದರ್ಶನಕ್ಕಾಗಿಯೇ ಹೊರಟಿದ್ದೇವೆ; ನಮ್ಮೊಡನೆ ಬಾ ಮಲ್ಲಯ್ಯನನ್ನು ತೋರಿಸುತ್ತೇವೆ ಎನ್ನಲು ಕುಣದಾಡಿ ಒಪ್ಪಿದ. ಸಿದ್ಧರಾ

ಮನನ್ನು ಜೊತೆಗೆ ಕರೆದುಕೊಂಡು ಹೊರಟರು. ಶ್ರೀಶೈಲ ಬರದಾಕ್ಷಣ ಎಲ್ಲ ಯಾತ್ರಿಕರು

" ಶ್ರೀಶೈಲಶಿಖರಂದೃಷ್ಟ್ವಾ ಪುನರ್ಜನ್ಮನವಿದ್ಯತೇ "

ಮಹಂತ ಮಲ್ಲಯ್ಯ ಉಘೇ ಉಘೇ ಮಹಂತ ಮಲ್ಲಯ್ಯ ಉಘೇ "

ಎಂದು ಜಯಘೋಷ ಮಾಡುತ್ತ ಶ್ರೀಶೈಲ ಮಲ್ಲಿಕಾರ್ಜುನ ದೇವಾಲಯದ ಗೋಪುರಕ್ಕೆ ಕೈಮುಗಿದರು. ಸಿದ್ಧರಾಮನು ಯಾತ್ರಿಕರ ಜಯಘೋಷ ಕೇಳಿ ಮಲ್ಲಯ್ಯನು ಎಲ್ಲಿರುವನು ಎಂದು ಕೇಳಲು ಯಾತ್ರಿಕರು ಸಿದ್ಧರಾಮನನ್ನು ಗರ್ಭಗುಡಿಯೊಳಗೆ ಕರೆದುಕೊಂಡು ಹೋಗಿ ಜ್ಯೋತಿರ್ಲಿಂಗವನ್ನು ತೋರಿಸಿ ಇವನೇ ಮಲ್ಲಯ್ಯನೆಂದು ಹೇಳಿದರು. ಆಗ ಸಿದ್ಧರಾಮನು ಇವನು ಮಲ್ಲಯ್ಯನೇ ? ಅಲ್ಲಲ್ಲ. ತೇಜಃಪುಂಜವಾದ ಮುಖಮಂಡಲದಿಂದಲೂ, ದಂಡ, ಕಮಂಡಲು, ವಿಭೂತಿ, ರುದ್ರಾಕ್ಷಿ, ಕಾಷಾಯಾಂಬರಗಳಿಂದಲೂ ಭೂಷಿತನಾಗಿ ನಾನು ಕಣ್ಣಾರೆ ಕಂಡ ಮಲ್ಲಯ್ಯನೆಲ್ಲಿ ? ನೋಡದ, ಮಾತಾಡದ, ಕೈ ನೀಡಿ ಆಶೀರ್ವಾದ ಮಾಡದ, ಈ ಶಿವಮೂರ್ತಿಯಾದ ಮಲ್ಲಯ್ಯನನ್ನು ನೋಡಲು ನಾನಿಷ್ಟು ದೂರ ಬರಬೇಕಾಯಿತೇ ? ಮಲ್ಲಯ್ಯನ ಸಲುವಾಗಿ ಎಲ್ಲೆಲ್ಲಿಯೂ ಸುತ್ತಾಡಿ ಕಾಣದ ಕಾಡನ್ನು ಹೊಕ್ಕು ಆ ಎಂದು ಆಕಳಿಸಿದ ಭೀಕರ ರಕ್ಕಸನ ಬಾಯಿಯಂತಿರುವ ಕಮರಿಯೊಂದನ್ನು ಕಂಡು ಮಲ್ಲಯ್ಯನನ್ನು ಕಾಣದೇ ಜೀವವಿಟ್ಟೇನು ಫಲ, ನನ್ನ ಪ್ರಾಣವನ್ನೇ ಮಲ್ಲಯ್ಯನಿಗೆ ಸಮರ್ಪಣ ಮಾಡಿ ಬಿಡುವೆನು ಎಂದು ದೃಢನಿರ್ಧಾರಮಾಡಿ ಮಲ್ಲಯ್ಯ ಮಲ್ಲಯ್ಯ, ಎಂದು ಹಲುಬುತ್ತ ಕಣ್ಮುಚ್ಚಿ ಕಮರಿಯೊಳಗೆ ಹಾರಿ ಕಣ್ದೆರೆದು ನೋಡುವಷ್ಟರಲ್ಲಿ ಸಿದ್ಧರಾಮನು ಮಲ್ಲಯ್ಯನ ಅಪ್ಪುಗೆಯಲ್ಲಿದ್ದನು.

ಹಾ ಎಂಬ ಧ್ವನಿಯು ಕೇಳಲಾರದೆ ಕಂಡು ।
ಕರುಣದಿಂದ ಶಿರವ ಪಿಡಿದೆತ್ತಿ ಎನ್ನ ।
ಎನ್ನ ಕಣ್ಣನೀರ ತೊಡೆದನು ಕಪಿಲಸಿದ್ಧ ಮಲ್ಲಿನಾಥಯ್ಯ !

ಎಂದು ಸಿದ್ಧರಾಮನು ಮಲ್ಲಯ್ಯನನ್ನು ಹಾಡಿ ಹರಸಿದನು.

ಮಲ್ಲಯ್ಯ – ಸಿದ್ಧರಾಮಾ ಮಲ್ಲಯ್ಯ ಮಲ್ಲಯ್ಯ ಎಂದು ಹಲಬುವ ನೀನು ಮಲ್ಲಯ್ಯನನ್ನು ಕಂಡಂತಾಯಿತಲ್ಲವೇ ? ಇನ್ನು ನೀನು ನಿನ್ನ ಮನೆಗೆ ಮರಳಿ ಹೋಗಬೇಕು ಮಗೂ.

ಸಿದ್ಧರಾಮ – ಹಿಂದೊಮ್ಮೆ ನನಗೆ ಏನೇನೋ ಹೇಳಿತಪ್ಪಿಸಿದ ನಿನ್ನನ್ನು ಇಂದು ಎಲ್ಲಿಗೂ ಬಿಡಲಾರೆ. ಈ ಸಲ ನಿನ್ನ ಬಿಟ್ಟು ಇರಲು ಸಾಧ್ಯವಿಲ್ಲ.

ಮಲ್ಲಯ್ಯ – ಹಾಗೆನ್ನಬೇಡ ಮಗೂ. ತಾಯಿ ತಂದೆಗಳು ನಿನ್ನನ್ನು ಕಾಣದೇ ಚಿಂತಾತುರರಾಗಿ ದುಃಖಮಾಡುತ್ತಿರುವರು. ನೀನು ಹೋಗಿ ಅವರ ದುಃಖ ದೂರಮಾಡುವದು ಒಳಿತಲ್ಲವೇ ?

ಸಿದ್ಧರಾಮ – ನನಗೆ ಬೇರಾವ ತಾಯಿ ತಂದೆಗಳಿದ್ದಾರೆ ? ನೀನೇ ನನ್ನ ತಾಯಿ, ತಂದೆ ಬಂಧು, ಬಳಗ, ನನ್ನ ಸರ್ವಸ್ವವೆಲ್ಲ ನೀನೇ.

ಮಲ್ಲಯ್ಯ – ನಿನ್ನ ದೃಢನಿಷ್ಠೆಯನ್ನು ಕಂಡು ನನಗೆ ಅತೀವ ಸಂತಸವಾಗಿದೆ. ಮಗು ಹೇ ನನ್ನೊಡನೆ ಈ ಕಾಡಿನಲ್ಲಿ ತರುಮರಾದಿಗಳಂತೆ ಬಾಳಲು ನಿನ್ನನ್ನ ಹುಟ್ಟಿಸಿಲ್ಲ.

ಸರ್ವೇ ಭದ್ರಾಣಿ ಪಶ್ಯಂತು ಸರ್ವೇ ಸಂತುನಿರಾಮಯಾಃ ।
ಸರ್ವೇಽಪಿಸುಖಿನಃಸಂತು ಮಾಕಶ್ಚಿದ್ದುಃಖಭಾಗ್ಭವೇತ್ ॥

ಎಂಬ ಉಕ್ತಿಯಂತೆ, ಲೋಕ ಕಲ್ಯಾಣಕ್ಕಾಗಿಯೇ ನಿನ್ನ ಅವತಾರವಿದೆ. ನಿನ್ನಿಂದ ಕೋಟಿ ಕೋಟಿ ಜನರ ಉದ್ಧಾರವಾಗಬೇಕಾಗಿದೆ. ಕಾಡಿನಲ್ಲಿ ನೆಲಸಿ ವೈಯಕ್ತಿಕ ಮೋಕ್ಷಸಾಧಿಸುವ ದಕ್ಕಿಂತ ನಾಡಿನ ಮಧ್ಯದಲ್ಲಿದ್ದು ಮಾನವ ಕೋಟಿಯ ಉದ್ಧಾರ ಮಾಡುವದು ಶ್ರೇಯಸ್ಕ ರವಾದುದು. ನೀನು ಸೊನ್ನಲಾಪುರದಲ್ಲಿದ್ದು ಅದನ್ನು ನಿನ್ನ ಕಾಯಕ ಯೋಗದಿಂದಲೂ, ಶಿವಯೋಗಾನುಷ್ಠಾನದಿಂದಲೂ ಅಭಿನವ ಶ್ರೀಶೈಲವನ್ನಾಗಿ ಮಾರ್ಪಡಿಸಿ ಜಗದುದ್ಧಾರದ ಕಾರ್ಯವನ್ನು ಮಾಡು.

ಸಿದ್ಧರಾಮ – ತಂದೆಯೇ ನೀವಿಲ್ಲದೇ ಸೊನ್ನಲಾಪುರವು ಶ್ರೀಶೈಲವಾಗುವ ಬಗೆಯೆಂತು? ನೀನು ನನ್ನೊಡನೆ ಬಂದರೆ ಮಾತ್ರ ಸೊನ್ನಲಾಪುರಕ್ಕೆ ಹಿಂದಿರುಗುವೆ.

ಮಲ್ಲಯ್ಯ – ನಾನು ಈ ಜಂಗಮರೂಪವಧರಿಸಿ ಬಾರದೇ ಮಂದಾರವೃಕ್ಷದಡಿಯಲ್ಲಿ ಲಿಂಗರೂಪವಾಗಿ ಬಂದು ದರ್ಶನವೀಯುವೆ.

ಸಿದ್ಧರಾಮ – ಇದು ನಿಜವೇ ? ಹಿಂದೆ ಹೊಲದಲ್ಲಿ ಇರುವೆನೆಂದು ಹೇಳಿ ಕಣ್ಮರೆಯಾಗಿ ಹೋದಂತೆ ಮಾಡುವದಿಲ್ಲವಷ್ಟೇ.

ಮಲ್ಲಯ್ಯ – ಸಟೆಯಲ್ಲ, ದಿಟವಾದ ಮಾತಿದು. ಮನದಲ್ಲಿ ಸಂಶಯಪಡದೆ ಸೊನ್ನಲಾ ಪುರಕ್ಕೆ ನಡೆ. ಲಿಂಗರೂಪದಲ್ಲಿ ದರ್ಶನವೀಯುವೆ. ನಿನ್ನಿಂದ ಲೋಕ ಕಲ್ಯಾಣದ ಕಾರ್ಯ ಯಶಸ್ವಿಯಾಗಿ ನಡೆಯಲಿ. ಶುಭವಾಗಲಿ, ಮಂಗಲ ವಾಗಲಿ ಎಂದು ವರದಹಸ್ತವನ್ನು ಶ್ರೀಸಿದ್ಧರಾಮನ ಮಸ್ತಕದ ಮೇಲಿಟ್ಟು ಆಶೀರ್ವದಿಸಿ ಕಳುಹಿದನು. ಶ್ರೀಸಿದ್ಧರಾಮನ ಭಕ್ತಿಗೆ ಮೆಚ್ಚಿ ಶ್ರೀಶೈಲ ಮಲ್ಲಿಕಾರ್ಜುನನು ಸೊನ್ನಲಾಪುರದಲ್ಲಿ ಬಂದು ವಾಸಿಸಲು ಅದು ಅಭಿನವ ಶ್ರೀಶೈಲವಾಗಿ ರಾರಾಜಿಸಿತು.

ಸಿದ್ಧರಾಮ ಶಿವಯೋಗಿಗಳು ತಾವು ಹಿಡಿದ ಯೋಗದಂಡ ಕಮಂಡಲುಗಳನ್ನು ಬಿಸುಟು " ಬಂಗಾರದ ಗುದ್ದಲಿಯೆ ಬಾ ನನ್ನ ಹೆಗಲಿಗೆ " ಎಂದು ಹೇಳಿ ಹಾರಿ ಗುದ್ದಲಿ ಗಳನ್ನು ಹಿಡಿಯಲು ಲಕ್ಷೋಪಲಕ್ಷ ಅನುಯಾಯಿಗಳು ಹಾರಿ ಗುದ್ದಲಿಗಳನ್ನು ಹಿಡಿದು ಶ್ರೀಶೈಲಮಲ್ಲಿಕಾರ್ಜುನನಿಗೋಸುಗ ಭವ್ಯ ದೇವಾಲಯವನ್ನೂ ಪಶು, ಪಕ್ಷಿ, ಸಕಲ ಜೀವ ರಾಸಿಗಳ ಬಾಯಾರಿಕೆಕಳೆವ ಕೆರೆಯೊಂದನ್ನೂ ಕಟ್ಟಲುತೊಡಗಿದರು. ಸಿದ್ಧರಾಮೇಶ್ವರರು ಕಟ್ಟಿದ ದೇವಾಲಯವು ಪುಣ್ಯ ಕ್ಷೇತ್ರವಾಯಿತು. ವಿರಚಿಸಿದ ಕೆರೆ ಪಾವನ ತೀರ್ಥವಾಯಿತು. ಸೊನ್ನಲಾಪುರದಲ್ಲಿ ಬೆಳಗಿನ ಜಾವದಲ್ಲಿ ಮನೆಮನೆಗೆ ಮುತ್ತೈದೆಯರು ಬೀಸುತ್ತಲೋ,

ಹಾಲು ಕರೆಯುತ್ತಲೋ, ಮೊಸರು ಕಡೆಯುತ್ತಲೋ ಇಂದಿಗೂ—

ಹಾದಿ ಹಾದಿಗೆ ಗುಡಿಯ ಬೀದಿ ಬೀದಿಗೆ ಕೆರೆಯು ।
ಸಾಧಿಸಿದ ಕಟ್ಟಿಸಿದ್ಧರಾಮ ಸೊನ್ನಲಿಗೆ ।
ಸಾಧುಸಿದ್ಧನಿಗೆ ಮನೆಯಾಯ್ತು ।

ಎಂದು ಹಾಡುತ್ತಿರುವರು.

ಕಾಮಿನೀಕಾಂಚನಗಳು ಬಂಧನಕಾರಕಗಳೆಂದು ಬಗೆದು ಅವುಗಳನ್ನು ಪರಿತ್ಯಾಗವಮಾಡಿ ಕಾಷಾಯಾಂಬರವನ್ನೋ, ಜಟಾವಲ್ಕಲಗಳನ್ನೋ, ದಂಡಕಮಂಡಲುಗಳನ್ನೋ ಧಾರಣ ಮಾಡುವವರು ಸನ್ಯಾಸಿಗಳು ಎಂದು ಲೋಕಪ್ರಸಿದ್ಧವಿದೆ... 'ಸಮ್ಯಕ್, ನಿತರಾಂ‌ಆಸ್ಯ ಸನ್ಯಾಸಃ' ಅಂದರೆ ಪರಾತ್ಪರ ಪರಶಿವನಲ್ಲಿ ಮನವನ್ನಿರಿಸಿದ ಏಕಾಗ್ರಚಿತ್ತವುಳ್ಳವರು ಸನ್ಯಾಸಿಗಳು. ಸನ್ಯಾಸ ಶಬ್ದಕ್ಕೆ ನಿರ್ವಿಕಲ್ಪಸಮಾಧಿ, ಸವಿಕಲ್ಪಸಮಾಧಿ, ಸರ್ವಕರ್ಮ ಫಲತ್ಯಾಗ ಮುಂತಾದ ಬೇರೆಬೇರೆ ಅರ್ಥಗಳೂ ಇರುವವು.

ಬಹಿರಂಗದಲ್ಲಿ ಕಣ್ಣಿಗೆ ಕಾಣುವ ಸತಿಸುತಾದಿಗಳನ್ನು ಪರಿತ್ಯಾಗಮಾಡಿದಂತೆ, ಮನೋ ಮಂದಿರದಲ್ಲಿರುವ ಅಹಂಕಾರಾದಿಗಳನ್ನು—

" ಅಹಂಕಾರಸುತಂ ವಿತ್ತಭ್ರಾತರಂಮೋಹ ಮಂದಿರಂ ।
ಆಶಾಪತ್ನಿಂತ್ಯಜೇದ್ಯಾವತ್ತಾವನ್ಮುಕ್ತೋನಸಂಶಯಃ"

ಎಂಬ ಉಪನಿಷದುಕ್ತಿಯಂತೆ ಪರಿತ್ಯಾಗಮಾಡಿದರೆ ನಿಜವಾದ ಸನ್ಯಾಸವೆನಿಸುವದು. ಉಭಯ ವಿಧಪರಿತ್ಯಾಗ ಪೂರ್ವಕವಾದ ಈ ಉತ್ತಮೋತ್ತಮ ಸನ್ಯಾಸಪಥದಲ್ಲಿ ಶಪಥಪೂರ್ವಕ ಮುನ್ನಡೆದವರೆಂದರೆ ಅಲ್ಲಮಪ್ರಭು, ಶುಕ, ತೋಂಟದಸಿದ್ಧಲಿಂಗೇಶ್ವರ ಮೊದಲಾದವರು.

"ಪುತ್ರಾಣಿಮೇಮೇದಾರಾಣಿಮೇಮೇ
ಗೃಹಾಣಿಮೇಮೇ ಪಶವಶ್ಚಮೇಮೇ,"

ಎಂಬ ಸುಭಾಷಿತೋಕ್ತಿಯಂತೆ ಹೊರಗಿನ ಸಂಸಾರವನ್ನು ಕಟ್ಟಿಕೊಂಡು, ಮನೋಮಂದಿರ ದಲ್ಲಿ ಕಾಮಾದಿಷಡ್ರಿಪುಗಳನ್ನು ಇಟ್ಟುಕೊಂಡು ಬೀಳುವವರು ಅಸಂಖ್ಯರು. ಇವರನ್ನು ಪ್ರಭುದೇವರು—

" ಹೊನ್ನಿಗಾಗಿ ಸತ್ತವರು ಕೋಟಿ
ಹೆಣ್ಣಿಗಾಗಿ ಸತ್ತವರು ಕೋಟಿ
ಮಣ್ಣಿಗಾಗಿ ಸತ್ತವರು ಕೋಟಿ
ಅಶನಕ್ಕಾಗಿ ಸತ್ತವರು ಕೋಟಿ
ವ್ಯಸನಕ್ಕಾಗಿ ಸತ್ತವರು ಕೋಟಿ
ವಸನಕ್ಕಾಗಿ ಸತ್ತವರು ಕೋಟಿ
ನಿನಗಾಗಿ ಸತ್ತವರನು ಒಬ್ಬರನೂ ಕಾಣೆನೆಂದ ಗುಹೇಶ್ವರ."

ಎಂದು ಹೇಳಿರುವರು.

ಕಾಮಿನೀ ಕಾಂಚನಗಳ ಮಧ್ಯದಲ್ಲಿದ್ದೂ "ನೇಹ ಹತ್ತದ ನಾಲಗೆಯಂತೆ, ಹುಡಿಹೊದ್ದದ ಗಾಳಿಯಂತೆ, ಕಾಡಿಗೆ ಸೋಂಕದ ಕನೀನಿಕೆಯಂತೆ" ಅವುಗಳ ವ್ಯಾಮೋಹಕ್ಕೆ ಸಿಲುಕದ ಮಹಾತ್ಮರು ಕೆಲವರು. ಇನ್ನು ಹಲವರು ಬಹಿರಂಗದಲ್ಲಿ ಕಣ್ಣು ಕುಕ್ಕುವಂತಹ ಕಾವೀಭಗ ವಾಧಾರಣ ಮಾಡಿ ಅದ್ದೂರಿಯ ಸನ್ಯಾಸಿಗಳಾಗಿ ಒಳಗೆ ಮಾತ್ರ ಕಾಮಾದಿಷಡ್ರಿಪುಗಳ ಕೈಗೊಂಬೆಯಾಗಿ ಅವಕ್ಕೆ ಮಾರು ಹೋದವರೂ ಹೇಯ ಸಂಸಾರಿಗಳೇ, ಇಂಥವರನ್ನೇ–

"ಒಳಗೆ ಕುಟಿಲ ಹೊರಗೆ ವಿನಯವಾಗಿ ಭಕ್ತರೆನಿಸಿಕೊಂಬವರ
ಬಲ್ಲನೊಲ್ಲನಯ್ಯ ಲಿಂಗವು.
ಅವರು ಸತ್ಪಥಕ್ಕೆ ಸಲ್ಲರು ಸಲ್ಲರಯ್ಯ
ಒಳಹೊರಗೊಂದಾಗದವರಿಗೆ ಅಳಿಯಾಸೆದೋರಿ
ಬೀಸಾಡುವನವರ ಜಗದೀಶ ಕೂಡಲಸಂಗಮದೇವ"

"ತನು ಬತ್ತಲೆ ಇದ್ದರೇನಯ್ಯ ಮನ ಶುಚಿಯಾಗದನ್ನಕ್ಕರ ?
ಮಂಡೆ ಬೋಳಾದಡೇನು ಭಾವಬಯಲಾಗದನ್ನಕ್ಕರ ?
ಭಸ್ಮವ ಹೂಸಿದಡೇನು ? ಕರಣಾದಿಗುಣಂಗಳನೆತ್ತಿ
ಸುಡದನ್ನಕ್ಕರ ? ಇಂಥ ಆಶೆಯ ವೇಷದ ಭಾಷೆಗೆ
ಗುಹೇಶ್ವರ ನೀಸಾಕ್ಷಿಯಾಗಿ ಛೀಎಂಬೆನು ಕಾಣಾಸಂಗನಬಸವಣ್ಣ"

"ವೇಷ ಎಲ್ಲಿರದು, ಸೂಳೆಯಲ್ಲಿ ಡೊಂಬನಲ್ಲಿ,
ಬಹುರೂಪಿಯಲ್ಲಿ ಇರದೇ ? ವೇಷವ ತೋರಿ
ಒಡಲ ಹೊರೆವ ದಾಸಿ ವೇಶಿಯ ಮಕ್ಕಳಿಗೆ
ನಿಜಭಕ್ತಿ ಎಲ್ಲಿಯದೋ ? ಆಚಾರವೇ ಪ್ರಾಣವಾದ
ರಾಮೇಶ್ವರ ಲಿಂಗದಲ್ಲಿ"

ಎಂದು ಮುಂತಾಗಿ ವಚನಕಾರರು ವಿಡಂಬನಮಾಡಿ ನುಡಿದಿರುವರು.

ಮನಮೋಹಕವಾದ ಮೋಹಜಾಲವನ್ನು ಬೀಸಿ ಮೂಜಗದ ಸಾರವನ್ನೇ ಹೀರಿ ಹಿಂಡಿಹಿಪ್ಪಿಮಾಡುವ ಅತ್ಯದ್ಭುತ ಸಾಮರ್ಥ್ಯವುಳ್ಳವಳು ಮಾಯೆಯು. ಇಂತಹ ಅಜೇಯ ಮಾಯೆಯನ್ನೇ ಉಃಫ್ಫೆಂದು ಊದಿ ಹಾರಿಸುವಷ್ಟು ಅತ್ಯದ್ಭುತ ಆಧ್ಯಾತ್ಮ ಶಕ್ತಿಯುಳ್ಳ ವಿರಾಗವಿಭುವೆನಿಸಿದ ಅಲ್ಲಮ ಪ್ರಭುದೇವರು ಲೋಕ ಹಿತಾರ್ಥವಾಗಿ ದೇಶ ಸಂಚಾರ ಕೈಕೊಂಡು ಲಿಂಗೈಕ್ಯನಾದ ಅಜಗಣ್ಣನ ವಿಯೋಗದಿಂದ ಕಂಬನಿಗರೆಯುವ ಮುಕ್ತಾಯಿಗೆ, ಲಿಂಗಾಂಗ ಸಾಮರಸ್ಯದ ನಿಲವನ್ನು ತಿಳಿಸಿ, ಪ್ರಲಾಪವನ್ನು ನಿಲ್ಲಿಸಿ, ಸೊನ್ನಲಾಪುರಕ್ಕೆ ಆಗಮಿಸಿ ಅಲ್ಲಿ ಪರಶಿವನ ಶುದ್ಧ ಸಾತ್ವಿಕ ಕಳೆಯೇ ಅವತಾರವೆತ್ತಿ ಬಂದಂತಿರುವ ಶ್ರೀಸಿದ್ಧರಾಮದೇವರು ತನ್ನ ಕೀರ್ತಿಯು ವಿಶ್ವದಲ್ಲಿ ಮೊಳಗಲೆಂಬ ಕಾಮನೆಯಿಂದ ವಿಶಾಲವಾದ ಕೆರೆಕಾಲುವೆಗಳನ್ನು ತೆಗೆಯಿಸಿ ಸುಂದರವಾದ ಗುಡಿಗೋಪುರಗಳನ್ನು ವಿರಚಿಸಿ ಅವುಗಳ ಮೇಲೆಲ್ಲ ತನ್ನಹೆಸರನ್ನು ಕೆತ್ತಿಸಿ ನಲಿದಾಡುತ್ತಿರುವಾಗ

ಪ್ರಭುದೇವರು ಅಲ್ಲಿಗೆ ದಯಮಾಡಿಸಿ, ಲೋಕೋದ್ಧಾರವ ಮಾಡುತ್ತ ಇದ್ದೂ ಇಲ್ಲದಂತಿರುವ ಮರ್ಮವ ತಿಳಿಯದೇ ನಿರವಯಲ ಸಮಾಧಿಯಲ್ಲಿ ನಿರ್ಬಯಲಾಗುವ ಪರಿಯನರಿಯದೇ ಕೇವಲ ಕೀರ್ತಿಕಾಮನೆಯಿಂದ ಮೃಡನಿರ್ಘ ದೇವಾಲಯವ ಮರೆತು ಜಡದೇವಾಲಯಗಳನ್ನು ಕಟ್ಟುತ್ತಿರುವದನ್ನು ಕಂಡು ಮರುಗಿದನು. ಶ್ರೀಸಿದ್ಧರಾಮನ ನೇತೃತ್ವದಲ್ಲಿ ಸಾವಿರಾರು ಮಣ್ಣುಗೆಲಸ ಮಾಡುವ ಒಡ್ಡರು, ಬಂಡಿಯನ್ನು ಹೂಡುವ ಸಾಸುವ ಕಾಳಿನ ಕಡಲೆ ಕಾಳಿನಷ್ಟು ಸಣ್ಣಾಗಿ ಕೆತ್ತುವ ಕಲ್ಲುಕುಟಿಕರು ಕೆಲಸ ಮಾಡುತ್ತಿರುವದನ್ನು ಕಂಡು ಅಚ್ಚರಿಪಟ್ಟನು.

" ಸಮತೆಯೆಂಬ ಕಂಥೆ, ಅಮಿತವೆಂಬ ಬ್ರಹ್ಮ,
ಸರ್ವಜೀವ ದಯಾಪಾರಿ ಎಂಬ ವಿಮಲರುದ್ರಾಕ್ಷಿ,
ನಿರ್ಮೋಹವೆಂಬ ಕೌಪೀನ, ನಿಸ್ಸಂಗವೆಂಬ ಮೇಖಲಾ
ಪರಿಪೂರ್ಣನೋಡಾ ನಮ್ಮ ಜಂಗಮನು .... "

ಎಂಬ ವಚನಕಾರರ ಉಕ್ತಿಯಂತೆ ಅಂತರಂಗದಲ್ಲಿ ಸಮತೆ, ಸುಮತಿ ಮೊದಲಾದ ದೈವೀ ಸಂಪತ್ತನ್ನು ತುಂಬಿಕೊಂಡು ಬಹಿರಂಗದಲ್ಲಿ ದಂಡ ಕಮಂಡಲು ಮೊದಲಾದವುಗಳನ್ನು ಧಾರಣ ಮಾಡಿದಾಗ ಅದು ಯಥಾರ್ಥಸನ್ಯಾಸವೆನಿಸುವದು. ಅವನು ಪರಿಪೂರ್ಣಯತೀಶ್ವರನೆನಿಸುವನು. ಹೀಗಾಗದೇ ಹೃನ್ಮಂದಿರದಲ್ಲಿ ವಿವಿಧಕಾಮನೆಗಳ ವಿನ್ಯಾಸವಿದ್ದು ಬಹಿರಂಗದಲ್ಲಿ ಸನ್ಯಾಸವಿದ್ದರೂ ಅದು ಸನ್ಯಾಸವೆನಿಸದೆ, ಸಮ್ಯಕ್‌ನಾಶ,ಮಹಾನಾಶ, ಸರ್ವನಾಶವೆನಿಸುವದು. ಈ ಕೃತ್ರಿಮ ಸನ್ಯಾಸದಿಂದ ಈ ಕಪಟವೇಷದಿಂದ, ಈ ತೋರಿಕೆಯ ಸೋಗಿನಿಂದ ಸಾಧಕನ ಜೀವನವೇ ಮಣ್ಣುಪಾಲಾಗುವದು.

ಓರ್ವ ಮಂದ ಮತಿಯು ನನ್ನ ಕೈ ಕಾಲುಗಳನ್ನು ನೂಲಿನಿಂದ ಮಾಡಿದ ಹಗ್ಗದಿಂದ ಕಟ್ಟದೇ ಚಿನ್ನದಿಂದ ಮಾಡಿದ ಸರಪಳಿಯಿಂದ ಕಟ್ಟಿರಿ ಎಂದು ಹೇಳಿ ಕಟ್ಟಿಸಿಕೊಂಡನಂತೆ. ನೂಲಿನ ಹಗ್ಗದಿಂದ ಕಟ್ಟಿದ್ದನ್ನು ಬಿಚ್ಚಿಕೊಳ್ಳಲು ಬರುವಂತೆ ಚಿನ್ನದ ಸರಪಳಿಯನ್ನು ಬಿಚ್ಚಲು ಬರುವದೇ ? ನೂಲಿನ ಹಗ್ಗದ ಬಂಧನಕ್ಕಿಂತಲೂ ಚಿನ್ನದ ಸರಪಳಿಯ ಬಂಧನವು ಬಂಧುರವಾದುದು. ಸತಿಸುತಾದಿಗಳ ಕೂಟವು ಹೇಮ ಭೂಮಿಗಳ ಒಡನಾಟವು ಬಂಧನಕಾರಕವೆಂದು ಬಗೆದು ಅವನ್ನೆಲ್ಲ ಧಿಕ್ಕರಿಸಿ ಯತಿವೇಷವನ್ನುತಾಳಿ ಅಂತರಂಗದಲ್ಲಿ ಅನೇಕ ಆಶೆಆಮಿಷಗಳಿಗೆ ಬಲಿಯಾದ ಸಿದ್ಧರಾಮೇಶ್ವರರ ಬಾಳೂ ಹೀಗೆಯೇ ಆಗಿದೆ. ಕಣ್ಣಿಗೆ ಕಾಣುವ ಬೇಡವೆಂದರೆ ಬಿಡುವ ಸತಿಸುತಾದಿಗಳ ತ್ಯಾಗವೇನೂ ಹಿರಿದಲ್ಲ; ಆದರೆ ಬ್ರಹನ್ಮಂದಿರದಲ್ಲಿ ಮನೆ ಮಾಡಿದ, ಕಣ್ಣಿಗೆ ಕಾಣದ, ಬೇಡವೆಂದರೂ ಬಿಡದ ಷಡ್ರಿಪುಗಳ ತ್ಯಾಗವೇ ಅತೀವ ಮಹತ್ವದ್ದು.

ಕಾಮಾದಿ ಷಡ್ರಿಪುಗಳ ಅಜೇಯತ್ವವನ್ನು —

" ಕಾಮ ಏಷಃಕ್ರೋಧ ಏಷಃ ರಜೋಗುಣ ಸಮುದ್ಭವಃ ।
ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಂ "

ಎಂದು ಗೀತೆಯೂ,

" ಬಿಡಬೇಕು ಬಲು ಹಿಂದೆ ಬರಿದೆ ತನ್ನಿರವನು ।
ಕೆಡಿಸುವ ಕಾಮವಿದನು ಕಂಡಯೋಗಿ "

ಎಂದು ನಿಜಗುಣ ಶಿವಯೋಗಿಗಳೂ, ಅಹಂಕಾರ ಮಮಕಾರಾದಿಗಳ ಪ್ರಾಬಲ್ಯವನ್ನು–

" ಮಮೇತಿ ಬಧ್ಯತೇ ಜಂತುಃ
ನಿರ್ಮಮೇತಿ ವಿಮುಚ್ಯತೇ "
" ಮಮಕಾರದಿಂದ ಮಿಕ್ಕಿನ ಬಂಧವುಂಟೇ ? "

ಎಂದು ಅನೇಕ ಮಹಾನುಭಾವರು ಹೇಳಿರುವರು.

ಕಾಮನೆಗಳಿಂದ, ಆಶೆಆಮಿಷಗಳಿಂದ ಬಂಧಿತನಾದವನಬಗ್ಗೆ ಒಂದುಚಮತ್ಕಾರಕೆ ಸಂಗತಿಯಿದೆ.

" ಆಶಾ ನಾಮ ಮನುಷ್ಯಾಣಾಂ ಕಾಚಿದಾಶ್ಚರ್ಯಶೃಂಖಲಾ ।
ಯಯಾ ಬದ್ಧಾಃ ಪ್ರಧಾವಂತಿ ಮುಕ್ತಾಸ್ತಿಷ್ಠಂತಿಪಂಗುವತ್ ॥ "

ಲೋಕದಲ್ಲಿ ಪೋಲೀಸರು ಅಪರಾಧಿಗೆ ಬೇಡಿಯನ್ನುಹಾಕಿ ಸೆರೆಮನೆಯಲ್ಲಿ ನೂಕುವರು. ಆಗ ಅವನು ಸುಮ್ಮನೆ ಒತ್ತಟ್ಟಿಗೆ ಕುಳಿತುಬಿಡುವನು. ಬೇಡಿಯಿಲ್ಲದ ಮನುಷ್ಯನು ಬೇಕಾದತ್ತ ಸಂಚರಿಸುವನು. ಇಲ್ಲಿರುವ ವೈಪರೀತ್ಯವೆಂದರೆ ಯಾರು ಆಶೆಯೆಂಬ ಬೇಡಿಯನ್ನು ಹಾಕಿಕೊಳ್ಳುವರೋ ಅವರೇ ಹಗಲಿರುಳೂ ಓಡಿ ದಣಿಯುವರು. ಯಾರು ಆಸೆಯೆಂಬ ಬೇಡಿಯನ್ನು ಹಾಕಿಕೊಳ್ಳದೇ ಇರುವರೋ ಅವರುಮಾತ್ರ ದಣಿವಿಲ್ಲದೆ ಪ್ರಶಾಂತವಾಗಿ ಒತ್ತಟ್ಟಿಗೆ ಸುಮ್ಮನೇ ಕೂಡುವರು. ಆಶೆಯಿಂದ ದುಃಖ । ನಿರಾಶೆಯಿಂದ ಸುಖ ಎಂಬ ಬಗ್ಗೆ ಅನೇಕ ಮಹಾನುಭಾವರು–

'' ಆಶಾಶಾ ಪರಮಂದುಃಖಂ ನೈರಾಶ್ಯಂಪರಮಂ ಸುಖಂ॥
ಆಶೆಯೆಂಬಸ್ತ್ರೀಗೆ ಮನಸೋತವರೆಲ್ಲಾ
ಕೆಟ್ಟಕೇಡನೇನೆಂಬೆನಯ್ಯಾ,
ಯತಿಗಳಾಗಲಿ ವೇದಾಧ್ಯಾಯಿಗಳಾಗಲೀ
ನರರೊಳಗಾಗಲಿ ಸುರರೊಳಗಾಗಲೀ ಇವರೆಲ್ಲರನ್ನೂ
ಧನವುಳ್ಳವರ ಬಾಗಿಲ ಕಾಯಿಸಿದಳುನೋಡಾ,
ಇವಳಿಗಾರೂ ಮರುಳಾಗರು ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ
ಶರಣರಲ್ಲದವರ ಕಿವಿಯಹಿಡಿದು ಕುಣಿಸಿದಳುನೋಡಾ, "

" ಆಶೆಗೆಸತ್ತುದು ಕೋಟಿ ಆಮಿಷಕ್ಕೆ ಸತ್ತುದು ಕೋಟಿ
ಹೊನ್ನು ಹೆಣ್ಣು ಮಣ್ಣಿಂಗೆ ಸತ್ತುದು ಕೋಟಿ
ಗುಹೇಶ್ವರಾ ನಿಮಗಾಗಿ ಸತ್ತವರನಾರನೂ ಕಾಣೆ, "

" ಆಸೆಯುಳ್ಳಾತ ಒಬ್ಬರಧೀನದಲಿಪ್ಪನು.
ಆಸೆಯು ಮನಸಿಯ ಕೂಪಯುಸಿದ...

ಕೈಲಾಸದಾಚೆಯಲ್ಲಿಪ್ಪಾತನೆಂದಾತ,
ನಮ್ಮ ಅಂಬಿಗರಚೌಡಯ್ಯ. "

" ಬೇಕೆಂಬುವವ ಭಿಕಾರಿ ಸಾಕೆಂ ಎನ್ನುವವ ಶ್ರೀಮಂತ "
" ಬೇಕೆಂಬುದು ಭವದ ಬೀಜ "

" ಬೇಕು ಬೇಕದುಬೇಕು ಬೇಕಿದೆಸಗಿನ್ನೊಂದು ।
ಬೇಕೆನುತ ಬೊಬ್ಬಿಡುತಲಿಹ ಘಟವನಿದನು ।
ಏಕೆಂದು ರಚಿಸಿದನೋ ಬೊಮ್ಮನೀ ಬೇಕು ಜಪ ।
ಸಾಕೆನಿಪುದೆಂದಿಗೆಲೊ ಮಂಕುತಿಮ್ಮ

ಎಂದು ಮುಂತಾಗಿ ಹೇಳಿರುವರು.

ಅಂತರಂಗದಲ್ಲಿ ಕೀರ್ತಿ ಪ್ರತಿಷ್ಠೆಗಳ ವಿನ್ಯಾಸ, ಬಹಿರಂಗದಲ್ಲಿ ಆಡಂಬರದ ಸನ್ಯಾಸವುಳ್ಳ ಶ್ರೀಸಿದ್ಧರಾಮನನ್ನು ಕುರಿತು ವಿರಾಗವಿಭುವಾದ ಪ್ರಭುದೇವರು—

" ಚಿಕ್ಕ ಸಂಸಾರವನು ಸಡಿಲಿಸಿ ।
ಹೊಕ್ಕನಲ್ಲಾ ಹಿರಿಯಸಂಸಾ ।
ರಕ್ಕಕಟ ವಿಖ್ಯಾತಿ ಪೂಜಾಲಾಭದಿಚ್ಛೆಯಲಿ ॥

" ಹುತ್ತವ ಬಡಿದೊಡೆ ಹಾವು ಸಾಯಬಲ್ಲುದೆ ಅಯ್ಯ ?
ಅಘೋರ ತಪವ ಮಾಡಿದೊಡೇನು ?
ಅಂತರಂಗ ಆತ್ಮಶುದ್ಧಿಯಿಲ್ಲದವರನೆಂತುನಂಬುವನಯ್ಯಾ
ಕೂಡಲ ಸಂಗಮದೇವ,

" ಬಿಡು ಬಾಹ್ಯದೊಳು ಡಂಭವ ಮಾನಸದೊಳ ।
ಗೆಡೆವಿಡದಿರು ಶಂಭವ ।
ಒಡಲೊಳು ವಂಚಿಸಿ ಹೊರಗೆ ನೀಕೀರ್ತಿಯ ।
ಪಡೆದರೆ ಶಿವ ನಿನಗೊಲಿವನೇ ಮರುಳೆ ॥ ಪ ॥
ಜನಮೆಚ್ಚಿ ನಡಕೊಂಡರೇನುಂಟು ಲೋಕದಿ ।
ಮನಮೆಚ್ಚಿ ನಡಕೊಂಬುವದೇ ಚಂದವು.
ಜನರೇನುಬಲ್ಲರು ಒಳಗಾಗೋ ಕೃತ್ಯವ ।
ಮನವರಿಯದ ಕಳ್ಳತನವಿಲ್ಲವಲ್ಲ "

" ಮನದಶುದ್ಧಿಯೇ ಮಡಿ ಉಳಿದದ್ದೆಲ್ಲ ಕಾಲ್ಮಡಿ "
ಮುಂತಾದ ಅನುಭಾವಿಗಳ ಸೂಕ್ತಿಗಳು ಅಂತಸ್ಸನ್ನ್ಯಾಸಕ್ಕೆ, ಅಂತರಂಗ ಶುದ್ಧಿಗೆ ಬಹಳ ಮಹತ್ವವನ್ನಿತ್ತಿವೆ.

ದೈನಂದಿನ ಗಂಗಾಸ್ನಾನದಿಂದಲೂ, ಕಾಶೀವಿಶ್ವನಾಥನ ಸಂದರ್ಶನದಿಂದಲೂ ಭಗವತ್ಸಾನಿಧ್ಯವನ್ನು ಪಡೆವ ಮಹತ್ವಾಕಾಂಕ್ಷೆಯಿಂದ ಓರ್ವ ಜರ್ಜರಿತ ವೃದ್ಧೆಯು ಗಂಗಾ ತೀರದಲ್ಲಿ ಪರ್ಣಕುಟೀರವನ್ನು ಕಟ್ಟಿಕೊಂಡು ಸಾರಣೆಹಾಕಿ ರಂಗವಲ್ಲಿಯಿಂದಲಂಕರಿಸಿ ಜಳಕಕ್ಕೆ ಹೋಗಿ ಬರುವಷ್ಟರಲ್ಲಿ ಅಲ್ಲಿ ಒಂದು ಇಲಿಯು ಸತ್ತುಬಿದ್ದಿತ್ತು. ಜಳಕ ಮಾಡಿ ಪರಿಶುದ್ಧಳಾಗಿ ಬಂದ ಅವಳು ಅದು ಅಮಂಗಲವೆಂದು ಭಾವಿಸಿ ಅದನ್ನು ದೂರ ಚೆಲ್ಲಿ ಮತ್ತೆ ಸ್ನಾನ ಮಾಡಿ ಬರುವಷ್ಟರಲ್ಲಿ ಒಂದು ಹೆಗ್ಗಣ ಸತ್ತುಬಿದ್ದಿತ್ತು. ಮಗುದೊಮ್ಮೆ ಜಳಕ ಮಾಡಿ ಬರುವಷ್ಟರಲ್ಲಿ ಒಂದು ಕೋಳಿ ಸತ್ತು ಬಿದ್ದಿತ್ತು. ತೆಗೆದು ಹಾಕಿ ಜಳಕ ಮಾಡಿ ಬರುವಷ್ಟರಲ್ಲಿ, ಕೊನೆಗೆ ತೊಗಲಿನ ಚೀಲದಲ್ಲಿ ಸಿಂದಿಯನ್ನು ಹೇರಿದ, ಬೆನ್ನಲ್ಲಿ ಹುಳಬಿದ್ದು ಜೊಲಸು ನಾರುವ ಒಂಟೆಯೊಂದು ವಿಲಿವಿಲಿ ಒದ್ದಾಡುತ್ತ ಗುಡಿಸಲಿನ ಮುಂದೆಯೇ ಸತ್ತುಬಿದ್ದಿತ್ತು. ಆಗ ಆ ಮುದುಕಿಯು ಇಲಿ ಮೊದಲಾದವುಗಳನ್ನು ಎತ್ತಿ ದೂರ ಬೀಸಾಡಿ ಚೆಲ್ಲಿದಂತೆ ಇದನ್ನು ಚೆಲ್ಲಲಾಗದ್ದಕ್ಕೆ ಆ ಗುಡಿಸಲವನ್ನೇ ಬಿಟ್ಟು ಹೋದಳಂತೆ ! ಇಲಿ, ಹೆಗ್ಗಣ, ಕೋಳಿಗಳನ್ನು ಹಿಡಿಹಿಡಿದು ದೂರ ಚೆಲ್ಲುವದು ಎಷ್ಟು ಸುಲಭವೋ ಹೊರಗಣ ಸತಿ ಸುತಾದಿಗಳನ್ನು ಪರಿತ್ಯಾಗ ಮಾಡುವದೂ ಅಷ್ಟೇ ಸುಲಭವಾದುದು. ಆದರೆ ಮನದೊಳಗೆ ಮನೆ ಮಾಡಿಕೊಂಡಿರುವ ಆಶೆ ಆಮಿಷಗಳನ್ನು ದೂರೀಕರಿಸುವದು ಮಾತ್ರ ಸತ್ತ ಒಂಟೆಯನ್ನು ಎತ್ತಿ ಚೆಲ್ಲುವದು ದುಸ್ಸಾಧ್ಯವಾದಂತೆಯೇ ಸರಿ.

> ಸಿಕ್ಕಿ ಬಿದ್ದನು ಸಿದ್ಧರಾಮನು ।
> ಮಿಕ್ಕ ಭವಭಾರಿಗಳನಾಡೊಡೆ ।
> ಮುಕ್ಕದೇ ವಿಧಿಯನುತಲಲ್ಲಮ ನೋಡಿ ಬೆರಗಾದ ॥ "

ಚಿತ್ರವಿಚಿತ್ರ ದೇವಾಲಯಗಳನ್ನೂ, ವಿಶಾಲವಾದ ಕೆರೆಯನ್ನೂ ಕಟ್ಟುತ್ತಿರುವ ಸಿದ್ಧರಾಮದೇವರ ಬಳಿಗೆ ಬಂದು—

> " ಕಲ್ಲದೇವರ ಮಾಡಿ ಕಲ್ಲು ಮನೆಯ ಮಾಡಿ
> ಆ ಕಲ್ಲು ಕಲ್ಲ ಮೇಲೆ ಕೆಡೆದರೆ ದೇವರೆತ್ತ ಹೋದರೋ
> ಲಿಂಗಪ್ರತಿಷ್ಠೆಯ ಮಾಡುವವರಿಗೆ ನಾಯಕ ನರಕ
> ತಪ್ಪದು. ಗುಹೇಶ್ವರಾ "

> " ದೇಹವೇ ದೇಗುಲವಾಗಿರಲು ಬೇರೆ ಮತ್ತೆ ದೇಗುಲವೇಕಯ್ಯ,
> ಪ್ರಾಣಲಿಂಗವಾಗಿರಲು ಬೇರೆ ಮತ್ತೆ ಲಿಂಗವೇಕಯ್ಯ,
> ಹೇಳಲಿಲ್ಲ ಕೇಳಲಿಲ್ಲ ಗುಹೇಶ್ವರ ನೀನು ಕಲ್ಲಾದರೆ
> ನಾನೇನಪ್ಪೆನಯ್ಯಾ "

> " ಅನ್ನವನಿಕ್ಕಿ ನನ್ನಿಯ ನುಡಿದು, ಅರವಟ್ಟಿಗೆಯನಿಕ್ಕಿ
> ಕೆರೆಯ ಕಟ್ಟಿಸಿದರೆ ಮರಣದಿಂದ ಮೇಲೆ ಸ್ವರ್ಗವುಂಟಲ್ಲದೆ,
> ಶಿವನ ನಿಜವು ಸಾಧ್ಯವಾಗದು, ಗುಹೇಶ್ವರನ ಅರಿದ
> ಶರಣಂಗೆ ಆವ ಫಲವೂ ಇಲ್ಲ.

" ತನುವೆಂಬ ಏರಿಗೆ ಮನವೆಂಬ ಕಟ್ಟೆ
ಆಚಾರವೆಂಬ ಸೋಪಾನ, ಪರಮಾನಂದವೆಂಬ
ಜಲವ ತುಂಬಿ ಕೆರೆಯ ಕಟ್ಟಬಲ್ಲವರನಾರನೂ ಕಾಣೆ,
ನಾನು ಕಟ್ಟಿದ ಕೆರೆ ಸ್ಥಿರವಾಯಿತ್ತು ಗುಹೇಶ್ವರ ನಿಮ್ಮಾಣೆ ."

ಎಂದು ಪ್ರಭುದೇವರು ಮರುಗಿ —

ಕಾಮ್ಯಕರ್ಮ ನಿರಸನ, ಇಷ್ಟಲಿಂಗೋಪಾಸನ, ಪರಮಾರ್ಥತಟಾಕ ನಿರೂಪಣ, ಚರದೇವಾಲಯ ಪ್ರಶಂಸನ ಮುಂತಾದುದನ್ನು ತಿಳಿಹೇಳಿ ಕಲ್ಲುಗಳಲ್ಲಿ ಚಿತ್ರವಿಚಿತ್ರ ಗೊಂಬೆಗಳನ್ನು ತೆಗೆಯುವ, ಕಲ್ಲಿನಲ್ಲಿ ಬೋದಿಗೆ ಮಾಡುವ, ಕಲ್ಲಿನ ತೊಲೆ ಕಂಬಗಳನ್ನು ಕಟೆಯುವ ಒಡ್ಡರ ಬಳಿಗೆ ಬಂದು, ಉರಿಬಿಸಿಲಲ್ಲಿ ಆರೆಮರುಳರಂತೆ ಒಡ್ಡರು ಸಂತೆಯ ಪರಿಯಲ್ಲಿ ನೆರೆದು ಪರಿಪರಿಯ ಕರ್ಮದಲ್ಲಿ ನಿರತರಾದುದನ್ನು ಕಂಡು ಬೆರಗಾಗಿ ಮಡ್ಡರಾದ ಒಡ್ಡರೆ, ಗುಡಿ, ಗೋಪುರ, ಕೆರೆ, ಕಾಲುವೆ, ಅನ್ನಛತ್ರ, ಅರವಟ್ಟಿಗೆ ಮೊದಲಾದ ಕರ್ಮ ಕೋಟಿಯನ್ನು ನಡೆಯಿಸುವ ನಿಮ್ಮ ಹಿರಿಯ ಒಡ್ಡನು ಎಲ್ಲಿರುವನು ? ಹಿರಿಯ ಒಡ್ಡನಂತಿರುವ ಸಿದ್ಧರಾಮನು ಇದನ್ನೇನು ಒಡ್ಡಿಕೊಂಡು ಕುಳಿತಿರುವನು ? ಎಂದು ಮೂದಲಿಸಿ ನುಡಿಯಲು ಆ ಒಡ್ಡರು ತಮ್ಮಗುರು ನಿಂದೆಯನ್ನು ಕೇಳಿ ಸುಮ್ಮನಿರಬಾರದೆಂದು ಕಲ್ಲ ಗುಂಡು ಬಡಿಗೆಗಳಿಂದ ಹೊಡೆಯಲು ಆ ಹೊಡೆತಗಳೆಲ್ಲ ಮರಳಿ ಒಡ್ಡರಿಗೇನೇ ತಾಕಿ ಹಲವರ ಕೈಕಾಲುಗಳು ಮುರಿದು, ಹಲವರ ತಲೆಯೊಡೆದು, ಹಲವರ ಹಲ್ಲುಮುರಿದು ಅವರೆಲ್ಲರೂ ನೋವು ತಾಳದೇ ದಿಕ್ಕೆಟ್ಟು ಓಡಹತ್ತಿದರು. ಆಗ ಪ್ರಭುವು ಗುರು ಹಿರಿಯರನ್ನರಿಯದೇ, ಬಂದವರ, ನಿಂದವರ ನಿಲವನ್ನರಿಯದೇ ಮನಬಂದಂತೆ ನಿಂದಿಸಿ ಅವರನ್ನು ನೋಯಿಸಿದರೆ ಆ ನೋವು ಸಾವುಗಳು ಆ ನಿಂದಕರಿಗೇನೇ ಆಗುವವಲ್ಲದೆ ಶಿವಯೋಗಿಗೆ ತಾಕಬಲ್ಲವೇ ?

" ಸಹಜವ ನುಡಿದರೆ ಸೇರುವರಿಲ್ಲ ಕಾಣಿರಣ್ಣ,
ಅಸಹಜಕ್ಕಲ್ಲದೆ ಲೋಕ ಭಜಿಸದು,
ಕೆರೆಯ ಕಟ್ಟಿಸುವವನ ಕಂಡು ಒಡ್ಡರಾಮಯ್ಯನೆಂದರೆ
ಮುಳಿಸಿಂದ ಲಿಂಗತನುವ ನೋಯಿಸುವರೆ ?
ನಮ್ಮ ಗುಹೇಶ್ವರ ಲಿಂಗವು ಜಗದೊಳಗೆ ಪರಿಪೂರ್ಣವಾದ
ಕಾರಣ ಶರಣನ ನೋವು ಮರಳಿ ಪಾತಕರ ತಾಗಿದರೆ
ಅಲ್ಲಯ್ಯ ನೋಡಿ ನಗುತಿಹನು.

" ತಾಯಿಗಾದ ಸುಖದುಃಖಗಳು
ಬಸಿರ ಶಿಶುವಿಂಗೆ ನೋಡಯ್ಯ !
ಶಿವಶರಣರಿಗೆ ಮಾಡಿದ ಸುಖ ದುಃಖಗಳು
ಶಿವನ ತಾಗುವವು.
ಕರಣವುಳ್ಳವರು ಮರಣವಿಲ್ಲದವಂಗೆ ಮಾಡಿದರೆ

ತನುವುಳ್ಳವರ ಮುಟ್ಟುವದಲ್ಲದೆ ಒಡಲಿಲ್ಲದಾತನ
ಮುಟ್ಟಬಲ್ಲದೆ ಗುಹೇಶ್ವರ ಕಂಡವ ಗೊರಲೆ ಮುಟ್ಟಬಹುದೇ ? "

ಪ್ರಭುದೇವರ ಕೈಕಾಲು ಮುರಿಯಬೇಕೆಂದು ಬೀಸಿದ ಬಡಿಗೆಯ ಏಟುಗಳು, ಕಲ್ಲಿನ ಹೊಡೆತಗಳು ತಿರುಗಿ ಬಂದು ಒಡ್ಡರಿಗೇ ಬಡಿಯಲು ಅವರ ಕೈಕಾಲುಗಳು ಮುರಿದು ಗೋಳಿಡುತ್ತ ಓಡಿಹೋಗಿ ಸಿದ್ಧರಾಮದೇವರಿಗೆ ' ದೇವಾ ಯಾವನೋ ಓರ್ವ ಇಂದ್ರ ಜಾಲಕನು ನಿಮ್ಮನ್ನು ಬಾಯಿಗೆಬಂದಂತೆ ಬೈಯ್ಯಲು ಗುರುನಿಂದೆಯ ಕೇಳಿಸುಮ್ಮನಿರಬಾರ ದೆಂದು ಬಗೆದು ಕೋಲು ಕವಣೆಗಳಿಂದ ಹೊಡೆಯಲು ಆ ಹೊಡೆದ ಹೊಡೆತಗಳೆಲ್ಲ ತಿರುಗಿ ನಮಗೆ ಬಂದು ತಾಕಿ ನಮ್ಮ ಮೈಮೆತ್ತಗಾಗಿ ಹೋಗಿದೆ ಎಂದುಹೇಳಿದರು.

ಸಿದ್ಧರಾಮ ದೇವರು — ಬಂದ ಮಹಾನುಭಾವರು ಮಹಾ ಶಿವಯೋಗಿಗಳು, ಕರ್ತುಂ, ಅಕರ್ತುಂ, ಅನ್ಯಥಾಕರ್ತುಂ ಸಮರ್ಥರು. ಮಾಯಾಕೋಲಾಹಲರು,ಲೋಕೋ ದ್ಧಾರಕರು, ಅನಿಮಿತ್ತ ಬಾಂಧವರು ಎಂಬುದನರಿಯದೇ ಕಿಡಿಕಿಡಿಯಾಗಿ ಕೆಂಡಕಾರುತ್ತ ಅಲ್ಲಮ ಪ್ರಭುದೇವರನ್ನು ಸುಟ್ಟು ಭಸ್ಮಮಾಡಬೇಕೆಂದು ತನ್ನಹಣೆಗಣ್ಣನ್ನು ತೆರೆದು ಬಿಡಲು ಅದು ಬ್ರಹ್ಮಾಂಡವನ್ನೇ ಸುಡುತ್ತಬರಲು ಪ್ರಭುದೇವರು–

" ಕಾಡುಗಿಚ್ಚೆದ್ದರೆ ಅಡವಿಯೇ ಗುರಿ,
ನೀರುಗಿಚ್ಚೆದ್ದರೆ ಸಮುದ್ರವೇ ಗುರಿ,
ಒಡಲಗಿಚ್ಚೆದ್ದರೆ ಆ ತನುವೇ ಗುರಿ,
ಕಾಲಾಗ್ನಿ ಎದ್ದರೆ ಆ ಲೋಕಂಗಳೇ ಗುರಿ,
ಶಿವಶರಣರ ಮನದಲ್ಲಿ ಕೋಪಾಗ್ನಿಎದ್ದರೆ ನಿಂದಕರೇ ಗುರಿ,
ಗುಹೇಶ್ವರ ನಿಮ್ಮ ಮಾಯೆಯ ಹೊಡಗಿಚ್ಚಿಂಗೆ
ನಾನು ಗುರಿಯಲ್ಲ ಕೇಳಾ "

" ಕಾಯಗುಣವಳಿದು, ಮಾಯೆಯ ಮದವ ಮುರಿದು,
ಕಾಮ ಕ್ರೋಧಂಗಳೆಲ್ಲವು ಹೆರೆಹಿಂಗಿ ಹೋದವು,
ಅಂಗವೆಲ್ಲವು ಲಿಂಗಲೀಯವಾಗಿ,
ಕಂಗಳ ಕಳೆಯು ಬೆಳಗಳಿದು, ಗುಹೇಶ್ವರನ
ವಿರಹದುರಿಯೊಳಗೆ ಬೆಂದವರ ಮರಳಿ ಸುಟ್ಟಹೆನೆಂಬ
ಸಿದ್ಧರಾಮಯ್ಯ ಮರುಳ ನೋಡಾ "

ಎಂದು ಹೇಳಿ ಸಿದ್ಧರಾಮದೇವರು ಬಿಟ್ಟ ಹಣೆಗಣ್ಣಿನುರಿಯನ್ನು ಪ್ರಭುವು ತನ್ನ ಅಂಗಾ ಲೊಳಡಗಿಸಿಕೊಂಡು ಬಿಟ್ಟನು.

" ಹರನ ಕರುಣವ ಪಡೆದ ಸಾಮರ್ಥ್ಯದ ಬಲುಹಿಂದ
ಶಿವಶರಣರೊಡನೆ ಸೆಣಸಿದರೆ ಲೇಸುಂಟೇ ?
ಅಘಟಿತ ಘಟಿತರಿಗೆ ಅಘಟಿತರುಂಟು ನೋಡಾ !

ನೊಸಲಲ್ಲೊಬ್ಬರು ಕಣ್ಣು ತೆಗೆದರು,
ಅಂಗಾಲಲೊಬ್ಬರು ಕಣ್ಣು ತೆಗೆವರು,
ಗುಹೇಶ್ವರನ ಶರಣರು ಉಪಮಾತೀತರು.

ಎಂದು ನುಡಿದು ತನ್ನ ಅಂಗಾಲೊಳಗಿರುವ ಉರಿಗಣ್ಣನ್ನು ತೆರೆದು ಬಿಡಲು ಅದು,

" ಅಷ್ಟದಿಕ್ಕುಗಳನಾಲಿಂಗಿಸುತ್ತ,
ಧರೆಯಾಕಾಶವನಾಗುಳಿಸಿ ನುಂಗುತ್ತ,
ಸಚರಾಚರಂಗಳನುಃಪ್ಪೆಂದು ಊದುತ್ತ,
ಸಪ್ತಸಮುದ್ರಂಗಳನಾಪೋಷಣಂಗೊಳುತ್ತ
ಭುಗಿಲ್ ಭುಗಿಲೆಂಬ ಮಹಾರಭಸಕ್ಕೆ
ಬ್ರಹ್ಮಾಂಡ ಕಟಾಹಂ ಬೀರುತ್ತ ... ... ... "

ಚತುರ್ದಶ ಬ್ರಹ್ಮಾಂಡವನ್ನೇ ಸುಡುತ್ತ ಬರಲು ಅದನ್ನು ನೋಡಿ ಸಿದ್ಧರಾಮದೇವರು ಭಯಕಂಪಿತರಾಗಿ–

" ಆಳ್ದನೊಡನೆ ಆಳುಮುನಿದರೆ ಆರು ಕೆಡುವರು ಹೇಳಾ
ಕಪಿಲಸಿದ್ಧ ಮಲ್ಲಿಕಾರ್ಜುನಾ "

ಎಂದು ಶರಣು ಹೋಗಬೇಕೆಂದು ಹೊರಡಲು ಒಡ್ಡರು ನಮ್ಮನ್ನು ಸಂರಕ್ಷಿಸುದೇವಾ ಎನ್ನುತ್ತ —

" ಆತನು ನಿಂದರೆ ನೆಳಲಿಲ್ಲ, ಸುಳಿದರೆ ಹೆಜ್ಜೆ ಇಲ್ಲ,
ಕಾಯುವಿದ್ದು ಕಾಯುವಿಲ್ಲ, "

ಅವನ ಅಂಗಾಲದಿಂದೊಗೆದ ಆ ಮಹಾಜ್ವಾಲೆಯನ್ನು ಆರಿಸುವ ಪರಿಯೆಂತು ಎಂದು ಒಡ್ಡರು ಕೇಳಲು ಸಿದ್ಧರಾಮದೇವರು —

" ಅವನ ಪಾದಕ್ಕೆ ಎನ್ನ ನೊಸಲತಂಪುತ್ತಂದು ತಳಿವೆ,
ಎನ್ನನೊಸಲ ಅಮೃತದಿಂದೆ ಅವನ ತಿಳುಹುವೆನು,
ಹರಿದು ಹತ್ತುವೆನವನ, ಹತ್ತಿ ಮನಮುಟ್ಟಿ ಹಿಡಿವೆನವನ,
ಮಹಾಪ್ರಚಂಡ ಮನದಿಂದೆ ಕಪಿಲಸಿದ್ಧಮಲ್ಲಿಕಾರ್ಜುನನ ಹಿಡಿವೆ "

" ಎಲೆ ಅಯ್ಯ ಎನ್ನ ಶಿರ ನಿಮ್ಮ ಚರಣ ಮುಟ್ಟಿದಬಳಿಕ,
ಎನ್ನಲ್ಲಿ ಗುಣದೋಷವನರಸುವರೇ ?
ಭೃತ್ಯಾಪರಾಧಃ ಸ್ವಾಮಿನೋ ದಂಡಃ ಕಪಿಲಸಿದ್ಧಮಲ್ಲಿಕಾರ್ಜುನದೇವ
ತ್ರಾಹಿತ್ರಾಹಿ ಕಾಯಯ್ಯಾ "

ಎಂದು ಬೇಡಿಕೊಂಡು ಅಂಗಾಲದುರಿಯು ಇಲ್ಲದಂತೆ ಮಾಡುವೆ ಎಂದು ಹೇಳಿದರು.

" ಕೈಗಳ ಬಿಚ್ಚಿ ಬಿಸಾಟರೆ ಬಿಡೆನು ।
ಮೈಗಳ ಕಡಿದು ಹರಹಿದಡೆ ಬಿಡೆಬಿಡೆನು ನಿಮ್ಮ ಚರಣ !
ನೀನು ಎನ್ನ ತನುವಳಿದರೆ ನಿಮ್ಮ ಜ್ಞಾನ ತನುವಿನಿಂದ
ಹೊದ್ದುವೆನು ಕಾಣಾ ಕಪಿಲಸಿದ್ಧಮಲ್ಲಿಕಾರ್ಜುನಾ ! "

ಹೀಗೆ ಸಿದ್ಧರಾಮನು ಪ್ರಭುವಿನ ಮೇಲಿರುವ ಅಚಲಶ್ರದ್ಧೆಯಿಂದ ತನ್ನ ಪ್ರಾಣವನ್ನೇ ಪಣಕ್ಕೆಹಚ್ಚಿ ಸೆರಗೊಡ್ಡಿ ಬೇಡಲು ಪ್ರಭುದೇವರು ತಮ್ಮ ನಿಲವನ್ನು-

" ಕಾಯುಗೊಂಡ ಮಾನವರಂತೆ ಕೈಗೆ ಸಿಲುಕ,
ಪ್ರಾಣವಿಡಿದ ಜೀವಿಗಳಂತೆ ಎಡೆಯಾಡದಿಪ್ಪ,
ಕಾಂಬಡೆ ಕಂಗಳತೆ ಇಲ್ಲ. ಕೇಳುವಡೆ ಕಿವಿಗಳತೆ ಇಲ್ಲ,
ಗುಹೇಶ್ವರನ ನಿಲವು ಬರಿಯಸ್ತೋತ್ರಕ್ಕೆ ನಿಲುಕದು ನೋಡಾ
ಸಿದ್ಧರಾಮಯ್ಯ "

ಎಂದು ಹೇಳಿದರು,

" ಭೃತ್ಯನಿದ್ದ ಠಾವಿಂಗೆ ಕರ್ತುಬಂದರೆ ಅತ್ತಿತ್ತ ಹರಿಯದೆ
ನಂಬಬೇಕು ನೋಡಾ !
ಕರ್ತನ ಕಂಡು ಭೃತ್ಯನುರಿಯನುಗುಳಿದರೆ ಬಳಿಕ
ಕರ್ತೃತನ ಭೃತ್ಯಭಾವಕ್ಕೆ ಸಂಬಂಧವೇಸು ?
ತಪ್ಪಿತಪ್ಪಿ ತಿದ್ದಿಕೊಂಡಿಹನೆಂದರೆ ಹಸನಾಗಬಲ್ಲುದೇ ?
ಗುಹೇಶ್ವರಲಿಂಗನ ಶರಣನಾರೆಂಬುದ ನೀನೆತ್ತ ಬಲ್ಲೆ
ಹೋಗಾ ಮರುಳಸಿದ್ಧರಾಮಾ,

ಹೀಗೆ ವಿರಾಗವಿಭುವಾದ ಪ್ರಭು ತಿರುತಿರುಗಿ ಝುಂಕಿಸಿನುಡಿಯಲು ಶ್ರೀಸಿದ್ಧರಾಮ ದೇವರು —

" ಎನ್ನ ಭರ ಭಾರ ನಿಮ್ಮದಯ್ಯಾ ।
ಎನ್ನ ಹಾನಿವೃದ್ಧಿ ನಿಮ್ಮದಯ್ಯಾ ।
ಎನ್ನ ಕರಕರ ಕಾಡದಿರು ತಂದೆ !
ನಿನ್ನ ಕಾಟ ಎನ್ನ ಪ್ರಾಣದೋಟ ! ಕಪಿಲಸಿದ್ಧಮಲ್ಲಿನಾಥ
ಕೊಲ್ಲು ಕಾಯಿ ನಿಮ್ಮ ಧರ್ಮದವ ನಾನು "

ಎಂದು ಅನನ್ಯಭಕ್ತಿಯಿಂದ ಸರ್ವಸ್ವವನ್ನೂ ಅರ್ಪಣಮಾಡಿ ಬೇಡಿಕೊಂಡರು. ಆಗ ಕರುಣಾಳುವಾದ ನಿರಂಜನ ಪ್ರಭುವು-

" ಕೆರೆದೇಗುಲಂಗಳೆಲ್ಲವು ಹಿಂದಣ ಅಡಿವಜ್ಜೆಗೊಳಗು,
ಕರ್ಮಕಾಂಡ ಯೋಗಂಗಳೆಲ್ಲವು ಭವದ ತೆಕ್ಕೆಗೆ ಒಳಗು,
ಹಿಂದಣ ಮುಂದಣ ಸಂದನಳಿದು ಗುಹೇಶ್ವರ ಲಿಂಗದಲ್ಲಿ
ಶುದ್ಧಿರಬೇಕು ಸಿದ್ಧರಾಮಯ್ಯಾ "

ತತ್ವಶಾಸ್ತ್ರದಲ್ಲಿ ಮುಕ್ತಿಯನ್ನು ಪಡೆಯಲು, ಕರ್ಮಕಾಂಡ, ಜ್ಞಾನಕಾಂಡ, ಭಕ್ತಿ ಕಾಂಡ ಎಂದು ಮೂರು ವಿಧಗಳು ಹೇಳಲ್ಪಟ್ಟಿವೆ. ಕಾಂಡ ಎಂಬ ಪದವು ಭಾಗ, ಪ್ರಕರಣ, ಅಧಿಕ, ವರ್ಗ, ದೇಟು ಹೀಗೆ ವಿವಿದಾರ್ಥವುಳ್ಳದ್ದಾಗಿದೆ. ಅಮರಸಿಂಹನ ಅಮರಕೋಶ ದಲ್ಲಿ, ಭೀಮ ಕವಿಯ ಬಸವ ಪುರಾಣದಲ್ಲಿ ಬರುವ ಕಾಂಡ ಎಂಬ ಶಬ್ದವು ವಿಭಾಗ ಎಂ ಅರ್ಥವನ್ನು ಕೊಡುತ್ತದೆ. ತತ್ವಶಾಸ್ತ್ರದಲ್ಲಿ ಬರುವ ಈ ಶಬ್ದವು ಮುಕ್ತಿಯನ್ನು ಹೊಂದು ವ ಮಾರ್ಗ ಎಂಬರ್ಥವನ್ನು ಸೂಚಿಸುತ್ತದೆ.

ಎರಡು ದಿನ ಊಟವಿಲ್ಲದೆ ಹೊಟ್ಟೆ ಹಸಿದು ಕಂಗೆಟ್ಟು ಕುಳಿತ ಮನುಷ್ಯನ ಎದುರಿ ಪಂಚಪಕ್ವಾನ್ನಗಳಿಂದ ತುಂಬಿದ ತಟ್ಟೆಯನಿಟ್ಟಿರುವರು. ಉಣ್ಣಲು ನಾಲಿಗೆ ಚಡಪಡಿಸು ತ್ತಿದೆ, ಮನಸ್ಸು ಹಾತೊರೆಯುತ್ತಿದೆ. ಮೂಗಿಗೆ ಮೃಷ್ಟಾನ್ನದ ಮಧುರವಾಸನೆ ಬಡಿ ಯುತ್ತಿದೆ, ಬಗೆಬಗೆಯ ಭೋಜ್ಯ ಪದಾರ್ಥಗಳನ್ನು ಕಣ್ಣು ಎವೆಯಿಕ್ಕದೇ ನೋಡುತ್ತಿವೆ ಕೈಯು ತುತ್ತು ಮಾಡಿ ಬಾಯಲ್ಲಿಡಲು ಹವಣಿಸುತ್ತಿದೆ. ಆದರೆ ಮಾಡುವದೇನು? ಸವಿದುತ್ತನ್ನು ನುಂಗಬೇಕೆಂದರೆ ಒಂದು ದೊಡ್ಡ ಹುಣ್ಣು ಗಂಟಲಲ್ಲಿ ಹುಟ್ಟಿದೆ. ಹೀಗೆಯೇ ಪರಮಾರ್ಥ ಪಥದತ್ತ ಅಡಿಯಿಡುವ ಸಾಧಕನು, ಪ್ರಕಾಂಡ ಪಂಡಿತನಾಗಿರಲಿ, ವ್ಯಾಖ್ಯಾನ ಪಟುವಾಗಿರಲಿ, ಸುಪ್ರಸಿದ್ಧ ಲೇಖಕನಾಗಿರಲಿ, ವಿಶ್ವವಿಧ್ಯಾಲಯದ ಪದವೀಧರನಾಗಿರಲಿ ಏನಿದ್ದರೂ ಅವನಲ್ಲಿ ಅಹಂಕಾರವು ಮನೆ ಮಾಡಿಕೊಂಡಿದ್ದರೆ ಅದು ಗಂಟಲಲ್ಲಿ ಹುಣ್ಣು ಹುಟ್ಟಿದಂತೆ.

ಮುಕ್ತಿ ಮಂದಿರದತ್ತ ಸುದೀರ್ಘ ಪಯಣಮಾಡುವ ಸಾಧಕನಿಗೆ ಅಹಂಕಾರ ಮಮಕಾರಗಳೆಂದರೆ, ಕಿಸೆಯನ್ನು ಕತ್ತರಿಸುವ ಕಳ್ಳರಿದ್ದಂತೆ. ಅಹಂ, ಅಹಂ, ಎಂಬುದು ಸಾಧಕನಿಗೆ ಬಾಧಕವಾಗಿದ್ದರೂ ಆ ಅಹಂ ಪದವು ನ, ಕಃ, ಸಃ, ದಾಸಃ ಎಂದು ಪೂರ್ವ ಪದಗಳನ್ನು ಹೊಂದಿ ನಾಹಂ, ಕೋಽಹಂ, ಸೋಹಂ, ದಾಸೋಹಂ ಎಂದಾದರೆ ಆ ಅಹಂ ಪದವೇ ಸಾಧಕನು ಮೆಲ್ಲಮೆಲ್ಲನೆ ಏರುವ ಶ್ರೇಯೋಮಾರ್ಗದಲ್ಲಿ ಸಾಧನೀಭೂತವಾಗುವದು.

ಜೀವಾತ್ಮನ ವ್ಯವಹಾರಗಳೆಲ್ಲವೂ ನಾನೆಂಬ ಮೋಟಿಯನ್ನು ಸದಾಸುತ್ತುತ್ತಲೇ ಇರುತ್ತವೆ. ಅಖಂಡ ಸಾಮ್ರಾಜ್ಯವನ್ನು ಕಟ್ಟಿದವನು ನಾನು. ಸಾಮ್ರಾಜ್ಯದ ಮೇಲೆ ದಾಳಿ ಮಾಡುವ ಶತ್ರುಗಳನ್ನು ಸದೆಬಡಿದವನು ನಾನು. ಈ ಎಲ್ಲ ಸಾಮ್ರಾಜ್ಯಕ್ಕೆ ನಾನೇ ಅಧಿ ಪತಿಯು. ನನ್ನನ್ನು ಪ್ರತಿಭಟಿಸುವವರು ಬೇರಾರೂ ಇರುವದಿಲ್ಲ. ಎಲ್ಲ ಕಾರ್ಯಗಳು ನನ್ನಿಂದಲೇ ನಡೆಯುತ್ತವೆ. ಎಲ್ಲರೂ ನನಗೆ ಶರಣಾಗತರಾಗಬೇಕು, ನನ್ನ ಮುಂದೆ ಯಾರ ಆಟವೂ ನಡೆಯದು, ಹೀಗೆ ನಾನೆಂಬ ಅಹಂಕಾರದ ವಿಷದಬಳ್ಳಿಯು ನಾನಾ ರೀತಿಯಿಂದ ಹಬ್ಬಿ ಜೀವಾತ್ಮನನ್ನು ಹಾನಿಗೀಡುಮಾಡುವದು. ನಾನೆಂಬ ಅಹಂಕಾರದ ಬಿರುಗಾಳಿ ಬೀಸಿದರೆ ಹೃದಯದಲ್ಲಿ ಬೆಳಗುವ ಜ್ಞಾನದೀಪವು ನಂದಿಹೋಗುವದು.

> "ನಾನೀನೆಂಬ ಅಹಂಕಾರ ತಲೆದೋರಿದಲ್ಲಿ
> ಅಟಮಟ ಕುಟಿಲ ಕುಹಕವೆಂಬ ಬಿರುಗಾಳಿ ಬೀಸಿತ್ತು,
> ಬಿರುಗಾಳಿ ಹುಟ್ಟಲೊಡನೆ ಜ್ಞಾನಜ್ಯೋತಿ ಕೆಟ್ಟಿತ್ತು"

ಎಂದು ಓರ್ವ ವಚನಕಾರನು ಹೇಳಿರುವನು.

ಇವೆಲ್ಲವನ್ನೂ ಮಾಡಿಸುವ ಜಗನ್ನಿಯಾಮಕನೂ, ಸೂತ್ರಧಾರನೂ ಆದ ದೇವನನ್ನು ಮರೆತು ನಾನೇ ಮಾಡುವವನು ಎಂದು ಹೆಮ್ಮೆಪಟ್ಟರೆ ಅವನನ್ನು ದುಷ್ಟಶಕ್ತಿಗಳು ಬೇತಾಳನಂತೆ ಬೆಂಬತ್ತಿ ಕಾಡುತ್ತವಂತೆ. ನಾನು ಮಾಡಿದೆ ಎಂದು ಅನ್ನಲೂಬಾರದು. ಆ ವಿಚಾರವು ಮನದಲ್ಲಿಯೂ ಸುಳಿಯಬಾರದು.

ಒಮ್ಮೆ ಕನಕದಾಸರು ಶಿಷ್ಯರೊಡಗೂಡಿ ಭಜನೆ ಮಾಡುತ್ತ ಕುಳಿತಾಗ ಮಧ್ಯದಲ್ಲಿ ಓರ್ವ ಶಿಷ್ಯನು ಒಮ್ಮಿದ್ದೊಮ್ಮೆ ಎದ್ದು ನಿಂತು ಗುರುಗಳೇ ತಾವು ವೈಕುಂಠಕ್ಕೆ ಎಂದು ಹೋಗುವಿರಿ ? ಎಂದು ಕೇಳಿದನಂತೆ. ಆಗ ಕನಕದಾಸರು ನಾ ಹೋದರೆ ಹೋಗುವೆ. ಎಂದು ಹೇಳಿದರಂತೆ. ಮಾರ್ಮಿಕವಾದ ಈ ಉತ್ತರದ ಅರ್ಥವು ತಿಳಿಯದೇ ಶಿಷ್ಯರು ದಿಙ್ಮೂಢರಾಗಿ ಕುಳಿತಾಗ ಕನಕದಾಸರು ನಾ ಎಂಬ ಅಹಂಕಾರವು ಸಂಪೂರ್ಣಅಳಿದಾಗ ಮುಕ್ತಿಯು ದೊರಕುವೆದೆಂದು ತಿಳಿಸಿ ಹೇಳಿದರಂತೆ.

ಹೃದಯಸ್ಥ ಪರಮಾತ್ಮನು ಪ್ರೇರಣೆ ಮಾಡಿದಂತೆ ಮಾಡುವವ ನಾನು. ಅವನು ನುಡಿಸಿದಂತೆ ನುಡಿಯುವವನು ನಾನು. ಭಗವಂತನೇ ಪ್ರೇರಕನು ಎಂಬ ನಿರಹಂಭಾವವು ಸಾಧಕನಲ್ಲಿ ಅಳವಡಬೇಕು. ವೈಣಿಕನಿಲ್ಲದೆ ವೀಣೆ ನುಡಿವುದೇ ? ಗಾಯಕನು ಬೆರಳಾಡಿಸದೆ ತಂಬೂರಿ ದನಿಗೈಯುವದೇ ? ಪೂಜಾರಿಯು ನುಡಿಯದೇ ಗುಡಿಯು ಪ್ರತಿಧ್ವನಿ ಮಾಡುವದೇ ? ಚಾಲಕನಿಲ್ಲದೆ ವಾಹನ ಮುಂದೆ ನಡೆಯುವದೇ ? ನಿರಹಂಕಾರದಿಂದ, ನಿರ್ಲಿಪ್ತ ಭಾವನೆಯಿಂದ ಮಾಡಿದ ಕರ್ಮವು ಬಂಧವಿಮೋಚಕವಾಗುವದು.

" ಎನ್ನ ಕಾಯವ ದಂಡಿಗೆಯ ಮಾಡಯ್ಯ,
ಎನ್ನ ಶಿರವ ಸೋರೆಯ ಮಾಡಯ್ಯ,
ಎನ್ನ ನರವ ತಂತಿಯ ಮಾಡಯ್ಯ
ಎನ್ನ ಬೆರಳ ಕಡ್ಡಿಯ ಮಾಡಯ್ಯ,
ಬತ್ತೀಸರಾಗವ ಹಾಡಯ್ಯ, ಊರದಲೊತ್ತಿ ಬಾರಿಸು
ಕೂಡಲಸಂಗಮದೇವಾ

ಸಂಗನ ಬಸವಣ್ಣನವರು ಸಂಗೀತಲೋಲನಾದ ಸಂಗಮೇಶ್ವರನಿಗೆ —

ನನ್ನ ಕಾಯವನ್ನೇ ತಂಬೂರಿ ಮಾಡಿ, ಕೈಯಾಡಿಸುತ್ತ ಬೇಕಾದ ರಾಗವನ್ನು ಅನುರಾಗದಿಂದ ಹಾಡುಎಂದು ಬೇಡಿಕೊಂಡಿರುವರು.

" ಮಾಡುವ ಭಕ್ತನ ಕಾಯ ಬಾಳೆಯ ಕಂಬದಂತಿರಬೇಕು,
ಮೆಲ್ಲಮೆಲ್ಲನೆ ಹೊರೆಯೆತ್ತಿ ನೋಡಿದರೆ ಒಳಗೆ ಕಿಚ್ಚಿಲ್ಲದಿರಬೇಕು,
ಮೇಲಾದ ಫಲವನಮ್ಮವರು ಬೀಜಸಹಿತ ನುಂಗಿದರು,
ಎನಗಿನ್ನಾವ ಭಯವಿಲ್ಲ ಕಾಣಾ ಕೂಡಲಸಂಗಮದೇವಾ "

ಬೇವು, ತೇಗು, ಜಾಲಿ ಮೊದಲಾದ ಕಟ್ಟಿಗೆಗಳಿಂದ ಕಂಬಗಳನ್ನು ಮಾಡಬೇಕೆಂದು ಕೆತ್ತುತ್ತ ಹೋದಂತೆ, ಅವು ಕೆತ್ತಿದಷ್ಟೂ ಬಿರುಸಾಗಿಯೇ ತೋರಿಬರುತ್ತವೆ. ಆದರೆ ಬಾಳೆಯ ಕಂಬ ಮಾತ್ರ ಹಾಗಲ್ಲ, ಅದರ ಪದರು ಪದರುಗಳನ್ನು ತೆಗೆಯುತ್ತ ಹೋದರೆ ಒಳಗೆ ಏನೇನೂ ಚು ಇಲ್ಲದೆ ಬರಿದಾಗಿಯೇ ಉಳಿವುದು. ಮಾವು, ಕಿತ್ತಳೆ, ಮೋಸಂಬಿ, ಚಿಕ್ಕು ಮೊದಲಾದ ಹಣ್ಣುಗಳನ್ನು ತಿನ್ನುವಾಗ ಎಲ್ಲರೂ ಬೀಜಗಳನ್ನು ತೆಗೆದು ತಿನ್ನುವರು. ಆದರೆ ಬಾಳೆಯ ಹಣ್ಣು ತಿನ್ನುವಾಗ, ಯಾರೂ ಬೀಜತೆಗೆದು ತಿನ್ನುವದಿಲ್ಲ, ಆ ಹಣ್ಣ ನೊಳಗೆ ಸಣ್ಣಸಣ್ಣ ಬೀಜಗಳಿದ್ದರೂ ಅವನ್ನು ಬೇರ್ಪಡಿಸದೆ ತಿಂದುಬಿಡುವರು. ಕರ್ಮ ಮಾಡುವಾಗ ಮುಮುಕ್ಷುವಿಗೆ ಮಾಡುವ ಕರ್ಮದಲ್ಲಿ ನಾನು ಎಂಬ ಕಿಚ್ಚು ಇರಬಾರದು.
• ಕರ್ತಾರ, ಕಾರಯಿತಾ, ಕರಣಂ ಶಿವಏವ »

ಮಾಡುವವನೂ ಶಿವನೇ, ಮಾಡಿಸುವವನೂ ಶಿವನೇ, ಮಾಡುವ ಕರ್ಮವೂ ಶಿವನೇ ಎಂಬ ಭಾವನೆಯು ಸರ್ವತ್ರ ವ್ಯಾಪಿಸಬೇಕು. ಎಲ್ಲ ಕರ್ಮಗಳನ್ನು ನಿರ್ಲಿಪ್ತಭಾವ ಯಿಂದಲೂ, ನಿರಹಂಕಾರದಿಂದಲೂ ಮಾಡಬೇಕು. ಭೂಮಿಯಲ್ಲಿ ಬಿತ್ತಿದ ಬೀಜವು ಮೊಳೆತು ತಲೆಯೆತ್ತುವಂತೆ ನುಂಗಿದಬೀಜವು ಮೊಳೆತುಮೇಲೇಳುವದೇ ? ಹಾಗೆ ಶಿವಾರ್ಪಣ ಬುದ್ಧಿಯಿಂದ ಮಾಡಿದ ಕರ್ಮ ಪುನರ್ಜನ್ಮಕ್ಕೆ ಕಾರಣವಾಗದು.

" ಕಳ್ಳಗಂಜಿ ಕಾಡ ಹೊಕ್ಕರೆ ಹುಲಿ ತಿಂಬುದ ಮಾಬುದೇ ?
ಹುಲಿಗಂಜಿ ಹುತ್ತವ ಹೊಕ್ಕರೆ ಸರ್ಪ ತಿಂಬುದ ಮಾಬುದೇ ?
ಕಾಲಕ್ಕಂಜಿ ಭಕ್ತನಾದರೆ ಕರ್ಮ ತಿಂಬುದ ಮಾಬುದೇ ?
ಮೃತ್ಯುವಿನ ಬಾಯ ತುತ್ತಾದ ವೇಷಡಂಭಕರನೇನೆಂಬೆ ಗುಹೇಶ್ವರಾ"

ಒಬ್ಬ ದ್ವಾರಿಕಾರನಿಗೆ ಕಳ್ಳರು ಬೆಂಬತ್ತಿರಲು ಅಂಜಿ ಓಡಿ ಹೋಗಿ ಕಾಡನ್ನು ಸೇರಿದನು. ಅಲ್ಲಿಯೂ ಹಸಿದ ಹುಲಿಯೊಂದು ಆ ಎಂದು ಬಾಯ್ದೆರೆದು ಅವನನ್ನು ನುಂಗಲು ಬಂದಿತು. ಅವೆರಡರ ಭಯದಿಂದ ಅಂಜಿ ಗಾಬರಿಯಾಗಿ ಹಾವುಳ್ಳ ಹುತ್ತನ್ನು ಸೇರಲು ಅಲ್ಲಿ ಹಾವು ಕಚ್ಚಿತಂತೆ. ಕಾಲ ಕರ್ಮ ಮಾಯೆಗಳಿಗೆ ಅಂಜಿ ಸನ್ಯಾಸಿಗಳಾಗುವವರಿಗೆ ಈ ಎಚ್ಚರಿಕೆಯ ಮಾತನ್ನು ವಚನಕಾರರು ಹೇಳಿದ್ದಾರೆ.

ಮಳೆಯಲ್ಲಿ ನಿಂತು ಮಳೆಯ ಹನಿಗೆ ಅಂಜಿದರೆ ನಡೆವುದೇ ?
ಸಮರಾಂಗಣದಲ್ಲಿ ನಿಂತು ಸಾವಿಗಂಜಿದರೆ ನಡೆದೀತೇ ?

ಕಾಲ ಕರ್ಮ ಮಾಯೆಗಳನ್ನಾಗಲಿ, ಹೊನ್ನು, ಹೆಣ್ಣು, ಮಣ್ಣುಗಳನ್ನಾಗಲಿ ಎದುರಿಸಿ ಗೆಲ್ಲ ಬೇಕಲ್ಲದೆ ಅವಕ್ಕೆ ಬೆನ್ನು ತೋರಿಸಿ ಹೇಡಿಯಾಗಬಾರದು.

" ಕಾಲ ಕರ್ಮ ಮಾಯೆಯೆಂಬಿವನು ಗೆಲಲಹುದು ಏ।
ಕಾಲ ಮತಿಗಳು ಶಿವಭಕ್ತಿಯುಕ್ತರಾಗಿರೆ । "

ಭಕ್ತಿಕಾಂಡದಿಂದ ಈ ಮೂರನ್ನು ಗೆಲ್ಲಬೇಕು ಎಂದು ನಿಜಗುಣ ಶಿವಯೋಗಿಗಳು ಉಪದೇ ಶಿಸಿರುವರು. ನಾನು, ನನ್ನದು, ನನಗೆ ಎಂಬ ವ್ಯಾಪ್ತಿಯುಳ್ಳ ದುರ್ಗಮವಾದ, ಚಕ್ರ ಕೋಟೆಯಂತಿರುವ ಕರ್ಮಕಾಂಡದಲ್ಲಿ ಸಿಲ್ಕಿದ ಸಾಧಕನು–

" ಪುನರಪಿ ಜನನಂ ಪುನರಪಿ ಮರಣಂ ಪುನರಪಿ
ಜನನೀ ಜಠರೇ ಶಯನಂ "

ಎಂಬುಕ್ತಿಯಂತೆ ಭವಚಕ್ರದಲ್ಲಿ ತಿರುಗಿ ಬೆಂದುಹೋಗುವವನು. ಅವನಿಗೆ ಶಾಂತಿ ಸಮಾಧಾನಗಳು ಕನಸಿನ ಮಾತುಗಳೇ. ಇವರು ಮಂದಮತಿಗಳು, ಮೂಢರು, ಆತ್ಮಘಾತಕರು ಎಂದು ಹೇಳಲ್ಪಡುವರು. ಇದನ್ನೇ ನಿಜಗುಣ ಶಿವಯೋಗಿಗಳು ಕೈವಲ್ಯ ಪದ್ಧತಿಯಲ್ಲಿ —

" ಮಂದಮತಿಗೆ, ವಿಚಾರಿಗೆ ದೈವಪರನಿಗೆ ।
ಚೆಂದವೆನಿಪ ಕಾಂಡಗಳ ನಿಂತು ತಿಳಿವುದು ॥ ಪ ॥
ದೇಹಾಭಿಮಾನವೆರಸಿ ಕೃತ್ಯನಿಚಯವ ।
ನೂಹಿಸಿ ಮಾಡಿಯವರ ಫಲಂಗಳನು ॥
ಸಾಹಸಿಯಾಗಿ ಭೋಗಿ ಕರ್ತೃ ತಾನೆಂಬ ।
ಮೋಹವೇ ಭವ ಬೀಜವಹುದಿದು ಕರ್ಮಕಾಂಡ ॥ ೧ ॥

ಎಂದು ಹೇಳಿರುವರು.

ಮುಕ್ತಿಯು ಆಗಬೇಕೆಂದಿದ್ದರೆ ಕರ್ಮವೆಂಬ ಬಲೆಯಲ್ಲಿಸಿಲುಕಿ ಒದ್ದಾಡಬೇಡ, ಕಾಮ್ಯ ಕರ್ಮ ಮಾಡಿ ಮುಕ್ತಿಯು ಬಯಸುವದೆಂದರೆ ನೀರಡಿಸಿ ವಿಷವಕುಡಿದಂತೆ, ಬಾಯಾರಿ ಮೃಗಜಲಕ್ಕೆ ಹವಣಿಸಿದಂತೆ, ಕನಸಿನಲ್ಲಿ ಔಷಧ ಸ್ವೀಕರಿಸಿ ಕ್ಷಯರೋಗ ಕಳೆದುಕೊಳ್ಳಲು ಇಚ್ಛಿಸಿದಂತೆ. ಶ್ರುತಿಯೂ ' ನಕರ್ಮಣಾ' ಎಂದು ಸಾರಿ ಹೇಳುತ್ತದೆ.

" ಬಿದಿರೆಲೆಯ ಮೆಲಿದರೆ ಮೆಲಿದಂತಲ್ಲದೆ,
ರಸವನು ಹಡೆಯಲು ಬಾರದು,
ಮಳಲ ಹೊಸೆದರೆ ಹೊಸೆದಂತಲ್ಲದೆ,
ಸರವಿಯ ಹಿಡಿಯಲು ಬಾರದು,
ನೀರ ಕಡೆದರೆ ಕಡೆದಂತಲ್ಲದೆ,
ಬೆಣ್ಣೆಯ ಹಡೆಯಲು ಬಾರದು "

ಪರಪರಿಯ ಹಾಳಿಗಿಂತಲೂ ತಿಳುವಾದ ಬಿದಿರಿನ ಎಲೆಗಳನ್ನು ತಾಂಬೂಲದಂತೆ ಮಾಡಿ ಅಗಿದಗಿದು ಮಧುರ ರಸವನ್ನು ಪಡೆಯಲು ಬಂದೀತೇ ? ಉಸುಕನ್ನು ಹೊಸೆದು ಹಗ್ಗ ಮಾಡಲು ಸಾಧ್ಯವೇ ? ಕೆನೆಮೊಸರನ್ನು ಕಡೆದು ಬೆಣ್ಣೆಯನ್ನು ತೆಗೆದಂತೆ, ನೀರ ಕಡೆದು ಬೆಣ್ಣೆ ತೆಗೆಯಲು ಬಂದೀತೇ ? ಮೃಗರಾಜನೆನಿಸಿದ ಸಿಂಹವೂ ಬೇಟೆಗಾರನ ಬಲೆಯಲ್ಲಿ ಸಿಲುಕಿ ವಿಲಿವಿಲಿ ಒದ್ದಾಡುವಂತೆ ಎಂತಹ ಸುವಿವೇಕಿಯೂ ಕರ್ಮದ ಬಲೆಯಲ್ಲಿ ಸಿಲುಕಿ ಪೇಚಾಡುವನು. ಜಾಡ ಹುಳದ ಜಾಲದಲ್ಲಿ ಬಿದ್ದ ನೊಣವು ಪಾರಾಗುವದಕ್ಕಾಗಿ ಯಾವ ಯಾವ ತಂತುವನ್ನು ಹಿಡಿದು ಹೋದರೂ ಆ ಎಳೆಗಳು ಕಾಲಿಗೆ ಸುತ್ತುತ್ತಾ ಪಾರಾಗದಂತೆ ಮಾಡುವ ಹಾಗೆ ಆತ್ಯಂತಿಕ ಸುಖ ದೊರೆಯಬೇಕೆಂಬ ಭ್ರಮೆಯಿಂದ ಮಾಡುವ ಸಕಲ ಕಾಮ್ಯ ಕರ್ಮಗಳೂ ಸಾಧಕನಿಗೆ ಸಾಧಕಗಳಾಗದೆ ಬಾಧಕಗಳಾಗುವವು.

ದೇಹಾಭಿಮಾನ, ಮೋಹ, ಮಮಕಾರಾದಿಗಳು ಭವಭೂಜಕ್ಕೆ ಬೀಜಗಳಾಗಿವೆ. ಅಹಂಕಾರವು ಸಾಧಕನನ್ನು ದೇವರ ಸಮೀಪಕ್ಕೆ ಒಯ್ಯದೇ ಮತ್ತಷ್ಟು ದೂರ ಒಯ್ಯುತ್ತದೆ. ಈ ಮಾತನ್ನೇ ಶ್ರೀ ಬಸವೇಶ್ವರರು —

" ಅಹಂಕಾರ ಮನವನಿಂಬುಗೊಂಡಲ್ಲಿ
ಲಿಂಗ ತಾನೆಲ್ಲಿ ಬಪ್ಪುದೋ ?
ಅಹಂಕಾರಕ್ಕೆ ಎಡೆಗೊಡದೆ ಲಿಂಗತನುವಾಗಿರಬೇಕು,
ಅಹಂಕಾರ ರಹಿತವಾದಲ್ಲಿ ಸನ್ನಿಹಿತ ಕಾಣಾ ಕೂಡಲ ಸಂಗಮದೇವಾ.

ಎಂದು ಹೇಳಿರುವರು.

" ಎಳ್ಳಿಲ್ಲದ ಗಾಣವನಾಡಿದ ಎತ್ತಿನಂತಾಯಿತೆನ್ನ ಭಕ್ತಿ ।
ಉಪ್ಪು ಅಪ್ಪುವಿನಲ್ಲಿ ಅದ್ದಿ ಮೆಲಿದಂತಾಯಿತೆನ್ನ ಭಕ್ತಿ ।
ಕೂಡಲ ಸಂಗಮದೇವಾ ಆನು ಮಾಡಿದೆನೆಂಬ ಕಿಚ್ಚುಸಾಲದೇ ?"

ಗಾಣದಲ್ಲಿ ಎಳ್ಳು, ಕುಸುಬೆ, ಸೇಂಗಾ ಮುಂತಾದ ಎಣ್ಣೆಯ ಕಾಳುಗಳನ್ನು ಹಾಕಿದ್ದು ಉಣ್ಣಲು ಶುದ್ಧ ಎಣ್ಣೆಯು ದೊರೆಯುವದು. ಕಾಳು ಹಾಕದೇ ಗಾಣವನ್ನಾಡಿಸುವದು ಫಲವನ್ನೀಯದ ವೃಥಾಪರಿಶ್ರಮವೆ. ಕಟಕು ಕಟಕಾದ ರೊಟ್ಟಿಯನ್ನು ಇಲ್ಲವೆ ಕಡಲೆಯು ಕಾಳನ್ನು ನೀರಲ್ಲಿ ಎದ್ದಿ ನೆನಿಸಿದರೆ ಅವು ತಿನ್ನಲುಬರುವವು. ನೀರಿನಿಂದಾದ ಉಪ್ಪನ್ನೇ ನೀರಲ್ಲಿ ಎದ್ದಿ ನೆನಿಸಿ ತಿನ್ನಲು ಬರುವದೇ ? ತಿನ್ನಲು ಹೋದರೆ ಕೈಗೆ ಸಿಗದು. ಹೀಗೆ ನಾನೆಂಬ ಅಹಂಕಾರ ಪೂರ್ವಕ ಮಾಡಿದ ಕರ್ಮಗಳು ನಿರರ್ಥಕ, ನಿಷ್ಫಲ ಎನಿಸುತ್ತವೆ. ಒಬ್ಬ ಯಜಮಾನನು ಒಮ್ಮೆ ಸಸ್ಯಸಮೃದ್ಧವಾದ ತನ್ನ ಹೊಲವನ್ನು ನೋಡಲು ಹೊರಟನು; ಹತ್ತು, ಏಳು, ಐದು ವರ್ಷಗಳ ಮೂರು ಮಕ್ಕಳು ಬೇಡ ಬೇಡವೆಂದರೂ ಹೊರಗೆ ಹೊರಟ ತಂದೆಯ ಬೆನ್ನುಹತ್ತಿದರು. ಆಗ ತಂದೆಯು ಚಿಕ್ಕ ಮಗುವನ್ನು ಹೆಗಲ ಮೇಲೆ ಕೂಡಿಸಿಕೊಂಡು ಮಧ್ಯಮ ಪುತ್ರನ ಕೈಹಿಡಿದು ನಡೆಯಿಸಿಕೊಂಡು ಮುಂದೆ ಸಾಗಿದನು. ಹಿರಿಯವನು ತಂದೆಯ ಬೆನ್ನಹಿಂದೆ ನಡೆದನು. ಹೆಗಲ ಮೇಲೆ ಕುಳಿತ ಚಿಕ್ಕ ಮಗುವಿಗೆ ಕಲ್ಲು ಮುಳ್ಳು ತುಳಿವ ಕಷ್ಟವಿಲ್ಲ, ನಡೆಯುವ ಆಯಾಸವಿಲ್ಲ. ಅತ್ತ, ಇತ್ತ ನೋಡುತ್ತ ಹಿಂದೆ ಮುಂದೆ ಕಾಲು ಅಲ್ಲಾಡಿಸುತ್ತ ಚೆಲ್ಲಾಟದಿಂದ ಇರುವನು. ಇವನೇ ಭಕ್ತಿ ಕಾಂಡಿಯು. ಕೈಹಿಡಿದು ನಡೆಯುವ ಮಧ್ಯಮ ಪುತ್ರನೇ ಜ್ಞಾನಕಾಂಡಿಯು. ಇವನಿಗೆ ನಡೆಯುವ ದಣಿವು ತಪ್ಪಿದ್ದಲ್ಲ, ಆದರೂ ಕೈವಿಡಿದುದರಿಂದ ಹಾದಿ ತಪ್ಪುವ ಭಯವಿಲ್ಲ. ಹಿಂದೆ ಬೆನ್ನು ಹತ್ತಿ ನಡೆಯುವ ಪ್ರಥಮಪುತ್ರನೇ ಕರ್ಮಕಾಂಡಿಯಿದ್ದಂತೆ. ಇವನು ಕಲ್ಲು ಮುಳ್ಳು ತುಳಿಯುತ್ತ ನಡಯಬೇಕು ಮತ್ತು ತಂದೆಯು ಮುಂದೆ ಹೋದರೆ ಓಡಿ ಹೋಗಿ ತಂದೆಯನ್ನು ಕೂಡಬೇಕು.

ಈ ಕಾಂಡತ್ರಯಗಳಲ್ಲಿ ಕರ್ಮಕಾಂಡ ಜ್ಞಾನಕಾಂಡಗಳು ಹೇಯವಾಗಿದ್ದು ಭಕ್ತಿ ಕಾಂಡವು ಮಾತ್ರ ಉಪಮೇಯವಾದುದು. ತನುವಿನಿಂದ ಮಾಡುವ ಜ್ಯೋತಿಷ್ಟೋಮ ಸದಾ ಹೋಮ ಹವನಾದಿ ಕರ್ಮಾಚರಣವು ವ್ಯಕ್ತವಾಗಿರುವದು. ಹೃದಯದೊಳು

ಚಿದಾನಂದ ಪೂರ್ಣತಾನೆಂದು ಹದುಳದಿಂದಿರುವ ಜ್ಞಾನಕಾಂಡವು ಗೂಢವಾಗಿರುವದು. ಕರ್ಮಕಾಂಡ ಜ್ಞಾನಕಾಂಡಗಳೆರಡಕ್ಕೂ ಮೀರಿದುದಾಗಿಯೂ ಆ ಕರ್ಮಜ್ಞಾನಗಳನ್ನು ಪರಿಶುದ್ಧ ಮಾಡುತ್ತ ಆ ಕರ್ಮಜ್ಞಾನಗಳಿಗೆ ಬೇರೆಯಾಗದಂತೆ ಕರ್ಮಜ್ಞಾನ ಸಹಿತವಾಗಿ ರುವದು ಭಕ್ತಿಕಾಂಡವು. "ಜ್ಞಾನಕ್ರಿಯೋಭಯೋರೈಕ್ಯಂಭಕ್ತಿರಿತ್ಯಭಿಧೀಯತೇ ॥" ಎಂದು ಭಕ್ತಿ ಲಕ್ಷಣವನ್ನು ಶಿವಾಗಮಗಳು ತಿಳಿಸುತ್ತವೆ. ಕರ್ಮಕಾಂಡವು ಬಹುಪ್ರಯಾಸ ಕರವಾದುದು, ಗೂಢವಾಗಿರ್ದ ಕರ್ಮಕ್ಕೆ ಪ್ರಾಯಶ್ಚಿತ್ತಮಾಡುವ ಜ್ಞಾನಕಾಂಡವು ಪ್ರಯಾಸವಿಲ್ಲದ್ದು. ಆದರೆ ಭಕ್ತಿಕಾಂಡವುಪರಿಶುದ್ಧವೂ, ಮಾಯಾರಹಿತವೂ, ಪರಮಾನಂದ ಸ್ವರೂಪವೂ ಶಿವಸಾಮರಸ್ಯಪ್ರದವೂ ಆಗಿರುವದು.

" ಯೋಗೇನತು ಪರಾಭಕ್ತಿಃ ।
ಇತಿಭಕ್ತೇಸ್ತು ವೈಭವಂ ॥"
ಪಂಚಮಃ ಪುರುಷಾರ್ಥೋಽಹಿ ।
ಭಕ್ತಿಃ ಶೈವೀ ಸನಾತನೀ ॥ "

ಎಂದು ಮುಂತಾಗಿ ಮಗ್ಗೆಯ ಮಾಯಿದೇವರು ಶಿವಾನುಭವಸೂತ್ರದಲ್ಲಿ ಭಕ್ತಿಯು ಅತೀವ ಮೇಲಿನದೆಂದೂ, ಪಂಚಮ ಪುರುಷಾರ್ಥವೆಂದೂ ಹೇಳಿರುವರು. ಭಕ್ತಿಯ ನಿಷ್ಕಳಂಕ ಪದಕ್ಕೆ ಸಾರೂಪ್ಯ, ಸಾಲೋಕ್ಯಮುಂತಾದ ಪದವಿಗಳು ಸರಿಯಾಗವು ಎಂದು ಹೇಳಿರುವರು.

ಕಾಂಡತ್ರಯಗಳಲ್ಲಿ ದ್ವಿತೀಯ ಕಾಂಡವೆನಿಸಿದ ಜ್ಞಾನಕಾಂಡದಲ್ಲಿ ಕರ್ಮಕಾಂಡದಲ್ಲಿ ರುವಷ್ಟು ಅಹಂಕಾರವು ತಲೆದೋರದಿದ್ದರೂ ಸೂಕ್ಷ್ಮರೀತ್ಯಾ ಅಹಂಕಾರವು ಇದ್ದೇ ಇರುವದು.

" ನೋದೇಹೋ ನೇಂದ್ರಿಯಾಣಿ ಕ್ಷರಮತಿ ಚಪಲಂ
ನೋ ಮನೋ ನೈವ ಬುದ್ಧಿಃ ।
ಪ್ರಾಣಾನೈವಾಹ ಮಸ್ಮೀತ್ಯಖಿಲಜಡಮಿದಂ ವಸ್ತು
ಜಾತಂ ಕಥಂ ಸ್ಯಾಂ . ... ಸಾಕ್ಷೀ ಚಿತ್ಪ್ರ
ತ್ಯಗಾತ್ಮಾ ನಿಖಿಲ ಜಗದಧಿಷ್ಠಾನ ಭೂತಃ ಶಿವೋಽಹಂ ॥ "

ಪಂಚಭೂತಾತ್ಮಕವಾದ ಜಡ, ದೃಶ್ಯ, ಭೂತಕಾರ್ಯವೆನಿಸಿದ ವೀಕ್ಷಣ, ಶ್ರವಣ, ಆಸ್ವಾದನ ಸ್ಪರ್ಶನ, ಮೊದಲಾದ ಕ್ರಿಯೆಗಳನ್ನು ಮಾಡುವ ಇಂದ್ರಿಯಗಳು ನಾನಲ್ಲ, ದೇಹ ನಾನಲ್ಲ. ಸಂಕಲ್ಪ ವಿಕಲ್ಪಾತ್ಮಕವಾದ ಮನಸ್ಸಾಗಲಿ, ನಿಶ್ಚಯಾತ್ಮಕಬುದ್ಧಿಯಾಗಲಿ, ಜಡವಾದ ಪ್ರಾಣಾಪಾನಾದಿ ವಾಯುಗಳಾಗಲಿ ನಾನಲ್ಲ. ದೇಹೇಂದ್ರಿಯಾದಿಗಳಿಗೆ ಸಾಕ್ಷೀಭೂತ ನಾನು. ಬ್ರಹ್ಮಾಂಡದಲ್ಲಿ ನಡೆಯುವ ಸಕಲ ವ್ಯವಹಾರಗಳಿಗೆ ಹೇಗೆ ಸೂರ್ಯನು ಸಾಕ್ಷಿಭೂತನೋ ಹಾಗೆ ಪಿಂಡಾಂಡದಲ್ಲಿ ನಡೆಯುವ ಸಕಲ ವ್ಯವಹಾರಗಳಿಗೂ ನಾನು ಸಾಕ್ಷಿಯು. ಅಧಿಷ್ಠಾನ ನು ಅಂದರೆ ಆಧಾರಭೂತನಾದ ಚಿದಾನಂದ ಸ್ವರೂಪನಾದ ಶಿವನೇನಾನು ಎಂದು ಅನುಸಂಧಾನ ಮಾಡುವದೇ ಜ್ಞಾನಮಾರ್ಗವು.

ಕರ್ಮಕಾಂಡದಲ್ಲಿ ಅಹಂಕಾರವು ಸ್ಫುಟವಾಗಿ ತೋರಿದಂತೆ ಜ್ಞಾನಕಾಂಡದಲ್ಲಿ ಅಂದರೆ ಸೋಽಹಂ, ಶಿವೋಽಹಂ ಎಂದು ಹೇಳುವಲ್ಲಿ, ಅಹಂ, ಅಹಂ, ಎಂಬ ಸೂಕ್ಷ್ಮ ಅಹಂಕಾರವು ಇದ್ದೇಇರುವದು. ಏನೇ ಆಗಲಿ, ಹೇಗೇ ಆಗಲಿ ಅಹಂಕಾರದ ಲವಲೇಶವು ಉಳಿದಂತಾಯಿತಲ್ಲವೇ ?

" ಯಾವದ್ವಾಯತ್ಕಿಂಚಿದ್ವಿಷದೋಷ ಸ್ಫೂರ್ತಿರಸ್ತಿಚೇದ್ದೇಹೇ ।
ಕಥಮಾರೋಗ್ಯಾಯ ಭವೇತ್ ॥ "

ಎಂಬುಕ್ತಿಯಂತೆ ಹಾವು ಚೇಳುಗಳ ವಿಷವಾಗಲಿ, ಇಲ್ಲವೇ ಪ್ರಾಣವನ್ನೇ ತಕ್ಕೊಳ್ಳುವ ವನಸ್ಪತಿಗಳ ವಿಷವಾಗಲಿ ಸ್ವಲ್ಪೇಇದ್ದರೂ ಅದು ದೇಹಕ್ಕೆ ಅಸ್ವಾಸ್ಥ್ಯವನ್ನುಂಟು ಮಾಡುವಂತೆ ಅಹಂಕಾರದ ಲವಲೇಶವೂ ಮುಕ್ತಿಗೆ ಪ್ರತಿಬಂಧಕವಾದುದು,

" ಸೋಹಂ ಎಂದಡೆ ಅಂತರಂಗದ ಗರ್ವ !
ಶಿವೋಹಂ ಎಂದೊಡೆ ಬಹಿರಂಗದ ಅಹಂಕಾರ !
ಈ ಉಭಯವನಳಿದು ದಾಸೋಹಂಭಾವನೆ
ಕರುಣಿಸಿ ಬದುಕಿಸಯ್ಯಾ ಅಖಂಡೇಶ್ವರ "
ಜನ್ಮ ಜನ್ಮಕ್ಕೆ ಹೋಗಲೀಯದೆ !
ಸೋಹಂ ಎಂದೆನಿಸದೆ ದಾಸೋಹಂ ಎಂದೆನಿಸಯ್ಯಾ ;
ಗುರುಲಿಂಗ ಜಂಗಮದ ಪ್ರಸಾದವ ತೋರಿ,
ಬದುಕಿಸಯ್ಯ ಕೂಡಲಸಂಗಮದೇವಾ "

ನಿರಹಂಕಾರದ, ನಿರಭಿಮಾನದ, ಸರ್ವಾರ್ಪಣ ಭಾವದ ದಾಸೋಹಂ ಭಾವದಿಂದ, ಗುರುಸೇವೆ, ಲಿಂಗಪೂಜೆ, ಜಂಗಮಾರ್ಚನ, ಪ್ರಸಾದಲಾಭ ಉಂಟಾಗುವದಲ್ಲದೆ, ಸೂಕ್ಷ್ಮಾಹಂಕಾರ, ಸೂಕ್ಷ್ಮ ಅಭಿಮಾನಗಳುಳ್ಳ ಸೋಹಂ ಭಾವದಿಂದ ಚತುರ್ವಿಧ ಲಾಭವು ಸಾಧ್ಯವಾಗದು ಎಂಬುದನ್ನೇ ಶ್ರೀಷಣ್ಮುಖ ಸ್ವಾಮಿಗಳೂ ಶ್ರೀ ಬಸವೇಶ್ವರರೂ ಹೇಳಿರುವರು.

ದಾಸೋಹಂ ಎಂಬುವಲ್ಲಿ ದಾಸಃ, ಅಹಂ ಎಂದು ಎರಡು ಪದಗಳಿರುವವು. ಅಹಂ ದಾಸಃ ಅಂದರೆ ಉಪಾಸಕನಾದ ನಾನು ಈಶನಾದ ನಿನಗೆ ದಾಸನು ಎಂದು ಅರ್ಥವಾಗುವದು.

ಮಧ್ವಮತವು ಅಂದರೆ ದ್ವೈತ ಮತವು ಮುಕ್ತಿದಶೆಯಲ್ಲಿಯೂ ಉಪಾಸ್ಯ – ಉಪಾಸಕ, ಆರಾಧ್ಯ–ಆರಾಧಕ, ಪೂಜ್ಯ–ಪೂಜ್ಯಕ ಎಂದು ದ್ವೈತವನ್ನೇ ಪ್ರತಿಪಾದಿಸುತ್ತದೆ. ಆದರೆ ದ್ವೈತಾದ್ವೈತ ಮತವು ಅಂದರೆ ವೀರಶೈವ ಮತವು ಕೇವಲ ದ್ವೈತವನ್ನು, ಕೇವಲ ಅದ್ವೈತವನ್ನು ಪ್ರತಿಪಾದಿಸದೇ ದ್ವೈತಾದ್ವೈತವೆಂಬ ಅಭಿಧಾನಕ್ಕೆ ಸರಿಯಾಗಿ ಪ್ರಾರಂಭದಲ್ಲಿ ದ್ವೈತವನ್ನೂ, ಮುಕ್ತಿಯ ದಶೆಯಲ್ಲಿ ಅದ್ವೈತವನ್ನೂ ಪ್ರತಿಪಾದಿಸುತ್ತದೆ.

ದಾಸೋಹಂ ಎಂಬಲ್ಲಿ ಉಭಯ ಪದಗಳಿದ್ದು ಆ ಉಭಯ ಪದಗಳಿಗೆ ಸಾಮಾನ್ಯಾರ್ಥ ಹೊಂದಿದ್ದರೂ ಆ ಉಭಯ ಪದಗಳನ್ನು ಬೇರೊಂದು ರೀತಿಯಿಂದ ವಿಶ್ಲೇಷಣೆ ಮಾಡಿ ಬೇರೊಂದರ್ಥವನ್ನೇ ಮಾಡಬಹುದು.

ದಾಸೋಹಂ ಎಂಬುದನ್ನು ದಾಸಃ ಅಹಂ ಎಂದು ಒಂದು ವಿಧವಾಗಿ ವಿಶ್ಲೇಷಣೆ ಮಾಡಿದರೆ, ಆ ದಾಸೋಹಂ ಪದವನ್ನೇ ದಾ-ಸೋಹಂ ಎಂದು ಮತ್ತೊಂದು ರೀತ್ಯಾ ವಿಭಜನೆ ಮಾಡುವರು. ಅದಕ್ಕೊಂದು ವಿಶಿಷ್ಟವಾದ ಅರ್ಥವನ್ನೂ ಉದಾಹರಿಸುವರು. ಷಟ್‌ಸ್ಥಲಬ್ರಹ್ಮವಾದಿಯೆಂಬ ಬಿರುದು ಪಡೆದ ಮಗ್ಗೆಯಮಾಯಿದೇವರು —

" ದಾನಂ ದ್ರವ್ಯಸಮರ್ಪಣಂ ...
ತನುತ್ರಯಾದಿ ಸಕಲ ದ್ರವ್ಯಂಗಳಂ ಕೊಟ್ಟು ನಿಂದು ।
ಆನೀಗಳ್ ಶಿವನಪ್ಪೆನೆಂಬುದಿದು ದಾಸೋಹಂ ಶಿವಾವಲ್ಲಭಾ ॥ "

ತನ್ನ ದೇಹ ಕರಣಾದಿಗಳೆಲ್ಲವನ್ನು ಶಿವನಿಗೆ ಸಮರ್ಪಿಸಿ ಬಳಿಕ ಈಗ ನಾನು ಶಿವನಾದೆನೆಂಬ ನಿಶ್ಚಯದ ನಿರಹಂಭಾವವೇ ದಾಸೋಹಂಭಾವವು. ಆತ್ಮಾರ್ಪಣವನ್ನು ಮಾಡುವ ಸತ್ಕ್ರಿಯೆಯೇ ನಿರಹಂಭಾವದ ಮುಕ್ತಿಯೆನಿಸುವದು. ಅದೇ ಸದ್ಭಕ್ತಿಯು, ಸಹಜ ಭಕ್ತಿಯು ಎಂದು ಶತಕತ್ರಯದಲ್ಲಿ ಹೇಳಿರುವರು. ಅಹಂಕಾರ ಅಭಿಮಾನಗಳ ಲವಲೇಶ ವಿಲ್ಲದ ಭಕ್ತಿಕಾಂಡವೇ ಮೇಲಲ್ಲದೆ ಸೂಕ್ಷ್ಮಾಹಂಕಾರ ಅಭಿಮಾನವುಳ್ಳ ಜ್ಞಾನಕಾಂಡ ಮೇಲಲ್ಲವೆಂಬುದು ಶಿಷ್ಟಸಮ್ಮತ.

ನಾ ಎಂಬ ಶಬ್ದವೇ ದುಃಖ ಮೂಲವಾದುದೆಂಬುದಕ್ಕೆ ಹಳ್ಳಿಗರು ಒಂದು ಕಥೆ ಹೇಳುವರು. ಬಹುದಿನಗಳಿಂದಲೂ ಸಾಹುಕಾರನನ್ನು ನಂಬಿಕೊಂಡಿದ್ದ ಒಬ್ಬ ಆಳುಮಗನಿಗೆ ಸಾಹುಕಾರನು ಊರಲ್ಲಿಲ್ಲದ ಪ್ರಸಂಗದಲ್ಲಿ ಮನೆಯೊಳಗಿನ ತಿಜೋರಿ ಒಡೆದು ಹಣ ಕದಿಯಬೇಕೆಂಬ ದುರ್ಬುದ್ಧಿ ಹುಟ್ಟಿತು. ನಡುರಾತ್ರಿಯಲ್ಲಿ ತಿಜೋರಿಯ ಕೀಲಿತೆಗೆದು ಒಳಗಿರುವ ಬೆಳ್ಳಿ, ಬಂಗಾರದ ಒಡವೆಗಳನ್ನೆಲ್ಲ ಕೂಡಿಸಿ ಒಂದು ಗಂಟು ಮಾಡಿ ಆ ಗಂಟನ್ನು ಬಗಲಲ್ಲಿಟ್ಟುಕೊಂಡು ಮುಖ್ಯ ಬಾಗಿಲು ಕೀಲಿ ಹಾಕಿದ್ದರಿಂದ ದನಕಟ್ಟುವ ಕೊಟ್ಟಿಗೆಯ ಗೋಡೆಯೊಳಗಿರುವ ಮಾಡುಗಳಲ್ಲಿ ಮೆಲ್ಲಮೆಲ್ಲನೆ ಕಾಲಿಟ್ಟು ಮೇಲೆ ಹತ್ತಿ ಇಳಿಯ ಬೇಕೆಂದು ಹವಣಿಸುತ್ತಿರುವಲ್ಲಿ ಬಗಲೊಳಗಿರುವ ಬೆಳ್ಳಿಬಂಗಾರದ ಗಂಟು ಮನೆಯ ಒಳಗೆ ಬಿತ್ತು, ಅವನು ಬೇರೆಡೆ ಬಿದ್ದನು. ಬಿದ್ದಸಪ್ಪಳಕ್ಕೆ ಮನೆಯಜನರು ಎಚ್ಚರಾದರು. ಮರುದಿನ ಕಳವಾದದ್ದು ಗೊತ್ತಾಗಿ ಪೋಲೀಸರು ಬಂದಾಗ ಕಳವು ಮಾಡಿದ ಮನೆಯ ಆಳು ಮಗನೇ ಯಾವನೋ ಕಳ್ಳನು ಮನೆಯ ಒಳಗೆ ಬಂದು ಗೋಡೆಗಳಲ್ಲಿರುವ ಮಾಡು ಗಳಲ್ಲಿ ಕಾಲಿಟ್ಟು ಗೋಡೆಯನ್ನು ಏರಿ ಹೊರಭಾಗದಿಂದ ಇಳಿಯಬೇಕೆನ್ನುವಷ್ಟರಲ್ಲಿ ನಾನು ಎತ್ತ ಬಿದ್ದೆ, ಬಗಲೊಳಗಿನ ಗಂಟು ಮನೆಯ ಒಳಗೆ ಬಿತ್ತು ಅನ್ನಲು ಈ ಮಾತನ್ನು ಕೇಳಿದ ಪೋಲೀಸರು ಕಳ್ಳತನವನ್ನು ಮಾಡಿದವನು ನಾನೇ ಎಂದು ಒಪ್ಪಿದಂತಿರುವ ಆ ಆಳು ಮನುಷ್ಯನನ್ನು ಹಿಡಿದು ಕೈಗೆ ಬೇಡಿಹಾಕಿ ಜೇಲಿನಲ್ಲಿ ಹಾಕಿದರು. ಈ ಕಥೆಯಲ್ಲಿಯ ಆಳು ಉಚ್ಚರಿಸಿದ ನಾ ಎಂಬ ಶಬ್ದವೇ ದುಃಖಕ್ಕೆ ಕಾರಣವಾಯಿತು. ಕರ್ಮಕಾಂಡದಲ್ಲಿ ಸ್ಫುಟ ವಾಗಿಯೂ, ಜ್ಞಾನಕಾಂಡದಲ್ಲಿ ಸೂಕ್ಷ್ಮವಾಗಿಯೂ ಇರುವ ಅಹಂಕಾರವು ಭಕ್ತಿಕಾಂಡದಲ್ಲಿ ಎಳ್ಳಷ್ಟೂ ಇರುವದಿಲ್ಲ. ದೇವರಿಗಾಗಿ ಸರ್ವಸಮರ್ಪಣವನ್ನು ಮಾಡಿದ ಭಕ್ತನು ನಾನು ನಾನು ಎಂದು ಹೆಮ್ಮೆ ಪಡದೇ, ಅನನ್ಯ ನಿಷ್ಠೆಯಿಂದ ಸರ್ವಕರ್ಮಗಳನ್ನು ಮಾಡಿಸ

ವವನು ನೀನೇ ! ನಾನು ಮಾಡುವವನು ಮಾತ್ರ. ಸೂತ್ರಧಾರನು ಕುಣಿಸಿದಂತೆ ಕು ಯುವವನು ನಾನು; ಎನಗೆ ನೀನೇಗತಿ. ನೀನೇ ಮತಿ ಎಂದು ದೃಢ ನಿಷ್ಠೆಯಿ ನಡೆದುಕೊಳ್ಳುವನು,

" ತಂದೆ ನೀನು ತಾಯಿ ನೀನು, ಬಂಧು ನೀನು ಬಳಗ ನೀನು,
ನೀನಲ್ಲದೆ ಮತ್ತಾರು ಇಲ್ಲವಯ್ಯ ಕೂಡಲಸಂಗಮದೇವ,
ಹಾಲಲದ್ದು ನೀರಲದ್ದು "

" ನೀ ಹುಟ್ಟಿಸಿದಲ್ಲಿ ಹುಟ್ಟದೇ, ನೀ ಕೊಂದಲ್ಲಿ ಸಾಯದೇ
ಎನ್ನವಶವೇ ಅಯ್ಯಾ ?
ನೀವಿರಿಸಿದಲ್ಲಿರದೆ ಎನ್ನ ವಶವೇ ಅಯ್ಯಾ ?
ಅಕಟಕಟಾ ಎನ್ನವನೆನ್ನವನೆನ್ನಯ್ಯಾ ?
ಕೂಡಲಸಂಗಮದೇವಾ "

" ನೀನೊಲಿದರೆ ಕೊರಡು ಕೊನರುವದಯ್ಯಾ !
ನೀನೊಲಿದರೆ ಬರಡು ಹಯನಹುದಯ್ಯಾ
ನೀನೊಲಿದರೆ ವಿಷವೆಲ್ಲ ಅಮೃತವಹುದಯ್ಯಾ !
ನೀನೊಲಿದರೆ ಸಕಲ ಪಡಿಪದಾರ್ಥ ಇದಿರಲಿರ್ಪುದು
ಕೂಡಲಸಂಗಮದೇವಾ "

ಮುಂತಾದ ಬಸವಣ್ಣನವರ ವಚನಗಳಲ್ಲಿ ಕಾಣುವ ನೀ ನೀ ಎಂಬ ಪದವು ಭಕ್ತಿಯ ದ್ಯೋತಕವಾಗಿದೆ.

" ಆನೆಂದೆಂಬುದು ಕರ್ಮಕಾಂಡಮತಂ ...
ಸಮಸ್ತಕರಣಂ ಕರ್ತವ್ಯಮುಂ ಕರ್ತೃವುಂ
ನೀನೇ ಎಂಬುದು ಭಕ್ತಿಕಾಂಡ ಮತಂ "

ಆನೆಂದೆಂಬುದು ಕರ್ಮಕಾಂಡವು ಎಲ್ಲವೂ ನೀನೇ ಎಂಬುದು ಭಕ್ತಿ ಕಾಂಡವು ಎಂ ಮುಗ್ಗೆಯಮಾಯಿದೇವರು ಹೇಳುವರು.

" ಭಕ್ತಿರ್ಮಹತ್ತರಾಶುದ್ಧಾ ಸುಸೂಕ್ಷ್ಮಾ ಶೋಭನಾಪರಾ ।
ಸಚ್ಚಿದಾನಂದರೂಪಾ ಸ್ಯಾದ್ಭಕ್ತಿ ಮುಕ್ತಿ ಫಲಪ್ರದಾ ॥
ಅಧೋಮುಖೀಭವೇಚ್ಛಕ್ತಿಃ ಭಕ್ತಿರೂರ್ಧ್ವಮುಖೀ ಭವೇತ್ "

" ಭಕ್ತೇರಸಾಧ್ಯಂ ನಹಿ ಕಿಂಚಿದಸ್ತಿ "
" ಮೋಕ್ಷಕಾರಣ ಸಾಮಗ್ರ್ಯಾಂ ಭಕ್ತಿರೇವ ಗರೀಯಸೀ "
" ನಂಬಿ ಕರೆದೊಡೆ ಓ ಎನ್ನನೇ ಶಿವನು,
" ನಾದಪ್ರಿಯನಲ್ಲ, ವೇದಪ್ರಿಯನಲ್ಲ, ಭಕ್ತಿಪ್ರಿಯನು "

ಮುಂತಾದ ಸೂಕ್ತಿಗಳು ಭಕ್ತಿಯ ವೈಭವವನ್ನು ಎತ್ತಿ ಹೇಳುತ್ತವೆ. ಅನನ್ಯ ಭಾವನೆಯಿಂ ದೇವನನ್ನು ಆರಾಧಿಸಿದರೆ ಜೀವನದ ತುಂಬ ಸುಖ ಶಾಂತಿಗಳು ತುಂಬಿ ತುಳುಕುವವು

ಕರ್ಮಯೋಗ, ಹಠಯೋಗ, ರಾಜಯೋಗ, ಜ್ಞಾನಯೋಗ ಮುಂತಾದ ಯೋಗಗಳು ದೈಹಿಕ, ಬೌದ್ಧಿಕ, ಮಾನಸಿಕ, ಮೊದಲಾದ ವೈವಿಧ್ಯಮಯ ಉಪದ್ರವಗಳಿಂದಲೂ ವಿಶಿಷ್ಟ ಕಟ್ಟುಕರಾರುಗಳಿಂದಲೂ, ನಿಷ್ಠುರ ನಿಯಮನಿರ್ಬಂಧಗಳಿಂದಲೂ ತುಂಬಿಕೊಂಡಿವೆ. ಆದಕ್ಕಾಗಿಯೇ ಅವು ಸೋಪದ್ರವಯೋಗಗಳೆಂದೂ, "ಭಕ್ತಿಯೋಗೋ ನಿರುಪದ್ರವಃ" ಎಂಬುಕ್ತಿಯಂತೆ ಭಕ್ತಿಯೋಗವು ನಿರುಪದ್ರವಯೋಗವೆಂದು ಹೇಳಲ್ಪಟ್ಟಿದೆ.

ಸಕಲದುಃಖ ನಿವೃತ್ತಿ, ನಿತ್ಯಾನಂದ ಪದಪ್ರಾಪ್ತಿರೂಪ ಮುಕ್ತಿಮಂದಿರದ ಬಾಗಿಲಲ್ಲಿ ಕರ್ಮ, ಜ್ಞಾನ, ಭಕ್ತಿ ಎಂಬ ಮೂರು ಮಂದಿ ದ್ವಾರಪಾಲಕರು ನಿಂತಿರುವರು. ಈ ಮೂವರಲ್ಲಿ ಕರ್ಮ ಜ್ಞಾನಗಳು ನಪುಂಸಕ ಲಿಂಗವಿದ್ದು ಭಕ್ತಿಯು ಜಾಣೆಯಾದ ಸ್ತ್ರೀಯೆಂದೂ ಹೇಳಲ್ಪಟ್ಟಿದೆ. ಸಂಸ್ಕೃತ ಭಾಷೆಯಲ್ಲಿ ಕರ್ಮ, ಜ್ಞಾನ ಎಂಬ ಪದಗಳು ನಪುಂಸಕ ಲಿಂಗಗಳಾಗಿದ್ದು ಭಕ್ತಿ ಎಂಬಪದವು ಸ್ತ್ರೀಲಿಂಗವಿದೆ. ನಪುಂಸಕರಾದ ಕರ್ಮಜ್ಞಾನ ಎಂಬ ದ್ವಾರಪಾಲಕರನ್ನು ಆಶ್ರಯಿಸದೇ ಭಕ್ತಿದೇವಿ ಎಂಬ ಜಾಣೆಯಾದ ದ್ವಾರಪಾಲಿಕೆಯನ್ನು ಆಶ್ರಯಿಸಿದರೆ ಮುಕ್ತಿಮಂದಿರದ ಒಳಗೆ ಪ್ರವೇಶ ಮಾಡಲುಬಹಳೇ ಅನುಕೂಲವಾಗುವದು.

ಭೋರ್ಗರೆದು ಹರಿವ ಭಕ್ತಿಪ್ರವಾಹದ ಪ್ರಚಂಡ ಪ್ರವಾಹದಲ್ಲಿ ವಿಧಿನಿಷೇಧಗಳೆಲ್ಲ ಕೊಚ್ಚಿಕೊಂಡು ಹೋಗಿ ಪರಿಶುದ್ಧ ಪ್ರೇಮವೊಂದೇ ಸುಸ್ಪಷ್ಟವಾಗಿ ತೋರುವದು. ಶಿವಭಕ್ತಿಯಲ್ಲಿ ಸುಕೃತಗಳನ್ನು ದುಷ್ಕೃತ್ಯಗಳನ್ನಾಗಿಯೂ, ದುಷ್ಕೃತ್ಯಗಳನ್ನು ಸುಕೃತ್ಯಗಳನ್ನಾಗಿಯೂ ಮಾರ್ಪಡಿಸುವ ಅತ್ಯದ್ಭುತ ಸಾಮರ್ಥ್ಯವಿರುವದು.

ಶಿವಭಕ್ತಿಯಿಲ್ಲದೆ ಶಾಸ್ತ್ರೋಕ್ತ ಪುಣ್ಯಕಾರ್ಯಗಳನ್ನು ವಿಧಿಪೂರ್ವಕವಾಗಿ ಮಾಡಿದರೂ ಅವು ಪುಣ್ಯಕಾರ್ಯಗಳೆನಿಸದೆ ಪಾಪಕರ್ಮಗಳೆನಿಸಿ ದುಃಖವನ್ನೇ ಕೊಡುವವು. ದಕ್ಷಬ್ರಹ್ಮನು ಶಿವಭಕ್ತಿಯಿಲ್ಲದೆ ಯಜ್ಞರೂಪ ಸತ್ಕರ್ಮವನ್ನು ಮಾಡಿದರೂ ಅವನು ಮಾಡಿದ ಸತ್ಕರ್ಮದಿಂದ ಸುಖವನ್ನು ಪಡೆಯದೇ ತನ್ನ ತಲೆಯನ್ನೇ ಕಳೆದು ಕೋತಿನ ತಲೆಯನ್ನು ಹಚ್ಚಿಕೊಳ್ಳುವ ದುರಂತ ಪ್ರಸಂಗವು ಬಂದೊದಗಿತು. ಇದೇ ಅಭಿಪ್ರಾಯವನ್ನು ಜಗದ್ಗುರು ರೇಣುಕರು ಸಿದ್ಧಾಂತ ಶಿಖಾಮಣಿಯಲ್ಲಿ–

"ಶಿವಭಕ್ತಿ ವಿಹೀನಸ್ಯ ಸುಕೃತಂಚಾಪಿ ನಿಷ್ಫಲಂ ।  
ವಿಪರೀತ ಫಲಂಚಾಸ್ಯ ದಕ್ಷಸ್ಯಾಪಿಮಹಾಧ್ವರೇ ॥

ಎಂದು ಹೇಳಿದ ಶ್ಲೋಕದಿಂದ ತಿಳಿದುಬರುವದು. ಇದೇ ಪ್ರಕಾರ ಶಿವಭಕ್ತಿಯಿಂದ ಕೂಡಿಕೊಂಡು ಪಾಪಕರ್ಮವನ್ನು ಮಾಡಿದರೂ ಅದು ಪುಣ್ಯದಂತೆ ಸತ್ಫಲವನ್ನು ಕೊಡುವದು. ಚಂಡೇಶನು ಶಿವಭಕ್ತಿಯಿಂದ ಉಸುಕಿನ ಹಿಕ್ಕೆಯನ್ನೇ ಲಿಂಗವೆಂದು ನಂಬಿ ಪೂಜೆ ಮಾಡುವಾಗ ಅವನ ತಂದೆಯು ಅದನ್ನು ಕಾಲಿನಿಂದೊದೆಯಲು ಚಂಡೇಶನು ಶಿವನ ಮೇಲಿನ ನಿಷ್ಠೆಯಿಂದ ತಂದೆಯ ಕಾಲನ್ನೇ ಕತ್ತರಿಸಿಹಾಕಿದನು. ಆದರೂ ಶಿವನು ಚಂಡೇಶನ ಭಕ್ತಿಗೆ ಮೆಚ್ಚಿ ತಂದೆಯನ್ನೂ [illegible] ಕೈಲಾಸಕ್ಕೆ ಕರೆದೊಯ್ದನಂತೆ. ಇಲ್ಲಿ ಶಿವಭಕ್ತಿಯಿಂದ

ಮಾಡಿದ ಪಿತೃಹತ್ಯಾರೂಪ ಮಹಾಪಾತಕವೂ ಪುಣ್ಯಕಾರ್ಯವಾಗಿ ಪರಿಣಮಿಸಿತು. ಈ ಅಭಿಪ್ರಾಯವನ್ನೇ ಜಗದ್ಗುರು ರೇಣುಕರು–

" ಅತ್ಯಂತ ಪಾಪ ಕರ್ಮಾಪಿ ಶಿವಭಕ್ತ್ಯಾ ವಿಶುದ್ಧ್ಯತಿ ।
ಚಂಡೋಯಥಾಪರಾ ಭಕ್ತ್ಯಾ ಪಿತೃಹಾಪಿ ಶಿವೋಭವೇತ್ " ॥

ಎಂಬ ಶ್ಲೋಕದಿಂದ ಹೇಳಿರುವರು.

ಬೇಡರ ಕಣ್ಣಪ್ಪನು ಬಾಯಿಯಲ್ಲಿ ತಂದು ಲಿಂಗದ ಮೇಲೆ ಉಗುಳಿದ ನೀರೇ ಪಂಚಾಮೃತಾಭಿಷೇಕವಾಯಿತು. ಸವಿ ನೋಡಿ ತಿಂದು ತಂದಿಟ್ಟ ಉಚ್ಛಿಷ್ಟ ಮಾಂಸವೇ ಮಹಾನೈವೇದ್ಯವಾಯಿತು, ಇದೆಲ್ಲವೂ ಅನನ್ಯ ಸಹಜ ಭಕ್ತಿಯ ಮಾಹತ್ವವಾಗಿದೆ. ಅಂತೆಯೇ ಹಂಗ್ಗಯ್ಯ ಮಾಯಿದೇವರು–

" ಏನೆನಲುಂಟು ಭಕ್ತಿಯ ಮಹಾತ್ಮೆಯಂ ।
ಯೋಗಪದದಿಂದುಪರಿಷ್ಠವೆನಿಪ್ಪ ಭಕ್ತಿ ಸೌ ।
ಖ್ಯಾನುಭವೈಕ ನಿಷ್ಕಳ ಪದಕ್ಕೆಣೆಯಾವಪದಂ ? "

ಶಿವಭಕ್ತಿ ಪದಕ್ಕೆ ಬೇರೆ ಯಾವ ಪದವಿಗಳೂ ಸಾಟಿಯಾಗವು ಎಂದು ಶತಕತ್ರಯದಲ್ಲಿ ಹೇಳಿರುವದಲ್ಲದೆ ತಮ್ಮ ಅನುಭವಸೂತ್ರದಲ್ಲಿ–

" ಪಂಚಮಃ ಪುರುಷಾರ್ಥೋಹಿ ಭಕ್ತಿಃ ಶೈವೀಸನಾತನೀ ।
ಮೋಕ್ಷಾದುಪರಿ ಶಾಂಭವೀ ॥
ಯೋಗೇನತು ಪರಾಭಕ್ತಿರಿತಿ ಭಕ್ತೇಸ್ತು ವೈಭವಂ "

ಎಂದು ಭಕ್ತಿಯ ಸರ್ವಶ್ರೇಷ್ಠತೆಯನ್ನು ಹೇಳಿ ಈ ಭಕ್ತಿಯೇ ಭಕ್ತಾದಿ ಐಕ್ಯಾಂತ ಷಟ್‌ಸ್ಥಲಗಳನ್ನಾಶ್ರಯಿಸಿ ಶ್ರದ್ಧೆ, ನಿಷ್ಠೆ, ಅವಧಾನ ಮೊದಲಾದ ಅಭಿದಾನಗಳನ್ನು ಹೊಂದಿ ಸಾಮರಸ್ಯದಲ್ಲಿ ಪರ್ಯವಸಾನ ಹೊಂದುವದೆಂದು ಹೇಳಿರುವರು.

" ಪೂಜ್ಯೇಷ್ಟನುರಾಗೋ ಭಕ್ತಿಃ "
" ಆವಕಾಲದೊಳು ಬಳಿಕಾವ ದೇಶದೊಳು ಬೇರಾವ ವಸ್ತು
ವಿನೊಳಿಡೆವರಿಯದತಿ ಮಮತೆ ।
ಆವಪರಿಯೊಳು ತನ್ನ ಮೇಲಿರ್ಪುದೋ ಅಂತೆ ಗುರು
ದೇವತೆಯೊಳಗನುರಾಗವಿಹುದೆ ನಿಜಭಕ್ತಿ "

ಎಂದು ಮುಂತಾಗಿ ಅನೇಕ ಮಹನಿಯರು ಭಕ್ತಿಯ ವ್ಯಾಖ್ಯೆಯನ್ನು ಮಾಡಿರುವರು. ಈ ಭಕ್ತಿಯನ್ನು ಪರಾ–ಅಪರಾ ಎಂದು, ಸಕಾಮ–ನಿಷ್ಕಾಮ ಎಂದು, ದ್ವೈತ–ಅದ್ವೈತವೆಂದು ಎರಡು ಪ್ರಕಾರವಾಗಿಯೂ, ಸಾತ್ವಿಕ, ರಾಜಸ, ತಾಮಸ ಎಂದು ಮೂರು ಪ್ರಕಾರವಾಗಿಯೂ, ಮಾತೃಭಕ್ತಿ, ಪಿತೃ ಭಕ್ತಿ, ಪುತ್ರಭಕ್ತಿ, ಮಿತ್ರಭಕ್ತಿ, ಪತಿಭಕ್ತಿ ಎಂದು ಐದು ವಿಧವಾಗಿಯೂ, ಶ್ರದ್ಧಾ ನಿಷ್ಠಾ, ಅವಧಾನ, ಅನುಭವ, ಆನಂದ, ಸಮರಸ ಎಂದು ಆರು ಪ್ರಕಾರವಾಗಿಯೂ, ಮತ್ತು ಶ್ರವಣ ಮೊದಲ್ಗೊಂಡು ಆತ್ಮನಿವೇದನ ಪರ್ಯಂತ

ಒಂಭತ್ತು ವಿಧವೆಂದೂ ವಿಂಗಡಿಸುವರು. ಶಿವಾದ್ವೈತ ಸಿದ್ಧಾಂತದಲ್ಲಿ ಶರಣನೇ ಸತಿ ಲಿಂಗವೇ ಪತಿ ಎಂಬ ಪತಿಭಕ್ತಿಗೆ ಪ್ರಾಶಸ್ತ್ಯವಿದ್ದು, ಆ ಬಗ್ಗೆ ಅನೇಕ ಪ್ರಮಾಣ ವಚನಗಳು ಶಿವಸಾಹಿತ್ಯದಲ್ಲಿ ದೊರೆಯುತ್ತವೆ.

" ಪತಿಗಾತ್ಮಾರ್ಪಣಂ ಸಮಸ್ತ ವಿಧದಿಂ ಮಾಡಿ ಸ್ವಭರ್ತೃಪ್ರಸ ।
ನ್ನತೆಯಂತಾಂ ಪಡೆದಿರ್ದ ಶತ್ಸತಿಯ ಕಾಮಕ್ರೋಧ ಲೋಭಾದಿಸಂ ।
ಗತಿಯಾತಂಗೆ ಸದಾಪ್ರಮೋದಕರಮಾಗಿರ್ಪಂತೆ ಸದ್ಭಕ್ತನ ।
ಸ್ಥಿತಿ ಲಿಂಗಕ್ಕೆ ಮಹಾಪ್ರಿಯಂ ಹಲವು ಮಾತಿನ್ನೇಂ ಶಿವಾವಲ್ಲಭಾ ।"

ಸಕಲ ವಿಧದಿಂದಲೂ ತನ್ನನ್ನು ತನ್ನಪತಿಗೆ ಅರ್ಪಣಮಾಡಿಕೊಂಡು ಆ ಪತಿಯ ಪ್ರಸನ್ನತೆಯನ್ನು ಪಡೆದುಕೊಂಡಿರುವ ಸತಿಯ ಕಾಮಕ್ರೋಧಾದಿಗಳ ವ್ಯಾಪಾರವು ತತ್ಪತಿಗೆ ಯಾವಾಗಲೂ ಸಂತೋಷಪ್ರದವಾಗಿರುವಂತೆ ಶಿವಶರಣನ ಸ್ಥಿತಿಯು ಯಾವ ಬಗೆಯಿಂದಿದ್ದರೂ ಅದು ಶರಣನ ಪತಿಯಾದ ಶಿವಲಿಂಗಕ್ಕೆ ಅತ್ಯಂತಪ್ರಿಯವಾಗಿರುವದು ಎಂಬ ಮಾಯಿದೇವರ ಶತಕ ಪ್ರಬಂಧದಲ್ಲಿಯ ಶ್ಲೋಕವು ಶರಣಸತಿಯು, ಲಿಂಗಪತಿಯು ಭಾವವನ್ನೇ ಅಭಿವ್ಯಕ್ತಮಾಡುತ್ತದೆ.

ಬ್ರಹ್ಮಾನಂದದ ಮೀಮಾಂಸೆಯನ್ನು ಮಾಡುವಾಗ ಉಪನಿಷತ್ಕಾರರು ರತಿಸುಖದ ಹೋಲಿಕೆಯನ್ನು ಕೊಟ್ಟು ಆತ್ಮಾನಂದದ ಮೇಲ್ಮೆಯನ್ನು ತಿಳಿಸಿಕೊಟ್ಟಂತೆ ಮಗ್ಗೆಯ ಮಾಯಿದೇವರು ಅನನ್ಯಭಕ್ತಿಯ ವೈಖರಿಯನ್ನು ಹೇಳುವಾಗ–

" ಪ್ರಿಯತಮೆಯೊಪ್ಪಜಾಯೆ ನಿಜವಲ್ಲಭನಂ ರತಿಕೇಳಿಯೊಳ್ ಮನಂ ।
ಬಯಸಿದ ಹಾಗೆ ತರ್ಜನ ವಿಡಂಬನ, ಗರ್ಹಣ ತಾಡನಾದಿಯಂ ॥
ನಯಿಸಲದೇಂ ವಿರೋಧಮೊ ಸುಖಾಸ್ಪದಮೋ ಶರಣಂ ಸ್ವಕೀಯಲಿಂ
ಗಯುಜನದಲ್ಲಿ ಲೀಲೆ ವಿಡಿದೇನನೊಡರ್ಚಿದೊಡೇಂ ಶಿವಾಧವಾ " ॥

ಎಂದು ರತಿ ಕ್ರೀಡೆಯ ದೃಷ್ಟಾಂತಕೊಟ್ಟು ಹೇಳಿರುವರು.

ಪ್ರಿಯಾ, ಪ್ರಿಯತರಾ, ಪ್ರಿಯತಮಾ ಇವರಲ್ಲಿ ಪ್ರಿಯತಮೆ ಬಹಳ ಅಚ್ಚುಮೆಚ್ಚಿನವಳು. ಈ ಅಚ್ಚುಮೆಚ್ಚಿನ ಮಡದಿಯು ರತಿಕ್ರೀಡೆಯಲ್ಲಿ ತನ್ನ ಪತಿಯನ್ನು ಮನಬಂದಂತೆ ಹೆದರಿಸುವದು, ಅಣಕಿಸುವದು, ನಿಂದಿಸುವದು, ಮೊದಲಾದವುಗಳನ್ನು ಮಾಡಿದರೂ ಅವು ಆ ನಲ್ಲನ ಒಲುಮೆಗೆ ಕಾರಣವಾಗುವವಲ್ಲದೇ ಅವುಗಳಿಂದ ವಿರೋಧವುಂಟಾಗುವದೇ ? ಹಾಗೆಯೇ ಲಿಂಗವೇ ಪತಿಯೆಂದು ಭಾವಿಸಿದ ಶರಣನು ತನ್ನ ಲಿಂಗಾರ್ಚನೆಯಲ್ಲಿ ಏನು ಮಾಡಿದರೂ ಆ ಕೃತಿಗಳೆಲ್ಲವೂ ಶಿವಲಿಂಗಮೂರ್ತಿಯ ಮೆಚ್ಚುಗೆಯನ್ನೇ ಪಡೆಯುತ್ತವೆ.

ಮೇಲೆ ಹೇಳಿದ ಅನೇಕ ಸೌಕರ್ಯ, ಸೌಲಭ್ಯಗಳಿಲ್ಲದ ಕರ್ಮಕಾಂಡ ಜ್ಞಾನಕಾಂಡಗಳಿಗಿಂತಲೂ ಅನೇಕ ಸೌಲಭ್ಯ, ಸೌಕರ್ಯಗಳುಳ್ಳ ಭಕ್ತಿಕಾಂಡವೇ ಸರ್ವೋತ್ಕೃಷ್ಟವಾದುದು ಎಂದು ತಿಳಿದು ಬರುವದು.

ಲಕ್ಷಿಸುವೊಡೆಂಬತ್ತುನಾಲಕು ।
ಲಕ್ಷ ದೇಹಿಗಳೊಳಗೆ ಮಾನವ ।
ಪಕ್ಷದೇಹಿಯೆ ಸಕಲ ಕರ್ಮಕೆ ಕರ್ತನಾಗಿಹನು ॥
ಮೋಕ್ಷ ಸಾಧಕರಾದವರುಗಳು ।
ಪೇಕ್ಷಿಸದೆ ಸರ್ವೇಂದ್ರಿಯಂಗಳ ।
ಶಿಕ್ಷಿಸಲು ಸುಖಿಯಪ್ಪರೈರಾಮಯ್ಯ ಕೇಳೆಂದ ॥

ಕ್ರಿಮಿ, ಕೀಟ, ಪಶು, ಪಕ್ಷಿ ಮೊದಲಾದ ಎಂಭತ್ನಾಲ್ಕುಲಕ್ಷ ಜೀವರಾಶಿಯಲ್ಲಿ ಮಾನವ ದೇಹವೇ ಅತಿ ಶ್ರೇಷ್ಠವಾದದ್ದು.

" ದುರ್ಲಭೋ ಮಾನುಷೋ ದೇಹಃ " " ನರತ್ವಂದುರ್ಲಭಂಲೋಕೇ, ಮುಂತಾದ ಸೂಕ್ತಿಗಳು ಮಾನವ ಜನ್ಮದ ಮಹತಿಯನ್ನು ಸಾರಿ ಹೇಳುತ್ತವೆ. ಯಾಕೆಂದು ಕರ್ಮ ಲೋಕಕ್ಕೆ ವಿವೇಕಿಯಾದ ಮಾನವನು ಬಂದು ಅಲ್ಪಸುಖಕ್ಕೆ ಮರುಳಾಗದೆ ದೇಹೇಂದ್ರಿಯ ಕರಣಾದಿಗಳನ್ನು ನಿಗ್ರಹ ಮಾಡಿ ಅವುಗಳ ಶಾಸ್ತ್ರೋಕ್ತ ಸತ್ಕ್ರಿಯೆಗಳಲ್ಲಿ ತೊಡಗಿಸಿ ಜೀವನದ ಪರಮೋಚ್ಚಧ್ಯೇಯವೆನಿಸಿದ ಮುಕ್ತಿಸುಖವನ್ನು ಪಡೆಯಲು ಹವಣಿಸುವನು. ಪರ್ವತಗಳಲ್ಲಿ ಹಿಮಾಲಯವು, ನದಿಗಳಲ್ಲಿ ಗಂಗೆಯು, ಲೋಹಗಳಲ್ಲಿ ಚಿನ್ನವು, ಜ್ಯೋತಿಗಳಲ್ಲಿ ಭಾಸ್ಕರನು ಮೇಲೆನಿಸಿ ಮೆರೆಯುವಂತೆ ಜೀವರಾಶಿಯಲ್ಲಿ ಮಾನವಜನ್ಮವು ಅತ್ಯಂತಶ್ರೇಷ್ಠವಾದುದು.

ಕಾವ್ಯ ಕರ್ತೃವಾದ ಚಾಮರಸನೇ ಈ ಕಾವ್ಯದ ದ್ವಿತೀಯ ಗತಿಯಲ್ಲಿ ಕರ್ಮಭೂಮಿ ಭೋಗಭೂಮಿ, ಕರ್ಮತನು, ಭೋಗತನು ಎಂದು, ಭೂಮಿ–ತನುಗಳಲ್ಲಿ ಭೇದ ಮಾಡಿ ತೋರಿಸಿರುವನು. ಕರ್ಮತನು, ಭೋಗತನು, ಕರ್ಮಭೂಮಿ, ಭೋಗಭೂಮಿ ಎಂಬ ಪದಗಳ ಹಿಂದಿರುವ ಕರ್ಮ, ಭೋಗ ಎಂಬ ವಿಶೇಷಣ ಪದಗಳು ಅತೀಮಹತ್ವದ್ದು ಕರ್ಮವೆಂದರೆ ಕೆಲಸ. ಕರ್ಮತನು ಅಂದರೆ ಯಾವುದಾದರೊಂದು ಕೆಲಸ ಮಾಡುವ ತನು ಎಂದರ್ಥ. ದೈಹಿಕ, ಬೌದ್ಧಿಕ, ಮಾನಸಿಕ, ಸಾಂಸ್ಕೃತಿಕ, ಸಾಹಿತ್ತಿಕ ಸತ್ಕೃತಿಗಳನ್ನು ಮಾಡುತ್ತಲೇ ನೂರುವರುಷ ಬಾಳಬೇಕು, ಸೋಮಾರಿಗಳಾಗಿ, ವ್ಯಸನಿಗಳಾಗಿ ಹೆಂಬೇಡಿಗಳಾಗಿ ಕೈಕಟ್ಟಿಕೊಂಡು ಕೂಡಬಾರದು ಎಂಬರ್ಥದ–

" ಕುರ್ವನ್ನೇವೇಹ ಕರ್ಮಾಣಿಜಿಜೀವಿಷೇತ್ ಶತಂ ಸಮಾಃ "

ಈ ಮಂತ್ರವು ಈಶಾವಾಸೋಪನಿಷತ್ತಿನಲ್ಲಿದೆ. ಕರ್ಮಭೂಮಿ ಅಂದರೆ ವಿವಿಧ ಕರ್ಮ ಗಳನ್ನು ಮಾಡಲಿಕ್ಕೆ ಆಶ್ರಯವಾದ ಭೂಮಿ, ಮೃತ್ಯುಲೋಕ ಎಂದರ್ಥವಾಗುವದು. ಕ್ರಿಯಾಮಥನವಿಲ್ಲದೆ ಭೂಮಿಯೊಳಗಿನ ನೀರು ದೊರೆಯುವದೇ ? ಕ್ರಿಯಾಮಥನವಿಲ್ಲದೆ ಸಾಗರದೊಳಗಿನ ಮುತ್ತು ದೊರೆವುದೇ ? ಕ್ರಿಯಾಮಥನವಿಲ್ಲದೆ ನೀರೊಳಗಿನ ವಿದ್ಯುತ್ ಲಭಿಸುವದೇ ? ಮುಂತಾದ ಸೂಕ್ತಿಗಳು ಕರ್ಮದ ಪ್ರಾಶಸ್ತ್ಯವನ್ನೇ ಉದಾಹರಿಸುತ್ತವೆ. ಭೋಗತನು ಅಂದರೆ ಹಿಂದೆ ಮಾಡಿದ ಸತ್ಕರ್ಮಗಳ ಸುಖವನ್ನು ಅನುಭವಿಸುವ ತನು ಏನೊಂದೂ ಕೆಲಸ ಮಾಡದೆ ಕುಳಿತಲ್ಲೇ ವೇತನತಕ್ಕೊಳ್ಳುವ ನಿವೃತ್ತಶಿಕ್ಷಕನಂತೆ, ಏನು

ಕೆಲಸ ಮಾಡದೇ ಸುಖವನ್ನು ಅನುಭವಿಸುವದು. ಭೋಗಭೂಮಿ ಅಂದರೆ ಕುಳಿತು ಸುಖವನ್ನು ಅನುಭವಿಸುವ ತಾಣ. ಅದು ಭೋಗಭೂಮಿ ಎಂದು ಹೇಳಲ್ಪಡುವದು.

ಓರ್ವ ವೈಷ್ಣವ ಪಂಡಿತನು ಜೈನಧರ್ಮಕ್ಕೆ ಮಾರುಹೋಗಿ ಒಂದುಸಂಸ್ಕೃತ ಪ್ರಬಂಧವನ್ನು ಬರೆದಿದ್ದು ಅದರಲ್ಲಿ–

" ಅನೇಕ ಗುಣಯುಕ್ತಸ್ಯ ಕಾಯಸ್ಯೈಕೋ ಮಹಾಗುಣಃ ।
ಯೋಯಥಾ ವರ್ತಯತ್ಯೇನಂ ತಂತಥೈವಾನುವರ್ತತೇ " ॥

ಮಾನವ ಕಾಯವು ಬಹಳ ಶ್ರೇಷ್ಠವಾದದ್ದು. ಈ ಕಾಯವನ್ನು ಯಾರು ಯಾರು ಯಾವ ಯಾವ ಕಾರ್ಯಕ್ಕಾಗಿ ಉಪಯೋಗಿಸುವರೋ ಅವರಿಗೆ ಆಯಾರೀತಿ ಉಪಯೋಗಕ್ಕೆ ಬರುವದು. ಈ ಕಾಯದಿಂದಲೇ ಸತ್ಯಶುದ್ಧ ಕಾಯಕವನ್ನು ಮಾಡಿ ರಾಷ್ಟ್ರದ ಅಧಿನಾಯಕ ನಾಗಬಹುದು.

ಶಿವಜ್ಞಾನಪೂರ್ವಕ ಶಿವಪೂಜಾದಿ ಸತ್ಕ್ರಿಯೆಗಳನ್ನು ಮಾಡಿ ಶಿವಯೋಗಿ ಸಾರ್ವಭೌಮನಾಗಬಹುದು, ಕವಿಕುಲ ಲಲಾಮನಾಗಬಹುದು, ವಿಜ್ಞಾನಿಯಾಗಬಹುದು, ಯೋಗಸಾಧನೆ ಮಾಡಿ ವಜ್ರದೇಹಿಯಾಗಬಹುದು, ಅಣಿಮಾಸಿದ್ಧಿಯಿಂದ ಅಣುವಾಗಬಹುದು, ಗರಿಮಾ ಸಿದ್ಧಿಯಿಂದ ಬೃಹದಾಕಾರವನ್ನು ತಾಳಬಹುದು, ಲಘಿಮಾಸಿದ್ಧಿಯಿಂದ ಹಗುರಾಗಿ ಆಕಾಶದಲ್ಲಿ ಹಾರಾಡಬಹುದು, ಇದೆಲ್ಲವನ್ನೂ ಬಿಟ್ಟು ಅಜ್ಞಾನದಿಂದ ಮನಬಂದಂತೆ ಸ್ವೈರವೃತ್ತಿಯಿಂದ ಕೊಲೆ, ಸುಲಿಗೆ, ಕಳವು, ಹಾದರ, ಮೋಸಗಾರಿಕೆ, ಮೊದಲಾದ ಹೀನ ಕೃತ್ಯಗಳನ್ನು ಮಾಡಿ ಚಾಂಡಾಲನೆನಿಸಿಕೊಳ್ಳಬಹುದು.

ಕಣಕದಿಂದ ಆಗುವಷ್ಟು ಭೋಜನ ಸಾಮಗ್ರಿಗಳು ಮತ್ತಾವುದರಿಂದ ಆಗಲಾರವು. ಕಣಕವನ್ನು ಮಣೆಯ ಮೇಲಿಟ್ಟು ಲತ್ತಿಯ ಗುಣಿಯಿಂದ ಹಿಗ್ಗಿಸಿದರೆ ಚಪಾತಿಯೂ, ಒರಳಲ್ಲಿ ಹಾಕಿ ಕುಟ್ಟಿದರೆ, ಮಾಲದಿಯೂ, ಬೇಳೆಬೆಲ್ಲ ಕೂಡಿಸಿದರೆ ಹೋಳಿಗೆಯೂ, ಎಣ್ಣೆಯಲ್ಲಿ ಕರಿದರ ಪುರಿಯೂ, ಮಣೆಯ ಮೇಲಿಟ್ಟು ಹೊಸೆದರೆ ಶಾವಿಗೆಯೂ ಆಗುತ್ತವೆಂಬುದು ಲೋಕಪ್ರಸಿದ್ಧವಿದೆ.

ಓರ್ವ ಶತಮೂರ್ಖನು ಕಣಕದಿಂದ ಮಾಡಿದ ವಿವಿಧ ಭೋಜ್ಯಗಳನ್ನು ಸವಿಯದೇ ಹಸಿಯಾದ ಕಣಕವನ್ನೇ ನುಂಗಿಬಿಟ್ಟನಂತೆ. ಇದರಿಂದ ಹೊಟ್ಟೆಯುಬ್ಬಿ ಕಣ್ಣು ಬೆಳ್ಳಗೆ ಮಾಡಿ ಸಾವನ್ನಪ್ಪಿದನು. ಸವಿಯೂಟಕ್ಕೂ, ಸಾವಿಗೂ ಕಣಕವೇ ಕಾರಣವಾದರೂ ಆ ಕಣಕದ ಸದುಪಯೋಗ ಮತ್ತು ದುರುಪಯೋಗ ಮಾಡಿಕೊಳ್ಳುವಭೋಕ್ತೃವೇ ಆ ಉಭಯಕ್ಕೂ ಮುಖ್ಯಕಾರಣನು. ಕಣಕದಿಂದ ಮಾಡಿದ ಸವಿಯೂಟದಿಂದ ಸಂತೃಪ್ತಿಯನ್ನು ಹೊಂದುವಂತೆ ಹಸಿಯಾದ ಕಣಕ ತಿಂದು ಸಾಯಲೂಬಹುದು. ಹಾಗೆ ಕಾಯದಿಂದ ಲೋಕಹಿತದ ಕಾರ್ಯಗಳನ್ನು ಮಾಡಿ ಕೀರ್ತಿಯನ್ನು ಪಡೆಯುವಂತೆ ಅಲ್ಲಸಲ್ಲದ ಹೇಯಕೃತ್ಯಗಳನ್ನು ಮಾಡಿ ಅಪಕೀರ್ತಿಯನ್ನೂ ಪಡೆಯಬಹುದು.

" ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವತು ।
ಬುದ್ಧಿಂಚ ಸಾರಥಿಂವಿದ್ಧಿ .... "

ದೇಹವೇ ಒಂದು ರಥ,ಬುದ್ಧಿಯೇ ಸಾರಥಿಯು, ಆತ್ಮನೇ ರಥಾರೂಢನಾದ ಮಹಾಶಿವ ಎಂದು ಹೇಳಿದರೆ ಶಿವಾಗಮಗಳು–

" ದೇಹೋ ದೇವಾಲಯಃ ಪ್ರೋಕ್ತಃ ಸಜೀವಃ ಕೇವಲಶ್ಶಿವಃ "

ದೇಹವೇ ಗುಡಿಯು, ಜೀವನೇ ಶಿವನು ಎಂದು ಉದ್ಘೋಷಿಸುತ್ತವೆ. ನುಡಿದು ನಿಶ್ಶಬ್ದ ನಡೆದಃ ನಿರ್ಗಮನ, ನಿಂದರೂ ನೆಳಲಿಲ್ಲದ ವ್ಯೋಮಕಾಯನಾದ ಪ್ರಭುದೇವರು ಗುಡಿ ಗೋಪುರಗಳನ್ನು ಕಟ್ಟಿಸುತ್ತಿದ್ದ ಸಿದ್ಧರಾಮನ ಬಳಿಗೆ ಬಂದು —

" ದೇಹವೇ ದೇಗುಲವಾಗಿರಲು ಬೇರೆ ಮತ್ತೆ ದೇಗುಲ
ವೇತಕಯ್ಯಾ, ಪ್ರಾಣವೇ ಲಿಂಗವಾಗಿರಲು ಬೇರೆ
ಮತ್ತೆ ಲಿಂಗವೇತಕಯ್ಯಾ "

ಈ ದೇಹಕ್ಕೇನೇ ಗುಡಿಯ ಸಾಮ್ಯವನ್ನು, ಒಳಗಿರ್ಪ ಪ್ರಾಣಕ್ಕೆ ಲಿಂಗದ ಸಾಮ್ಯವನ್ನು ಕೊಟ್ಟು ಹೇಳುವದಲ್ಲದೆ ಇನ್ನೊಂದೆಡೆಯಲ್ಲಿ–

" ಕೊಟ್ಟ ಕುದುರೆಯನೇರಲರಿಯದೆ ಮತ್ತೊಂದು
ಬಯಸುವವರು ವೀರರೂಅಲ್ಲ ಧೀರರೂಅಲ್ಲ "

ಈ ದೇಹವು ಆತ್ಮನೆಂಬ ಶೂರ ಸರದಾರನು ಏರುವ ಕುದುರೆಯೆಂದು ಹೇಳಿರುವರು.

" ಉಳ್ಳವರು ಶಿವಾಲಯವ ಮಾಡುವರು ನಾನೇನು
ಮಾಡುವೆ ಬಡವನಯ್ಯ ಎನ್ನ ಕಾಲೇ ಕಂಭ.
ದೇಹವೇ ದೇಗುಲ, ಶಿರವೇ ಹೊಂಗಳಸವಯ್ಯಾ
ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ.

" ಎನ್ನ ಕಾಯವು ನಿನಗೆ ಉನ್ನತಾಲಯವಾಯ್ತು.
ಇನ್ನೆನಗೆ ಭಯವುಂಟೆ ಎಲೆ ಲಿಂಗವೇ ॥ "

ಕಾಲುಗಳೆಂಬ ಕಂಬಗಳಿಂದಲೂ, ಶಿರಸ್ಸು ಎಂಬ ಹೊಂಗಳಸದಿಂದಲೂ, ನಾಸಿಕವೆಂಬ ಧೂಪಾರತಿಯಿಂದಲೂ, ನಯನಗಳೆಂಬ ಜ್ಯೋತಿಯಿಂದಲೂ ಒಪ್ಪುವ ಈ ದೇಹವೆಂಬ ಗುಡಿಯು ಸ್ಥಾವರಗುಡಿಗಳಂತೆ ಒತ್ತಟ್ಟಿಗಿರದೆ ಚರದೇವಾಲಯವಾಗಿದೆ ಎಂದು ಈ ಬಸವೇಶ್ವರರೂ, ಆಧುನಿಕ ಓರ್ವ ಅನುಭಾವಿ ಮುಪ್ಪಿನ ಷಡಕ್ಷರಿಗಳೂ ಹೃದಯಂಗಮ ವಾಗಿ ಹೇಳಿರುವರು.

ಈ ದೇಹವು ಸುಂದರ ಲತೆಯೆಂದೂ ಆ ಲತೆಯಲ್ಲಿ ಆಧಾರ ಸ್ವಾಧಿಷ್ಠಾನ ಮೊದಲಾದ ನವಚಕ್ರಗಳೆಂಬ ಕಮಲಗಳಿರುವವೆಂದೂ, ಆ ಕಮಲಗಳಲ್ಲಿ ಆಚಾರಲಿಂಗ ಗುರುಲಿಂಗ ಮೊದಲಾದ ನವಲಿಂಗಗಳೆಂಬ ದುಂಬಿಗಳು ಕುಳಿತು ಓಂಕಾರ ಧ್ವನಿಗೈಯುತ ದಿವ್ಯಾನಂದಾಮೃತ ಪಾನಮಾಡುವವೆಂದೂ ಮೈಲಾರದ ಬಸವಲಿಂಗ ಶರಣರು

" ಅಂಗದ ಲತೆ ಕಮಲಂಗಳೊಳಗೆ ನವಲಿಂಗ ತುಂಬಿ ।
ಮಂಗಲ ಘೋಷದೆ ಝೇಂಕರಿಸುತಲಿದೆ ಲಿಂಗತುಂಬಿ ।

ಎಂಬ ಪದ್ಯದಿಂದ ಹೇಳಿರುವರು.

" ತೇರು ಸಾಗಿತಮ್ಮ ನೋಡಿರೆ ಈ ದೇಹವೆಂಬ
ತೇರು ಸಾಗಿತಮ್ಮ ನೋಡಿರೆ ॥
ತೇರು ಸಾಗಿತಮ್ಮ ನೋಡಿ । ಸಾರಮುಕುತಿ ಸತಿಯರೆಲ್ಲ ।
ಪಾರಮಾರ್ಥ ತತ್ವದೊಳು ವಿಚಾರವೆಂಬ ಬೀದಿಯಲ್ಲಿ ॥ ಪ ॥

ಕಾಲ್ಗಳೆರಡು ಗಾಲಿಯಾಗಿವೆ । ಜಂಘಳದಕೆ ॥
ಕೀಲಿನಚ್ಚಿನಂತೆ ತೋರಿವೆ । ಈ ತೊಡೆಗಳೆರಡು ।
ಮೇಲು ಮುಖದ ಕಂಭವಾಗಿವೆ । ಆಧಾರ ಮುಖ್ಯ ।
ಏಳುಚಕ್ರವೆಸೆವತನ್ನೊ । ಳೇಳು ನೆಲೆಗಳಾಗಲದರ ।
ಮೇಲೆ ತೋರ್ಪ ಮಸ್ತಕವೆ । ಲೋಲರತ್ನ ಕಲಶವೆನಿಸಿ ॥

ಎಂದು ಸರ್ಪಭೂಷಣ ಶಿವಯೋಗಿಗಳೂ;

" ನೋಡಿರಮ್ಮ ಮೈಲಾರಲಿಂಗನ ಜಾತ್ರೆಯಾಗುತಿದೆ ।
ನಾಡಜನರಿಗೆ ತಿಳಿಯದು ಇದರ ಮರ್ಮಬೇರಿದೆ ॥
ಧರೆಯಾಕಾಶಕೆ ಮರಸೋಂಕದ ಘನತೇರು ಕಾಣುತಿದೆ ।
ಪರಕಿಸಿ ನೋಡಲು ನವನನೆಗಳ ಕೀಲೊಂದು ಕಾಣುತಿದೆ ।
ಹುರಿಗೂಡಿದ ಮಿಣಿ ಹತ್ತರಿಂದ ಬಿಗಿದೊಪ್ಪಿತೋರುತಿದೆ ।
ಗೊರವ ಮಂಡಲದತ್ತ ನೋಡಲುರೆ ಕಳಸವೆಸೆಯುತಿದೆ ॥ "

ಎಂದು ಮೈಲಾರ ಬಸವಲಿಂಗಶರಣರೂ ದೇಹಕ್ಕೆ ತೇರಿನ ಸಾಮ್ಯವನ್ನು ಕೊಟ್ಟು ಮಾರ್ಮಿಕವಾಗಿ ಹಾಡಿರುವರು.

ಪ್ರಪಂಚದಲ್ಲಿ ಲೆಕ್ಕವಿಲ್ಲದಷ್ಟು ಜಾತ್ರೆಗಳು ನಡೆಯುತ್ತಿದ್ದು ಆಯಾ ಜಾತ್ರೆಗಳಲ್ಲಿ ತೇರನ್ನು ಎಳೆಯುವನು ಸುಪ್ರಸಿದ್ಧವಿದೆ. ತೇರನ್ನು ಸಿಂಗರಿಸಿ ಹೊಂಗಳಸವನ್ನಿಟ್ಟು ಮುಂಬದಿಗೆ ಹಗ್ಗಕಟ್ಟಿ ಸಾವಿರಾರು ಜನರು ಸಂಭ್ರಮದಿಂದ ಜಯ ಜಯಕಾರ ಮಾಡುತ್ತ ಎಳೆದು ಪಾದಗಟ್ಟೆಗೆ ಮುಟ್ಟಿಸಿ ಮಂಗಳಾರತಿ ಮಾಡಿ ತಿರುಗಿ ತಂದು ತೇರಿನ ಮನೆಯಲ್ಲಿ ಬಿಡುವರು. ಚಿತ್ರ ವಿಚಿತ್ರವಾದ ನಕ್ಷೆಗಳಿಂದ ಮಾಡಿದ ತೇರಿನ ವಿಚಾರ ಹೀಗಾದರೆ ದೇಹವೆಂಬ ತೇರಿನ ಐತಿಹ್ಯವು ವಿಲಕ್ಷಣವಾದುದು. ಕರ್ತಾರನ ಕಮ್ಮಟವೆನಿಸಿದ ಈ ಮರ್ತ್ಯದಲ್ಲಿ ಮಾನವ ಜೀವನಯಾತ್ರೆಯು–

" ಶತಾಯುರ್ವೈ ಪುರುಷಃ " " ಜೀವೇಮಶರದಶ್ಶತಂ "
" ನಂದಾಮ ಶರದಶ್ಶತಂ "

ಎಂಬ ಉಪನಿಷದುಕ್ತಿಯಂತೆ ನೂರುವರ್ಷದ್ದು. ಈ ಸುದೀರ್ಘಯಾತ್ರೆಯಲ್ಲಿ ಈ ದೇಹವೇ ಒಂದು ಎಳೆಯುವ ತೇರು. ಈ ತೇರಿಗೆ ಕಾಲುಗಳೇ ಎರಡು ಗಾಲಿಗಳು, ಶಿರಸ್ಸೇ ಒಂದು ಸುಂದರ ಕಳಸವು. ಶರೀರದ ಆಧಾರಾದಿ ನವಚಕ್ರಗಳಲ್ಲಿರುವ ಆಚಾರ ಲಿಂಗ ಗುರುಲಿಂಗ ಮೊದಲಾದ ನವಲಿಂಗಗಳಿಂದಲೂ " ಹೃದಿ ಹ್ಯೇಷ ಆತ್ಮಾ " ಎಂಬ ಉಪನಿಷದುಕ್ತಿಯಂತೆ ಹೃದಯ ಕಮಲದಲ್ಲಿರುವ ಈಶ್ವರನಿಂದಲೂ ಒಪ್ಪುವ ಈ ತೇರಿನ ಮುಂಬದಿಗೆ ಮಾತ್ರ ಹಗ್ಗ ಕಟ್ಟಿ ಎಳೆಯದೆ ತೇರಿನ ಹಿಂಬದಿಗೂ ಹಗ್ಗ ಕಟ್ಟಿ ಒಂದು ಕಡೆ ವಿವೇಕ, ವೈರಾಗ್ಯ, ಶಮ, ದಮ, ನಯ, ಜ್ಞಾನಾದಿಗಳು ಎಳೆದರೆ ಮತ್ತೊಂದು ಕಡೆಗೆ ಕಾಮ, ಕ್ರೋಧ, ಲೋಭ, ಮೋಹ, ದ್ವೇಷ, ರಾಗಾದಿಗಳನ್ನೂ ಹಿಡಿದು ಎಳೆಯುವರು. ಈ ಇಬ್ಬಣಗಳ ತಿಕ್ಕಾಟದಲ್ಲಿ ಸಿಕ್ಕ ತೇರು ಶಮ, ದಮ, ವೈರಾಗ್ಯಾದಿ ಪ್ರಜೆಗಳ ಕೈಯಲ್ಲಿ ಸಿಕ್ಕರೆ ಆ ತೇರು ಮುಕ್ತಿ ಮಂದಿರಕ್ಕೆ ಹೀಗಾಗದೇ ಕಾಮ. ಕ್ರೋಧ, ಲೋಭ, ಮೋಹಾದಿ ಪ್ರಜೆಗಳ ಕೈವಶವಾದರೆ ಆ ತೇರು ನರಕ ಕುಂಡದಲ್ಲಿ ಬೀಳುವದು. ಲೌಕಿಕದಲ್ಲಿ ಎಳೆದ ತೇರು ಪಾದಗಟ್ಟೆಯನ್ನು ಮುಟ್ಟಿ ತಿರುಗಿ ಸ್ವಸ್ಥಾನಕ್ಕೆ ಬರುವಂತೆ ಈ ತೇರು ಮರಳಿಬಾರದು.

ಸರ್ಪಭೂಷಣ ಶಿವಯೋಗೀಶ್ವರರು ತಮ್ಮ ಕೈವಲ್ಯಕಲ್ಪವಲ್ಲರಿಯೊಳಗೆ —

" ಶ್ರೀ ಗಿರಿಯ ಸುಕ್ಷೇತ್ರಕಿಂದು ಹೋಗಿ ಯಾತ್ರೆಯ ಮಾಡಿಬಂದೆ।
ಶ್ರೀ ಗಿರಿಯು ಶರೀರದೊಳಗುಂಟು । ಓಂ ಶ್ರೀ ಗುರುಸಿದ್ಧ
ಯೋಗಿ ಜನರಿಗೆ ಮರ್ಮ ಬೇರುಂಟು ।
ಆರು ಬೆಟ್ಟವದಾಂಟಿನಡೆದು । ಮೂರು ಕೊಳ್ಳದ ಮೂಲಕಿಳಿದು।
ಸೇರಿದೆನು ಕೈಲಾಸದ್ವಾರವ ಓಂ ಶ್ರೀ ಗುರು ಸಿದ್ಧ ।
ಸಾರಿಬಡಗಲ ಗುಡಿಯ ಕಂಡೆನು । "

ಎಂಬ ಹಾಡಿನಲ್ಲಿ ಈ ಮಾನವ ದೇಹವನ್ನೇ ಶ್ರೀಶೈಲಪರ್ವತಕ್ಕೆ ಹೋಲಿಸಿ ತಾತ್ವಿಕವಾಗಿ ಹಾಡಿರುವರು,

ಷಟ್‌ಸ್ಥಲ ಚಕ್ರವರ್ತಿಯಾದ ಚನ್ನ ಬಸವಣ್ಣನವರು —

" ಈ ಕಾಯವೆಂಬ ಪಟ್ಟಣದೊಳಗೆ ಮನವೆಂಬರಸು, ತ್ರಿಕರಣವೆಂಬ
ಪ್ರಧಾನಿ, ವಶೀಕರಣವೆಂಬ ಶಾನುಭೋಗ "

ಎಂಬ ವಚನದಲ್ಲಿ ಈ ಮಾನವ ದೇಹಕ್ಕೆ ಪಟ್ಟಣದ ಸಾದೃಶ್ಯಕೊಟ್ಟು ಹೇಳಿರುವರು.

" ದೇಹವೆಂಬ ಅರಮನೆಯಲ್ಲಿ ಮಹಾಘನಲಿಂಗವೆಂಬ
ಅರಸು, ಮನವೆಂಬ ಸಿಂಹಾಸನದ ಮೇಲೆ ಮೂರ್ತಿಗೊಂಡು
ಅಂತಃಕರಣಗಳೆಂಬ ಪರಿಚಾರಕರ ಕೈಯಿಂದ, ಪಂಚೇಂದ್ರಿ
ಗಳೆಂಬ ಪದಾರ್ಥಂಗಳನು ಎಡೆಮಾಡಿಸಿಕೊಂಡು ಸವಿಯುತ್ತಾ,
ಆನಂದವೇ ಮೂರ್ತಿಯಾಗಿರ್ದ ಕಾಣಾ ಉರಿಲಿಂಗಪೆದ್ದಿ ಪ್ರಿಯ
ವಿಶ್ವೇಶ್ವರಾ "

ವಿಶ್ವಚಕ್ರಾಧಿಪತಿಯಾದ ಸಾರ್ವಭೌಮನೋರ್ವನು ಅರಮನೆಯೊಳಗೆ ಸಿಂಹಾಸನದಲ್ಲಿ ಕುಳಿತು ಅನೇಕ ಪರಿಚಾರಕರ ಕೈಯಿಂದ ನಾನಾ ಭೋಗ್ಯವಸ್ತುಗಳನ್ನು ಪಡೆದು ಹೇಗೆ ಆನಂದ ಪರವಶನಾಗಿರುವನೋ ಹಾಗೆಯೇ ಮಹಾಲಿಂಗಸ್ವರೂಪನಾದ ಆತ್ಮನೆಂಬ ಅರಸನು ಮಾನವ ದೇಹವೆಂಬ ಅರಮನೆಯಲ್ಲಿ ಹೃದಯವೆಂಬ ಸಿಂಹಾಸನದಲ್ಲಿ ಮುಹೂರ್ತಮಾಡಿ ಮನ, ಬುದ್ಧಿ, ಚಿತ್ತ, ಅಹಂಕಾರ ಎಂಬ ಸೇವಕರ ಕೈಯಿಂದ ಪಂಚೇಂದ್ರಿಯಗಳೆಂಬ ಬಟ್ಟಲಗಳಲ್ಲಿ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಪಂಚಪಕ್ವಾನ್ನವನ್ನು ಎಡೆ ಮಾಡಿಸಿಕೊಂಡು ಆನಂದ ಪರವಶನಾಗಿ ಮೆರೆಯುತ್ತಿರುವನು ಎಂಬ ಅಭಿಪ್ರಾಯವು ಜೇವರಗಿ ಷಣ್ಮುಖ ಸ್ವಾಮಿಗಳ ಮೇಗಣ ವಚನದಿಂದ ತಿಳಿದು ಬರುವದು.

ಮಾನವನಿಗೆ ಅತ್ಯಂತ ಪ್ರಿಯಕರವಾದ ವಸ್ತುವನ್ನು ಎಷ್ಟು ಕೊಂಡಾಡಿದರೂ ಹಾಡಿಹರಸಿದರೂ ಸಾಕಾಗುವದಿಲ್ಲ. ಅದರಂತೆ ಬೇಡಾದ ಅಪ್ರಿಯ ವಸ್ತುವನ್ನು ಎಷ್ಟು ಹಳಿದರೂ ಸಾಕಾಗುವದಿಲ್ಲ. ಲೋಕದಲ್ಲಿ ಮಾತಾಪಿತೃಗಳು ಕಣ್ಮನಗಳನ್ನು ತಣಿಸುವ ಮುದ್ದು ಮುದ್ದಾದ ಮಗುವನ್ನು ಎನ್ನ ಬಂಗಾರದ ಗುಂಡೇ ! ನನ್ನ ಮುತ್ತಿನ ಚೆಂಡೇ ! ನನ್ನ ಮಾತಿನ ಗಿಣಿಯೇ ಮುದ್ದಿನ ಕಣಿಯೇ ! ನನ್ನ ಸರದಾರ ಎಂದು ಬಗೆ ಬಗೆಯಾಗಿ ಬಣ್ಣಿಸುವಂತೆ ಅನೇಕಸಂತರು ಪ್ರೇಮಾತಿಶಯದಿಂದ ಮಾನವ ಜನ್ಮವನ್ನೂ ಬಣ್ಣಿಸಿರುವರು.

ಶ್ರೀ ಸಿದ್ಧರಾಮದೇವರು ಲೋಕದಲ್ಲಿ ಸಾಮಾನ್ಯ ಜನರು ಹುಟ್ಟಿಬಂದವರಂತೆ ಹುಟ್ಟಿ ಬಂದವರಲ್ಲ. ಜಗದ್ಗುರು ರೇವಣಸಿದ್ಧರ ಆಶೀರ್ವಾದ ಪ್ರಭಾವದಿಂದ ಅವತರಿಸಿ ಬಾಲ್ಯದಲ್ಲಿಯೇ ಶ್ರೀಶೈಲ ಮಲ್ಲಿಕಾರ್ಜುನನನ್ನು ಒಲಿಸಿಕೊಂಡ ಮಹಾಮಹಿಮರು. ಇಂಥ ಮಹಾನುಭಾವರು ಕಾಮ್ಯಕರ್ಮಗಳನ್ನು ಮಾಡಿ ಶ್ರೇಯೋಮಾರ್ಗದಲ್ಲಿ ನಡೆದುದು ಪ್ರಭುವಿಗೆ ವಿಷಾದವನ್ನುಂಟು ಮಾಡಿತು.

ಪಂಚಭೂತಗಳಿಂದ ಪಂಚವಿಂಶತಿ ತತ್ವಗಳ ಸಂಚಯವೆನಿಸಿದ ಈ ದೇಹದಲ್ಲಿರುವ ದಶೇಂದ್ರಿಯಗಳಿಗೆಲ್ಲ " ಇಂದ್ರಿಯಾಣಾಂ ಮನೋನಾಥಃ " ಎಂಬುಕ್ತಿಯಂತೆ ಮನಸ್ಸೇ ಅಧಿಪತಿಯು. ಮೊಲವನ್ನು ಕಂಡರೆ ನಾಯಿಗಳು ಬೆನ್ನು ಹತ್ತಿ ಓಡುವಂತೆ ದಶೇಂದ್ರಿಯಗಳು ಶಬ್ದಾದಿವಿಷಯಗಳ ಬೆಂಬತ್ತಿ ಧಾವಿಸುವವು.

" ಇಂದ್ರಿಯೈರೇವ ಜಾಯಂತೇ ಪಾಪಾನಿ ಸುಕೃತಾನಿಚ ।
ತೇಷಾಂಸಮರ್ಪಣಾದೀಶೇ ಕುತಃ ಕರ್ಮ ನಿಬಂಧನಂ ॥ "

ಈ ಇಂದ್ರಿಯಗಳಿಂದಲೇ ಪಾಪಫಲಗಳೂ, ಪುಣ್ಯಫಲಗಳೂ ಲಭಿಸುವವು. ಆದ್ದರಿಂದ ಆ ಇಂದ್ರಿಯಗಳನ್ನೆಲ್ಲ ಶಿವನಲ್ಲಿ ಸಮರ್ಪಣ ಮಾಡುವದರಿಂದ ಮುಂದೆ ಅವುಗಳ ಫಲೋದಯಕ್ಕೂ, ಅದನ್ನು ಅನುಭವಿಸುವದಕ್ಕೂ ಅವಕಾಶವೇ ಇರುವದಿಲ್ಲ.

" ಇಂದ್ರಿಯಾಣಿ ಸಮಸ್ತಾನಿ ಶರೀರಂ ಭೋಗಸಾಧನಂ ।
ಶಿವಪೂಜಾಂಗ ಭಾವೇನ ಭಾವಯನ್ ಮುಕ್ತಿ ಮಾಪ್ನುಯಾತ್ ॥

ಸಮರ್ಪಣ ಭಾವದಿಂದ ಮಾಡುವ ಶಿವಯೋಗಿಯ ಸತ್ಕ್ರಿಯೆಗಳೆಲ್ಲವೂ ನೋಡುವವರ ಕಣ್ಣಿಗೆ ಕ್ರಿಯೆಗಳಂತೆ ಕಂಡರೂ ಅವು ದಗ್ಧಪಟ ಅಥವಾ ದಗ್ಧರಜ್ಜುವಿನಂತೆ ಇರುವವು. ಮಾಸಿದ ಬಟ್ಟೆಯು ಅಗಸನ ಕ್ಷಾಲನ ಕ್ರಿಯೆಗೆ ಒಳಗಾದಂತೆ ಸುಟ್ಟಬಟ್ಟೆಯು ಕ್ಷಾಲನ ಕ್ರಿಯೆಗೆ ಬಂದೀತೇ ? ಅಹಂಕಾರ ಮಮಕಾರವುಳ್ಳ ಕರ್ಮಕಾಂಡದಿಂದ ಮುಮುಕ್ಷುವಿಗೆ ಬಂಧನವಲ್ಲದೆ ನಿರಹಂಭಾವದ ಭಕ್ತಿಕಾಂಡದಿಂದ ಬಂಧನವಿಲ್ಲ.

> " ತಮೋಜೋತ್ಸ್ನಾ ಪ್ರವೃತ್ತಿರ್ಹಿ ರಾತ್ರಾವೇವನಚಾಹನಿ ।
> ಅನನ್ಯಾತಪ ಏವಾಸ್ತೇ ತಮೋಜ್ಯೋತ್ಸ್ನಾ ವಿಲಕ್ಷಣೇ ॥ "
> ಪುಣ್ಯ ಪಾಪೋ ಭಯಂಕರ್ಮ ಮತೇ ಭಕ್ತಿಮತೇ ಕುತಃ ।

ಕತ್ತಲೆ ಬೆಳ್ದಿಂಗಳೆರಡೂ ಒಂದೇರಾತ್ರಿಯಲ್ಲಿರುವಂತೆ ಪಾಪ ಪುಣ್ಯಗಳೆರಡೂ ಕರ್ಮಮಾರ್ಗದಲ್ಲಿರುವವು. ಕತ್ತಲೆ ಬೆಳ್ದಿಂಗಳೆರಡನ್ನೂ ಓಡಿಸಿ ಸೂರ್ಯನ ಬಿಸಿಲು ತಾನೇತಾನಾಗಿ ಒಪ್ಪುವಂತೆ ಭಕ್ತಿಕಾಂಡವು ಪಾಪಪುಣ್ಯಗಳೆರಡನ್ನೂ ಓಡಿಸಿ ತಾನೇತಾನಾಗಿ ಮೆರೆಯುವದು.

ಸತಿ, ಸುತ, ಮಾತೆ, ಪಿತ ಇವರ ಮೇಗಣ ಮೋಹ ಬಿಟ್ಟು ಯತಿಯಾಗಿ ಪೋಡಶ ದಾನಗಳನ್ನೂ, ವಾಪೀಕೂಪ ತಟಾಕಾದಿಗಳನ್ನೂ, ಉದ್ಯಾನ ದೇಗುಲಗಳನ್ನು ಮಾಡಿಸಿದರೂ ಅದರಿಂದ ಹೊಲದಲ್ಲಿ ಬೀಜ ಬಿತ್ತಿ ಬೆಳೆದಂತೆ ಮರಣದ ನಂತರ ಸ್ವರ್ಗಾದಿ ಪದವಿಗಳನ್ನು ಪಡೆಯಬಹುದಲ್ಲದೆ ಶಿವನ ನಿಜವು ಸಾಧ್ಯವಾಗಲಾರದು. ಎರಡೆತ್ತುಹೂಡಿ ಹಸನಮಾಡಿ ಹೆಂಟೆಯೊಡೆದು ಸಿದ್ಧಮಾಡಿದ, ಮಳೆಗರೆದು ಹಾಲು ಹಸಿಯಾದ ಹೊಲದಲ್ಲಿ ಕಸವನ್ನು ಬಿತ್ತುವ ಹುಚ್ಚನಂತೆ, ಶಿವಭಕ್ತಿ, ಶಿವಾಚಾರ, ಶಿವಜ್ಞಾನಗಳಿಂದ ಪರಿಶುದ್ಧವಾದ ಹೃದಯ ಭೂಮಿಯಲ್ಲಿ ಐಹಿಕ ಪಾರಲೌಕಿಕ ಕಾಮನೆಗಳ ಬೀಜಗಳನ್ನು ಬಿತ್ತದೆ ಅವೆಲ್ಲವನ್ನೂ ಬೀಸಾಡಿ ಬಿಡು.

ದೇವೇಂದ್ರನಾಗಲಿ, ವಿಷ್ಣುವಾಗಲಿ, ಬ್ರಹ್ಮನಾಗಲಿ ಕಾಮ್ಯಕರ್ಮವನ್ನು ಮಾಡಿ ವಿವಿಧ ಪದವಿಗಳನ್ನು ಪಡೆಯಬಹುದಲ್ಲದೆ ಸಕಲ ದುಃಖನಿವೃತ್ತಿ ನಿತ್ಯಾನಂದ ಪದ ಪ್ರಾಪ್ತಿ ರೂಪ ನಿರವಯಲ ಸ್ಥಿತಿಯನ್ನು ಪಡೆಯಲು ಸಾಧ್ಯವಿಲ್ಲ. ಕೀಳು ಮಾಂಸ ರುಚಿಗೆ ಮೀನು ಗಾಳವನ್ನು ಕಚ್ಚಿ ದುಷ್ಟರ ಬಾಯಿಗೆ ತುತ್ತಾಗಿ ಹೋಗುವಂತೆ ಹರಿಹರ ಬ್ರಹ್ಮಾದಿಗಳು ವಿಷಯ ಸುಖಕ್ಕೆ ಮೆಚ್ಚಿ ಯಮನ ಬಾಯಿಗೆ ತುತ್ತಾಗಿ ಹೋಗುವರು. ಆದಕ್ಕಾಗಿಯೇ ಶ್ರೀ ಬಸವೇಶ್ವರರು —

> " ಬ್ರಹ್ಮ ಪದವಿಯನೊಲ್ಲೆ, ವಿಷ್ಣು ಪದವಿಯನೊಲ್ಲೆ,
> ರುದ್ರ ಪದವಿಯನೊಲ್ಲೆ, ನಾನು ಮತ್ತಾವ ಪದವಿ
> ಯನೊಲ್ಲೆನಯ್ಯ ನಿಮ್ಮ ಸದ್ಭಕ್ತರ ಪಾದವನರಿದಿಪ್ಪ
> ಮಹಾಪದವಿಯನೇ ಕರುಣಿಸಯ್ಯ ಕೂಡಲ ಸಂಗಮದೇವಾ ॥ "

ಎಂದು ಬೇಡಿಕೊಂಡಿರುವರು. ಬ್ರಹ್ಮಪದವಿ, ವಿಷ್ಣುಪದವಿ, ರುದ್ರಪದವಿ, ಗಣಪದವಿ ಮುಂತಾದ ಪದವಿಗಳು ಸಾಮಾನ್ಯ ಪದವಿಗಳು. ಗುರುಲಿಂಗ ಜಂಗಮಾರ್ಚನೆ ಮಾಡಿ

ಸಮರಸ ಭಕ್ತಿಯಿಂದ ಶಿವನಲ್ಲಿ ಶಿಖಿಕರ್ಪುರ ನ್ಯಾಯದಂತೆ ಬೆರೆಯುವದು ಮಹಾಪದವಿ ಒಂದು ವಿಷದ ಕುಂಭವನ್ನು ತಕ್ಕೊಂಡು ಮೈತುಂಬ ಸುರುವಿದರೂ ಅದರಿಂದ ಪ್ರಾಣಕ್ಕೆ ಏನೇನೂ ಅಪಾಯವಾಗುವದಿಲ್ಲ. ಅದೇ ಕುಂಭದೊಳಗಿನ ವಿಷದ ಒಂದು ಹನಿಯನ್ನು ಹೊಟ್ಟೆಯೊಳಗೆ ನುಂಗಿದ ಕೂಡಲೇ ಪ್ರಾಣಹೋಗುವದು. ಹಾಗೆಯೇ ಹೊರಗಿದ್ದ ಹೆಣ್ಣು ಹೊನ್ನು ಮಣ್ಣು ಇತ್ಯಾದಿ ವಿಷಯುಗಳು ಏನೇನೂ ಮಾಡಲಾರವು.

" ಹೊನ್ನು ಮಾಯೆಯೆಂಬರು ಹೊನ್ನು ಮಾಯೆಯಲ್ಲ,
ಹೆಣ್ಣು ಮಾಯೆಯೆಂಬರು ಹೆಣ್ಣು ಮಾಯೆಯಲ್ಲ,
ಮಣ್ಣು ಮಾಯೆಯೆಂಬರು ಮಣ್ಣು ಮಾಯೆಯಲ್ಲ,
ಮನದ ಮುಂದಣ ಆಶೆಯೇ ಮಾಯೆ ಕಾಣಾ ಗುಹೇಶ್ವರ "

ನಿಜಕ್ಕೂ ಹೊರಗಿರುವ ಹೊನ್ನು ಹೆಣ್ಣು ಮಣ್ಣುಗಳು ಮಾಯೆಯಲ್ಲ, ಮಾಯೆಯೆಂದರೆ ಮನದೊಳಗಿನ ವಿಷಯವಾಸನೆ.

" ವಿಷಸ್ಯ ವಿಷಯಾಣಾಂಚ ದೃಶ್ಯತೇ ಮಹದಂತರಂ ।
ವಿಷಂ ನಿಹಂತಿ ಭೋಕ್ತಾರಂ ದ್ರಷ್ಟಾರಂ ಚಕ್ಷುಷಾಪ್ಯಯಂ ॥

ವಿಷ, ವಿಷಯ ಇವುಗಳಲ್ಲಿ ಬಹಳೇ ಅಂತರವಿರುವದು. ವಿಷವನ್ನು ಕುಡಿದಾಗ ಮಾತ್ರ ಪ್ರಾಣ ಹಾನಿಯಾದರೆ ವಿಷಯುವನ್ನು ಕಣ್ಣಿನಿಂದ ನೋಡಿದರೂ ಪ್ರಾಣಕ್ಕೆ ಹಾನಿಯಾಗುವದು. ವಿಷಕ್ಕಿಂತಲೂ ವಿಷಯುವು ನೂರ್ಮಡಿ ಘಾತಕವಾದುದು.

" ಪರಾಂಚಿಖಾನಿ ವ್ಯತೃಣಲ್ ಸ್ವಯಂಭೂಃ
ತಸ್ಮಾತ್ ಪರಾಙ್ ಪಶ್ಯತಿ ನಾಂತರಾತ್ಮನ್
ಕಶ್ಚಿದ್ಧೀರಃ ಪ್ರತ್ಯಗಾತ್ಮಾನ ಮೈಕ್ಷಲ್
ಆವೃತ್ತ ಚಕ್ಷುಃ ಅಮೃತತ್ವಮಿಚ್ಛನ್.

ಸೃಷ್ಟಿಕರ್ತನು ಇಂದ್ರಿಯಂಗಳನ್ನು ಪ್ರವೃತ್ತಿಮುಖವಾಗಿ ಅಂದರೆ ಅಧೋಮುಖವಾಗಿ ಹರಿಯುವಂತೆ ಮಾಡಿರುವನು. ಯಾರು ಅವನ್ನು ನಿವೃತ್ತಿಮುಖವಾಗಿ ಅಂದರೆ ಊರ್ಧ್ವ ಮುಖವಾಗಿ ತಿರುಗಿಸುವರೋ ಅವರೇ ಧೀರರು, ಶೂರರು, ಪ್ರಜ್ಞಾಶೀಲರು, ಅಮೃತ ಪುತ್ರರು ಎಂದು ಕಠಶೃತಿಯು ಸಾರುತ್ತದೆ.

ಆನೆಯು ಕೆಸರಲ್ಲಿ ಮುಳುಗಿದರೆ ಅದು ತಾನೇ ತನ್ನ ಸಾಮರ್ಥ್ಯದಿಂದ ಮೇಲಕ್ಕೇಳುವ ವಲ್ಲದೆ ಅದನ್ನು ಯಾರಾದರೂ ಎಬ್ಬಿಸುವರೇ ? ನಿನ್ನ ಆತ್ಮಸಾಕ್ಷಾತ್ಕಾರದ ಮಾರ್ಗವನ್ನು ನೀನೇ ಜಾಣತನದಿಂದ ಹಿಡಿಯಬೇಕಲ್ಲದೆ ನಿನಗೆ ಮತ್ತಾರು ಹೇಳಬೇಕು ? ತಿಳಿದು ನಡೆದಲ್ಲಿ ನೀನು ಜೀವನ್ಮುಕ್ತನಾಗುವಿ, ಸಿದ್ಧರಾಮನೇ ನಿನ್ನ ತನುವು ಮಹಾತನುವಾಗಿದೆ, ನಿನ್ನ ಮನಸ್ಸು ಸುಮನ, ನಿನ್ನ ಭಾವ ಸದ್ಭಾವ, ನೀನು ಹೇಳುವ ವಿಚಾರಗಳೆಲ್ಲವೂ ತತ್ತ್ವಾಮೃತದಿಂದ ತುಂಬಿತುಳುಕುತ್ತವೆ, ಇಂತಹ ಉನ್ನತೋನ್ನತ ಮಹಾಸಾಧನಗಳನ್ನೂ

ಕೋಟಿಕೋಟಿ ಚಿಂತನೆಗಳನ್ನುಂಟುಮಾಡುವ ಕಾಮ್ಯಕರ್ಮಗಳ ವಿಚಾರದಲ್ಲಿ ನಿಯೋ ಜಿಸಬೇಡ.

ತಣ್ಣೀರು ಕುಡಿಯಲು ರೋಗಿಗೆ ಕೆಡಕಾದರೂ ಅದೇ ನೀರು ಬೆಂಕಿಯಿಂದ ಕಾಸಿ ದಾಗ ಆರೋಗ್ಯಾಭಿವೃದ್ಧಿಗೆ ಕಾರಣವಾದಂತೆ, ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ವಿಷಯಗಳು ಬಾಧಕವಾದರೂ ನಾಶಿಕ, ಜಿಹ್ವೆ, ನೇತ್ರ, ತ್ವಚೆ, ಕಿವಿ, ಹೃದಯ ಎಂಬ ಷಡಿಂದ್ರಿಯಗಳಲ್ಲಿ ಕ್ರಮವಾಗಿ ನೆಲೆಸಿರುವ ಆಚಾರಲಿಂಗ, ಗುರುಲಿಂಗ ಮೊದಲಾದ ಷಡ್ಲಿಂಗಗಳಿಗೆ ಅರ್ಪಿತವಾದಾಗ ಲಿಂಗಮುಖಾರ್ಪಣೀಯ ವಿಶುದ್ಧಶಬ್ದಪ್ರಸಾದ, ಸ್ಪರ್ಶ ಪ್ರಸಾದ, ರೂಪ ಪ್ರಸಾದಗಳೆನಿಸಿ —

" ಪ್ರಸಾದೆ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ "

ಎಂಬುಕ್ತಿಯಂತೆ, ಸಕಲ ದುಃಖ ನಿವೃತ್ತಿ, ನಿತ್ಯಾನಂದ ಪದಪ್ರಾಪ್ತಿಗೆ ಕಾರಣೀಭೂತ ವಾಗುತ್ತವೆ.

ಲೋಕದಲ್ಲಿ ಆಸ್ತಿಕರು ಭಾವಿಕರು, ಶಿವೋಪಾಸಕರು ಸುಂದರ ದೇವಾಲಯವನ್ನು ಕಟ್ಟಿ ಗರ್ಭಗುಡಿಯೊಳಗೆ ದೇವಿಯನ್ನೋ, ವೀರಭದ್ರನನ್ನೋ, ಲಿಂಗವನ್ನೋ ಪ್ರತಿಷ್ಠಾ ಪಿಸಿ ಆಗುಡಿಗೆ ಗೋಪುರವನ್ನು ಕಟ್ಟಿ ಕಳಸವನ್ನಿಡುವರು. ವಿಶ್ವದಲ್ಲಿರುವ ಮಾನವರು ಕಟ್ಟುವ ಗುಡಿ, ಗುಡಿಯಲ್ಲಿ ಇಟ್ಟು ಪೂಜಿಸುವ ಲಿಂಗ, ಮುಟ್ಟಿ ಪೂಜಿಸುವ ಕ್ರಮ, ಮುಟ್ಟುವ ಮುಕ್ತಿ ಇತ್ಯಾದಿಗಳು ಒಂದು ಬಗೆಯಾಗಿದ್ದರೆ,ಲಿಂಗವಂತರ ಆ ಎಲ್ಲ ಬಗೆಗಳೂ ಬೇರೆಯಾಗಿಯೇ ಇರುತ್ತವೆ. ಅದಕ್ಕೆಂದೇ ವ್ಯಾಸರು —

" ಲಿಂಗೇನ ಸಹ ಪಂಚತ್ವಂ ಲಿಂಗೇನ ಸಹಜೀವಿತಂ<br>
ಶವಸ್ಯೋಪರಿ ಲಿಂಗಚಧ್ರ್ಯಯತೇಜ ಪುರಾತನ್ಯೈಃ " ॥<br>
ವಿಚಿತ್ರಾ ಲಿಂಗಧಾರಕಾಃ "

ಎಂದು ಉದ್ಗಾರ ತೆಗೆದಿದ್ದಾರೆ.

" ದೇಹವೇ ದೇವಾಲಯಃ ಪ್ರೋಕ್ತಃ, " ದೇಹವೇ ದೇಗುಲವಾಗಿರಲು<br>
ಬೇರೆ ಮತ್ತೆ ದೇಗುಲವೇತಕಯ್ಯಾ "

" ಉಳ್ಳವರು ಶಿವಾಲಯವ ಮಾಡುವರು ನಾನೇನ ಮಾಡುವೆ!<br>
ಬಡವನಯ್ಯ, ಎನ್ನಕಾಲೇ ಕಂಭ ದೇಹವೇ ದೇಗುಲ ಶಿರವೇ ಹೊನ್ನ<br>
ಕಳಸ, ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ ಕೂಡಲಸಂಗಮದೇವಾ

" ಎನ್ನಕಾಯವು ನಿನಗೆ ಉನ್ನತಾಲಯವಾಯ್ತು<br>
ಇನ್ನೆನಗೆ ಭಯವುಂಟೆ ಎಲೆ ಲಿಂಗವೇ "

" ಶ್ರೀಗಿರಿಯ ಸುಕ್ಷೇತ್ರಕಿಂದು ಹೋಗಿ ಯಾತ್ರೆಯ<br>
ಮಾಡಿ ಬಂದೆ, ಶ್ರೀಗಿರಿಯು ಶರೀರದೊಳಗುಂಟು<br>
ಓಂ ಶ್ರೀ ಗುರುಸಿದ್ಧ ಯೋಗಿ ಜನರಿಗೆ ಧರ್ಮ ಬೇರುಂಟು "

ಮುಂತಾದ ಅನುಭಾವಿಗಳ ಉಕ್ತಿಗಳು, ಸ್ಥಾವರವೆನಿಸಿ ಒಂದೆಡೆಗಿದ್ದು ಬಿದ್ದು ಹೋಗುವ ಕಲ್ಲು ಮಣ್ಣಿನ ಗುಡಿಗಿಂತಲೂ ಆತ್ಮತತ್ತ್ವದಿಂದೊಡಗೂಡಿದ, ಕಾಲುಗಳೆಂಬ ಕಂಬ ಗಳಿಂದಲೂ, ಹೃದಯವೆಂಬ ಗರ್ಭಗುಡಿಯಿಂದಲೂ, ನೇತ್ರಗಳೆಂಬ ನಂದಾದೀಪದಿಂದಲೂ ನಾಸಿಕವೆಂಬ ಧೂಪಾರತಿಯಿಂದಲೂ, ನಾಲಿಗೆಯೆಂಬ ಗಂಟೆಯಿಂದಲೂ, ಬಾಗಿಲಿಗೆ ಕಟ್ಟಿದ ಮುತ್ತಿನ ಹಾರದಂತಿರುವ ದಂತ ಪಂಕ್ತಿಗಳಿಂದಲೂ ಒಪ್ಪುವ ಈ ಗುಡಿಯೇ ವೀರಶೈವರ ಗುಡಿಯು. ಈ ಗುಡಿಯಲ್ಲಿ ಪ್ರತಿಷ್ಠಾಪಿಸಿದ ಲಿಂಗದಲ್ಲಿ ಆಹ್ವಾನ ವಿಸರ್ಜನ ಕ್ರಿಯೆಗಳಿಲ್ಲ. ಷಡಧ್ವ ಶೋಧನಕಳಾವಾಹನರೂಪ ಸಂಸ್ಕಾರಹೊಂದಿದ, ವಿಶಿಷ್ಟ ಪಂಚಸೂತ್ರಕ್ಕನು ಸರಿಸಿ ನಿರ್ಮಿತವಾದ ಇಷ್ಟಲಿಂಗದಲ್ಲಿ ಪರಶಿವನು ನಿತ್ಯ ಸನ್ನಿಹಿತನಾದುದರಿಂದ ಆ ಇಷ್ಟ ಲಿಂಗದಲ್ಲಿ ಆವ್ಹಾನ ವಿಸರ್ಜನಗಳಿಲ್ಲವೆಂದೂ ಮರಳಿ ಮರಳಿ ಆಹ್ವಾನ ವಿಸರ್ಜನಗಳನ್ನು ಮಾಡುವದರಿಂದ ಇಷ್ಟಲಿಂಗದಲ್ಲಿ ಶಿವಸನ್ನಿಹಿತತ್ವವು ಕ್ಷಣಿಕವೆನಿಸುವದೆಂದೂ ಜಗದ್ಗುರು ರೇಣುಕರು ಸಿದ್ಧಾಂತಶಿಖಾಮಣಿಯಲ್ಲಿ ಅಗಸ್ತ್ಯರಿಗೆ ಹತ್ತನೆಯ ಪರಿಚ್ಛೇದದಲ್ಲಿ ಉಪದೇಶ ಮಾಡಿದ್ದಾರೆ. ಕರಕಂಜದಲ್ಲಿ ಕಂಗೊಳಿಸುವ ಇಷ್ಟಲಿಂಗವು ಕೈಲಾಸದಲ್ಲಿರುವ ಶಿವನ ಪ್ರತೀಕ ವಾಗಿರದೇ ಶ್ರೀ ಗುರುವು ನಮ್ಮ ಶರೀರದಲ್ಲಿ ಅವ್ಯಕ್ತವಾಗಿ ನೆಲೆಸಿರುವ ಪ್ರಾಣಲಿಂಗವನ್ನೇ ದೀಕ್ಷಾ ಸಂಸ್ಕಾರದಿಂದ ಹೊರದೆಗೆದು ತಂದು ಕೊಟ್ಟ ಪರಾತ್ಪರ ವಸ್ತುವಾಗಿದೆ. ಈ ಇಷ್ಟ ಲಿಂಗದಲ್ಲಿ ಶಿವನು ನಿತ್ಯ ಸನ್ನಿಹಿತನಾಗಿರುವನು. ಇಲ್ಲಿ ಆಹ್ವಾನ ವಿಸರ್ಜನ ಕ್ರಿಯೆಗಳು ಇರುವುದೇ ಇಲ್ಲ.

> " ಭಾವದ ಹಸ್ತದಿಂ ಮನದ ಹಸ್ತತಳಕ್ಕೆ ಮನಃ ಕರಾಬ್ಜದಿಂ ।
> ಪಾವನಮಪ್ಪ ನೇತ್ರದ ಕರಕ್ಕೆ ತದೀಯ ಕರಾಂಬುಜಾತದಿಂ ॥
> ಕೋವಿದ ಚಕ್ರವರ್ತಿ ಗುರು ಕಾಯದ ಹಸ್ತ ಸರೋರುಹಕ್ಕೆಪೂ ।
> ಜಾವಿಧಿ ಯೋಗ್ಯಲಿಂಗಮುಮನಿತ್ತಬಳಿಕ್ಕರಿ ದೇಂಶಿವಾಧವಾ ॥

ತತ್ವವಿದ್ಯಾ ವಿಶಾರದನಾದ ಶ್ರೀ ಗುರುವು ದೀಕ್ಷಾಕಾಲದಲ್ಲಿ ಶಿಷ್ಯನಲ್ಲಿ ಅವ್ಯಕ್ತವಾಗಿರುವ ಲಿಂಗಕಳೆಯನ್ನು ಮೊದಲು ತನ್ನ ಭಾವಕ್ಕೂ, ಭಾವದಿಂದ ಮನಸ್ಸಿಗೂ, ಮನದಿಂದ ದೃಷ್ಟಿಗೂ ತಂದುಕೊಂಡು ಅದನ್ನೇ ಪೂಜಾ ಯೋಗ್ಯವಾದ ಇಷ್ಟಲಿಂಗದಲ್ಲಿ ನೆಲೆಗೊಳಿಸಿ ಶಿಷ್ಯನ ಕರಕಮಲಕ್ಕೀಯುವನು. ಶ್ರೀ ಗುರುವು ಕೈಲಾಸದಲ್ಲಿರುವ ಶಿವನನ್ನು ಕರೆತಂದು ಶಿಷ್ಯನ ಕೈಗೀಯದೇ ಶಿಷ್ಯನಲ್ಲಿರುವ ಅವ್ಯಕ್ತವಾದ, ನಿರಾಕಾರವಾದ ಚಿತ್ಕಳೆಯನ್ನೇ . ಘೃತ ಕಾಠಿಣ್ಯನ್ಯಾಯದಂತೆ, ಹಿಮಜಲನ್ಯಾಯದಂತೆ, ಸಾಕಾರವಾಗಿಸಿ ಇಷ್ಟಲಿಂಗರೂಪದಲ್ಲಿ ಕರಕಮಲಕ್ಕೀಯುವನು. ತನ್ನಲ್ಲಿದ್ದುದನ್ನು ತಾನೇ ಧರಿಸುವನು ಎಂಬ ಬಗ್ಗೆ ಮಗ್ಗೆಯ ಮಾಯಿದೇವರು —

> " ಶರನಿಧಿ ರತ್ನಮಂ ಧರಿಸಿದಂತೆ ಮಹಾನಗವೌಷ
> ಧೌಘಮಂ ಧರಿಸಿದಂತೆ, ಅನಾದಿಶರಣಂ ಲಿಂಗಮಂ
> ಸ್ವಭಾವದಿಂ ಧರಿಸಿಹನು ... "

ಎಂದು ದೃಷ್ಟಾಂತಕೊಟ್ಟು ಹೇಳಿರುವರು.

ಓರ್ವ ಮಹಾರಾಜನು ರತ್ನಕಿರೀಟವನ್ನು ಧರಿಸುವದಕ್ಕೂ, ಸಮುದ್ರರಾಜನು ರತ್ನ ಕಿರೀಟವನ್ನು ಧರಿಸುವದಕ್ಕೂ ಮಹದಂತರವಿದೆ. ಮಹಾರಾಜನು ರತ್ನಕಿರೀಟವನ್ನು ಧಾರಣ ಮಾಡಬೇಕಾದರೆ ಆ ರತ್ನ ಕಿರೀಟಕ್ಕೆ ಕೋಟಿ ಕೋಟಿ ಬೆಲೆ ತೆತ್ತು ತಂದು ಧರಿಸ ಬೇಕಾಗುವದು. ಆದರೆ ಸಮುದ್ರ ರಾಜನ ಮಾತು ಹಾಗಲ್ಲ. ತನ್ನೊಡಲಲ್ಲಿಯೇ ರತ್ನ ರಾಶಿಯು ತುಂಬಿ ತುಳುಕುತ್ತಿದ್ದು ಯಾರ ಹಂಗಿಲ್ಲದೇ ಬೇಕಾದಷ್ಟು ರತ್ನರಾಶಿಯಿಂದ ಅಲಂಕೃತನಾಗಲು ಬರುವದು.

ಎಲ್ಲೆಲ್ಲಿಯೋ ಹೋಗಿ ಏನೇನೋ ಕೊಟ್ಟು ಹತ್ತೆಂಟು ಗಿಡಮೂಲಿಕೆಗಳನ್ನು ಸಂಗ್ರಹಿಸಿದ ಬಡ ವೈದ್ಯನು ಅನಂತ ರೋಗ ಪರಿಹಾರಕ ಗಿಡಮೂಲಿಕೆಗಳನ್ನು, ವನಸ್ಪತಿ ಗಳ,ಜ್ಯೋತಿರ್ಲತೆಗಳ, ಬೆಳವಣಿಗೆಗೆ ಆಧಾರಭೂತವಾದ ಮಹಾಪರ್ವತಕ್ಕೆ ಸಾಟಿಯಾಗು ವನೇ ? ತಮ್ಮಲ್ಲಿಯೇ ಹುಟ್ಟಿದ ರತ್ನ ಮತ್ತು ಗಿಡಮೂಲಿಕೆಗಳಿಂದ ಸಮುದ್ರ ಮತ್ತು ಮಹಾಪರ್ವತಗಳು ಒಪ್ಪುವಂತೆ ಮಹಾಶರಣನು ಸ್ವಸ್ವರೂಪವೆನಿಸಿದ ಲಿಂಗವನ್ನು ಧರಿಸಿ ರಾರಾಜಿಸುವನು.

ಶೈವರು ಸ್ಥಾವರಲಿಂಗದ ಉಪಾಸನೆಯನ್ನು ಮಾಡುವಾಗ ಆಹ್ವಾನವನ್ನು, ಉಪಾಸನಾ ಮುಕ್ತಾಯದಲ್ಲಿ ವಿಸರ್ಜನೆಯನ್ನೂ ಮಾಡುವಂತೆ ವೀರಶೈವರು ಆಹ್ವಾನ ವಿಸರ್ಜನೆ ಮಾಡುವದಿಲ್ಲ.

ಜೀವನು ಬಾ ಎಂದಾಗ ಬಂದು, ಇಲ್ಲಿಯೇ ಇರು ಎನ್ನುವ ತನಕ ಇದ್ದು ಹೋಗೆಂದಕೂಡಲೇ ಹೋಗುವವನು ದೇವರಲ್ಲ. ಕರೆದಾಗ ಬರುವದೂ ಹೇಳಿದಷ್ಟು ಹೊತ್ತು ನಿಲ್ಲುವದೂ, ಹೋಗೆಂದಾಗ ಹೋಗುವದೂ ಸೇವಕನ ಕಾರ್ಯವಲ್ಲದೆ ಇದು ಸ್ವಾಮಿಯ ಕೆಲಸವೇ ? ಪೂಜಾರಿಯ ಮಾತನ್ನು ಕೇಳುವವನೆಂತಹ ದೇವರು ? ಎಂದು ಮರಿತೋಂಟದಾರ್ಯರು ವಿಡಂಬನ ಮಾಡಿರುವರು.

ಬ್ರಹ್ಮ, ವಿಷ್ಣು, ಇಂದ್ರ, ಚಂದ್ರಾದಿದೇವತೆಗಳು ಪೂಜಿಸುವ ಸ್ಫಟಿಕಲಿಂಗ, ರಜತಲಿಂಗ, ಸುವರ್ಣಲಿಂಗ ಮೊದಲಾದ ಲಿಂಗಗಳು ಭಾರತದಲ್ಲಿ ಸುಪ್ರಸಿದ್ಧವಿರುವ ದ್ವಾದಶ ಜ್ಯೋತಿರ್ಲಿಂಗಗಳೂ, ಊರೂರುಗಳಲ್ಲಿರುವ ದೇವಾಲಯಗಳಲ್ಲಿ ಪ್ರತಿಷ್ಠಾಪಿಸ ಲಿಂಗಗಳು ಭಕ್ತಿ, ಮುಕ್ತಿ ಪ್ರದಾಯಕಗಳು, ಭವಭಯ ನಿವಾರಕಗಳು, ಕಾಲಕರ್ಮಸಂಹಾ ರಕಗಳು ಎಂದು ಕೊಂಡಾಡುವರು. ವಿವಿಧ ಧಾತು ನಿರ್ಮಿತಗಳಾದ ಲಿಂಗಗಳ ಉಪಾಸನೆ ಯಿಂದ ಫಲಗಳಲ್ಲಿ ವೈವಿಧ್ಯತೆಯಿದ್ದರೂ ರಜತ ಕನಕಾದಿ ಲಿಂಗಗಳು ಒಂದೊಂದೆ ಲಿಂಗವಾಗಿ ರಾರಾಜಿಸುವವಲ್ಲದೇ ಆ ಲಿಂಗಗಳಲ್ಲಿ ಭೇದ ಪ್ರಭೇದಗಳಿಲ್ಲ. ಆದರೆ ವೀರ ಶೈವರು ಕರಕಮಲದಲ್ಲಿಟ್ಟು ಪೂಜಿಸುವ ಇಷ್ಟಲಿಂಗವು ಮಾತ್ರ—

" ಲಿಂಗಂತು ತ್ರಿವಿಧಂ ಪ್ರೋಕ್ತಂ ಸ್ಥೂಲಂ ಸೂಕ್ಷ್ಮಂ ಪರಾತ್ಪರಂ ।
ಇಷ್ಟಲಿಂಗಮಿದಂ ಸ್ಥೂಲಂ ಯದ್ಬಾಹ್ಯೇ ಧಾರ್ಯತೇತನೌ ॥
ಪ್ರಾಣಲಿಂಗಂತು ತತ್ ಸೂಕ್ಷ್ಮಂ ಯದಂತರ್ಭಾವನಾಮಯಂ ।
ಪರಾತ್ಪರಂತು ಯತ್ಪ್ರೋಕ್ತಂ ತೃಪ್ತಿಲಿಂಗಂತದುಚ್ಯತೇ " ॥

ಬ್ರಹ್ಮರಂಧ್ರದಲ್ಲಿಪ್ಪ ನಾದಚೈತನ್ಯವಪ್ಪ ಪರಮಚಿತ್ಕಳೆಯೋ, ಭಾವ-ಮನ-ಕರದಲ್ಲಿ ಶ್ರೀಗುರು ತಂದು ಸಾಹಿತ್ಯವ ಮಾಡಿದನಾಗಿ, ಭಾವದಲ್ಲಿ ಸತ್‌ಸ್ವರೂಪವಪ್ಪ ಇಷ್ಟ ಲಿಂಗವೆನಿಸಿ, ಒಂದೇ ವಸ್ತು ತನು ಮನ ಭಾವಂಗಳಲ್ಲಿ ಇಷ್ಟ, ಪ್ರಾಣ, ಭಾವವಾದ ಭೇದವನರಿದಂ, ಇಷ್ಟಲಿಂಗವ ದೃಷ್ಟಿಯಿಂದ ಗ್ರಹಿಸಿ, ಈ ಲಿಂಗತ್ರಯವಿಡಿದು ಆಚರಿಸಿ ಲಿಂಗದೊಡನೆ ಕೂಡಿ ಲಿಂಗವೇ ತಾನುತಾನಾಗಿ ವಿರಾಜಿಸುತ್ತಿರ್ಪುದೀಗ ಶಿವಯೋಗ ನೋಡಾ ಮಹಾಗುರು ಶಿವಸಿದ್ಧೇಶ್ವರ ಪ್ರಭುವೇ " ಎಂಬ ಜಗದ್ಗುರು ರೇಣುಕರ ಮತ್ತು ಜಗದ್ಗುರು ತೋಂಟದ ಸಿದ್ಧಲಿಂಗಯೋಗೀಶ್ವರರ ವಚನದಂತೆ ಪರಾತ್ಪರ ಪರವಸ್ತುವೇ ತನುವಿನಲ್ಲಿ ಇಷ್ಟಲಿಂಗವಾಗಿ. ಮಾನದಲ್ಲಿ ಪ್ರಾಣಲಿಂಗವಾಗಿ, ಭಾವದಲ್ಲಿ ಭಾವಲಿಂಗವಾಗಿ ಪರಿಶೋಭಿಸುವದೆಂದು ತಿಳಿದು ಬರುವದು.

ಅಂಗಸ್ಥಲ ೪೪ ಲಿಂಗಸ್ಥಲ ೫೭ ಇದ್ದು, ಒಟ್ಟು ೧೦೧ ಸ್ಥಲಗಳಾಗುವವು, ಇವುಗಳ ವಿವರಣೆಯನ್ನು ಜಗದ್ಗುರು ರೇಣುಕರು ಸಿದ್ಧಾಂತಶಿಖಾಮಣಿಯಲ್ಲಿ ಸುಸ್ಪಷ್ಟ ವಾಗಿ ವಿವರಿಸಿರುವರು. ಅಂಗಸ್ಥಲಗಳಲ್ಲಿ ಭಕ್ತನು ಯಾವರೀತಿ ಆಚರಿಸಬೇಕೆಂಬುವದರ ವಿವರಣೆ ಬಂದಿರುತ್ತದೆ. ಲಿಂಗಸ್ಥಳಗಳಲ್ಲಿ ಆ ಆಚರಣೆಗಳಿಂದ ಮನುಷ್ಯನ ಮೇಲೆ ಯಾವ ಪರಿಣಾಮಗಳಾಗುವವೆಂಬುದರ ವಿವರಣೆಯಿದೆ. ೪-೬-೧೦-೧೨ ೧೬-೨-೧೦೦೦, ೩-೦, ಹೀಗೆ ಕ್ರಮವಾಗಿ ದಳಗಳುಳ್ಳ ಆಧಾರ ಸ್ವಾಧಿಷ್ಟಾನಾದಿ ಕಮಲಗಳಲ್ಲಿ, ಆಚಾರ ಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ,ಮಹಾಲಿಂಗ, ನಿಷ್ಕಳಲಿಂಗ ನಿಶ್ಶೂನ್ಯಲಿಂಗ, ನಿರಂಜನಲಿಂಗ ಎಂದು ಒಂಭತ್ತುಲಿಂಗಗಳು ಇರುವವೆಂದು ಶಿವಾನು ಭಾವಿಗಳ ಸೂಕ್ತಿಗಳಿಂದ ತಿಳಿಯಬರುವದು. ಇಷ್ಟಲಿಂಗವು ಕ್ರಿಯೆಗೆ ಸಂಬಂಧಪಡುತ್ತದೆ. ಆದುದರಿಂದ ಅದಕ್ಕೆ ಕ್ರಿಯಾಲಿಂಗವೆಂದೂ, ದೇವಾಲಯಗಳಲ್ಲಿ ಸ್ಥಾಪಿಸಲ್ಪಟ್ಟ ಸ್ಥಾವರ ಲಿಂಗಗಳಂತೆ ಒತ್ತಟ್ಟಿಗಿರದೆ ದೇಹವೆಂಬ ಗುಡಿಯಲ್ಲಿ ಸ್ಥಾಪಿಸಿದ ಈ ಲಿಂಗವು ಗಮನಾ ಗಮನ ಕ್ರಿಯೆಯುಳ್ಳದ್ದಿರುವದರಿಂದ ಚರಲಿಂಗವೆಂದೂ ಹೇಳುವರು, ಪ್ರಾಣಲಿಂಗವು ಮನಸ್ಸಿಗೆ ಸಂಬಂಧಪಟ್ಟರೆ, ಭಾವಲಿಂಗವು ಜ್ಞಾನಕ್ಕೆ ಸಂಬಂಧಪಡುತ್ತದೆ, ಈ ಕೊನೆಯ ಲಿಂಗಕ್ಕೆ ಜ್ಞಾನಲಿಂಗ, ಸುಜ್ಞಾನಲಿಂಗ, ತೃಪ್ತಿಲಿಂಗವೆಂದು ಹೇಳುವರು. ತನು, ಮನ, ಭಾವಂಗಳಲ್ಲಿರುವ ಇಷ್ಟ, ಪ್ರಾಣ, ಭಾವಲಿಂಗಗಳ ಸಂಬಂಧವು ಹಣ್ಣು ಹಣ್ಣಿ ನೊಳಗಿನ ರಸ, ರಸದೊಳಗಿನ ರುಚಿಯಂತೆ ಇರುವದು, ಇಷ್ಟಲಿಂಗವು ಸಾಕಾರ, ಪ್ರಾಣ ಲಿಂಗವು ಸಾಕಾರನಿರಾಕಾರ. ಭಾವಲಿಂಗವು ನಿರಾಕಾರ. ಆಣೇಕಲ್ಲು ಆಗುವದಕ್ಕಿಂತ ಪೂರ್ವದಲ್ಲಿರುವ ಉಗಿಯು ನಿರಾಕಾರ ನೀರು ಸಾಕಾರ ನಿರಾಕಾರ, ಕೈಯಿಂದ ಹಿಡಿಯಲು ಬರುವ ಆಣೇಕಲ್ಲು ಸಾಕಾರ, ಬೆಣ್ಣೆಯೊಳಗೆ ಅವ್ಯಕ್ತವಾಗಿರುವ ತುಪ್ಪ ನಿರಾಕಾರ. ಬೆಣ್ಣೆ ಕರಗಿ ತುಪ್ಪವಾಗುವದು ಸಾಕಾರನಿರಾಕಾರ, ಕರಗಿದ ತುಪ್ಪ ಹೆತ್ತುಪ್ಪವಾಗುವದು ಸಾಕಾರ ಇದನ್ನೇ ಘೃತಕಾಠಿಣ್ಯ ನ್ಯಾಯವೆಂದು ಹೇಳುವರು, ಓರ್ವ ಕುಶಲನಾದ ಚಿತ್ರಕಾರನು ವಿವಿಧ ವರ್ಣರಂಜಿತ ಚಿತ್ರವನ್ನು ತೆಗೆಯಲುಪಕ್ರಮಿಸಿ ಮೊದಲು ಆತನು ತೆಗೆಯಬೇಕಾದ ಸುಂದರ ಚಿತ್ರದ ರೂಪುರೇಷೆಗಳನ್ನು ಮನದಲ್ಲಿ ಚಿಂತನಮಾಡುವನು. ನಂತರ ಒಂದು ವಿಶಾಲ ಫಲಕದ ಮೇಲೆ ಅದರ ನಕಾಶ ತೆಗೆಯುವನು. ಆಮೇಲೆ ಚಿತ್ರವನ್ನು ತೆಗೆದು

ಆಯಾಯ ಸ್ಥಾನಗಳಿಗೆ ತಕ್ಕಂತೆ ಬಗೆಬಗೆಯ ಬಣ್ಣಗಳನ್ನು ತುಂಬಿ ಚಿತ್ತಾಕರ್ಷಕವಾಗು ವಂತಹ ಚಿತ್ರ ತೆಗೆಯುವವನು, ಸುಂದರ ಚಿತ್ರದ ಕಲ್ಪನೆಯು ಮನದಲ್ಲಿ ಮೂಡಿದುದು ನಿರಾಕಾರ, ವಿಶಾಲ ಫಲಕದ ಮೇಲೆ ರೇಖಾಚಿತ್ರ ತೆಗೆದುದು ಸಾಕಾರ ನಿರಾಕಾರ, ಸಂಪೂರ್ಣ ಚಿತ್ರ ಬರೆದು ಸಿದ್ಧಪಡಿಸಿದ್ದು ಸಾಕಾರ. ದೀಪ, ದೀಪದ ಕಿರಣ, ದೀಪದ ಪ್ರಭೆಗಳಲ್ಲಿ ವ್ಯಾಪ್ಯ-ವ್ಯಾಪಕಭಾವ ಸಂಬಂಧವಿರುವದೆಂದು ಅನುಭಾವಿಗಳು ಹೇಳುವರು. ಇಷ್ಟ ಲಿಂಗವು ವ್ಯಾಪ್ಯ. ಪ್ರಾಣಲಿಂಗವು ಇಷ್ಟಲಿಂಗದ ದೃಷ್ಟಿಯಿಂದ ವ್ಯಾಪಕ, ಭಾವಲಿಂಗದ ದೃಷ್ಟಿಯಿಂದ ವ್ಯಾಪ್ಯ ಭಾವಲಿಂಗವು ವ್ಯಾಪಕ.

ದೀಪ, ದೀಪದಕಿರಣ, ದೀಪದ ಪ್ರಭೆಗಳಂತೆ, ಸೂರ್ಯ, ಸೂರ್ಯನಕಿರಣ, ಸೂರ್ಯನ ಪ್ರಭೆ, ಚಂದ್ರ, ಚಂದ್ರನಕಿರಣ, ಚಂದ್ರಪ್ರಭೆ ಇವುಗಳಲ್ಲಿಯೂ ವ್ಯಾಪ್ಯ ವ್ಯಾಪಕ ಭಾವ ಸಂಬಂಧವುಂಟು.

ಇಷ್ಟಲಿಂಗವು ಅಷ್ಟವಿಧಾರ್ಚನೆ, ಷೋಡಶೋಪಚಾರಾದಿ ಕ್ರಿಯೆಗಳಿಗೆ ಸಂಬಂಧ ಪಡುವದರಿಂದ ಕ್ರಿಯಾಲಿಂಗವೆಂದೂ, ದೇಹವೆಂಬ ಗುಡಿಯಲ್ಲಿ ಸದ್ಗುರುವಿನಿಂದ ಸ್ಥಾಪಿಸಲ್ಪಟ್ಟ ಇಷ್ಟಲಿಂಗವು ದೇವಾಲಯದಲ್ಲಿ ಸ್ಥಾಪಿಸಲ್ಪಟ್ಟ ಸ್ಥಾವರಲಿಂಗದಂತೆ ಒತ್ತಟ್ಟಿಗಿರದೆ ಲಿಂಗಧಾರಿಯೊಡನೆ ಅತ್ತಿತ್ತ ಚರಿಸುವದರಿಂದ ಚರಲಿಂಗವೆಂದೂ ಹೇಳುವರು. ಪ್ರಾಣಲಿಂಗವು ಮನಸ್ಸಿಗೆ ಸಂಬಂಧಪಡುತ್ತದೆ, ಈ ಲಿಂಗಕ್ಕೆ ಜ್ಞಾನಲಿಂಗ, ಸುಜ್ಞಾನಲಿಂಗ, ತೃಪ್ತಿಲಿಂಗವೆಂದು ಕರೆಯುವರು.

ವ್ಯಾಪ್ಯ, ವ್ಯಾಪ್ಯವ್ಯಾಪಕ, ವ್ಯಾಪಕಗಳಾದ ಸರೂಪ, ನಿರೂಪ, ನಿರುಪಾಧಿಗಳೆನಿಸಿದ ಇಷ್ಟ ಪ್ರಾಣ, ಭಾವಲಿಂಗಗಳ ಅನ್ಯೋನ್ಯ ಸಂಬಂಧವನ್ನು ಶ್ರೀಮನ್ನಿಜಗುಣಶಿವಯೋಗಿಗಳು

" ಭಾವಲಿಂಗವನು ಬಿಡದೆ ನೀನು ಪರಿಭಾವಿಸು ಭೇದವಿಲ್ಲದ ಯೋಗಿ ॥
ದೀಪವ ದೀಪದ ಕಿರಣವ ತಾನೆ ವ್ಯಾಪಿಸಿ ತೋರುವ ಪ್ರಭೆಯಂತೆ ।
ರೂಪಿಸಿ ಬೆಳಗುವಿಷ್ಟ ಪ್ರಾಣಲಿಂಗಾರೋಪವಿಲ್ಲದ ನಿರುಪಾಧಿಯ ॥ "

ಎಂಬ ಪದ್ಯದಲ್ಲಿ ಹೃದಯಂಗಮವಾಗಿ ಹೇಳಿರುವರು.

ಪೂರ್ವಮೀಮಾಂಸಕರು ಯಜ್ಞಯಾಗಾದಿ ಕರ್ಮಗಳಿಂದಲೇ ಮುಕ್ತಿಯೆಂದು ಹೇಳಿದರೆ ಅದ್ವೈತಿಗಳು " ಜ್ಞಾನಾದೇವತು ಕೈವಲ್ಯಂ " " ತತ್ತ್ವಜ್ಞಾನೇನ ಮುಕ್ತಿಃ ಸ್ಯಾತ್ " ಮುಂತಾದ ಸಬಲಪ್ರಮಾಣಗಳನ್ನು ಆಶ್ರಯಿಸಿ ಜ್ಞಾನದಿಂದಲೇ ಮುಕ್ತಿ ಯೆಂದು ಹೇಳುವರು. ಈ ಕರ್ಮಜ್ಞಾನಗಳ ಸಮುಚ್ಚಯವು ಕ್ರಮ ಸಮುಚ್ಚಯ, ಸಮ ಗಳಿಂದ ದೂಷಿತವಾದ ಚಿತ್ತವು ಮಲಿನವಾದ ದರ್ಪಣವು ಶುದ್ಧೀಕರಣ ಸಾಮಾಗ್ರಿಯಿಂದ ಬೆಳಗಿದಾಗ ಥಳಥಳ ಹೊಳೆಯುವಂತೆ, ದೈಹಿಕ, ವಾಚಿಕ, ಮಾನಸಿಕ ಎಂಬ ತ್ರಿವಿಧ ತಪಸ್ಸಿ ನಿಂದ ಶುದ್ಧವಾಗಿ ಅಲ್ಲಿ ಜ್ಞಾನೋದಯವಾಗುವದು. ಮೊದಲು ಸತ್ಕರ್ಮಾನುಷ್ಠಾನ ತದನಂತರ ಜ್ಞಾನ ಇದು ಕ್ರಮ ಸಮುಚ್ಚಯ.

" ಚಿತ್ತಸ್ಯ ಶುದ್ಧಯೇ ಕರ್ಮ ನತು ವಸ್ತೂಪಲಬ್ಧಯೇ ।
ವಸ್ತು ಸಿದ್ಧಿರ್ವಿಚಾರೇಣ ನ ಕಿಂಚಿತ್ ಕರ್ಮಕೋಟಿಭಿಃ ॥ "

ಜ್ಞಾನದಿಂದ ಆತ್ಮಸಾಕ್ಷಾತ್ಕಾರವಾಗುವದಲ್ಲದೆ, ಕರ್ಮದಿಂದ ಆತ್ಮಸಾಕ್ಷಾತ್ಕಾರವಾಗದು. ಕರ್ಮವು ಚಿತ್ತಶುದ್ಧಿಗೆ ಸಾಧನಮಾತ್ರ. ಕರ್ಮದಿಂದ ಚಿತ್ತಶುದ್ಧಿಯಾಗಿ ಜ್ಞಾನೋದಯ ವಾಗುವದು. ಹೀಗೆ ಕ್ರಮಶಃ ಹೇಳುವದೇ ಕರ್ಮಜ್ಞಾನಗಳ ಕ್ರಮಸಮುಚ್ಚಯ ಕರ್ಮ ಜ್ಞಾನಗಳೆರಡಕ್ಕೂ ಸಮಸಮಾನವಾದ ಪ್ರಾಧಾನ್ಯತೆ ಹೇಳುವದೇ ಸಮಸಮುಚ್ಚಯ ವಾದವು. ಸಮಸಮುಚ್ಚಯದಲ್ಲಿ ಬರುವ ಕರ್ಮಜ್ಞಾನಗಳ ವ್ಯಾಖ್ಯೆಯೇ ಬೇರೆ ಬಗೆ ಯಾಗಿದೆ, ಜಗದ್ಗುರು ರೇಣುಕರು ಸಿದ್ಧಾಂತಶಿಖಾಮಣಿಯಲ್ಲಿ ವೀರಶೈವರು ಆಚರಿಸುವ ತಪ, ಕರ್ಮ, ಜಪ, ಧ್ಯಾನ, ಜ್ಞಾನ ಎಂಬ ಪಂಚಶಿವಯಜ್ಞಗಳನ್ನು ಹೇಳುವಾಗ ತಪಸ್ಸು ಮೊದಲಾದವಕ್ಕೆ ಬೇರೆಬೇರೆ ಅರ್ಥವನ್ನು ಹೇಳಿ ಕರ್ಮ ಮತ್ತು ಜ್ಞಾನಕ್ಕೂ ಬೇರೆ ಅರ್ಥ ಹೇಳಿರುವರು. ಶಿವಪೂಜೆ, ಗುರುಸೇವೆ, ಜಂಗಮದಾಸೋಹ ಮುಂತಾದ ಕ್ರಿಯಾಕಲಾಪವೇ ಕರ್ಮವಲ್ಲದೆ ಜ್ಯೋತಿಷ್ಟೋಮಾದಿಯಾಗಗಳು ಕರ್ಮವಲ್ಲವೆಂದೂ,

" ಶಿವಾಗಮಾರ್ಥವಿಜ್ಞಾನಂ ಜ್ಞಾನಂ ನಾನ್ಯಾರ್ಥವೇದನಂ "

ಕಾಮಿಕಾದ್ಯಿ ಶಿವಾಗಮಪಠನ, ಶಿವಾನುಭವಕಥನ, ಶಿವತತ್ತ್ವಚಿಂತನ, ಶಿವಗೋಷ್ಠಿ ಮಂಥನ ಮುಂತಾದುದನ್ನು ಮಾಡುವದೇ ಜ್ಞಾನವಲ್ಲದೆ, ಘಟ ಪಟ ನ್ಯಾಯಮಾಡುವ ಇತರ ಜ್ಞಾನವು ಮಿಥ್ಯಾಜ್ಞಾನವೆಂದೂ ಹೇಳಿರುವರು.

ಹಕ್ಕಿಯು ಹಾರುವದಕ್ಕೆ ಎರಡು ರೆಕ್ಕೆಗಳು, ಓಟಕ್ಕೆ ಎರಡು ಕಾಲುಗಳು, ಮಾಟಕ್ಕೆ ಎರಡು ಕೈಗಳು, ಕೂಟಕ್ಕೆ ಎರಡು ದೇಹಗಳು, ನೋಟಕ್ಕೆ ಎರಡು ಕಣ್ಣುಗಳು ಹೇಗೆ ಅವಶ್ಯವೋ ಹಾಗೆ ಮೋಕ್ಷಕ್ಕೆ ಜ್ಞಾನಕರ್ಮಗಳೆರಡೂ ಬೇಕು,

" ಅಗ್ನಿ ಸುಡಲರಿವುದಲ್ಲದೆ ಸುಳಿಯಲರಿಯದು,
ವಾಯು ಸುಳಿಯಲರಿವುದಲ್ಲದೆ ಸುಡಲರಿಯದು,
ಅಗ್ನಿ ವಾಯು ಕೂಡಿದಲ್ಲದೆ ಅಡಿಯಿಡಲರಿಯವು "

ಹೀಗೆ ಕ್ರಿಯಾಜ್ಞಾನಗಳು ಅನ್ಯೋನ್ಯ ಸಾಪೇಕ್ಷಗಳು ಜೀವನಿಗೆ ಚರಮಗುರಿಯನ್ನು ಮುಟ್ಟಲು ಜ್ಞಾನಕರ್ಮಗಳೆರಡೂ ಬೇಕೆಂಬ ವಿಷಯದಲ್ಲಿ ಶಿವಶರಣರು ಅನೇಕ ವಚನ ಗಳನ್ನು ಹೇಳಿರುವರು.

" ಕ್ರಿಯೆಯಿಲ್ಲದ ಜ್ಞಾನ ಪ್ರಯೋಜನವಿಲ್ಲವಯ್ಯಾ, ।
ಅದು ಹೇಗೆಂದೊಡೆ ।
ದೇಹವಿಲ್ಲದ ಪ್ರಾಣಕ್ಕೆ ಆಶ್ರಯವುಂಟೇ ಅಯ್ಯಾ ?
ಪ್ರಾಣವಿಲ್ಲದ ಕಾಯಕ್ಕೆ ಚೈತನ್ಯವುಂಟೇ ಅಯ್ಯಾ ?
ಅದು ಕ್ರಿಯೆಯಿಲ್ಲದ ಜ್ಞಾನಕ್ಕೆ ಆಶ್ರಯವಿಲ್ಲ
ಜ್ಞಾನವಿಲ್ಲದ ಕ್ರಿಯೆಗೆ ಆಶ್ರಯವಿಲ್ಲ

" ಕ್ರಿಯಾಜ್ಞಾನ ಪ್ರಕಾಶವಿಲ್ಲದೆ ಲಿಂಗಕ್ಕೆ ಆಶ್ರಯವಿಲ್ಲ,
ಇದುಕಾರಣ ಜ್ಞಾನಕ್ರಿಯೋಪಚಾರಗಳಿರಬೇಕೆಂದನಯ್ಯಾ
ಮಹಾಲಿಂಗಗುರು ಶಿವಸಿದ್ಧೇಶ್ವರಪ್ರಭುವೇ ! "

" ಜ್ಞಾನದಲ್ಲಿ ಅರಿದರೇನಯ್ಯ ? ಸತ್ಕ್ರಿಯಾಚಾರಿಯಾಗದನ್ನಕ್ಕರ ?
ನೆನೆದಮಾತ್ರದಲ್ಲಿ ಕಾಂಬುದೇ ಕಾರ್ಯದಲ್ಲಿಲ್ಲದೇ ?
ಕುರುಡ ಕಾಣ ಪಥವ, ಹೆಳವನಡೆಯಲರಿಯ
ಒಂದಿಲ್ಲದಿದ್ದರೆ ಒಂದಾಗದು.
ಜ್ಞಾನವಿಲ್ಲದ ಕ್ರೀಜಡ, ಕ್ರೀ ಇಲ್ಲದ ಜ್ಞಾನ ಭ್ರಾಂತಿ,
ಇದುಕಾರಣ ಸಿದ್ಧ ಸೋಮನಾಥನಲ್ಲಿ ಎರಡೂಬೇಕು,

ಷಟ್‌ಸ್ಥಲಚಕ್ರವರ್ತಿ ಶ್ರೀಚನ್ನಬಸವಣ್ಣನವರು –

" ಕ್ರಿಯೆಯೇ ಜ್ಞಾನ, ಜ್ಞಾನವೇ ಕ್ರಿಯೆ, ಕ್ರಿಯೆಯೆಂದರೆ ಮಾಡುವದು,
ಜ್ಞಾನವೆಂದರೆ ತಿಳಿಯುವದು, "

ಎಂಬ ವಚನದಲ್ಲಿ ಕ್ರಿಯಾ ಜ್ಞಾನಗಳಿಗೆ ಅಭೇದವಿದೆಯೆಂದು ಹೇಳಿರುವರು. ಮರಣಾನಂತರ ಜೀವಾತ್ಮನು ಏನಾಗುವನು ? ಈ ನಿಗೂಢ ಪ್ರಶ್ನೆಗೆ ಖಚಿತ ಉತ್ತರವನ್ನು ಯಾರೂ ಹೇಳಿಲ್ಲ. ಅದಕ್ಕಾಗಿಯೇ ಆಧುನಿಕ ಕವಿಯೊಬ್ಬನು –

" ಮರಣದಿಂ ಮುಂದೇನು ? ಪ್ರೇತವೋ ಭೂತವೋ ?
ಪರಲೋಕವೋ ಪುನರ್ಜನ್ಮವೋ ಅದೇನೋ !
ಮರಳಿ ಬಂದವರಿಲ್ಲ ವರದಿತಂದವರಿಲ್ಲ. "

ಎಂದು ಹೇಳಿರುವನು, ಆದರೂ ಆಸ್ತಿಕರು ಕೈಲಾಸ, ವೈಕುಂಠ, ದೇವಲೋಕ, ಸ್ವರ್ಗಲೋಕ ಮೊದಲಾದ ಲೋಕದಲ್ಲಿದ್ದು, ಸಾಯುಜ್ಯ, ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ ಪದವಿಗಳಿನ್ನು ಹೊಂದಿ ಸುಖವಾಗಿರುವರೆಂದು ಹೇಳುವರು. ಈ ವಿಷಯದಲ್ಲಿ ಲಿಂಗವಂತರ ಕಲ್ಪನೆಯು ಬೇರೆಬಗೆಯಾಗಿದೆ. ವೀರಶೈವರು ದೇಹಾವಸಾನದಲ್ಲಿ ಹೊಂದುವ ಗತಿಗೆ, ಮೋಕ್ಷ, ಮುಕ್ತಿ, ಸಾಮರಸ್ಯ, ಐಕ್ಯ, ಲಿಂಗಾಂಗಸಾಮರಸ್ಯ ಕೈವಲ್ಯ, ಅದ್ವೈತ ಸಮರಸ, ಸಮರಸಭಾವ ಎಂದು ಹೇಳುವರು, ಮೇಲ್ಕಾಣಿಸಿದ ವಿವಿಧ ಪದಗಳಲ್ಲಿ ಕಂಡು ಬರುವ ಲಿಂಗಾಂಗಸಾಮರಸ್ಯ ಪದದ ಅರ್ಥವೇನೆಂದರೆ ಲಿಂಗದಲ್ಲಿ ಅಂಗನು ಅಂದರೆ ಪರಿಶುದ್ಧ ಜೀವನು ಬೆರೆಯುವದು, ಆಕಾಶದಲ್ಲಿ ತೋರಿದ ಇಂದ್ರಧನಸ್ಸು, ಆಕಾಶದಲ್ಲಿಯೇ, ಗಾಳಿಯಲ್ಲಿ ತೋರಿದ ಸುಳಿಗಾಳಿ ಗಾಳಿಯಲ್ಲಿಯೇ, ಅಗ್ನಿಯಿಂದುದಿಸಿದ ಕಿಡಿ ಅಗ್ನಿಯಲ್ಲಿಯೇ, ಸಮುದ್ರದಲ್ಲಿ ತೋರಿದ ನೊರೆತೊರೆಗಳು ಸಮುದ್ರದಲ್ಲಿಯೇ ಅಡಗುವಂತೆ ಅನಾದಿ ಮಹಾ ಘನವಸ್ತುವಿನಲ್ಲಿ ತೋರಿದ ಶರಣನು ಪರಾತ್ಪರ ಪರವಸ್ತುವಿನಲ್ಲಿಯೇ ಸಮರಸ ಹೊಂದುವನು, ಶಿವಯೋಗಿಯು ಶಿವನಲ್ಲಿ ಸಮರಸವಾಗುವ ಬಗೆ ವಚನಕಾರರು –

" ಘೃತ ಘೃತ ಬೆರೆಸಿದಂತೆ, ಕ್ಷೀರ ಕ್ಷೀರ ಬೆರೆಸಿದಂತೆ,
ತೈಲ ತೈಲ ಬೆರೆಸಿದಂತೆ, ನೀರ ನೀರ ಬೆರೆಸಿದಂತೆ.
ಜ್ಯೋತಿ ಜ್ಯೋತಿ ಬೆರೆಸಿದಂತೆ, ಬಯಲು ಬಯಲು ಬೆರೆಸಿದಂತೆ,
ಪ್ರಾಣ ಪ್ರಾಣ ಸಂಯೋಗವಾದ ಶರಣಲಿಂಗ ಸಮರಸವ
ನೇನೆಂಬೆನಯ್ಯಾ ಮಹಾಲಿಂಗಗುರುಶಿವಸಿದ್ಧೇಶ್ವರ ಪ್ರಭುವೇ "

" ಗಾಳಿ ಗಂಧವನಪ್ಪಿದಂತೆ, ಬಯಲು ಬಯಲನಪ್ಪಿದಂತೆ,
ಬೆಳಗು ಬೆಳಗನಪ್ಪಿಮಹಾಬೆಳಗಾದಂತೆ
ಶರಣ ಲಿಂಗವನಪ್ಪಿ ಮಹಾಲಿಂಗವೇ ತಾನುತಾನಾಗಿ
ನಿರ್ವಯಲಾದನು ನೋಡಾ ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ ।"

ಲಿಂಗಾನುಭಾವಿಯೂ, ಪ್ರಾಣಲಿಂಗಿಯೂ ಆದ ಪಾಲ್ಕುರಿಕೆ ಸೋಮನಾಥರಿಗೆ ಕೈಲಾಸಕ್ಕೆ ಬರುವಂತೆ ಶಿವನಿಂದ ಕರೆಬರಲು ಅವರು "ಶಿವನೇ ನನ್ನ ಲಿಂಗದಲ್ಲಿ ಆಚಾರ ಸಲಿಸಿದ. ಈ ಲಿಂಗದ ಮೇಲಿರುವ ಅಂಗದಲ್ಲಿ ಬೆರೆಯುವದನ್ನು ಬಿಟ್ಟು ನಿನ್ನ ಕೈಲಾಸಕ್ಕೆ ಬರಬೇಕೇ ?" ಎಂದು ಮಾರುತ್ತರವಿತ್ತರಂತೆ. ಕೈಲಾಸ ಕೈಲಾಸವೆನ್ನುತ್ತ ಕೂಡುವದು ಕೈಲಾಗದ ಹೇಡಿಗಳ ಕೆಲಸ. ತನುಮನಧನಂಗಳನ್ನು ಗುರುಲಿಂಗ ಜಂಗಮಕ್ಕೆ ಸವೆಸಿ ಶಿವ ನಲ್ಲಿ ಬೆರೆಯುವದು ಶಿವಯೋಗಿಯ ಮಹಾಕಾರ್ಯ ಎಂಬ ವಿಷಯವನ್ನೇ ಕರ್ಮಯೋಗಿ ಶ್ರೀ ಸಿದ್ಧರಾಮೇಶ್ವರರು–

ಕೈಲಾಸ ಕೈಲಾಸವೆಂದು ಬಡಿದಾಡುವ ಲಿಂಗಿಗಳಿರಾ,
ಕೇಳಿರಯ್ಯಾ ಕೈಲಾಸವೆಂಬುದೊಂದು ಭೂಮಿಯೊಳಿರುವ
ಹಾಳುಬೆಟ್ಟ ಅಲ್ಲಿರುವ ಮುನಿಗಳೆಲ್ಲರೂ ಜೀವಗಳ್ಳರು
ಅಲ್ಲಿರುವ ಚಂದ್ರಶೇಖರನು ಬಹು ಎಡ್ಡ
ಇದರ ಆಡಂಬರವೇಕಯ್ಯ ! ಎಮ್ಮ ಪುರಾತನರಿಗೆ
ಸದಾಚಾರದಿಂದ ವರ್ತಿಸಿ, ಲಿಂಗಾಂಗ ಸಮರಸವ ತಿಳಿದು
ನಿಮ್ಮ ಪಾದಪದ್ಮದೊಳು ಬಯಲಾದ ಪದವಿಯೇ ಕೈಲಾಸ
ವಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ"

ಎಂಬ ವಚನದಿಂದ ಸುಂದರವಾಗಿ ಹೇಳಿರುವರು.

ಸಾಮಾನ್ಯವಾಗಿ ಯೋಗ ಅಂದರೆ ಕೂಡುವಿಕೆ ಎಂದರ್ಥ. ಸಂಕರಯೋಗ, ಸಂಸೃಷ್ಟಿ ಯೋಗ, ಸಮರಸಯೋಗ ಎಂದು ಯೋಗವು ಮೂರು ಬಗೆಯಾಗಿದೆ. ಗೋದಿ, ಕಡಲೆ, ಜೋಳ ಮುಂತಾದ ವಿಜಾತೀಯ ಧಾನ್ಯಗಳು ಒಂದರಲ್ಲಿ ಒಂದು ಬೆರೆತರೆ ಅದು ಸಂಕರ ಯೋಗ. ಹಾಲಿನಲ್ಲಿ ನೀರು ಕೂಡಿದರೆ ಅದು ಸಂಸೃಷ್ಟಿಯೋಗ. ಹಾಲಿನಲ್ಲಿ ಹಾಲು ಕೂಡಿ ದರೆ ಅದು ಸಮರಸಯೋಗ. ವಿಜಾತೀಯ ಧಾನ್ಯಗಳು ಒಂದರಲ್ಲಿ ಒಂದು ಕೂಡಿದರೆ ಅವನ್ನು ಆರಿಸಿ ಬೇರ್ಪಡಿಸಲು ಬರುವದು. ಹಾಲಿನಲ್ಲಿ ನೀರು ಕೂಡಿದರೂ ಅದನ್ನು

ಆಧುನಿಕ ಯಂತ್ರಸಾಮಗ್ರಿಯಿಂದ ಬೇರ್ಪಡಿಸಲು ಬರುವದು. ಹಾಲಿನಲ್ಲಿ ಹಾಲನ್ನೇ ಕೂಡಿಸಿದರೆ ಮೊದಲಿದ್ದ ಹಾಲಿನಿಂದ ಕೂಡಿಸಿದ ಹಾಲನ್ನು ಬೇರ್ಪಡಿಸಲು ಬರುವದೇ ? ವೀರಶೈವರು ಹೇಳುವ ಯೋಗವೆಂದರೆ ಸಮರಸಯೋಗ. ಷೋಡಶ ಸಂಸ್ಕಾರಗಳಲ್ಲಿ ಕೊನೆಯದಾದ ಅಂತ್ಯೇಷ್ಟಿವಿಧಿಯನ್ನು ಮಾಡುವ ಪ್ರಸಂಗದಲ್ಲಿ ಮಾಹೇಶ್ವರರು —

" ಕೈಲಾಸಲೋಕದಿಂದಲಾ ಪರಮನಪ್ಪಣೆವಿಡಿದು
ಶಿವನ ವಂಶೋದ್ಭವನಾಗಿ ಮರ್ತ್ಯಕ್ಕವತರಿಸಿ
ವಿವರಿಸುತ ತತ್ತ್ವಮಂ ತವೆತಿಳಿದು ಆಚರಿಸಿ
ಶಿವನಲ್ಲಿ ಸಮರಸವಾದ ಬಳಿಕ ಮರಳಿ ಮರ್ತ್ಯಕ್ಕಿಳಿ
ಯಬೇಡೆಂದು ಸುವರ್ಣ ಪುಷ್ಪವನೀವೆನು "

ಎಂಬ ಮಂತ್ರಪಠನ ಮಾಡುವರು. ಈ ಮಂತ್ರದಲ್ಲಿರುವ–

" ಶಿವನಲ್ಲಿ ಸಮರಸವಾದ ಬಳಿಕ ಮರಳಿ ಮರ್ತ್ಯಕ್ಕಿಳಿಯಬೇಡ "

ಎಂಬ ಮಂತ್ರ ಭಾಗವು ಶಿವನಲ್ಲಿ ಸಾಮರಸ್ಯ ಹೊಂದುವ ಬಗೆಯನ್ನೇ ಹೇಳುತ್ತದೆ.

ನಿಗಿನಿಗಿ ಉರಿಯುವ ಕೆಂಡದಿಂದ ಮಾಡಿದ ಗಂಡನಿಗೂ, ಸುಗಂಧ ಕರ್ಪೂರದಿಂದ ಮಾಡಿದ ಕನ್ನೆಗೂ ಲಗ್ನ ಸಮಾರಂಭ ನಡೆಯಿತಂತೆ ! ಅಗ್ನಿಪುರುಷನ ವಾಮಭಾಗದಲ್ಲಿ ಕಪ್ಪುರದ ವಧುವನ್ನು ಕೂಡಿಸಿ, ಮಂತ್ರ ಪಠನ ಪೂರ್ವಕ ಅಕ್ಷತೆಗಳನ್ನು ಹಾಕುವಷ್ಟರಲ್ಲಿ ವಧುವೇ ಕಣ್ಮರೆಯಾಗಿ ಹೋಗಿತ್ತಂತೆ ! ಇಲ್ಲಿ ವಧುವನ್ನು ಯಾರೂ ಅಪಹರಿಸಿಕೊಂಡು ಹೋಗಿಲ್ಲ. ಅಥವಾ ಸ್ವಯಮೇವ ಬೇರೆಡೆ ಹೋಗಿಲ್ಲ ಕಪ್ಪುರದ ವಧುವು ಜ್ಯೋತಿ ಪುರುಷನಲ್ಲಿ ಬೆರೆತು ತಾನೂ ಜ್ಯೋತಿಯಾಗಿಯೇ ಹೋಗಿರುವಳು. ಹೀಗೆಯೇ ಶರಣನು ಶಿವನಲ್ಲಿ ಬೆರೆತು ಶಿವನಾಗಿಯೇ ಹೋಗುವನು.

ಕಲ್ಲು, ಕಟ್ಟಿಗೆ, ಸಕ್ಕರೆಗಳಿಂದ ಮಾಡಿದ ಗೊಂಬೆಗಳನ್ನು ನೀರಲ್ಲಿ ಈಜಾಡಲುಬಿಟ್ಟರೆ ಕಲ್ಲಿನ ಗೊಂಬೆಯು ಕರಗದು ನೆನೆಯದು. ಕಟ್ಟಿಗೆಯ ಗೊಂಬೆಯು ಕರಗದಿದ್ದರೂ ನೆನೆದು ಉಬ್ಬುವದು. ಆದರೆ ಸಕ್ಕರೆಯ ಗೊಂಬೆಯು ಮಾತ್ರ ಕರಗಿ ನೀರಿನೊಡನೆ ಕೂಡಿ ನೀರೇ ಆಗಿ ಹೋಗುವದು. ಶರಣನು ಲಿಂಗವಪೂಜಿಸಿ ಲಿಂಗವೇ ತಾನಾಗುವನು ಎಂಬ ವಿಷಯದಲ್ಲಿ —

" ಶಿವನೊಳಗೆ ವಿಶ್ವಾಸ ಶಿವನೊಳಗೆ ನಂಬಿಗೆಯು
ಶಿವನೊಳಗೆ ಮೋಹವಿರೆ ತಾನೆ ಶಿವನು "

ಎಂದು ಅನುಭಾವಿಗಳೂ,

" ಜ್ಯೋತಿ ಮುಟ್ಟಿದ ಬತ್ತಿ ಎಲ್ಲಾ ಜ್ಯೋತಿಯಪ್ಪುದಯ್ಯಾ !
ಸಾಗರವ ಮುಟ್ಟಿದ ನದಿಗಳೆಲ್ಲ ಸಾಗರವಪ್ಪುವಯ್ಯಾ !
ಪ್ರಸಾದ ಮುಟ್ಟಿದ ಪದಾರ್ಥವೆಲ್ಲ ಪ್ರಸಾದವಪ್ಪುದಯ್ಯಾ !
ಲಿಂಗವ ಮುಟ್ಟಿದ ಅಂಗವೆಲ್ಲ ಲಿಂಗವಪ್ಪುದಯ್ಯಾ !
ಸಕಳೇಶ್ವರದೇವಾ ನಿಮ್ಮ ಮುಟ್ಟಿದವರೆಲ್ಲ ನಿಮ್ಮಂತಪ್ಪರಯ್ಯಾ,"

ಎಂದು ವಚನಕಾರರೂ ಹೇಳಿರುವರು.

ಭಕ್ತಸ್ಥಲದಲ್ಲಿದ್ದ ಉಪಾಸಕನು ಕ್ರಿಯಾಶಕ್ತಿಯಿಂದ ಕೂಡಿದ ಆಚಾರಲಿಂಗವನ್ನು ಶ್ರದ್ಧಾಭಕ್ತಿಯಿಂದ ಅರ್ಚಿಸಿ ಘ್ರೇಯ ಪದಾರ್ಥವನ್ನು ಆ ಲಿಂಗಕ್ಕೆ ಅರ್ಪಿಸಲು ಆ ಗಂಧ ಪದಾರ್ಥವೇ ಗಂಧ ಪ್ರಸಾದವಾಗುವದು. ಆ ಗಂಧ ಪ್ರಸಾಧವನ್ನೇ ಲಿಂಗಾಂಗಿಯು ಚಿತ್ತ ವೆಂಬ ಹಸ್ತದಿಂದ ತಕ್ಕೊಂಡು ನಾಸಿಕಾ ಮುಖದಿಂದ ಆಚಾರ ಲಿಂಗಕ್ಕೆ ಅರ್ಪಿಸುವನು.

ಮಾಹೇಶ ಸ್ಥಲದಲ್ಲಿದ್ದ ಉಪಾಸಕನು ಜ್ಞಾನಶಕ್ತಿಯಿಂದ ಕೂಡಿದ ಗುರುಲಿಂಗವನ್ನು ಜ್ಞಾನಭಕ್ತಿಯಿಂದ ಅರ್ಚಿಸಿ ರಸ್ಯಪದಾರ್ಥವನ್ನು ಆ ಲಿಂಗಕ್ಕೆ ಅರ್ಪಿಸಲು ಆ ರಸಪದಾರ್ಥವೇ ರಸಪ್ರಸಾದವೆನಿಸುವದು. ಆ ರಸಪ್ರಸಾದವನ್ನೇ ಲಿಂಗಾಂಗಿಯು ಬುದ್ಧಿಹಸ್ತದಿಂದ ತಕ್ಕೊಂಡು ಜಿಹ್ವಾಮುಖದಿಂದ ಗುರುಲಿಂಗಕ್ಕೆ ಅರ್ಪಿಸುವನು. ಹೀಗೆ ಭಕ್ತನು ಷಟ್ ಶಕ್ತಿಗಳಿಂದ ಕೂಡಿದ ಷಡ್ಲಿಂಗಗಳನ್ನು ಷಡ್ಭಕ್ತಿಗಳಿಂದ ಅರ್ಚಿಸಿ ಷಟ್‌ಪದಾರ್ಥಗಳನ್ನು ಲಿಂಗಕ್ಕೆ ಅರ್ಪಿಸಲು ಅವು ಷಟ್ಪ್ರಸಾದಗಳಾಗುವವು. ಅವನ್ನೇ ಷಡ್ವಿಧ ಹಸ್ತದಿಂದ ತಕ್ಕೊಂಡು ಷಡ್ವಿಧ ಮುಖದಿಂದ ಆಯಾಯ ಲಿಂಗಗಳಿಗೆ ಸಮರ್ಪಿಸುವನು. ಇಂತಹ ಶಿವ ಭಕ್ತನಕಾಯವು ಪ್ರಸಾದಕಾಯವೆನಿಸುವದು. ಸಾಗರವ ಸೇರಿದ ನದಿಗಳೆಲ್ಲ ಸಾಗರವೇ ಆಗಿಹೋಗುವಂತೆ ಲಿಂಗಾರ್ಚನೆಯ ಮಾಡುವ ಲಿಂಗವಂತನು ತಾನೇಲಿಂಗವಾಗಿ ಹೋಗುವನು. ಇದನ್ನೇ ಅಕ್ಕಮಹಾದೇವಿಯು –

> " ಮುತ್ತು ನೀರಲಾಯಿತ್ತು, ವಾರಿಕಲ್ಲು ನೀರಲಾಯಿತ್ತು,
> ಉಪ್ಪು ನೀರಲಾಯಿತ್ತು, ಉಪ್ಪು ಕರಗಿತ್ತು, ವಾರಿಕಲ್ಲು ಕರಗಿತ್ತು,
> ಮುತ್ತುಕರಗಿದುದನು ಆರೂ ಕಂಡವರಿಲ್ಲ,
> ಈ ಸಂಸಾರಿ ಮಾನವರು ಲಿಂಗವ ಮುಟ್ಟದೇ
> ಭವಭಾರಿಗಳಾದರು ನಾ ನಿಮ್ಮ ಮುಟ್ಟಿ ಕರಿಗೊಂಡೆ
> ನಯ್ಯಾ ಚನ್ನಮಲ್ಲಿಕಾರ್ಜುನಯ್ಯಾ ... "

ಎಂದು ಹೇಳಿರುವಳು. ಉಪ್ಪು, ಆಣೇಕಲ್ಲು, ಮುತ್ತು ಈ ಮೂರೂ ನೀರಿನಿಂದ ಹುಟ್ಟಿ ದರೂ, ಉಪ್ಪು ಆಣೇಕಲ್ಲುಗಳು ನೀರಲ್ಲಿ ಕರಗಿ ಹೋಗುವವು. ಆದರೆ ಅತ್ಯಮೂಲ್ಯ ಬೆಲೆ ಯುಳ್ಳ ಮುತ್ತುಮಾತ್ರ ಕರಗದು. ಲಿಂಗವ ಮನಮುಟ್ಟಿ ಪೂಜಿಸಿದವರು ಮುತ್ತು ಇದ್ದಂತೆ, ಅವರು ಮುಕ್ತರು. ಮನಮುಟ್ಟಿಲಿಂಗವನ್ನು ಪೂಜೆ ಮಾಡದವರು. ಉಪ್ಪು ಆಣೇಕಲ್ಲುಗಳಿದ್ದಂತೆ. ಅವರು ಭವಚಕ್ರದಲ್ಲಿ ಸುತ್ತುವರು.

ಸಾರೂಪ್ಯ, ಸಾಲೋಕ್ಯ, ಕೈಲಾಸ, ವೈಕುಂಠ, ಸ್ವರ್ಗ ಮೊದಲಾದ ಪದವಿಗಳಿ ಗಿಂತಲೂ ಲಿಂಗಾಂಗ ಸಾಮರಸ್ಯದ ಸೌಖ್ಯವು ಮೇಲಾದುದು. ಚಳಿಯಿಂದ ನಡುಗುವ ಮಂಗಗಳು ಚಳಿಯನ್ನು ಕಳೆದುಕೊಳ್ಳುವದಕ್ಕೋಸ್ಕರ ಮಿಂಚು ಹುಳುವನ್ನೇ ಬೆಂಕಿ ಯೆಂದು ಭ್ರಮಿಸಿ ಅದಕ್ಕೆ ಕಾಸುವದು ಹೇಗೆ ವ್ಯರ್ಥವಾದುದೋ ಹಾಗೆಯೇ ವೀರ

ಶೈವಕ್ಕೆ ಭಿನ್ನದಾದ ಧರ್ಮವನ್ನು ಹಿಡಿದು ಮುಕ್ತಿಸೌಖ್ಯವನ್ನು ಪಡೆಯುವದೂ ವ್ಯರ್ಥವಾದುದು.

ಬಲ್ಲಿದರಿಗೆ ಬಲ್ಲಿದನಾದ ಅಲ್ಲಮಪ್ರಭುವಿನಿಂದ ನಾಲ್ಕು ದಳದ ಆಧಾರ ಮೊದಲಾದ ನವಚಕ್ರಗಳ ಆಚಾರಾದಿ ನವಲಿಂಗಗಳ, ಷಟ್‌ಶಕ್ತಿ, ಷಡ್ಭಕ್ತಿ, ಷಟ್ಪ್ರಸಾದಗಳ, ವಿವರವನ್ನು ಅರಿತು ಲಿಂಗಾಂಗ ಸಾಮರಸ್ಯದಲ್ಲಿ ಬೆರೆತು ಸಿದ್ಧರಾಮನು ಕೃತಕೃತ್ಯನಾದನು. ಸಿದ್ಧರಾಮನ ಅಹಂಕಾರ ಮೋಹಾದಿಗಳು, ಕೀರ್ತಿಕಾಮನೆಗಳು ಮಾಯವಾಗಿ ಹೃದಯದಲ್ಲಿ ಜ್ಞಾನಜ್ಯೋತಿಯು ಬೆಳಗಹತ್ತಿತು. ಆಗ ಸಿದ್ಧರಾಮನು ಪ್ರಭುವೇ ನಿನ್ನ ಕೃಪೆಯಿಂದ ನಾನು ಪರಮಪಾವನನಾದೆನು ಎಂದು ಶರಣಾಗತನಾಗಿ ಅವನ ಅಡಿಗಳಲ್ಲಿ ನಮಸ್ಕರಿಸಿದನು.



೧೪ನೆಯ ಗತಿ

# ಪ್ರಭುದೇವರು ಕಲ್ಯಾಣಕ್ಕೆ ಬಂದದು

ಮಾನವನಿಗೆ ದೇಹ, ಪ್ರಾಣ, ಆತ್ಮಗಳು ಇರುವಂತೆ ವೀರಶೈವಧರ್ಮ ಪುರುಷನಿಗೆ ಅಷ್ಟಾವರಣವೆಂಬ ಅಂಗವೂ, ಪಂಚಾಚಾರವೆಂಬ ಪ್ರಾಣವೂ, ಷಟ್‌ಸ್ಥಲವೆಂಬ ಆತ್ಮವೂ ಇರುವವು. ದೇಹಕ್ಕಿಂತ ಪ್ರಾಣವೂ, ಪ್ರಾಣಕ್ಕಿಂತ ಪಂಚಾಚಾರಗಳೂ, ಪಂಚಾಚಾರಗಳಿಗಿಂತ ಷಟ್‌ಸ್ಥಲಗಳೂ ಸೂಕ್ಷ್ಮವಾಗಿರುವವು. ತಂತಿ ಇರದೆ ವಿದ್ಯುತ್ತು, ಕಟ್ಟಿಗೆ ಇಲ್ಲದೆ ಬೆಂಕಿ ಕಾಣದಹಾಗೆ ದೇಹವಿಲ್ಲದೆ ಆತ್ಮನು ಪ್ರಕಟವಾಗಿ ತೋರನು. ನಿರಾಕಾರ, ನಿರವಯವ ನಿರ್ಗುಣ ಆತ್ಮನು ಪ್ರಕಟವಾಗಲು ಸಾಕಾರ, ಸಾವಯುವ, ಸಗುಣ ದೇಹವು ಬೇಕೇಬೇಕು. ಆತ್ಮನಿಲ್ಲದ ದೇಹಕ್ಕೆ, ದೇಹವಿಲ್ಲದ ಆತ್ಮಕ್ಕೆ ಬೆಲೆಬಾರದು. "ಶರೀರಮಾದ್ಯಂ ಖಲು ಧರ್ಮ ಸಾಧನಂ" ಎಂಬುಕ್ತಿಯಂತೆ ಧರ್ಮಾಚರಣೆಗೆ ಶರೀರವೇ ಮೂಲಸಾಧನವಾದಂತೆ ಪಂಚಾಚಾರಗಳ ಪರಿಪಾಲನೆಗೆ, ಷಟ್‌ಸ್ಥಲಗಳ ಆಚರಣೆಗೆ ಅಷ್ಟಾವರಣ ರೂಪ ಲಿಂಗವು ಪ್ರಮುಖವಾದುದು. ಗುರು, ಲಿಂಗ, ಜಂಗಮ ಈ ಮೂರು ಪೂಜ್ಯವಸ್ತುಗಳೆಂದೂ, ವಿಭೂತಿ, ರುದ್ರಾಕ್ಷಿ ಮಂತ್ರಗಳು ಪೂಜಾಸಾಧನಗಳೆಂದೂ, ಪಾದೋದಕ ಪ್ರಸಾದಗಳು ಪೂಜೆಯಿಂದ ಪಡೆವ ಫಲಗಳೆಂದೂ ಷಟ್‌ಸ್ಥಲ ಸಿದ್ಧಾಂತವು ಹೇಳುತ್ತದೆ. ಗುರುಲಿಂಗ ಜಂಗಮ ಈ ಮೂರರ ಮಧ್ಯದಲ್ಲಿರುವ ಲಿಂಗವು ಆದ್ಯಂತದಲ್ಲಿರುವ ಗುರು ಜಂಗಮರಿಗೆ ಪೂಜ್ಯವಾದದ್ದು. ಸ್ವಯಂ ಗುರುವು ತಾನೇ ಅನಂತ ಶಿಷ್ಯರಿಗೆ ಲಿಂಗವನ್ನು ಕರುಣಿಸಿಕೊಡುತ್ತಿದ್ದರೂ ತಾನು ಲಿಂಗಪೂಜೆಯನ್ನು ಮಾಡಲೇಬೇಕು, ಲಿಂಗದ ಪ್ರಾಣವೆನಿಸಿದ ಜಂಗಮ ಮೂರ್ತಿಯೂ ಲಿಂಗವನ್ನು ಪೂಜಿಸಲೇಬೇಕು. ಶೂನ್ಯ ಸಂಪಾದನೆಯ ನುಲಿಯ ಚಂದಯ್ಯಗಳ ಸಂಪಾದನೆಯಲ್ಲಿ ಗುರು ಜಂಗಮರಿಬ್ಬರಿಗೂ ಲಿಂಗಬೇಕು ಎಂಬ ಸುಂದರ ಸನ್ನಿವೇಶ ಬರುತ್ತದೆ. ಜಂಗಮ ದಾಸೋಹಿಯಾದ ನುಲಿಯಚಂದಯ್ಯನ ಲಿಂಗವು ಹುಲ್ಲುಕೊಯ್ಯುವಾಗ ಸರಿದು ಮಡುವಿನಲ್ಲಿ ಬೀಳಲು ಪರಿಪೂರ್ಣವಹ ವಸ್ತು ಎಲ್ಲಿದ್ದರೇನು ? ಎಂಬ ಭಾವದಿಂದ ಜಂಗಮ ದಾಸೋಹದಲ್ಲಿಯೇ ಲಿಂಗವುಂಟೆಂದು ಲಿಂಗವನ್ನು ಬಿಟ್ಟು ಹೋಗುವಾಗ ಅನೇಕ ಶರಣರು ಅಂಗಕ್ಕೆ ಲಿಂಗವಿರಬೇಕು ಎಂದು ಉಪದೇಶಿಸುವರು. ಆ ಪ್ರಸಂಗದಲ್ಲಿ ಮಡಿವಾಳ ಮಾಚಯ್ಯಗಳು–

"ಗುರುವಾದರೂ ಲಿಂಗವ ಪೂಜಿಸಬೇಕು,
ಲಿಂಗವಾದರೂ ಲಿಂಗವ ಪೂಜಿಸಬೇಕು,
ಜಂಗಮವಾದರೂ ಲಿಂಗವ ಪೂಜಿಸಬೇಕು,
ಜಂಗಮಕ್ಕೆ ಲಿಂಗವಿಲ್ಲದೆ ಪ್ರಾಣವಿಲ್ಲ,
ಆದಿ ಆಧಾರವಿಲ್ಲದೆ ಜಗವೇನು ಇಲ್ಲ,
ಅರಿದಿಹೆನೆಂದರೆ ಅಂಗದಲ್ಲಿ ಲಿಂಗವಿರಬೇಕು,
ಕಲಿದೇವಯ್ಯನನರಿವುದಕ್ಕೆ ಇದೇ ಮಾರ್ಗ ಚಂದಯ್ಯ ॥"

ಎಂದು ಹೇಳುವರು. ಇಲ್ಲಿ ಲಿಂಗಕ್ಕೆ ಜಂಗಮವೇ ಪ್ರಾಣವಾದಂತೆ ಜಂಗಮಕ್ಕೆ ಲಿಂಗವೇ

ಪ್ರಾಣ ಎಂಬ ಮಾತು ಅತಿ ಮಹತ್ವದ್ದು. ಇನ್ನು ಗುರುವಿನ ಮಹಿಮೆಯನ್ನು-

" ನಾಸ್ತಿತತ್ತ್ವಂ ಗುರೋಃ ಪದಂ ॥
ನಗುರೋರಧಿಕಂ ಶಿವಶಾಸನತಃ "

" ಶ್ರೀ ಗುರುವೆ ನೀನೆ ಶರಣಾಗೆನಗೆ ನಿಜಸುಖದ ಸಾಗರವೆ
ಸಕಲವಿದ್ಯಾಗುಣನಿವಾಸ "
" ಹರಮುನಿದರೆ ಗುರುಕಾಯುವ, ' ಗುರು ಮುನಿದರೆ ಹರಕಾಯನು "

ಮುಂತಾದ ಸೂಕ್ತಿಗಳು ಎತ್ತಿ ಹೇಳುತ್ತವೆ, ಸಾಕ್ಷೀ ಭೂತನೆನಿಸಿ, ಜ್ಞಾನಮಾರ್ಗದಲ್ಲಿ ಮೇಲೆನಿಸಿದ ಜಂಗಮ ಮೂರ್ತಿಯೂ ಗುರುಕರುಣಿಸಿದ ಲಿಂಗವನ್ನು ಅಂಗೈಯಲ್ಲಿಟ್ಟು ಪೂಜಿಸುವನಲ್ಲವೇ ?

" ಜಂಗಮೋ ಜಗದ್ಭರಿತಃ "
ಸ್ವಸ್ವರೂಪತಯಾಯೇತು ಜಂಗಮಾ ಇತಿಕೀರ್ತಿತಾಃ''

ಯಾರು ಅತ್ಯಂತ ಶ್ರೇಷ್ಠವಾದ ಜ್ಞಾನಮಾರ್ಗದಲ್ಲಿ ನಡೆಯುವರೋ ಅಂದರೆ ಶಿವಾಭಿನ್ನ ಜ್ಞಾನವುಳ್ಳವರೋ ಅವರೇ ಜಂಗಮರು ಎಂದು ಸಿದ್ಧಾಂತ ಶಿಖಾಮಣಿಯಲ್ಲಿ ಜಂಗಮನ ಲಕ್ಷಣವನ್ನು ಹೇಳಿರುವರು. ಇಂತಹ ಆದರ್ಶ ಜಂಗಮ ಲಕ್ಷಣವನ್ನು ಮುಟ್ಟಿದವರು ಪ್ರಭುದೇವರು. ಅಂತೆಯೇ ಶೂನ್ಯಸಂಪಾದನಾಕಾರರು-

''ಕಾಬರಿಗೆ ಕಂಗಳಿಗಸಾಧ್ಯ ಮುಟ್ಟುವರೆ ಸೋಂಕಿಗಸಾಧ್ಯ
ಮಾತನಾಡಿಸಿ ನೋಡಿದಡೆ ವಾಙ್ಮನಾತೀತ
ನಿಂದರೆ ನೆಳಲಿಲ್ಲ ಸುಳಿದರೆ ಹೆಜ್ಜೆ ಇಲ್ಲ ಪ್ರಭುದೇವ
ರೆಂಬ ಭಾವ ತೋರುತಿದೆ"

ಎಂದು ಬಣ್ಣಿಸಿರುವರು. ಜಂಗಮನು ಏರಬೇಕಾದ ಮೂರು ನಿಲವುಗಳಲ್ಲಿ ಪ್ರಭುದೇವರು ಕೊನೆಯದಾದ ಪರಸ್ಥಲವನ್ನು ಮುಟ್ಟಿದರೂ ಲೋಕೋದ್ಧಾರಕ್ಕಾಗಿ ಚರಸ್ಥಲಕ್ಕಿಳಿದು ಲೋಕಸಂಚಾರವ ಕೈಕೊಂಡರು. ಶಿವಾಚಾರ ಚಕ್ರವರ್ತಿ ಬಸವಣ್ಣ, ಶಿವಾಚಾರ ಸಂಪನ್ನ ಬಸವಣ್ಣ, ಸ್ವಾನುಭವ ಸಾರೋದ್ಧಾರ ಬಸವಣ್ಣ, ಶಿವಸಮಯ ಪ್ರತಿಷ್ಠಾಚಾರ್ಯ ಬಸವಣ್ಣ ಎಂದು ಬಸವನ ಕೀರ್ತಿಯು ದಶದಿಕ್ಕುಗಳಲ್ಲಿ ಪಸರಿಸಿದುದರಿಂದ ಕಾಶ್ಮೀರದಿಂದ ಮಹಾದೇವ ಭೂಪಾಲನೂ, ಅಫಗಾನಿಸ್ಥಾನದಿಂದ ಮರುಳಶಂಕರದೇವರೂ, ಸೌರಾಷ್ಟ್ರ ದಿಂದ ಸೊಡ್ಡಳ ಬಾಚರಸರೂ ಬಸವಣ್ಣನವರ ಸಂದರ್ಶನಕ್ಕಾಗಿ ಬಂದಂತೆ ವಿರಾಗವಿಭು ಪ್ರಭುದೇವರೂ ಬನವಾಸಿಯಿಂದ ಕಲ್ಯಾಣಕ್ಕೆ ಬಸವಣ್ಣನವರ ಭಕ್ತಿ ಭಿಕ್ಷೆಯನ್ನು ಸ್ವೀಕರಿ ಸುವದಕ್ಕೋಸುಗ ಹೊರಟರು.

ಶಿವಯೋಗ ಸಾಮ್ರಾಜ್ಯದ ಸಾರ್ವಭೌಮರಂತಿದ್ದ ಪ್ರಭುದೇವರು ಹೊರಗಿನ ತೋಟ ಗಾರಿಕೆಯ ಮಾಟಕೂಟ ಇಲ್ಲಿಯೇ ತೊಡಗಿ ಕಡುಕಷ್ಟಪಡುತಾ ನೇಗಿಲಯೋಗಿಯಾದ

ಗೊಗ್ಗಯ್ಯನಿಗೆ ತನುವನ್ನೇ ತೋಟವಮಾಡಿ, ಮನವೆಂಬ ಗುದ್ದಲಿಯಿಂದ ಅಗಿದು ಬ್ರಹ್ಮ ಬೀಜವನ್ನು ಬಿತ್ತಿ, ಮುಕ್ತಿಯೆಂಬ ಸುಮಧುರ ಫಲವನ್ನು ಸವಿವ ಪಾರಮಾರ್ಥಿಕ ತೋಟ ಗಾರಿಕೆಯ ಮಾಟಕೂಟಗಳ ರಹಸ್ಯವನ್ನು ತಿಳಿಸಿ ನೇಗಿಲಯೋಗಿಯನ್ನು ಶಿವಯೋಗಿ ಯನ್ನಾಗಿ ಮಾಡಿ; ಗುಪ್ತಭಕ್ತಿಯಿಂದ ಗುಪ್ತಲಿಂಗ ಪೂಜೆಯಮಾಡಿ ಲಿಂಗಾನುಸಂಧಾನ ದಿಂದ ಲಿಂಗದಲ್ಲಿಯೇ ನಿರವಯ ಪದವಿಯನ್ನೈದಲು ಅಜಗಣ್ಣನ ವಿಯೋಗವನ್ನು ತಾಳ ಲಾರದೇ ಮೋಹಪರವಶಳಾಗಿ ಕಂಬನಿಗರೆವ ಮುಕ್ತಾಯಿಯನ್ನು ಜ್ಞಾನೋಪದೇಶದಿಂದ ಸಂತೈಸಿ; ಕೀರ್ತಿವಾರ್ತೆಗಾಗಿ ಕಾಮ್ಯಕರ್ಮಗಳ ಕಗ್ಗಸರಿನಲ್ಲಿ ಸಿಕ್ಕು ಒದ್ದಾಡುವ ಸಿದ್ಧ ರಾಮನನ್ನು ಮೇಲೆತ್ತಿ; ಬಸವಣ್ಣನವರ ಕರ್ಮಕ್ಷೇತ್ರವೆನಿಸಿದ ಕಲ್ಯಾಣಕ್ಕೆ ಬಂದನು. ವಿವಿಧ ಸೌರಭ ಸೂಸುವ ಕುಸುಮಗಳ ಕಂಪಿನಿಂದ ಹೂದೋಟವು ಚೆಂದ ಕಾಣುವಂತೆ, ವಿವಿಧ ಕಾಯಕ ಕೈಕೊಂಡ ಮುಲಿಯಚೆಂದಯ್ಯ, ಮೋಳಿಗೆಯಮಾರಯ್ಯ, ಆಯ್ದಕ್ಕಿಯ ಮಾರಯ್ಯ ಮುಂತಾದ ಶರಣ ಸಂಕುಲದಿಂದ ಕಲ್ಯಾಣವು ಕಂಗೊಳಿಸುತ್ತಿತ್ತು. ಆ ಶರಣ ಸಂದೋಹದ ಮಧ್ಯದಲ್ಲಿ ನಭೋಮಂಡಲದ ನಕ್ಷತ್ರಮಂಡಲದಲ್ಲಿ ಚಂದ್ರ ಬಿಂಬವು ರಾರಾಜಿಸುವಂತೆ ಬಸವರಸರ ಮಹಾಮನೆಯು ಕಾಣುತ್ತಿತ್ತು. ಮನೆಯೆಂದರೆ ಸತಿ-ಸುತಾ ದಿಗಳೊಡನೆ ಕೂಡಿಕೊಂಡಿರುವ ವಾಸಸ್ಥಳವೆಂದು ಹೇಳಬಹುದು. ಸಾಮಾನ್ಯವಾಗಿ ಕೈದಿ ಗಳನ್ನು ಹಾಕುವ ಮನೆಗೆ ಸೆರೆಮನೆಯೆಂದೂ, ಅರಸರಿರುವ ಮನೆಗೆ ಅರಮನೆಯೆಂದೂ, ಗುರುಗಳು ನೆಲಿಸಿದ ಮನೆಗೆ ಗುರುಮನೆಯೆಂದೂ ಕರೆಯುವರು. ಮನೆ ಬೇರೆ ಮಹಾಮನೆ ಬೇರೆ. ಮನೆಯು ಬಂಧನಕಾರಕವಾದರೆ ಮಹಾಮನೆಯು ಬಂಧ ವಿಮೋಚಕವಾದುದು. ಶೂನ್ಯ ಸಂಪಾದನೆಯ ಚತುರ್ಥೋಪದೇಶದಲ್ಲಿ "ಅಸಾಧ್ಯಸಾಧಕ ಬಸವಣ್ಣ ಅಭೇದ್ಯ ಭೇದಕ ಬಸವಣ್ಣ, ರುದ್ರಲೋಕವ ಮರ್ತ್ಯಲೋಕಕ್ಕೆ ತಂದಾತ ಬಸವಣ್ಣ, ಶಿವಾಚಾರದ ಘನವ ಮೆರೆದಾತ ಬಸವಣ್ಣ" ಎಂದು ಬಸವೇಶನನ್ನು ಸ್ತುತಿಸುವ ಪ್ರಸಂಗದಲ್ಲಿ "ಮಹಾಮನೆಯ ಮಾಡಿದಾತ ಬಸವಣ್ಣ" ಎಂಬುದೊಂದು ವಚನಬರುವದು. ಬಸವಣ್ಣ ನವರಿದ್ದುದು ಮನೆಯಲ್ಲ ಅದು ಮಹಾಮನೆ. ಗಿಳಿಯನ್ನು ಪಂಜರದಲ್ಲಿಟ್ಟಂತೆ ನಾಲ್ಕು ಗೋಡೆಗಳ ಮಧ್ಯದಲ್ಲಿ ಮಾನವನನ್ನು ಒತ್ತಟ್ಟಿಗಿರಿಸುವ ತಾಣ ಮನೆ. ಮನೆಯು ಬಂಧನ ಕಾರಕವೆನಿಸಿಯೇ ಭಗವಾನ್ ಬುದ್ಧನು ಅರಮನೆಯನ್ನೂ, ಕಾಶ್ಮೀರ ದೇಶದ ರಾಜನಾದ ಮಹಾದೇವ ಭೂಪಾಲನು ರಾಜ್ಯಕೋಶಗಳನ್ನು ಬಿಟ್ಟು ಹೋದರೆಂದು ಇತಿಹಾಸದಿಂದ ತಿಳಿದುಬರುವದು. ಸನ್ಯಾಸವು ದೇಹ ಸನ್ಯಾಸ ಮತ್ತು ಗೇಹಸನ್ಯಾಸವೆಂದು ಎರಡು ಬಗೆ ಯಾಗಿದ್ದು ದೇಹಸನ್ಯಾಸವೆಂದರೆ ದೇಹಾಭಿಮಾನವನ್ನು ಬಿಡುವದೆಂದೂ ಗೇಹಸನ್ಯಾಸ ವೆಂದರೆ ಮನೆಮಾರುಗಳನ್ನು ಬಿಟ್ಟು ಹೋಗುವದೆಂದೂ ವೇದಾಂತ ಶಾಸ್ತ್ರದಲ್ಲಿಹೇಳಿದೆ.

ಮಹಾರಾಷ್ಟ್ರ, ಮಹಾಭಾರತ, ಮಹಾಯುದ್ಧ ಮೊದಲಾದ ಶಬ್ದಗಳಲ್ಲಿ ಕೇಳ ಬರುವ ಮಹಾಶಬ್ದವು ದೊಡ್ಡದು, ವಿಶಾಲವಾದುದು ಎಂಬರ್ಥವನ್ನು ಕೊಡುತ್ತದೆ. ಮಹಾಮನೆ ಅಥವಾ ದೊಡ್ಡಮನೆ ಎಂಬ ಶಬ್ದಕ್ಕೆ ವಿವಿಧ ಬಣ್ಣದ ವಿದ್ಯುದ್ದೀಪಗಳಿಂದ ಅಲಂಕೃತವಾದ ಮನೆ ಅಥವಾ ಆಧುನಿಕ ವೈಜ್ಞಾನಿಕ ಸುಖ ಸಾಮಗ್ರಿಗಳೆನಿಸಿದ, ದೂರ ದರ್ಶನ, ಫ್ಯಾನ್, ರೇಡಿಯೋ ಮುಂತಾದವುಗಳಿಂದ ಕೂಡಿದ ಮನೆ, ಇಲ್ಲವೆ ಹೇಮ

ಭಂಡಾರ, ರತ್ನಭಂಡಾರ, ವಿಪುಲ ವಸ್ತು ವಾಹನಾದಿಗಳಿಂದ ತುಂಬಿತುಳುಕುವ ಮುಗಿಲು ಮುಟ್ಟುವಷ್ಟು ಎತ್ತರವಾಗಿ ಕಟ್ಟಿದ ಸುಂದರ ಮನೆ, ಮುಖ್ಯ ಮಂತ್ರಿಗಳೆಂಬ ದರ್ಪದಿಂದ ಕೂಡಿದ ಸದನ ಎಂದು ಅರ್ಥವಾಗದೆ, ಪವಿತ್ರಸಂಸ್ಕೃತಿಯಿಂದಲೂ, ಪರಿಶುದ್ಧ ಸತ್ಕೃತಿ ಸದಾಚಾರಗಳಿಂದಲೂ ಒಪ್ಪುವ ಮನೆ ಎಂದು ಅರ್ಥವಾಗುವದು. ಬಸವಣ್ಣನವರು ಗುರುಲಿಂಗ ಜಂಗಮರಿಗೆ ಚಿಂತಾಮಣಿಯಾಗಿ, ದೀನದಲಿತರಿಗೆ ಪರುಷದ ಕಣಿಯಾಗಿ, ಸದ್ಭಕ್ತಜನರಿಗೆ ಶಿರೋಮಣಿಯಾಗಿ, ಸುಕೃತದ ತವನಿಧಿಯಾಗಿ ಬಾಳಿ ಬೆಳಗಿದರು.

" ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ
ನಿಮ್ಮ ಪಾದ ಸಾಕ್ಷಿ ಎನ್ನ ಮನ ಸಾಕ್ಷಿ ... "

" ಮೇಲಾಗಲೊಲ್ಲೆನು ಕೀಳಾಗಲಲ್ಲದೆ
ಕೀಳಿಂಗಲ್ಲದೆ ಹಯನ ಕರೆವುದೇ ?
ಮೇಲಾಗಿ ನರಕದೊಳೋಲಾಡಲಾರೆನು ನಿಮ್ಮ ಶರಣರ
ಪಾದಕ್ಕೆ ಕೀಳಾಗಿರಿಸು ಮಹಾದಾನಿ ಕೂಡಲಸಂಗಮದೇವಾ ।
ಬಾಗಿದ ತಲೆಯ ಮುಗಿದ ಕೈಯಾಗಿರಿಸು ಕೂಡಲ ಸಂಗಮದೇವಾ ।

" ಮಾವಿನ ಕಾಯಿಯೊಳಗೊಂದು ಎಕ್ಕೆಯಕಾಯಿ ನಾನಯ್ಯ ॥ "

ಎಂದು ಸ್ವತಃ ಬಸವಣ್ಣನವರೇ ಹೇಳಿದ ವಚನಗಳು ಅವರ ವಿನಯಶೀಲತೆಯನ್ನೂ,

" ಹೊತ್ತಾರೆ ಎದ್ದು ಕಣ್ಣ ಹೊಸೆವುತ್ತ,
ಎನ್ನೊಡಲಿಂಗೆ, ಎನ್ನೊಡವೆಗೆ,, ಎನ್ನ ಮಡದಿ ಮಕ್ಕಳಿಗೆಂದು
ಕುದಿದೆನಾದರೆ ಎನ್ನ ಮನಕ್ಕೆ ಮನವೇ ಸಾಕ್ಷಿ,
ನಿಮ್ಮ ನಿಲವಿಂಗೆ ಕುದಿವೆನಲ್ಲದೆ
ಎನ್ನೊಡಲವಸರಕ್ಕೆ ಕುದಿದೆನಾದರೆ
ತಲೆದಂಡ ಕೂಡಲಸಂಗಮದೇವಾ "

" ನಾನು ಆರಂಭವ ಮಾಡುವೆನಯ್ಯ ಗುರುಪೂಜೆಗೆಂದು,
ನಾನು ಬೆವಹಾರವ ಮಾಡುವೆನಯ್ಯ ಲಿಂಗಪೂಜೆಗೆಂದು,
ನಾನು ಪರಸೇವೆಯ ಮಾಡುವೆನಯ್ಯ ಜಂಗಮ ದಾಸೋಹಕ್ಕೆಂದು"

ಇತ್ಯಾದಿ ವಚನಗಳು ಅವರ ದೈನಂದಿನ ಸತ್ಯಶುದ್ಧ ಕಾಯಕವನ್ನೂ, ನಡುರಾತ್ರಿಯಲ್ಲಿ ಕಳ್ಳರು ಬಂದು ಆಕಳು ಕದ್ದೊಯ್ದುದನ್ನು ಹೇಳಿದಾಗ —

" ಆಕಳ ಕಳ್ಳರು ಕೊಂಡೊಯ್ದರೆನ್ನದಿರಿಂಭೊ ನಿಮ್ಮ ಧರ್ಮ !
ಬೊಬ್ಬಿಡದಿರಿಂಭೊ ನಿಮ್ಮ ಧರ್ಮ !
ಅಲ್ಲಿ ಉಂಬರೆ ಸಂಗ, ಇಲ್ಲ ಉಂಬರೆ ಸಂಗ
ಕೂಡಲ ಸಂಗಮದೇವ ವಿಶ್ವ ಭಾವ

ಎಂದು ಹೇಳಿದುದು ಅವರ ಭೂತಾನುಕಂಪಕ್ಕೆ ಸಾಕ್ಷಿಯಾಗಿದೆ. ಮಧ್ಯರಾತ್ರಿಯಲ್ಲಿ ಕಳ್ಳರುಬಂದು ಮಡದಿಯ ಕರ್ಣಾಭರಣಗಳನ್ನು ದೋಚಿಕೊಂಡುಹೋಗುವ ಪ್ರಸಂಗದಲ್ಲಿ —

" ಒಡನಿರ್ದ ಸತಿಯೆಂದು ನೆಚ್ಚಿರ್ದೆನಯ್ಯಾ,
ಕೈವಿಡಿದ ಸಜ್ಜನೆಯೆಂದು ನಂಬಿರ್ದೆನಯ್ಯಾ
ತೆಗೆದುಕೊಡು ಎಲೆ ಚಂಡಾಲಗಿತ್ತಿ,
ಕಳ್ಳನಮನೆಗೊಬ್ಬ ಬಲುಗಳ್ಳ ಬಂದರೆ
ಕೂಡಲ ಸಂಗಮನಲ್ಲದೆ ಮತ್ತಾರೂ ಅಲ್ಲ "

ಎಂದು ನಿಷ್ಠುರವಾಗಿ ನುಡಿದುದು ಅವರ ಆರ್ಥಿಕ ಸಮತಾವಾದವನ್ನು ಎತ್ತಿ ತೋರಿಸುತ್ತದೆ. ಇಂತಹ ಪ್ರತಿಭಾನ್ವಿತರಾದ ಶ್ರೀಬಸವೇಶ್ವರರ ವಾಸದಿಂದಲೂ, ಅವರು ಮಾಡುವ ಸಮ್ಯಕ್ ಜ್ಞಾನಪೂರ್ವಕವಾದ ಸತ್ಕ್ರಿಯೆಗಳ ನಿರ್ವಹಣದಿಂದಲೂ ಆ ಮನೆಯು ಮಹಾಮನೆಯಾಗಿತ್ತು.

ಶ್ರೀ ಬಸವೇಶ್ವರರು ಸ್ವೀಕರಿಸಿದುದು ಗೃಹಸ್ಥಾಶ್ರಮ. ಲೋಕದ ಜನರು ಓರ್ವ ಕನ್ನೆಯ ಕೈಹಿಡಿದು ಗೃಹಸ್ಥರಾದರೆ ಶ್ರೀ ಬಸವೇಶ್ವರರು ಈರ್ವರು ಕನ್ಯೆಯರ ಕೈವಿಡಿದು ಗೃಹಸ್ಥರಾದರು.

" ಗುರುದ್ವಯಂ ಶಿಷ್ಯನಿಪಾತ ಹೇತುಃ ರಾಜದ್ವಯಂ ರಾಷ್ಟ್ರವಿನಾಶಹೇತುಃ ।
ಸೂಪ್ತದ್ವಯಂ ಪಾಕವಿನಾಶಹೇತುಃ ಭಾರ್ಯಾದ್ವಯಂ ಭರ್ತೃವಿನಾಶಹೇತುಃ "

ಗುರುದ್ವಯದಿಂದ ಶಿಷ್ಯ ವಿನಾಶವೂ, ರಾಜದ್ವಯದಿಂದ ರಾಷ್ಟ್ರವಿನಾಶವೂ, ಈರ್ವರು ಪಾಚಕರಿಂದ ಪಾಕವಿನಾಶವೂ ಆಗುವಂತೆ ಭಾರ್ಯಾದ್ವಯದಿಂದ ಭರ್ತೃವಿನಾಶವು ಎಂಬುದೊಂದು ಲೋಕಾನುಭವದ ಮಾತು. ಹೀಗಿದ್ದರೂ ಶ್ರೀ ಬಸವೇಶ್ವರರಿಗೆ ಭಾರ್ಯಾದ್ವಯವು ವಿನಾಶಕ್ಕೆ ಕಾರಣವಾಗದೇ ಭರ್ತೃವಿನ ಹೃದಯವಿಕಾಸಕ್ಕೆ ಕಾರಣವಾಯಿತು.

ರುದ್ರಮುನಿ ಶಿವಾಚಾರ್ಯರಿಂದ ಕಟ್ಟಪ್ಪಣೆಯನ್ನು ಪಡೆದ ಗಂಗಾಂಬಿಕೆಯು ಗುರುಪ್ರಾಣೆಯಾಗಿಯೂ, ನೀಲಾಂಬಿಕೆಯು ಲಿಂಗಪ್ರಾಣೆಯಾಗಿಯೂ, ಶ್ರೀ ಬಸವಣ್ಣನವರು ಜಂಗಮಪ್ರಾಣಿಯಾಗಿಯೂ ತ್ರಿವೇಣೀ ಸಂಗಮದಂತೆ ಕಂಗೊಳಿಸಿದರು.

"ಹೊತ್ತಾರೆ ಎದ್ದು ಅಗ್ಘವಣಿ ಪತ್ರೆಯ ತಂದು
ಹೊತ್ತು ಹೋಗದ ಮುನ್ನ ಪೂಜಿಸು ಲಿಂಗವ
ಹೊತ್ತು ಹೋದ ಬಳಿಕ ನಿನ್ನನಾರು ಬಲ್ಲರು ?
ಸುಪ್ರಭಾತ ಸಮಯದಲ್ಲಿ ಆರ್ತಿಯಲ್ಲಿ,
ಲಿಂಗವ ನೆನೆದರೆ ತಪ್ಪುವವು ಅಪ
ಮೃತ್ಯು ಕಾಲಕರ್ಮಂಗಳಯ್ಯಾ.... "

"ಹೊತ್ತಾರೆ ಎದ್ದು ಶಿವಲಿಂಗದೇವನ
ದೃಷ್ಟಿಯಾರೆ ನೋಡದವನ ಸಂಸಾರವೇನವನ ?
ಬಾಳುವೆಣನ, ಬೀಳುವೆಣನ ಸಂಸಾರವೇನವನ ? ''

ಎಂದು ಹೇಳಿದ ಶ್ರೀಬಸವೇಶ್ವರರು ಸ್ವಯಂ ಲಿಂಗಪೂಜೆ ಮಾಡುವಲ್ಲಿ ಎಂದೂ ತಪ್ಪಲಿಲ್ಲ. ಒಂದು ದಿನ ಪ್ರಾತಸ್ಸಮಯ. ಗುರುಪ್ರಾಣಿಯಾದ ಗಂಗಾಂಬಿಕೆಯೂ, ಲಿಂಗಪ್ರಾಣಿಯಾದ ನೀಲಾಂಬಿಕೆಯರು ಸಜ್ಜುಗೊಳಿಸಿದ ವಿವಿಧ ಸಾಮಗ್ರಿಗಳಿಂದ ಪೂಜಾಮಂಟಪದಲ್ಲಿ-

"ಅಂಗೈಯೊಳಗಣ ಲಿಂಗವ ನೋಡುತ್ತ
ಕಂಗಳಕಡೆಗೋಡಿವರಿವುತ್ತ ಸುರಿಯುತ್ತ ಎಂದಿಪ್ಪೆನೋ.
ನೋಟವೇ ಪ್ರಾಣವಾಗಿ ಎಂದಿಪ್ಪೆನೋ
ಕೂಟವೇ ಪ್ರಾಣವಾಗಿ ಎಂದಿಪ್ಪೆನೋ
ಎನ್ನಂಗವಿಕಾರದ ಸಂಗವಳಿದು
ಕೂಡಲಸಂಗಯ್ಯ, ಲಿಂಗಯ್ಯ ಲಿಂಗ ಲಿಂಗ ಲಿಂಗವೆನ್ನುತ್ತ''
"ಆಡಿಕಾಲು ದಣಿಯವು, ನೋಡಿ ಕಣ್ಣು ದಣಿಯವು
ಹಾಡಿ ನಾಲಿಗೆ ದಣಿಯದು, ಇನ್ನೇವೆ ನಿನ್ನೇವೆ,
ನಿಮ್ಮ ಕೈಯಾರೆ ಪೂಜಿಸಿ ಮನದಣಿಯಲೊಲ್ಲದು ... ''

" ವಾರವೆಂದರಿಯೆ ದಿನವೆಂದರಿಯೆ ।
ಏನೊಂದರಿಯೆನಯ್ಯ ಇರುಳೆಂದರಿಯೆ ಹಗಲೆಂದರಿಯೆ,
ಏನೊಂದರಿಯೆನಯ್ಯಾ ನಿಮ್ಮುಮ ಪೂಜಿಸಿ ಎನ್ನುವ
ಮರೆದೆ ಕೂಡಲಸಂಗಮದೇವಾ "

ಎಂದು ಬಸವೇಶ್ವರರು ಹೇಳಿ ಲಿಂಗಪೂಜೆಯಲ್ಲಿ ತೊಡಗಿ —

ಹಿಂಗದೇ ಪುಷ್ಪಾಂಜಲಿಗೈಯುವತಿಸುಖ ।
ಸಿಂಗರವೆನಿಸಿ ಬಣ್ಣಿಸುವ ಸುಖ ।
ಮಂಗಲಮಯ ಶಂಭುಲಿಂಗವೆನಿಸಿ ರಾಜಪಸುಖ ।
ಲಿಂಗಪೂಜಾ ಸಂಭ್ರಮದ ಸುಖ

ಎಂಬ ನಿಜಗುಣ ಶಿವಯೋಗಿಗಳ ಉಕ್ತಿಯಂತೆ ಲಿಂಗಪೂಜಾ ಸಂಭ್ರಮದಸುಖದಲ್ಲಿ ಪರವಶರಾಗಿ ಕುಳಿತಿದ್ದರು.

ಭಕ್ತೋದ್ಧಾರಕ್ಕಾಗಿ ದೇಶಸಂಚಾರಕ್ಕೆಗೊಂಡಪ್ರಭುದೇವರು ಸೊನ್ನಲಾಪುರದ ಸಿದ್ಧರಾಮದೇವರಿಗೆ –

" ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸವೆಂಬ ತೈಲವನೆರೆದು,
ಆಚಾರವೆಂಬ ಬತ್ತಿಯಲ್ಲಿ ಬಸವಣ್ಣನೆಂಬ ಜ್ಯೋತಿಯ
ಮುಟ್ಟಿಸಲು ತೊಳಗಿ ಬೆಳಗುತ್ತಿರ್ದಿತಯ್ಯಾ ಶಿವನ
ಪ್ರಕಾಶ, ಆ ಬೆಳಗಿನೊಳು ಒಪ್ಪುತ್ತಿರ್ದರಯ್ಯ ಅಸಂಖ್ಯಾತ

ಭಕ್ತಮಹಾಗಣಂಗಳು, ಶಿವಭಕ್ತರಿರ್ದ ಕ್ಷೇತ್ರ ಅವಿಮುಕ್ತ ಕ್ಷೇತ್ರ ವೆಂಬುದು ಹುಸಿಯೇ ? ಶಿವಭಕ್ತರಿರ್ದ ದೇಶ ಪಾವನವೆಂಬುದು ಹುಸಿಯೇ ? ಗುಹೇಶ್ವರಲಿಂಗದಲ್ಲಿ ಎನ್ನ ಪರಮಾರಾಧ್ಯ ಸಂಗನ ಬಸವಣ್ಣನ ಮಹಿಮೆಯ ಸಿದ್ಧರಾಮಯ್ಯ.

''ಸಾಗರದೊಳಗಣ ಜ್ಯೋತಿಯಂತೆ ಗುಹೇಶ್ವರದೊ
ಳಗೆ ಎನ್ನ ಪರಮಾರಾಧ್ಯರು ಸಂಗನಬಸವಣ್ಣನು ನಿಂದ
ನಿಲವನುಪಮಿಸಬಾರದು ಕಾಣಾ ಸಿದ್ಧರಾಮಯ್ಯ''

ಎಂದು ಬಸವರಸರ ಮಹಿಮೆಯನ್ನು ಕೊಂಡಾಡಿ ಕಲ್ಯಾಣಕ್ಕೆ ಬಂದು ಬಸವಣ್ಣನವರ ಮಹಾಮನೆಯ ದ್ವಾರದಲ್ಲಿ ಶ್ರೀ ಸಿದ್ಧರಾಮದೇವರೊಡನೆ ನಿಂತುಕೊಂಡರು. ಆ ಪ್ರಸಂಗ ದಲ್ಲಿ ಬಾಗಿಲಲ್ಲಿ ನಿಂತ ಹಡಪದಪ್ಪಣ್ಣಗಳು ಪರಮ ಹರುಷಿತರಾಗಿ ಲಿಂಗಾರ್ಚನೆ ಮಾಡುವ ಬಸವರಸರ ಬಳಿಗೆ ಹೋಗಿ ಮಹಾನುಭಾವ ! ದೇವದೇವ ! ಮಹಾಪ್ರಸಾದ, ಕಾಲಿಲ್ಲದ ಗಮನ, ಕೈಯಿಲ್ಲದ ಸೋಂಕು, ನುಡಿಯಲ್ಲಿ ಕಡೆ ಇಲ್ಲ. ಇದೆಂತಹ ಸುಳುಹೆಂದರಿಯೆ, ಇದೆಂತಹ ನಿಲವೆಂದರಿಯೆ, ಮರುಳಿಲ್ಲದ ಮರುಳು, ಅರಿವಿಲ್ಲದ ಅರಿವು ಬಸವಪ್ರಿಯ ಕೂಡಲ ಚೆನ್ನಸಂಗಯ್ಯನ ಬರವು ಕೌತುಕವಾಯಿತ್ತು ಚಿತ್ತೈಸಯ್ಯ ಸಂಗನ ಬಸವಣ್ಣ" ಎಂದು ಬಸವರಾಜರಿಗೆ ಬಿನ್ನಹ ಮಾಡಿದರು. ಆಗ ಬಸವಣ್ಣನವರು ಶಿವಲಿಂಗಾರ್ಚನೆಯ ಪರಮಸುಖದೊಳಗೆ ಪರವಶರಾಗಿರ್ದು ಲಿಂಗಾರ್ಚನೆಯ ಬಿಟ್ಟು ಏಳಲೊಲ್ಲದ "ಎನ್ನ ಕಾಯವೇ ಭಕ್ತ, ಪ್ರಾಣವೇ ಜಂಗಮ''ವಾದ ಬಳಿಕ ಅಲ್ಲಿ ಇಲ್ಲಿ ಎಂಬ ಭೇದ ಭಾವವಿಲ್ಲದೆ ಏಕೋ ಭಾವದಿಂ ನಿಶ್ಚಯಿಸಿ, ಮನಮನ ಒಂದಾಗಿದ್ದವರಲ್ಲಿ ಪ್ರಾಣಕ್ಕೆ ಪ್ರಾಣಸಮ ದರು ಶನವಾಗಿದ್ದವರಲ್ಲಿ ಕೂಡಲಸಂಗನ ಶರಣರು ಬಂದರೆ ಉಪಚಾರಕ್ಕಿಂಬಿಲ್ಲ. ಆ ಜಂಗಮವ ನೊಡಗೊಂಡು ಬನ್ನಿರಿ ಎಂದು ಅಪ್ಪಣ್ಣನವರನ್ನು ಪ್ರಭುದೇವರ ಕಡೆಗೆ ಕಳುಹಿದರು. ಆ ಪ್ರಭುದೇವರು ಹಡಪದಪ್ಪಣ್ಣನವರಿಗೆ ಹೇಳಿದುದೇನಂದರೆ "ಅಂಗದಲ್ಲಿ ಕ್ರೀ ಇರಲು ಮಾತಿನಲ್ಲಿ ಅದ್ವೈತವನಾಡುವ ಭೃತ್ಯಾಚಾರಹೀನರ ಮನೆಗೆ ನಾವು ಬಾರೆವು ಎಂದು ಮುನಿಸಿನಿಂದ ನಿರ್ದಾಕ್ಷಿಣ್ಯವಾಗಿ ಹೇಳಿದರು. ಆಗ ಬಸವೇಶ್ವರರು ಭಕ್ತನ ಅರ್ಥ ಪ್ರಾಣಾ ಭಿಮಾನಕ್ಕೆ ತಾನೇ ಕರ್ತನೆಂದು ಬಂದ ಜಂಗಮ ಆ ಭಕ್ತನ ಮನೆಗೆ ತಾನೇ ಕರ್ತನಾಗಿ ಹೊಕ್ಕು ತನುಮನಧನಂಗಳೆಲ್ಲವನೊಳಕೊಂಡು ಆ ಭಕ್ತನ ಪಾವನವ ಮಾಡಬಲ್ಲರೆ ಆತ ಜಂಗಮನೆಂಬೆ. ತನ್ನ ಮಠಕ್ಕೆ ತಾ ಬಾಹರೆ ಮುನಿಸುಂಟೇ ? ಕೂಡಲಸಂಗನ ಶರಣರ ಮನೆಯ ಬಾಗಿಲುಗಾಹಿ ನಾನಾಗಿರ್ದು ಕರ್ತರು ಗೃಹಕ್ಕೆ ಬಂದರೆ ಬೇಕು ಬೇಡೆನ್ನೆ ಎಂದು ಬಸವಣ್ಣನವರು ನುಡಿಯಲು, ಹಡಪದಪ್ಪಣ್ಣಗಳು ಪ್ರಭುವಿನ ಬಳಿಗೆ ಹೋಗಿ ''ನಿಮ್ಮ ತನು, ನಿಮ್ಮ ಮನ, ನಿಮ್ಮ ಧನ, ನಿಮ್ಮದಲ್ಲದೆ ಅನ್ಯವೆಂಡಣುಮಾತ್ರವಿಲ್ಲ ನೋಡಯ್ಯಾ ಭಕ್ತನ ಮಠವೆಂದು ಮುನ್ನವೇ ಅರಿದರಿದು ಬಂದು ಮತ್ತೊಂದ ನೆನೆದರೆ ಬಸವಪ್ರಿಯ ಕೂಡಲ ಚೆನ್ನಸಂಗಯ್ಯನ ಶರಣ ಬಸವಂಗೆ ಸ್ವತಂತ್ರ ಭಾವವುಳ್ಳಡೆ ನಿಮ್ಮ ಪಾದದಾಣೆ" ಎಂದು ಹೇಳಿದರು. ಆಗ ಪ್ರಭುವು–

"ಭಕ್ತಜಂಗಮದ ಸಕೀಲಸಂಬಂಧವನಾರುಬಲ್ಲರು ಹೇಳಾ ? ಭಕ್ತನ ಮನೆಯ ಹೊಕ್ಕು ಪಾದಾರ್ಚನೆಯ ಮಾಡಿಸಿಕೊಂಡು ಒಡಲ ಕಕ್ಕುಲತೆಗೆ ಅಶನವನುಂಡು, ವ್ಯಸನದ ಕಟ್ಟಳೆಗೆ ಹಣವ ಬೇಡಿ, ಕೊಟ್ಟಡೆ ಕೊಂಡಾಡಿ ಕೊಡದಿರ್ದರೆ ದೂರಿಕೊಂಡು ಹೋಹಾತ ಜಂಗಮನಲ್ಲ. ಸುಳುಹಿನ ಸೂತಕ ಮೈದೋರದೆ, ಒಡಲ ಕಳವಳದ ರುಚಿಗೆ ಹಾರೈಸದ ಅರಿವೇ ಅಂಗವಾಗಿ ಇರುಪಾತ ಜಂಗಮ. " ಕಾಯದ ಜೀವದ ಹೊಲಿಗೆಯ ಬಿಚ್ಚಿ ಬೀಸಾಡಿ ತನ್ನನೆ ಅರ್ಪಿಸಿ ಇರಬಲ್ಲಾತ ಭಕ್ತ. ಆ ಜಂಗಮದ ಆ ಭಕ್ತನ ಸಮ್ಮೇಳವೆ ಸಮ್ಮೇಳ; ಮಿಕ್ಕಿನ ಅರೆ ಭಕ್ತರೊಡೆತನಸಂಗ ನಮ್ಮ ಗುಹೇಶ್ವರಲಿಂಗಕ್ಕೆ ಸೊಗಸದು ಎಂದುಮಾರ್ನುಡಿದರು. ಆಗ ಅಪ್ಪಣ್ಣನವರು –

" ನಿಮ್ಮ ಶರಣರು ಎನ್ನಿಚ್ಚೆಗೆ ಬಪ್ಪರೇ ?
ಚಕಿತಮಭಿಧತ್ತೇ ಶೃತಿರಪಿ ಎನಲು ಎಮ್ಮ
ನುಡಿ ನಿಮ್ಮ ಶರಣರ ತಾಗಬಲ್ಲವೇ ? ಬಸವ
ಪ್ರಿಯ ಕೂಡಲ ಚನ್ನ ಸಂಗಯ್ಯನ ಶರಣರು ಎನ್ನ
ಮಾತಿಗೆಬಾರದು, ನೀವೇ ಹೋಗಿ ಬಿಜಯಂ
ಗೈಸಿಕೊಂಡು ಬಾರಾ ಸಂಗನಬಸವಣ್ಣಾ "

ನಾನು ಭಕ್ತನಲ್ಲವಾಗಿ ನನ್ನಿಚ್ಛೆಗೆ ಬಾರರು, ಎಂದು ಹೇಳಲು ಇದನ್ನು ಕೇಳಿದ ಚನ್ನಬಸವಣ್ಣನವರು ಬಸವಣ್ಣನವರನ್ನು ಕುರಿತು–

" ಅಂಗದ ಮೇಲೆ ಲಿಂಗವುಳ್ಳುದೆಲ್ಲವು ಸಂಗಮ
ನಾಥನೆಂದು ನಂಬಿದ ನಂಬುಗೆಯು ಬಂದ
ಶರಣರ ನಿಲವರಿಯದಿದ್ದರೆ ತಪ್ಪಿತ್ತುನೋಡಾ !
'ಗುರುವೆ ಸಂಗಮನಾಥ ಮನೆಗೆ ಅೞಗವಿಡಿದು
ಬಂದರೆ ಗಮ್ಮನೇ ಇದಿರೆದ್ದು ವಂದಿಸಬೇಕು ನೋಡಯ್ಯಾ !
ಕೂಡಲ ಚನ್ನಸಂಗನ ಶರಣರು ಪ್ರಭುದೇವರು
ಸಿದ್ಧರಾಮಯ್ಯದೇವರು ಬಂದು ಬಾಗಿಲಲ್ಲಿರಲು
ಕಣ್ಣರಿಯದಿದ್ದರೂ ಕರುಳರಿಯಬೇಡವೇ ಸಂಗನಬಸವಾ "

ಶರಣರು ಬಂದು ಬಾಗಿಲಲ್ಲಿರಲು ಇಂತು ತೆರಪುಮರಹಾಗಿಪ್ಪುದು ನಿಮಗುಚಿತವಲ್ಲ ಎಂದು ಝಂಕಿಸಿ ನುಡಿಯಲು, ಶ್ರೀ ಬಸವಣ್ಣನವರು ಚನ್ನಬಸವಣ್ಣನವರ ಪಾದದ ಮೇಲೆ ಬಿದ್ದು –

" ಇನ್ನೇವೆನಿನ್ನೇವೆ ಕೆಮ್ಮನೆ ಕೆಟ್ಟೆನು. ನಿಮ್ಮ ಶರಣರು ಬಂದು
ಬಾಗಿಲೊಳಿರಲು ಗಮ್ಮನಿದಿರೆದ್ದು ವಂದಿಸಲರಿಯದೆ ಕೆಟ್ಟೆ
ಕೇಡನ್ನೇನೆಂದುಪಮಿಸುವೆನು ಕೂಡಲಸಂಗಮದೇವ
ನಾಮುಖವು ಭ್ರಷ್ಟನೆಂಬುದು ಎನಗಿಂದರಿಯಬಂದಿತ್ತು

"ನವರತ್ನವಕಿತ್ತು ಮಂಡುವಿನೊಳಗೆ ಹಾಯ್ಕಿದ ಕಪಿಯಂ
ತಾಯಿತನ್ನ ಭಕ್ತಿ ಕೂಡಲಸಂಗಮದೇವರ ತಂದು ಕೊಟ್ಟರೆ
ನಿಮ್ಮ ಭವಶ್ಮಾವುಗೆಯ ಹೊತ್ತುಕೊಂಡು ಕುಣಿದಾಡುವ
ಕಾಣಾ ಚನ್ನಬಸವಣ್ಣ"

ಎಂದು ಕೊಂದುಕೊಂಡು–

"ಲಿಂಗಾರ್ಚನೆಯಿಂದೆದ್ದು ಚನ್ನಬಸವೇಶ್ವರ ಮೊದಲಾದ ಅಸಂಖ್ಯಾತ ಪ್ರಮಥರ ಕರೆಸಿಕೊಂಡು ವಿಭೂತಿ ವೀಳೆಯುವ ಕಾಣಿಕೆ ಸಹಿತವಾಗಿ ನವರತ್ನಖಚಿತವಾದ ದಿವ್ಯಾಂಬರಗಳಂ ಗುಡಿತೋರಣಂಗಳಂ ಕಟ್ಟಿ, ದೇವಾಂಗ ಮೌಕ್ತಿಕದ ಸೆರಗಿನ ಸೀರೆಯ ಹಾಸಿ, ಚೀನಾಂಬರ ದಲ್ಲಿ ಪವಳದ ಝಲ್ಲರಿಯ ಮೇಲುಕಟ್ಟಂಕಟ್ಟಿ, ಕಳಸ ಕನ್ನಡಿಯಂ, ಪಂಚ ಮಹಾವಾದ್ಯದಿಂ, ಧೂಪಾರತಿ ಘಂಟೆ ಸಹಿತವಾಗಿ ಪ್ರಭು ದೇವರ ಕರೆಯ ಬಹ ಸಂಭ್ರಮದಿಂದಿರುತ್ತಿರಲತ್ತಲಾ ಪ್ರಭುದೇವರು ವಿಸ್ಮಯಿಂದಾಳ್ದು ಸಿದ್ಧರಾಮಯ್ಯ ದೇವರಿಗೆ ಪೇಳ್ದುದು."

ಪ್ರಭುದೇವರು :– ನೋಡು ಸಿದ್ಧರಾಮಯ್ಯ, ದೇವ ಅಗ್ಗಳಿಕೆ ಭಕ್ತರಿಗೆ ಅಹಂಕಾರವಾಯಿತ್ತು, ಭೃತ್ಯನಿದ್ದೆಡೆಗೆ ಕರ್ತನೆಯಿತಂದರೆ ಅಟ್ಟಾಟಿಕೆಯಲ್ಲಿ ಇಂತು ಕರೆವರುಂಟೇ ? ಬಸವಣ್ಣನೊಳಗೆ ಇಂತು ಮರವೆ ಹುಟ್ಟಿದಬಳಿಕ ಉಳಿದ ಭಕ್ತರ ಪಾಡೇನುಹೇಳಾ ? ಗುಹೇಶ್ವರಲಿಂಗವನು ಭಕ್ತಿಯಿಂದ ಮನಮುಟ್ಟಿ ಕರೆದರೆ ಹೋಹುದಲ್ಲದೆ ವ್ಯರ್ಥಕ್ಕೆ ಹೋಗಬಾರದು ನೋಡಯ್ಯಾ ॥"

ಹೀಗೆ ಪ್ರಭುದೇವರು ಬಸವರಾಜದೇವರ ಅಂತಸ್ಥಿತಿಗತಿಯನು ಪ್ರಸಂಗ ಮುಖದಿಂ ನುಡಿಯಲು —

ಬಸವಣ್ಣನವರು :– ಭವರೋಗ ವೈದ್ಯನೆಂದು ನಂಬಿದೆ ನಾನು. ಒಮ್ಮೆಗೆ ಕರುಣಿಸಯ್ಯಾ ನಿಮ್ಮ ಶ್ರೀಪಾದಕ್ಕೆ ನಮೋನಮೋ ಎನುತಿರ್ದೆನು.

"ನಿಮ್ಮ ಶರಣರ ಕಂಡ ಕಡುಸುಖವನೇನೆಂದುಪಮಿಸುವೆನಯ್ಯ. ಅದು ಸಾಲೋಕ್ಯದಂತುಟಲ್ಲ, ಅದು ಸಾಮೀಪ್ಯದಂತುಟಲ್ಲ, ಅದು ಸಾರೂಪ್ಯದಂತುಟಲ್ಲ. ಅದ್ಯ ಸಾಯುಜ್ಯದಂತುಟಲ್ಲ. ಕೂಡಲಸಂಗನಶರಣರ ಪಾದದರ್ಶನವಕಂಡು ನಾನು ಧನ್ಯನಾದೆನು.

"ಶರಣೆಂದು ಪಾದವ ಹಿಡಿದಿಹೆನೆಂದರೆ ಚರಣದ
ನಿಲವ ಕಾಣಬಾರದು, ಕುರುಹು ಹಿಡಿದಿಹೆನೆಂದರೆ
ಕೈಗೆ ನಿಲುಕದು, ಬೆರಸಿ ಹೊಕ್ಕಿಹೆನೆಂದರೆ ಮುನ್ನವೆ
ಅಸಾಧ್ಯ ಅಕಟಕಟ ಅಹಂಕಾರದಲ್ಲಿ ಕೆಟ್ಟೆನಯ್ಯ
ಗುರುವೇ ಎನ್ನ ಪರಮಗುರುವೇ ಬಾರಯ್ಯ ಅರಿಯದ
ಮರುಳನ ಅವಗುಣವನೋಡುವರೆ ಕೂಡಲ ಸಂಗಮದೇವಾ"

"ತ್ರಿವಿಧ ತ್ರಿವಿಧದಲ್ಲಿ ತಪ್ಪಿದ ತಪ್ಪುಕನಾನಯ್ಯ
ಒಮ್ಮೆಂಗೆ ಕರುಣಿಸಯ್ಯ, ಇದನರಿದು ಇನ್ನು
ತಪ್ಪಿದೆನಾದರೆ ನೀವು ಮಾಡಿತ್ತೇಸಲುವುದು ಕೂಡಲಸಂಗಮದೇವಾ"

"ಎನ್ನವರೆನ್ನ ಕೊಂಡಾಡಿ ಹೊನ್ನಶೂಲಕ್ಕೆ ಇಕ್ಕಿದರು
ಅಹಂಕಾರ ಗಾಯದಲ್ಲಿ ನಾವೆಂತು ಬದುಕುವೆನು ?
ನಾನೆಂತು ಜೀವಿಸುವೆನು ? ಜಂಗಮವಾಗಿ ಬಂದು
ಶೂಲವನಿಳುಹಿ ಪ್ರಸಾದದಮದ್ದನಿಕ್ಕಿ ಸಲಹು ಕೂಡಲಸಂಗಮದೇವಾ"

ಪ್ರಭುದೇವರು– "ಜಂಗಮವನ್ನೇ ಹೊರಗಿರಲು ಲಿಂಗಾರ್ಚನೆ ಆವುದಯ್ಯ ?
ಪ್ರಾಣವ ಹೊರಗಿರಿಸಿ ಎಡೆಯಾಡುವ ದೇಹವುಂಟೇ ?
ಶರಣರು ಬಂದು ಬಾಗಿಲಲ್ಲಿ ನಿಂದಿರಲು ತನ್ನ ತಾ
ಮರೆದವರ ಕಂಡರೆ ನಮ್ಮ ಗುಹೇಶ್ವರ ಲಿಂಗ ಒಡೆಯು
ಹಾಯ್ಕದೆ ಮಾಣನೇ?" ಎಂದ ಪ್ರಭುವಿನ ಪ್ರಸಾದವಾಣಿಯನ್ನು ಕೇಳಿ

ಬಸವಣ್ಣನವರು– "ಅಷ್ಟವಿಧಾರ್ಚನೆ ಷೋಡಶೋಪಚಾರಂಗಳ
ಅರಸರಿಯದ ಬಿಟ್ಟಿಯ ಮಾಡುವೆನು, ಎನ್ನ ತಾಗಿದ
ಸುಖವನು ಜಂಗಮಕ್ಕರ್ಪಿಸಲರಿಯದ ಉಪಚಾ
ರಿಯಾನು, ಸ್ಥಾವರ ಜಂಗಮದ ಭೇದವನ್ನರಿಯದ
ಪೂಜಕ ನಾನು, ಮತ್ತೆ ನಾಚದೆ ಕೂಡಲ ಸಂಗಮ
ದೇವರೆನ್ನ ಪ್ರಾಣಲಿಂಗವೆಂಬ ಡಂಭಕ ನಾನು"

"ಎನ್ನ ತಪ್ಪು ಅನಂತ ಕೋಟಿ, ನಿಮ್ಮ ಸೈರಣೆಗೆ
ಕಡೆ ಇಲ್ಲವಯ್ಯ ಇನ್ನು ತಪ್ಪಿದೆನಾದರೆ ನಿಮ್ಮ ಪಾದವೇ ದಿಬ್ಯ"

"ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯ,
ಒರೆಗೆ ಬಣ್ಣಕ್ಕೆ ತಂದೆನ್ನ ಪುಟವಿಕ್ಕಿ ನೋಡಯ್ಯ,
ಕುಡಿಹಕ್ಕೆ ಬಡಿಹಕ್ಕೆ ತಂದೆನ್ನ ಕಡೆಯಾಣಿಯ ಮಾಡಿ
ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹಯ್ಯಾ
ಕೂಡಲಸಂಗಮದೇವಾ"

ಹೀಗೆ ಬಸವೇಶ್ವರರು ಅಂಗಲಾಚಿ ಬೇಡಿಕೊಳ್ಳಲು–

ಪ್ರಭುದೇವರು :– ಮಾಟಕೂಟವೆಂಬ ಕೀರ್ತಿಗೆ ಸಿಲ್ಕಿ ಲಿಂಗವೇ ಜಂಗಮವೆಂಬುದ ಮರೆದೆಯಲ್ಲ ಬಸವ. ಗುಹೇಶ್ವರನ ಶರಣರಿಗೆ ತ್ರಿಕರಣವನೊಪ್ಪಿಸಿದಲ್ಲದೆ ಭಕ್ತನಾಗ ಬಾರದು ಕಾಣಾ ಸಂಗನಬಸವಣ್ಣ

ಎಂದು ಬುದ್ಧಿವಾದ ಹೇಳಲು–

ಬಸವಣ್ಣನವರು :– ಹೊನ್ನ ನೂಳಗೊಂದೊರಯ್ಯ, ಅನ್ನ ನೊಳಗೊಂದಗುಳ ಸೀರೆಯೊಳ

ಗೊಂದಳಿಯು, ಇಂದಿಂಗೆ ನಾಳಿಂಗೆ ಬೇಕೆಂದೆನಾದರೆ ನಿಮ್ಮಾಣೆ ನಿಮ್ಮ ಪ್ರಥಮರಾಣೆ ನಿಮ್ಮ ಶರಣರಿಗಲ್ಲದೆ ಮತ್ತೊಂದನರಿಯೆನು ಕೂಡಲ ಸಂಗಮದೇವಾ "

" ತನುವ ಬೇಡಿದಡೀವೆ, ಮನವ ಬೇಡಿದಡೀವೆ
ಧನವ ಬೇಡಿದಡೀವೆ ನಿಮ್ಮ ಶರಣರಿಗೆ,
ಎನಗೆ ಬೇಕೆಂಬ ಭಾವ ಮನದಲ್ಲಿ ಹೊದ್ದಿದರೆ ಘನ
ಮಹಿಮ ನಿಮ್ಮ ಪಾದದಾಣೆ, ಮನ, ವಚನ
ಕಾಯದಲ್ಲಿ ನೀವಲ್ಲದೆ ಮತ್ತೊಂದನರಿಯೆನು
ಅರಿದರೆ ಕೂಡಲ ಸಂಗಮದೇವ ಭವಘೋರದಲ್ಲಿಕ್ಕಯ್ಯಾ "

ತನು, ಮನ, ಧನಂಗಳ ನಿಮಗರ್ಪಿಸಿ ಶುದ್ಧವಾಗಿಪ್ಪೆನೆಂದು ಬಸವರಾಜದೇವರು ಬಿನ್ನಹಂಮಾಡಲು ಆ ಉತ್ತರವಂ ಖಂಡಿಸಿ ನಿರೂಪಿಸಿದ ವಚನ.—

ಪ್ರಭುದೇವರು :— ಮೇರುಗಿರಿಗಳೆಲ್ಲವು ಪ್ರಮಥರೊಡವೆ,
ರಜತ ಗಿರಿಗಳೆಲ್ಲವು ಪುರಾತನರೊಡವೆ,
ಚತುರ್ದಶ ಭುವನವೆಲ್ಲವು ಲಿಂಗದೊಡವೆ,
ಪೃಥ್ವಿ ಎಂಬುದು, ಕರ್ತಾರನ ಕಮ್ಮಟ,
ಅಚ್ಚಿನ ಮೊಳೆ, ಬಾಣಸದ ಮನೆ ತನುಮನಧನಂಗಳೆಲ್ಲವು
ನಮ್ಮ ಗುಹೇಶ್ವರ ಲಿಂಗದ ಸೊಮ್ಮು,
ನೀನೇವ ಕೊಟ್ಟು ಭಕ್ತನಾದೆ ಹೇಳಾ ಬಸವಣ್ಣ

" ತನುವರ್ಪಿತವೆಂದರೆ ಗುರುದ್ರೋಹ,
ಮನವರ್ಪಿತವೆಂದರೆ ಲಿಂಗದ್ರೋಹ,
ಧನವರ್ಪಿತವೆಂದರೆ ಜಂಗಮದ್ರೋಹ,
ಇಂತೀ ತನು ಮನ ಧನಂಗಳೆಂಬ ಅನಿತ್ಯವನು
ನಿತ್ಯಕ್ಕರ್ಪಿಸಿ ಭಕ್ತನಾದೆನೆಂದರೆ
ಅದು ಅಜ್ಞಾನ ನೋಡಾ ! ಒಡೆಯರಿಗೆ ಉಂಡೆಯ
ಮುರಿದಿಕ್ಕಿ ನಾ ಭಕ್ತನಾದೆನೆಂಬ ಮಾತ ಸಮ್ಯಜ್ಞಾನಿ
ಶರಣರು ಮೆಚ್ಚುವರೇ ? ನಮ್ಮ ಗುಹೇಶ್ವರಲಿಂಗಕ್ಕೆ ನೀನಾವುದರಲ್ಲಿ
ಏನನರ್ಪಿಸಿ ಭಕ್ತನಾದೆ ಹೇಳಾ ಬಸವಣ್ಣ "

ಎಂದು ಪ್ರಭುದೇವರು ಝಂಕಿಸಿ ನಿರೂಪಿಸಲು ಅದಕ್ಕೆ ಅನುತಾಪದಿಂದ ನುಡಿದುದೇನೆಂದರೆ—

ಬಸವಣ್ಣನವರು— "ಎಳ್ಳಿಲ್ಲದ ಗಾಣವನಾಡಿದ ಎತ್ತಿನಂತಾಯಿತೆನ್ನ ಭಕ್ತಿ
ಉಪ್ಪು ಅಪ್ಪುವಿನಲ್ಲಿ ಅದ್ದಿ ಮೆಲಿದಂತಾಯಿತೆನ್ನ ಭಕ್ತಿ
ಕೂಡಲಸಂಗಮದೇವ ಆನು ಮಾಡಿದೆನೆಂಬ ಕಿಚ್ಚು
ಎನ್ನನೇ ಸುಟ್ಟಿತು ಇನ್ನು ಸಾಲದೇ ಹೇಳಾ ಪ್ರಭುವೇ"

"ನಾನು ಭಕ್ತನಲ್ಲಯ್ಯ, ನಾನು ಯುಕ್ತನಲ್ಲಯ್ಯಾ,
ನಾನು ಮುಕ್ತನಲ್ಲಯ್ಯ ಕಪಟವೇಷದ ಡಂಭಕ
ನಾನು ಕೂಡಲಸಂಗಮದೇವ ಎನ್ನ ಭಕ್ತಿ ಮಳ
ಲೊಟ್ಟೆ ಎಂಬುದ ನೀವು ತೋರಬಂದಿರಾಗಿ
ಎನಗಿಂದರಿಯಬಂದಿತ್ತು.

" ಎನ್ನ ಚಿತ್ತ ಅತ್ತಿಯ ಹಣ್ಣು ನೋಡಯ್ಯ !
ವಿಚಾರಿಸಿ ನೋಡಿದರೆ ಹುರುಳಿಲ್ಲನೋಡಯ್ಯ !
ಪ್ರಪಂಚಿನ ಡಂಬದಲ್ಲಿ ಎನ್ನನೊಂದು ರೂಪ ಮಾಡಿ
ನೀವಿರಿಸಿದಿರಿ ಕೂಡಲಸಂಗಮದೇವ "

" ಕರ್ಮಣ್ಯೇಕಂ ವಚಸ್ಯೇಕಂ ಮನಸ್ಯೇಕಂ ಮಹಾತ್ಮನಾಂ ।
ಕರ್ಮಣ್ಯನ್ಯತ್ ವಚಸ್ಯನ್ಯತ್, ಮನಸ್ಯನ್ಯತ್ ದುರಾತ್ಮನಾಂ ।

ಎಂಬುಕ್ತಿಯಂತೆ ಕೃತಿಯಲ್ಲೊಂದು ವಿಧ, ಮನದಲ್ಲೊಂದು ವಿಧ, ಮಾತಿನಲ್ಲೊಂದುವಿಧ ವಾಗಿರುವದನ್ನು ತಿಳಿದು —

ಪ್ರಭುದೇವರು :— " ಕೈಯಲ್ಲಿ ದೊಣ್ಣೆ, ಮನದಲ್ಲಿ ಕ್ರೋಧ, ವಚನದಲ್ಲಿ ಕಿಂಕರ,
ಲಿಂಗದ ವಾರ್ತೆ ನಿನಗೇಕೆ ಹೇಳಾ ಬಸವ, ಗುಹೇಶ್ವರನೆಂಬ
ಪರುಷದ ಪುತ್ಥಳಿಯನರಿವರೆ ತಿಳಿದು ನೋಡಾ ಸಂಗನಬಸವಣ್ಣ,

ಹೀಗೆ ಪ್ರಭುದೇವರು ನಿರೂಪಿಸಲು —

ಬಸವಣ್ಣನವರು :— " ನಾನೆತ್ತ ಬಲ್ಲೆನಯ್ಯ ನಿಮ್ಮ ಭಕ್ತಿಯ ಘನವ ?
ನಾನೆತ್ತ ಬಲ್ಲೆನಯ್ಯ ನಿಮ್ಮ ಪ್ರಸಾದದ ನಿಲವ ?
ಕಾಯದ ಕಳವಳದ ಮರೆಯಲಿದ್ದವರಲ್ಲಿ
ನಂಬುಗೆಯು ಅಳವಡುವದೇ ? ಕೂಡಲಸಂಗಮದೇವ
ಎನ್ನ ಗುಣವ ನೋಡದೆ ಕರುಣೆಯಿಂದ
ಭಕ್ತಿಯ ನಿಲವ ತೋರ್ಪಾತಂಥೆ,

" ಎನ್ನ ತನುವಿಗೆ ನೀನೊಡೆಯ , ಎನ್ನ ಮನಕ್ಕೆ ನೀನೊಡೆಯ,
ಎನ್ನ ಧನಕ್ಕೆಯೂ ನೀನೊಡೆಯನಾದಬಳಿಕ ಎನ್ನರಿವು ನಿನ್ನದು.
ಎನ್ನ ಮರಹು ನಿನ್ನದು. ಕೂಡಲಸಂಗಮದೇವ
" ಭೃತ್ಯಾಪರಾಧಃ ಸ್ವಾಮಿನೋದಂಡಃ,

ಎಂಬುದ ವಿಚಾರಿಸಿ ನೋಡಾ ಪ್ರಭುವೇ—

" ಶಿಶುಗಳಲಿ ಗುಣದೋಷವನು ಭಾ !
ವಿಸುವರೇ ಕರುಣದಲಿ ಮಿಗೆ ರ ।
ಕ್ಷಿಸುವ ತೆರೆ [illegible] ಪ್ರಕಾರದಲಿ ।

ಬಸವರಾಜಗೆ ಮಾತೆ ಪಿತನೀ ।
ನೊಸೆದು ಕರುಣಿಸಬೇಕೆನುತ ವಂ ।
ದಿಸುತಲಿದ್ದನು ಚನ್ನಬಸವನು ಅಲ್ಲಮನಪದಕೆ ॥

ಹಡೆದ ತಾಯಿತಂದೆಗಳು ಕಕ್ಕುಲತೆಯಿಂದ ಸಾಕಿ ಸಲುಹಿದ ಮುದ್ದಾದ ಮಕ್ಕಳಲ್ಲಿ ಗುಣ ದೋಷಗಳನ್ನು ನೋಡುವರೇ ? ಇದೇ ರೀತಿಯಾಗಿ ಬಸವರಾಜನಿಗೆ ತಾಯಿತಂದೆ ಯಂತಿರುವ ನೀವು ಅವನ ಶತಾಪರಾಧಗಳನ್ನು ಉಡಿಯಲ್ಲಿ ಹಾಕಿಕೊಂಡು ಕ್ಷಮಿಸಬೇಕು ಎಂದು ಚನ್ನಬಸವಣ್ಣನು ಅಲ್ಲಮಪ್ರಭುದೇವರಲ್ಲಿ ಸೆರಗೊಡ್ಡಿ ಬೇಡಿಕೊಂಡನು. ಇದೇ ರೀತಿಯಾಗಿ ಮಡಿವಾಳ ಮಾಚಯ್ಯನವರೂ–

" ಅರಿಗಳಿದಿರಲಿ ತಪ್ಪಿದೊಡೆ ಸಂ ।
ಗರದೊಳೂಣೆಯವಪ್ಪುದಲ್ಲದೆ ।
ಗರುಡಿಯಲಿ ಕೈಮರೆದೊಡಾವುದು ಕೊರತೆಯುದರಿಂದೆ ।
ಗುರುವೆ ಬಾಲಾಬ್ಯಾಸ ಭಕ್ತಿಯ ।
ಪರಿಚರಿಯದೂಣೆಯುವ ನೋಡದೆ
ಕರುಣಿಸೆನುತಲ್ಲಮಗೆ ಮೈಯಿಕ್ಕಿದನು ಮಾಚಯ್ಯ ॥

ಸಮರಾಂಗದಣಲ್ಲಿ ಶತ್ರುಗಳೊಡನೆ ಹೋರಾಡುವ ಪ್ರಸಂಗದಲ್ಲಿ ತಪ್ಪಿದರೆ ಅದು ಯೋಧನಿಗೆ ಕುಂದು, ಎದುರಾಳಿಗಳನ್ನು ಹಿಮ್ಮೆಟ್ಟಿಸುವಂತಹ ವಿವಿಧ ಶಾರೀರಿಕ ಕಸರತ್ತು ಗಳನ್ನು ಕಲಿಯುವ ಗರಡಿಯ ಮನೆಯಲ್ಲಿ ಏನಾದರೂ ತಪ್ಪಿದರೆ ಅದು ಕುಂದೇ ? ವಿದ್ಯಾಮಂದಿರದಲ್ಲಿ ಪರಿಶ್ರಮಪೂರ್ವಕ ವಿವಿಧ ವಿಷಯಗಳ ಅಭ್ಯಾಸವನ್ನು ಮಾಡಿ ಪದವೀಧರನಾದ ಬಳಿಕ ಆ ಪ್ರಾಚಾರ್ಯನನ್ನು ಪರೀಕ್ಷಿಸುವದು ಸೂಕ್ತವೆನಿಸುವದಲ್ಲದೇ ಆಗತಾನೇ ವಿದ್ಯಾಮಂದಿರವನ್ನು ಪ್ರವೇಶ ಮಾಡಿ ಮೂಲಾಕ್ಷರವನ್ನು ಕಲಿಯುವ ಬಾಲಕ ನನ್ನು ಪರೀಕ್ಷಿಸುವದು ಸೂಕ್ತವೆನಿಸೀತೇ ? ಶ್ರೀ ಬಸವರಾಜರು ಭಕ್ತಿ ಮಾರ್ಗದಲ್ಲಿ ಬಾಲಕ ರಿದ್ದಂತೆ. ಅವರ ತಪ್ಪನ್ನು ಕ್ಷಮಿಸಿ ಅಪ್ಪಿಕೊಳ್ಳಬೇಕು ಎಂದು ಬೇಡಿಕೊಂಡರು. ಶ್ರೀ ಬಸವೇಶ್ವರರು ಅಹಂಕಾರ ಪೂರ್ವಕ ಮಾಡಿದ ಭಕ್ತಿಗಾಗಿ ಕಡುನೊಂದು–

" ಧ್ಯಾನಮೌನವೆಂಬ ಶಸ್ತ್ರವಹಿಡಿಯಲರಿಯದೆ, ಅಹಂಕಾರಧಾರೆಯ
ಮೊನೆ ಅಲಗೆಂಬ ಶಸ್ತ್ರವಹಿಡಿದು ಕೊಟ್ಟೆನಯ್ಯಾ
ಅಂಜುವೆನಂಜುವೆನಯ್ಯ. ಜಂಗಮಲಿಂಗವೆಂಬ ಭಾಷೆಪಲ್ಲಟವಾಯಿತ್ತು
ಇನ್ನು ಜಂಗಮವೆಂಬ ಶಿಕ್ಷಾಶಾಸ್ತ್ರದಲ್ಲಿ ಎನ್ನ ಹೊಯ್ದುಬಯ್ದು
ರಕ್ಷಿಸುವದು ಕೂಡಲಸಂಗಮದೇವಾ

ಹೀಗೆ ನುಡಿಯಲು ಪ್ರಸನ್ನ ಚಿತ್ತರಾದ —

ಪ್ರಭುದೇವರು :– " ನಮ್ಮ ಗುಹೇಶ್ವರ ಲಿಂಗದಲ್ಲಿ ನೀವೇ ಭಕ್ತನಾದ ಕಾರಣ
ಮುಳಿಸು ಮೊನೆದೋರಿತ್ತು ಕಾಣಾ ಸಂಗನಬಸವಣ್ಣ,

" ಸೂಳೆ ಹಲಬರೆ ನುರುಳಿದಳೆಂದು ನಿಂದಿಸುವರಿಲ್ಲ ಕೇಳಾ !
ಪತಿವ್ರತೆ ತನ್ನ ಪುರುಷನನಲ್ಲದೆ ಮತ್ತೊಬ್ಬನ ಮುಖವ ನೋಡಿದರ
ಅವಳ ಚಾಂಡಾಲಗಿತ್ತಿ ಎಂಬುದು ಲೋಕವೆಲ್ಲವು,
ಕೀರ್ತಿ ವಾರ್ತೆಗೆ ಮಾಡುವಭಕ್ತ ತಪ್ಪಿದರೆ ಅದ ಮನಕ್ಕೆ ತಕ್ಕರಿಲ್ಲ,
ಸಜ್ಜನ ಸದ್ಭಕ್ತನೆಡಹಿದರೆ ಅದ ಸೈರಿಸಬಾರದು ನೋಡಾ,
ನಮ್ಮ ಗುಹೇಶ್ವರಲಿಂಗಕ್ಕೆ ಆದಿಯಿಂದತ್ತ ನೀನೆ ಭಕ್ತನಾದ
ಕಾರಣ ಮನನೊಂದಿತ್ತು ಕಾಣಾ ಸಂಗನಬಸವಣ್ಣಾ.

ಎಂದು ಮಾರ್ನುಡಿದರು. ಅದಕ್ಕೆ ಅನುತಾಪದಿಂದ–

ಬಸವಣ್ಣನವರು :– " ಎನ್ನ ನುಡಿ ಎನಗೆ ನಂಜಾಯಿತ್ತು, ಎನ್ನಲಗೆ ಎನ್ನ ಕೊಂದಿತ್ತು
ಆನುಪಾಪಿಯಯ್ಯಾ, ಆನು ಕೋಪಿಯಯ್ಯಾ,
ತರಳತನದಲ್ಲಿ ಕೆಟ್ಟೆನಯ್ಯಾ, ಭಕ್ತಿ ಮುಕ್ತಿಯ ಹೊಲಬನರಿಯದ
ಆನು ಮರುಳಾದೆನಯ್ಯಾ, ಆಳು ಮುನಿದರೆ ಆಳಿಕೆಡುವುದು,
ನೀವು ಮುನಿದರೆ ನಾನೆ ಕೆಡುವೆನಯ್ಯಾ ಕೂಡಲ ಸಂಗಮದೇವ."

" ಒಲೆ ಹೊತ್ತಿ ಉರಿದರೆ ನಿಲಬಹುದಲ್ಲದೆ,
ನೆಲಹೊತ್ತಿ ಉರಿದರೆ ನಿಲಬಹುದೇ ?
ಏರಿನೀರುಂಬರೆ, ಬೇಲಿ ಕೆಯ್ಯ ಮೆಯ್ದರೆ,
ನಾರಿತನ್ನ ಮನೆಯಲ್ಲಿ ಕಳೆವರೆ, ತಾಯ ಮೊಲೆವಾಲು
ನಂಜಾಗಿ ಕೊಲುವರೆ ಇನ್ನಾರಿಗೆ ದೂರುವೆನಯ್ಯಾ,
ಕೂಡಲಸಂಗಮದೇವಾ ನೀವು ಮುನಿದರೆ ನಾನು ಸೈರಿಸಬಲ್ಲೆನೆ
ಹೇಳಾ ಪ್ರಭುವೇ "

" ಎನ್ನ ಗುಣಾವಗುಣವ ಸಂಪಾದಿಸದಿರಯ್ಯಾ,
ನಿಮಗಾನು ಸರಿಯೇ ! ಅಪ್ರತಿಮ ಮಹಿಮ ನಿಮಗಾನು ಸರಿಯೇ !
ಅಪ್ರತಿಮ ಕೂಡಲಸಂಗಮದೇವ ನೀವು ಮಾಡಲಾನಾದೆನು,
ಎನ್ನೊಡನೆ ಮುನಿವರೆ ಎಲೆ ತಂದೆ ಹೇಳಾ "

"ಎನ್ನ ಗತಿ ಮತಿ ನೀನೆ ಕಂಡಯ್ಯಾ,
ಎನ್ನ ಗುರು ಪರಮಗುರು ನೀನೆ ಕಂಡಯ್ಯಾ,
ಎನ್ನ ಅಂತರಂಗದ ಜ್ಯೋತಿ ನೀನೆ ಕಂಡಯ್ಯಾ, ಕೂಡಲಸಂಗಮದೇವಾ
ನೀನೇ ಎನಗೆ ಗುರು. ನಾನೆ ನಿಮ್ಮ ಶಿಷ್ಯನೆಂಬುದ ನಿಮ್ಮ ಶರಣ
ಸಿದ್ಧರಾಮಯ್ಯದೇವರು ಬಲ್ಲರು ಕೃಪೆ ಮಾಡಾ ಪ್ರಭುವೇ "

ಷಟ್‌ಸ್ಥಲಚಕ್ರವರ್ತಿಯಾದ ಶ್ರೀ ಚನ್ನಬಸವಣ್ಣನವರು ಆಗಮಿಸಿ, ವಿರಾಗವಿಭು ಪ್ರಭು
ದೇವರನ್ನು ಕುರಿತು, ಪ್ರಭುವೇ — ಮುಕ್ತಾಯಿಯನ್ನು ಕುರಿತು

" ಗುರುವಿಂಗು ಶಿಷ್ಯಂಗು ಆವುದು ದೂರ ಆವುದು ಸಾರೆಂಬುದ
ನಾರು ಬಲ್ಲರು ? ಗುರು ಶಿಷ್ಯನಾದ ತನ್ನ ವಿನೋದಕ್ಕೆ
ಶಿಷ್ಯನೇ ಗುರುವಾದ ತನ್ನ ವಿನೋದಕ್ಕೆ,
ಕರ್ಮವೆಂಬ ಕೌಟಿಲ್ಯ ಎಡೆಯೊಕ್ಕ ಕಾರಣ ಭಿನ್ನವಾಗಿ
ಇದ್ದಿತ್ತೆಂದರೆ ಅದು ನಿಶ್ಚಯವಹುದೇ ? "
ಆದಿ ಅನಾದಿಯಿಂದತ್ತತ್ತ ಮುನ್ನ ಪರತತ್ತ್ವಮಂ ತಿಳಿದು ನೋಡಲು
ನೀನೇ ಸ್ವಯಂ ಜ್ಯೋತಿ ಪ್ರಕಾಶನು ....... "
ಎಂದು ಉಪದೇಶ ಮಾಡಿಲ್ಲವೇ ?

" ಸಂಗನ ಬಸವಣ್ಣನೊಳಗೆ ನಿನ್ನೊಳಗೆ ಭೇದವಿಲ್ಲೆಂಬುದ ನೀವೇ
ಅರಿದರಿದು ಮತ್ತೆ ಬಾರೆನೆಂಬುದುಚಿತವೇ ? ಕೂಡಲಸಂಗನ ಶರಣ
ಬಸವಣ್ಣನೆ ನಿಮ್ಮ ಪ್ರಾಣವಾಗುತ್ತಿರಲು ಇನ್ನಾರೊಡನೆಮುನಿವಿರಿ
ಕೃಪೆ ಮಾಡಾ ಪ್ರಭುವೇ "

" ನಿನ್ನ ಪ್ರಾಣವೇ ಬಸವಣ್ಣನ ಪ್ರಾಣ, ಬಸವಣ್ಣನ ಪ್ರಾಣವೇ ನಿನ್ನ ಪ್ರಾಣ,
ನಿನ್ನ ಕಾಯವೇ ಬಸವಣ್ಣನ ಕಾಯ, ಬಸವಣ್ಣನ ಕಾಯವೇ ನಿನ್ನ ಕಾಯ
ನೀವಿಲ್ಲದಿರೆ ಬಸವಣ್ಣನಿಲ್ಲ. ಬಸವಣ್ಣನಿಲ್ಲದಿರೆ ನೀವಿಲ್ಲ,
ಇಂತೊಂದಾನೊಂದ ಬಿಚ್ಚಿ ಬೇರು ಮಾಡಬಾರದನೆಂಬುದನರಿದು
ಮತ್ತೆ ಬರಿದೆ ಮುನಿವರೇ ? ಬಲ್ಲವರು ನಡೆವ
ದಾರಿಯಲಿ ಮುಗ್ಗಿದೊಡೆ ನಡೆಸಿಕೊಂಬುವರಲ್ಲದೆ ಮುಗ್ಗಿದ ತುರಗದ
ಕಾಲು ಕತ್ತರಿಸಿದವರುಂಟೇ ? ಲೋಕದೊಳಗೆ ಮರಹಿಂದ
ಗುಣವ ಸಂಪಾದಿಸದೆ ಬಿಜಯಂಗೈವುದಯ್ಯ ನಿಮ್ಮ ಗೃಹಕ್ಕೆ;
ಕೂಡಲಸಂಗಮದೇವ ನಿಮ್ಮ ಶರಣ ಬಸವಣ್ಣನಾರೆಂಬುದ
ನೀನೊಮ್ಮೆ ತಿಳಿದುನೋಡಾ ಪ್ರಭುವೇ "

ಆಗ ಪ್ರಭುದೇವರು ಪ್ರಸನ್ನ ಚಿತ್ತರಾಗಿ ಬಸವಣ್ಣನನ್ನು —

" ನಿತ್ಯ ಬಸವಣ್ಣ, ನಿರಂಜನ ಬಸವಣ್ಣ,
ಸಚ್ಚಿದಾನಂದ ನಿತ್ಯ ಪರಿಪೂರ್ಣ ಬಸವಣ್ಣ,
ಶಿವಾಚಾರ ಚಕ್ರವರ್ತಿ ಬಸವಣ್ಣ,
ಸರ್ವಾಚಾರ ಸಂಪನ್ನ ಬಸವಣ್ಣ,
ಸರ್ವಾಂಗಲಿಂಗಮೂರ್ತಿ ಬಸವಣ್ಣ,
ಸ್ವಾನುಭಾವ ಸಾರೋದ್ಧಾರ ಬಸವಣ್ಣ,
ಆರೂಢ ದಾಸೋಹಿ ಬಸವಣ್ಣ,
ಶಿವಸಮಯ ಪ್ರತಿಷ್ಠಾಚಾರ್ಯ ಬಸವಣ್ಣ, "

ಎಂದು ಬಹುರೀತಿಯಿಂದ ಪ್ರಶಂಸೆ ಮಾಡಿದರು,

" ತನುವ ಗೆಲಲರಿಯದೆ, ಮನವ ಗೆಲಲರಿಯದೆ, ಧನವಗೆಲಲರಿಯದೆ,
ಭ್ರಮೆಗೊಂಡಿತ್ತು ಲೋಕವೆಲ್ಲವು, ತನು ದಾಸೋಹಕ್ಕೆ ಸವೆಸಿ
ಮನವ ಲಿಂಗ ಧ್ಯಾನದಲ್ಲಿ ಸವೆಸಿ, ಧನವ ಜಂಗಮದಲ್ಲಿ ಸವೆಸಿ
ಗೆಲಬಲ್ಲರೆ ಸಂಗನಬಸವಣ್ಣನಲ್ಲದೆ ಮತ್ತಾರನು ಕಾಣೆ ಗುಹೇಶ್ವರ
ನಿಮ್ಮ ಶರಣ ಸಂಗನಬಸವಣ್ಣಗೆ ನಮೋ ನಮೋ ಎನುತಿರ್ದೆನು

ಎಂದು ಪ್ರಭುವು ಹಾಡಿಹರಸಲು ಬಸವೇಶ್ವರರು ತಿರುಗಿ ಪ್ರಭುವನ್ನು-

"ಕಾಲಿಲ್ಲದೆ ನಡೆವನು ಕೈಯಿಲ್ಲದೆ ಹಿಡಿವನು
ಕಣ್ಣಿಲ್ಲದೆ ನೋಡುವನು ಸಹಜವಾಗಿ ಮೈಯಿಲ್ಲದ ಬಣ್ಣ,
ಮಥನವಿಲ್ಲದ ಕೂಟ ಅಲ್ಲಿ ಸ್ವೈವೆರಗಾಗಿಹನು ....
ಕೂಡಲಸಂಗಮದೇವರ ಮಹಾಮನೆಯಲ್ಲಿ ಪ್ರಭುದೇವರ
ಮೊರೆ ಹೊಕ್ಕು ಬದುಕಿದೆನು ನಾನು "

ಎಂದು ನಾನಾ ರೀತಿಯಲ್ಲಿ ಸ್ತುತಿಸಿದರು.

ಅಷ್ಟತನು ಮೂರುತಿಯಲ್ಲ, ಅಷ್ಟಮದಂಗಳ ಮೆಟ್ಟಿಯೆ
ನಿಲಿಸಿದ ಅಷ್ಟದಳ ಕಮಲ ಪೂಜಿತ ಪ್ರಭುವು
ಭೃಂಗವು ಕುಸುಮ ಪರಿಮಳಕೆರಗುವಂತೆ ಕೂಡಲ ಸಂಗನ
ಮಹಾಮನೆಯ —

" ನಡೆಯಿರೈ ಶಿವಲಿಂಗ ಭಕ್ತಿಯ ।
ಬೆಡಗನೇಕಾಂತದಲಿ ನಿಮಗೊಡ ।
ಒಡಿಸಿ ಹೇಳುವೆನೆನುತೆ ಬಂದನು ಬಳಿಕ ಪ್ರಭುರಾಯ "

ಎಲೈ ಶರಣರೇ ಶಿವಲಿಂಗ ಭಕ್ತಿಯ ರಹಸ್ಯವನ್ನು ಏಕಾಂತದಲ್ಲಿ ನಿಮಗೆ ಮನಮುಟ್ಟು ವಂತೆ ಹೇಳುವೆನು ಎಂದು ಆಜ್ಞಾಪಿಸಿ, ಪ್ರಭುದೇವರ ಮಹಾಮನೆಯನ್ನು ಪ್ರವೇಶಿಸಿದರು.

**ವಿವರಣೆ :**

ವೀರಶೈವ ಸಿದ್ಧಾಂತದಲ್ಲಿ ಆರಾಧ್ಯ ಮೂರ್ತಿಗಳೆನಿಸಿದ ಗುರು, ಲಿಂಗ, ಜಂಗಮರ ಪೂಜೆಯಲ್ಲಿ ಲಿಂಗಪೂಜೆಗಿಂತಲೂ ಗುರು ಜಂಗಮಾರ್ಚನೆಗೆ ಅತೀವ ಪ್ರಾಶಸ್ತ್ಯವಿದೆ.

" ಪ್ರಾಣವದ್ಧಾರಣೀಯಂ ಪ್ರಾಣಲಿಂಗಮಿದಂತವ ।
ಕದಾಚಿತ್ ಕುತ್ರ ಚಿದ್ವಾಪಿ ಮಾವಿಯೋ ಜಯದೇಹತಃ ।
ಲಿಂಗಧಾರೀ ಸದಾ ಶುದ್ಧಃ ನಿಜಲಿಂಗಂ ಮನೋರಮಂ ।
ಅರ್ಚಯೇದ್ಗಂಧ ಪುಷ್ಪಾದ್ಯೈಃ ಕರಪೀಠೇ ಸಮಾಹಿತಃ ॥ "
ಶಿವಲಿಂಗಂತ್ರಿಸಂಧ್ಯಂ ಚ ಅಭ್ಯರ್ಚಯೇತ್ ॥ "

ಹೀಗೆ ಜಂಗಮ ಸಾಕ್ಷಿಯಾಗಿ ಲಿಂಗವನ್ನು ಕರುಣಿಸಿ ಲಿಂಗಾರ್ಚನೆ ಮಾಡುವಲ್ಲಿ ಸ್ವಲ್ಪೂ ಶಪ್ಪಬೇಡ ಎಂದು ದೀಕ್ಷಾಮುಖೇನ ಉಪದೇಶಿಸಿದ ಗುರುವಾಗಲಿ, ಜಂಗಮ ಮೂರ್ತಿಯಾಗಲಿ ದಯಮಾಡಿದರೆ ಆ ಪ್ರಸಂಗದಲ್ಲಿ ಗುರುವಿನ ಆಣತಿಯಂತೆ ಲಿಂಗಪೂಜೆಯನ್ನು ಮಾಡುತ್ತಿದ್ದರೂ ಅದನ್ನು ಬಿಟ್ಟು ಗುರು ಜಂಗಮರ ಸೇವೆಗೆ ಸಿದ್ಧನಾಗಬೇಕು ಎಂದು ವೀರಶೈವ ಷಟ್‌ಸ್ಥಲ ಸಿದ್ಧಾಂತ ಸಂಸ್ಥಾಪಕರ ಅಭಿಮತವಿರುವದು.

ಹೋಮಕುಂಡದಲ್ಲಿ ಹವನ ದ್ರವ್ಯಗಳನ್ನು ಹಾಕಿದರೆ ಅವು ಅಗ್ನಿಯ ಮುಖಾಂತರ ದೇವತೆಗಳಿಗೆ ಮುಟ್ಟಿ ಸುವೃಷ್ಟಿಯಾಗಿ ಸುಖಶಾಂತಿಗಳು ನೆಲೆಸುವವೆಂದು ಪೂರ್ವ ಮೀಮಾಂಸಕರು ಹೇಳುವಂತೆ ವೀರಶೈವರು ''ಲಿಂಗಂ ಜಂಗಮಮುಖಂ'' ಎಂದು ಹೇಳುವರು.

„ ಕನ್ನಡಿಯ ನೋಡುವಣ್ಣಗಳಿರಾ ಜಂಗಮವ ನೋಡಿರೋ ।
ಜಂಗಮದೊಳಗೆ ಲಿಂಗಯ್ಯ ಸನ್ನಿಹಿತವಾಗಿರ್ಪ
ಸ್ಥಾವರ ಜಂಗಮ ಒಂದೇ ಎಂಬುದು ಕೂಡಲಸಂಗನವಚನ "

ಕನ್ನಡಿಯಲ್ಲಿ ಮುಖದ ಸೌಂದರ್ಯವನ್ನು ನೋಡಿಕೊಂಡಂತೆ ಮಣ್ಣಿನ ಗೋಡೆಯಲ್ಲಿ ಮುಖಸೌಂದರ್ಯವನ್ನು ನೋಡಲು ಬರುವದೇ ?

„ ಜಗದಗಲ, ಮುಗಿಲಗಲ, ಮಿಗೆಯಗಲ, ನಿಮ್ಮಗಲ,
ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ,
ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮುಕುಟ,
ಅಗಮ್ಯ, ಅಗೋಚರ ಅಪ್ರತಿಮಲಿಂಗವೇ ಕೂಡಲಸಂಗಮದೇವಯ್ಯ
ಎನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯ ॥ "

ಇಂತಹ ಮಹಲಿಂಗದ ನೆಲೆ ಕಲೆಗಳನ್ನು, ಲಿಂಗಾಂಗ ಸಮರಸದ ಸಕೀಲ ಸಂಬಂಧವನು ತಿಳಿಸುವವನು ಸದ್ಗುರುವೆ. ಅದಕ್ಕಾಗಿ ಜಂಗಮದಲ್ಲಿ ಲಿಂಗವ ನೋಡಿರೋ ಗುರುಲಿಂಗ ಜಂಗಮರಲ್ಲಿ ಭೇದ ಬುದ್ಧಿಯನ್ನು ಮಾಡಬೇಡಿರೋ ಎಂದು ಹೇಳಿರುವರು.

„ ಭೂಮಿಯೊಳಗೆ ನಿಧಾನವಿದ್ದುದ ಅಂಜನವುಳ್ಳವರು ತೋರಿರಯ್ಯ ।
ಅಂಜಲು ಬೇಡಕಂಡಾ ಮನದಲ್ಲಿ ಸಂದೇಹವ ಮಾಡದಿರಾ ।
ಜಂಗಮದೊಳಗೆ ಲಿಂಗಯ್ಯನಿದ್ದಾನೆಂದು ನಂಬಿಗೆಯುಳ್ಳರೆ ।
ತೋರುವ ಕೂಡಲಸಂಗಯ್ಯ ॥ "

ಭೂಗರ್ಭದಲ್ಲಿ ನಿಧಿನಿಕ್ಷೇಪಾದಿಗಳು ಯಾರಿಗೂ ಕಾಣದಂತೆ ಗುಪ್ತವಾಗಿರುತ್ತವೆ. ಅವುಗಳನ್ನು ಅಂಜನಸಿದ್ಧರು ಮಾತ್ರ ತೋರಿಸುವರು, ತಮ್ಮ ವಶಮಾಡಿಕೊಳ್ಳುವರು. ಹಾಗೆ ಜಂಗಮದಲ್ಲಿ ಲಿಂಗವಿದ್ದಾನೆಂದು ನಂಬಿದವರಿಗೆ ಮಾತ್ರ ಶಿವನು ತೋರುವನು, ಒಲಿಯುವನು. ಅಂತೆಯೇ ಶ್ರೀ ಬಸವೇಶ್ವರರು

" ಎರೆದರೆ ನೆನೆಯದು, ಮರೆದರೆ ಬಾಡದು,
ಹುರುಳಿಲ್ಲ ಹುರುಳಿಲ್ಲ ಲಿಂಗಾರ್ಚನೆ,
ಕೂಡಲ ಸಂಗಯ್ಯ ಜಂಗಮಕ್ಕೆರೆದರೆ ಸ್ಥಾವರ ನೆನೆಯಿತ್ತು "
" ಜಂಗಮ ವಿರಹಿತಲಿಂಗಾರ್ಚನೆ ಮಳಲಲ್ಲೆರೆದ ಜಲದಂತೆ "

ಎಂದು ಹೇಳಿರುವರು.

" ಅಗ್ನಿಯಾಧಾರದಲ್ಲಿ ಕಬ್ಬಿನ ನೀರುಂಬುದಯ್ಯ,
ಭೂಮಿಯಾಧಾರದಲ್ಲಿ ವೃಕ್ಷ ನೀರುಂಬುದಯ್ಯ,
ಜಂಗಮವಾಪ್ಯಾಯನವಾದರೆ ಲಿಂಗಸಂತುಷ್ಟಿಯಹುದಯ್ಯ।"

"ವೃಕ್ಷಸ್ಯ ವದನಂ ಭೂಮಿಃ ಸ್ಥಾವರಸ್ಯತಂ ಜಂಗಮಃ ।
ಅಹಂತುಷ್ಟೋಸ್ಮ್ಯಹಂ ಮಾಡೇವಿ ಉಭಯೋರ್ಲಿಂಗ ಜಂಗಮ,
ಇದುಂ ಕಾರಣ ಕೂಡಲಸಂಗಮದೇವರಲ್ಲಿ
ಜಂಗಮವಾಪ್ಯಾಯನವಾದರೆ ಲಿಂಗ ಸಂತುಷ್ಟಿಃ "

ಕಾಸಿದ ಕಬ್ಬಿಣವು ನೀರುಣ್ಣುವದಲ್ಲದೆ ಕಾಸದ ಕಬ್ಬಿಣವು ನೀರನ್ನುಣ್ಣಲಾರದು. ಕಬ್ಬಿಣ, ನೀರು, ಅಗ್ನಿ ಈ ಮೂರು ವಸ್ತುಗಳಲ್ಲಿ ಕಬ್ಬಿಣವು ಕಠಿಣವಾದ ವಸ್ತು, ಅಗ್ನಿಯು ದಾಹಕ ವಸ್ತು. ನೀರು ದ್ರವ ವಸ್ತು. ಕಠಿಣವಾದ ಲೋಹವು ದಾಹಕವಾದ ಅಗ್ನಿಯ ಮುಖದಿಂದ ಶೀತಲ ದ್ರವ ಪದಾರ್ಥವೆನಿಸಿದ ನೀರನ್ನು ಕುಡಿಯುವದು. ಅಗ್ನಿಸಂಪರ್ಕವಿಲ್ಲದೆ ಕಬ್ಬಿಣ ನೀರನ್ನು ತಕ್ಕೊಳ್ಳಲಾರದು.

ಗಿಡ ಮರಗಳು ನೀರಿನಿಂದ ಬದುಕುತ್ತಿದ್ದರೂ ಆ ನೀರನ್ನು ಭೂಮಿಯ ಆಧಾರದಿಂದಲೇ ತಕ್ಕೊಳ್ಳಬೇಕಾಗುವದು. ಗಿಡಮರಗಳ ಸುತ್ತು ಮಡಿಕಟ್ಟಿ ನೀರು ನಿಲ್ಲಿಸಿದಾಗ ಆ ನೀರನ್ನು ಭೂಮಿಯ ಮುಖದಿಂದ ಕುಡಿದು, ಚಿಗುರೊಡೆದು ಹೂ, ಹಣ್ಣು ಬಿಡುವವು. ಕಬ್ಬಿಣ ಅಗ್ನಿಯ ಮುಖಾಂತರ, ಗಿಡವು ಭೂಮಿಯ ಮೂಲಕ ನೀರನ್ನು ತೆಗೆದುಕೊಳ್ಳುವಂತೆ ಲಿಂಗದೇವನೂ ಜಂಗಮದ ಮುಖದಿಂದ ಸಂತೃಪ್ತಿ ಪಡೆಯುವನು. ಅಂದರೆ ಜಂಗಮ ಮೂರ್ತಿಯು ಉಂಡು ಸಂತುಷ್ಟನಾದರೆ ಲಿಂಗದೇವನೂ ಸಂತುಷ್ಟನಾಗುವನು. ಇದನ್ನೇ ಜಗದ್ಗುರು ರೇಣುಕರು–

" ಶಿವಯೋಗಿನಿಸಂತೃಪ್ತೇ ತೃಪ್ತೋಭವತಿಶಂಕರಃ ॥
ತತೃಪ್ತ್ಯಾತನ್ಮಯಂ ವಿಶ್ವಂತೃಪ್ತಿಮೇತಿಚರಾಚರಂ " ॥

ಎಂದುಹೇಳಿರುವರು. ಸರ್ವಜ್ಞಕವಿಯೂ–

" ಲಿಂಗಕ್ಕೆತೋರಿಸುತ ನುಂಗುವಾತನಕೇಳು ।
ಲಿಂಗವುಂಬುವದೆ ? ಇದನರಿದು ಕಪಿಯೆನೀ ।
ಜಂಗಮಕೇನೀಡಂ ಸರ್ವಜ್ಞ " ॥

ಜಂಗಮತೃಪ್ತಿಯಿಂದಲೇ ಲಿಂಗಸಂತೃಪ್ತಿ ಎಂದು ಹೇಳಿರುವನು. ಕಲಬುರ್ಗಿಜಿಲ್ಲೆಯೊಳಗೆ ಕೆಂಭಾವಿ ಎಂಬ ಗ್ರಾಮದಲ್ಲಿ ಭೋಗಣ್ಣನೆಂಬ ಶಿವಶರಣನು ವಾಸಿಸುತ್ತಿದ್ದನು. ಅವನ ಲಿಂಗಪೂಜೆ ಜಂಗಮ ದಾಸೋಹಾದಿ ಪುಣ್ಯಕಾರ್ಯಗಳನ್ನು ಕಂಡು ಅಸೂಯೆಯಿಂದ ಹಲವಾರು ಬ್ರಾಹ್ಮಣರು ಆ ಊರ ರಾಜನಿಗೆ ಅಲ್ಲದ ಮಾತುಗಳನ್ನು ಹೇಳಿ ರಾಜನಮನಸ್ಸನ್ನು ಕೆಡಿಸಿದರು. ದೂರದರ್ಶಿಯಲ್ಲದ ರಾಜನು ಕುಪಿತನಾಗಿ ಆ ಶರಣನಿಗೆ ತನ್ನ ಊರಲ್ಲಿರಬಾರದೆಂದು ಕಟ್ಟಪ್ಪಣೆಮಾಡಿದನು. ರಾಜಾಜ್ಞೆಯಪ್ರಕಾರ ಹಾಗೇ ಆಗಲೆಂದು ಒಪ್ಪಿ ಅವನು ಊರುಬಿಟ್ಟು ಹೊರಬಿದ್ದನು.ಆಗ ಗ್ರಾಮದಲ್ಲಿದ್ದ ದೇವಾಲಯಗಳಲ್ಲಿರುವ ಲಿಂಗಗಳೆಲ್ಲ ತಮ್ಮಸ್ಥಾನವನ್ನು ಬಿಟ್ಟು ಶರಣಶಿರೋಮಣಿಯಾದ ಭೋಗಣ್ಣನ ಬೆನ್ನುಹತ್ತಿ ಹೋದವು.ಪಟ್ಟಣದಲ್ಲಿರುವ ಜನರು ಇದನ್ನುನೋಡಿ ಹೌಹಾರಿ ಭೋಗಣ್ಣನು ಮಹಾ ಶಿವಶರಣನೆಂದು ತಿಳಿದು ಅವನನ್ನು ತಿರುಗಿ ಪಟ್ಟಣಕ್ಕೆ ಬರಮಾಡಿಕೊಂಡರು. ರಾಜಾಜ್ಞೆಯಿಂದ ಗಡೀಪಾರು ಹೊಂದಿದ ಮಹಾಶಿವಶರಣನಾದ ಭೋಗಣ್ಣನಹಿಂದೆ ಊರ ದೇವಾಲಯದೊಳಗಿರುವ ಲಿಂಗಗಳೆಲ್ಲ ಬೆನ್ನುಹತ್ತಿ ಹೋದವೆಂಬ ಕಥೆಯಿಂದ ಲಿಂಗಕ್ಕಿಂತಲೂ ಶಿವಯೋಗಿ ಜಂಗಮನೇ ಮೇಲೆಂದು ತಿಳಿದುಬರುವದು.

ಭಕ್ತಿಯು ದ್ವಿಧಾ, ತ್ರಿಧಾ, ಪಂಚವಿಧಾ, ಷಡ್ವಿಧಾ, ನವವಿಧಾ ಹೀಗೆ ಬಗೆ ಬಗೆಯಾಗಿ ವೈವಿಧ್ಯವನ್ನು ಪಡೆದಿದೆ. ಈ ಭಕ್ತಿ ವೈವಿಧ್ಯದಲ್ಲಿ ಪಂಚವಿಧ ಭಕ್ತಿಯೊಳಗೆ ಪತಿಭಕ್ತಿಯೆಂಬುದೊಂದಿದೆ.ವ್ಯವಹಾರದಲ್ಲಿ ಸಾಧ್ವೀಶಿರೋಮಣಿಯಾದ ಸತಿಯು ಪತಿಯನ್ನು ಭಕ್ತಿಯಿಂದ ಉಪಚರಿಸುವಂತೆ ಶರಣನೆಂಬ ಸತಿಯು ಲಿಂಗದೇವನೆಂಬ ಪತಿಯನ್ನು ಉಪಚರಿಸಬೇಕೆಂಬುದೇ ಈ ಪತಿಭಕ್ತಿಯ ಲಕ್ಷಣವು. ಶರಣಸತಿಯು ಲಿಂಗಪತಿಯನ್ನು ಆರಾಧಿಸುವ ಬಗ್ಗೆ ಅನೇಕ ಪ್ರಮಾಣಗಳು ಹಾಗು ವಚನಗಳು ಶಿವಾಗಮಗಳಲ್ಲಿ ಮತ್ತು ವಚನ ವಾಙ್ಮಯದಲ್ಲಿ ದೊರೆಯುತ್ತವೆ.

ಲೋಕದೊಳಗೆ ವಿವಾಹಮಂಟಪದಲ್ಲಿ ಗುರುಹಿರಿಯರ ಸಮಕ್ಷಮ ಪಾಣಿಗ್ರಹಣ ಮಾಡಿದ ಪತಿಯನ್ನು ಸೇವಿಸುವದು ಸಾಧ್ವೀಶಿರೋಮಣಿಯಾದ ಸತಿಗೆ ಯೋಗ್ಯವೆನಿಸಿದರೂ ಪತಿಯನ್ನು ಕರುಣಿಸಿದ ಮಾವನ ಸೇವೆಯನ್ನು ಗೌರವಾದರ ಬುದ್ಧಿಯಿಂದ ಮಾಡುವದು ವಿಹಿತವಲ್ಲವೇ ? ಹಾಗೆಯೇ ಶರಣ ಸತಿಯು ಗುರುವು ಕರುಣಿಸಿದ ಲಿಂಗ ಪತಿಯನ್ನು ಪೂಜಿಸುತ್ತಿದ್ದರೂ, ಲಿಂಗವನ್ನೇ ಕರುಣಿಸಿದ ಸದ್ಗುರುವನ್ನು ಅತೀ ಭಯಭಕ್ತಿಗಳಿಂದ ಪೂಜಿಸುವದು ಶಾಸ್ತ್ರಸಮ್ಮತವಾದುದು.

ವೀರಶೈವಸಾಹಿತ್ಯದಲ್ಲಿ ಅನುಭಾವಿಗಳು ಶ್ರೀಗುರುವಿಗೆ ವಿವಿಧ ತಾತ್ವಿಕ ಸಂಬಂಧಗಳನ್ನು ಕಲ್ಪಿಸಿ-

" ಸುಳಿವ ಸೋದರಮಾವನಳಿಯ ನಗ್ರಜಭಾವ ।
ಗೆಳೆಯನೀನೆನಗೆ ಹಳೆನೆಂಟ ಕುಲಕೋಟಿ
ಬಳಗವೈ ಗುರುವೆ ಕೃಪೆಯಾಗು "

ಸೋದರಮಾವ, ಸೋದರ, ಹಳೆಯನೆಂಟ, ಕುಲಕೋಟಿಬಳಗದವ, ಅಳಿಯ ಎಂದು ಮುಂತಾಗಿ ಹಾಡಿರುವರು. ಪ್ರಯುಕ್ತ ಗುರುಜಂಗಮರ ಸಾನ್ನಿಧ್ಯದ ಬಲಾಬಲಗಳನ್ನರಿತು ಲಿಂಗಪೂಜೆಯನ್ನುಮಾಡಿ ಮುಕ್ತರಾಗಬೇಕು.

## ೧೫ನೆಯ ಗತಿ

# ಮುರುಳ ಶಂಕರದೇವರು

ವಿಶ್ವದಲ್ಲಿರುವ ಇತಿಮಿತಿಯಿಲ್ಲದ ಮತಿವಂತನಾದ ಮಾನವನ ಪ್ರತಿಕ್ಷಣದ ಜೀವನದ ಸುದೀರ್ಘ ಹೋರಾಟದ ಗುರಿಯು ಸುಖಶಾಂತಿಗಾಗಿ, ಸೌಭಾಗ್ಯಸಂಪಾದನೆಗಾಗಿ ಎಂಬುದು ಸುಸ್ಪಷ್ಟವಿರುವದು. ಅಂತೆಯೇ ಉಪನಿಷತ್ಕಾರರು " ನಂದಾಮಃಶರದಃ ಶತಂ " " ಜೀವನ್ನರೋಭದ್ರಶತಾನಿಪಶ್ಯೇತ್ " ಎಂದು ಹೇಳಿರುವರು. ಮಾನವನ ನೂರುವರುಷದ ಬಾಳು ನೇರವಾಗಿಸಾಗಲು ದೈಹಿಕ, ಬೌದ್ಧಿಕ, ಮಾನಸಿಕ, ಆತ್ಮಿಕ, ಬಲಗಳು ಅತ್ಯಗತ್ಯಬೇಕು. ಬೌದ್ಧಿಕ, ಮಾನಸಿಕ, ಆತ್ಮಿಕ, ಮೊದಲಾದವುಗಳ ಸರ್ವಾಂಗೀಣ ಉನ್ನತಿಗೆ, ಸಂವರ್ಧನೆಗೆ ದೈಹಿಕ ಬಲವೇ ಮೂಲವಾದುದು. ಒಂದು ಭವ್ಯವಾದ ಮಂಟಪವು ಭದ್ರವಾದ ತಳಹದಿಯಿಲ್ಲದೆ ಸುರಕ್ಷಿತವಾಗಿ ನಿಲ್ಲುವದು ಅಸಾಧ್ಯವಾದಂತೆ ದೈಹಿಕಬಲವಿಲ್ಲದೇಹೋದರೆ ಇನ್ನುಳಿದ ಬಲಗಳು ಸ್ಥಿರವಾಗಿ ನಿಲ್ಲಲಾರವು. ಐಹಿಕಸಕಲ ಸುಖಭೋಗಗಳ ಅನುಭೂತಿಗೆ ದೇಹವೇಮುಖ್ಯವಾದುದು.

ಜೀವನದ ಪರಮಗುರಿಯೆನಿಸಿದ ಆತ್ಮಸಾಕ್ಷಾತ್ಕಾರವನ್ನು ಮರೆತು ಕ್ಷಣಭಂಗುರ, ದೈಹಿಕ, ಇಂದ್ರಿಯ, ಬೌದ್ಧಿಕ, ಮಾನಸಿಕ ಭೋಗಸಾಮಗ್ರಿಗಳಲ್ಲಿ ಮುಳುಗಬಾರದೆಂಬ ಅನುಕಂಪದಿಂದ ಅವರನ್ನು ಅತ್ತಿಂದ ನಿವೃತ್ತಿ ಮಾರ್ಗದತ್ತ ಹಿಂದಿರುಗಿಸುವದಕ್ಕಾಗಿ-

" ತನುವಿದನುಳಿದಿಂದ್ರು ಜಾಲಗಳುಂಟೇ ?
ನಂಬಬೇಡವೋ ಮನುಜ ನಂಬಬೇಡವೋ
ನಂಬಿಕೆಡುವರುಂಟೆ ಮಣ್ಣುಗೊಂಬೆಯಂಥ ತನುವನಿದನು,

" ಹಿಗ್ಗುವಿಯಾತಕೋ ಈ ದೇಹಕೆ ಹಿಗ್ಗುವಿಯಾತಕೋ ।
ಹಿಗ್ಗುವ, ಕುಗ್ಗುವ, ತಗ್ಗುವ, ಮುಗ್ಗುವ ।
ಅಗ್ನಿಯೊಳಗೆ ಬಿದ್ದು ದಗ್ಧವಾಗುವ ದೇಹಕೆ "

ಎಂದು ಹಾಡಿದರೂ ಮರುಕ್ಷಣದಲ್ಲಿಯೇ " ದೇಹೋದೇವಾಲಯಃ ಪ್ರೋಕ್ತ " ಶರೀರಮಾದ್ಯಂ ಖಲುಧರ್ಮಸಾಧನಂ " " ನರಜನ್ಮದಿಂದಿಹದೊಳು ಮಿಗಿಲುಂಟೇ ? " ಮಾನವಜನ್ಮದೊಡ್ಡದು " " ಕೂಡಲಸಂಗಮದೇವರ ಒಲಿಸಲು ಬಂದ ಪ್ರಸಾದ ಕಾಯವ ಕೆಡಿಸಲಾಗದು " ಎಂದೂ ಹಾಡಿದ್ದಾರೆ.

" ಆತ್ಮಾಚಿದ್ವಿತ್ ಸುಖಾತ್ಮಾನುಭವ ಪರಿಚಿತಃ ಸರ್ವದೇಹಾದಿಯಂತಾ" ರಥಕ್ಕೆ ರಥಿಕನು, ಯಂತ್ರಕ್ಕೆ ಚಾಲಕನು ಬೇಕಾದಂತೆ ಗಮನಾಗಮನ,ವೀಕ್ಷಣ, ಶ್ರವಣಾದಿ ಕ್ರಿಯೆಗಳಿಗೆ ಆತ್ಮನೇ ಬೇಕು. "ತೇನವಿನಾತ್ರಣಮಪಿ ನಚಲತಿ" ಅವನ ಸಾನ್ನಿಧ್ಯವಿಲ್ಲದೆ ಏನೇನೂ ನಡೆಯದು ಎಂದು ಎಲ್ಲ ದಾರ್ಶನಿಕರು ಹೇಳಿದರೆ ಚಾರ್ವಾಕಮತವು ಜಡ ದೃಶ್ಯ, ಭೂತಕಾರ್ಯವೆನಿಸಿದ ದೇಹಕ್ಕೇನೆ-

''ಶರೀರಮೇವ ಚಾರ್ವಾಕೈರಾತ್ಮೇತಿ ಪರಿಗೀಯತೇ''
ಆತ್ಮನೆಂದು ಹೇಳುತ್ತದೆ. ಸಿರಿವಂತರಲ್ಲಿ ಸಾಲ ತರಬಾರದು. ಸಾಲ ತರುವಾಗ ಹಾಲು ಬೋನ ಉಂಡಷ್ಟು ಸುಖವಾಗುವದು. ಸಾಹುಕಾರನು ಬಂದು ಸಾಲ ಕೇಳಿದರೆ ಚೇಳು ಕಡಿದಷ್ಟು ಸಂಕಟವಾಗುವದು. ತಂದ ಸಾಲವನ್ನು ತೀರಿಸದೇ ಹೋದರೆ ಮರುಜನ್ಮದಲ್ಲಿ ಎತ್ತು, ಕತ್ತೆ, ನಾಯಿಗಳಾಗಿ ಹುಟ್ಟಿ ಸಾಹುಕಾರನ ಮನೆಯಲ್ಲಿ ದುಡಿದು ಋಣ ತೀರಿಸಬೇಕಾಗುವದು. ಕಾರಣ ಸಾಲ ಮಾಡಬಾರದು ಎಂದು ಆಸ್ತಿಕರು ಹೇಳುವರು. ಚಾರ್ವಾಕರು—

''ಭಸ್ಮೀ ಭೂತಸ್ಯ ದೇಹಸ್ಯ ಪುನರಾಗಮನಂಕುತಃ ।
ತಸ್ಮಾತ್ ಸರ್ವ ಪ್ರಯತ್ನೇನ ಋಣಂಕೃತ್ವಾಘೃತಂ ಪಿಬೇತ್''
''ಮರಣದಿಂ ಮೇಲೇನು ಪ್ರೇತವೋ ಭೂತವೋ ಪುನರ್ಜನ್ಮವೋ
ಅದೇನೋ । ಮರಳಿ ಬಂದವರಿಲ್ಲ ವರದಿ ತಂದವರಿಲ್ಲ ... ''

ಎಂದು ಹೇಳಿ, ಹಾಲು ತುಪ್ಪಗಳನ್ನು ಯಥೇಚ್ಛವಾಗಿ ಕುಡಿದು, ಇಷ್ಟವಾದ ಮೃಷ್ಟಾನ್ನವನ್ನು ಉಂಡುಂಡು ದೇಹವನ್ನು ಪುಷ್ಟಿಗೊಳಿಸಬೇಕು. ಮತ್ತೆ ಹುಟ್ಟಿ ಬರುವದೇನು ಗೊತ್ತೇ, ಪುನರ್ಜನ್ಮವೆಂಬುದೇ ಇಲ್ಲ ಎಂದು ಮುಂತಾಗಿ ತಾತ್ಕಾಲಿಕ ರಮಣೀಯವಾದ ಸಿದ್ಧಾಂತವನ್ನು ಹೇಳುತ್ತಾರೆ.ದೇಹಕ್ಕೆ ಅತೀವ ಮಹತ್ವವನ್ನು ಕೊಟ್ಟವರು ಚಾರ್ವಾಕರು.

ದೇಹವು ಕೋಲ್ಮಿಂಚಿನಂತೆ, ನೀರಗುಳ್ಳಿಯಂತೆ, ಮಣ್ಣು ಗೊಂಬೆಯಂತೆ ನಶ್ವರ ಎಂಬುದು ನಿಶ್ಚಯವಿದ್ದರೂ ಇದಿಲ್ಲದೆ ಸದ್ಗತಿಯು ದೊರೆಯದು. ಕಾರಣ ಈ ದೇಹವು ಅತ್ಯವಶ್ಯಬೇಕು. ಈ ಶರೀರದ ಬೆಳವಣಿಗೆಗೆ ಬೇಕಾದವು ಅನ್ನನೀರುಗಳು. ಅನ್ನ ನೀರುಗಳಿಲ್ಲದೇ ಹೋದಲ್ಲಿ ದೇಹವು ಬಾಳಲಾರದು.

''ಪ್ರಜ್ಞಾನಂ ಬ್ರಹ್ಮ'' ''ಅಯಮಾತ್ಮಾ ಬ್ರಹ್ಮ'' ''ಸರ್ವಂ ಖಲ್ವಿದಂಬ್ರಹ್ಮ'' ಎಂದು ಮುಂತಾಗಿ ವೇದವೇದಾಂತಗಳು ಬ್ರಹ್ಮನ ವಿಷಯದಲ್ಲಿ ಏನೇನೋ ಹೇಳುತ್ತಿದ್ದಾರೆ. ವ್ಯಾವಹಾರಿಕ ವೇದಾಂತವು "ಅನ್ನಂಬ್ರಹ್ಮ'' "ಅನ್ನದೇವರ ಮುಂದೆ ಇನ್ನು ದೇವರು ಉಂಟೇ ? '' ಎಂದಿದೆ.

''ನಿದ್ದೆಗಳು ಬಾರವು ಬುದ್ಧಿಗಳು ತಿಳಿಯವು ।
ಮುದ್ದಿನಾ ಮಾತು ಸೊಗಸದು । ಬೋನದಾ ।
ಮುದ್ದಿ ತಪ್ಪಿದರೆ ಸರ್ವಜ್ಞ ॥
ತುತ್ತು ತುತ್ತಿಗೆ ಹೊಟ್ಟೆ ತತ್ತಿಯಂತಾಗುದು ।
ತುತ್ತೆಂಬ ಶಿವನ ಮರೆತಿಹರೆ ಸುಡುಗಾಡಿ ।
ಗೆತ್ತಬೇಕೆಂದ ಸರ್ವಜ್ಞ ॥ ''

"ಅನನನ ಇದ್ದರೇನೇ ತನನನ, ಎಂದು ಮುಂತಾಗಿ ಹೇಳುತ್ತದೆ. ಬೋನದಮುದ್ದಿಯಿಲ್ಲದಿದ್ದರೆ ಬುದ್ಧಿಯು ಪೆದ್ದಾಗಿ ಹೋಗುವದು. ಈ ಬಗ್ಗೆ ಹಳ್ಳಿಗರಲ್ಲಿ ಒಂದುಕಥೆಯಿದೆ.

ಓರ್ವತಾಯಿಯು ಅಮವಾಸ್ಯೆಯದಿನ ದೇವರ ನೈವೇದ್ಯಕ್ಕಾಗಿ ಹೂರಣಕ್ಕಡಬು ಹೋಳಿಗೆ ಸಿದ್ಧಮಾಡಿದ್ದಳು. ಶಾಲೆಗೆ ಹೊರಟ ಮಗನು ತಾಯಿಯಬಳಿ ಬಂದು. ಅವ್ವಾ ತಿನ್ನಲು ಒಂದಿಷ್ಟು ಹೂರಣಕೊಡು ಎಂದುಕೇಳಲು ತಾಯಿಯು ಮಗುವೆ ಇದು ದೇವರ ನೈವೇದ್ಯಕ್ಕಾಗಿ ಮಾಡಿಟ್ಟ ಮೀಸಲಾದ ಅಡಿಗೆಯು. ಇದನ್ನು ಕೊಡಲಿಕ್ಕೆ ಬರುವದಿಲ್ಲ. ಎಂದುಹೇಳಿ ಶಾಲೆಗೆ ಕಳಿಸಿದಳು. ಶಾಲೆಗೆ ಹೋದರೂ ಮಗುವಿನ ತಲೆ ಯಲ್ಲಿ ಅಭ್ಯಾಸದ ವಿಷಯವಿರದೇ ಹೂರಣದ ವಿಷಯವೇ ತುಂಬಿಹೋಗಿತ್ತು. ಶಾಲೆಯ ಶಿಕ್ಷಕರು ಮಕ್ಕಳನ್ನು ಕುರಿತು–

ಒಂದು ಕಿಲೋ ಕಡಲೆಯಬೇಳೆ, ಒಂದು ಕಿಲೋ ಬೆಲ್ಲ,
ಒಂದು ಕಿಲೋ ಸಕ್ಕರಿ ಈ ಎಲ್ಲದರ ಬೆಲೆ ಎಷ್ಟಾಗುವದು ? ಎಂದು

ಕೇಳಿದರೆ ತಲೆಯಲ್ಲಿ ಹೂರಣದ ವಿಚಾರವನ್ನೇ ತುಂಬಿಕೊಂಡ ಮಗುವು ಹತ್ತೋ ಹನ್ನೆ ರಡೋ ರೂಪಾಯಿ ಎಂದು ಹೇಳದೆ ಥಟ್ಟನೆ ಹೂರಣ ಎಂದು ಉತ್ತರಕೊಟ್ಟನಂತೆ. ಲೆಕ್ಕವು ಬುದ್ಧಿಗೆ ಸಂಬಂಧಪಟ್ಟ ವಿಷಯವಾದರೂ ದೇಹಕ್ಕೆ ಸಂಬಂಧಪಟ್ಟ ಅನ್ನವಿಲ್ಲದ ಕ್ಕಾಗಿ ಬುದ್ಧಿಯು ಕೆಲಸ ಮಾಡದೇ ಏನೋ ಉತ್ತರ ಕೊಟ್ಟುಬಿಟ್ಟನು. ಬುದ್ಧಿ, ಪ್ರಾಣ ಮನಸ್ಸು, ಮೊದಲಾದವುಗಳ ಕ್ರಮಬದ್ಧವಾದ ಕಾರ್ಯಕ್ರಮಕ್ಕೆ ಅನ್ನವೇ ಮೊದಲು ಬೇಕು. ಪಂಚಕೋಶಗಳೆನಿಸಿ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನ ಮಯ, ಆನಂದಮಯ ಕೋಶಗಳಲ್ಲಿ ಅನ್ನಮಯ ಕೋಶಕ್ಕೇನೇ ಪ್ರಥಮಸ್ಥಾನವನ್ನು ಕೊಟ್ಟಿರುವರು.

" ಬೆಕ್ಕು ಮನೆಯೊಳಗಲೇಸು ಮುಕ್ಕು ಕಲ್ಲಿಗೆಲೇಸು ।
ನಕ್ಕುನಗಿಸುವಾ ನುಡಿಲೇಸು । ಊರಿಂಗೆ ।
ಒಕ್ಕಲಿಗಲೇಸು ಸರ್ವಜ್ಞ ॥ ಎಂದು ಒಕ್ಕಲಿಗನಿಗೆ ಮತ್ತು
" ಕೋಟಿವಿದ್ಯೆಗಳಲ್ಲಿ ಮೇಟಿವಿದ್ಯೆಯೇಮೇಲು " ॥

ಎಂದು ಕೃಷಿವಿದ್ಯೆಗೆ ಪ್ರಾಧಾನ್ಯತೆಯನ್ನು ಕೊಟ್ಟದ್ದು ಅನ್ನವನ್ನು ಉತ್ಪಾದಿಸುವದು ಮತ್ತು ಅನ್ನೋತ್ಪತ್ತಿಗೆ ಸಾಧನ ಎಂಬ ಸದುದ್ದೇಶದಿಂದಲೇ. ಇಂದಿನ ಭಾರತಸರಕಾರವು ಕೃಷಿ ಕರ್ಮಕ್ಕೆ ಅಗ್ರಸ್ಥಾನವಿತ್ತದ್ದು. ಅನ್ನಸಮೃದ್ಧಿಯಾಗಲೆಂಬ ಮಹೋದ್ದೇಶದಿಂದಲೇ.

ಸಂಸ್ಕೃತ ಸಾಹಿತ್ಯದಲ್ಲಿ ಶಿವ ಪಾರ್ವತಿಯರ ಸಂಸಾರದಬಗ್ಗೆ ಒಂದು ಸರಸಕಥೆ ಯುಂಟು.

ಬಡವರ ಮನೆಗೆ ಶಿವನ ಮನೆ ಅಂದರೆ ಏನೇನೂ ಇಲ್ಲದ ಮನೆ ಎಂದು ಹೇಳುವ ಲೋಕ ರೂಢಿಯಿದೆ.

''ಸ್ವಯಂ ಪಂಚಮುಖಃ ಪುತ್ರಾ ಗಜಾನನ ಷಡಾನನಾ ।
ದಿಗಂಬರಃ ಕಥಂ ಜೀವೇತ್ ಅನ್ನಪೂರ್ಣಾನಚೇದ್ಯಹೇ ॥ ''

ಶಿವನಿಗೆ ಐಮೊಗ, ಷಣ್ಮುಖನಿಗೆ ಆರು ಮುಖ, ಗಣಪತಿಗೆ ಗಜದಮುಖ, ಬಹುಭಕ್ಷಕ, ಶಿವನು ದಿಗಂಬರನು. ಆದರೂ ಶಿವನ ಸಂಸಾರವು ಸೊಗಸಿನ ಸುಗ್ಗಿಯಾಗಿ ನಡೆಯಲು

ಮುಖ್ಯ ಕಾರಣವೆಂದರೆ ಸಾಕಾಗುವಷ್ಟು, ಮೃಷ್ಟಾನ್ನವನ್ನು ನೀಡಿ ತಣಿಸುವಂತಹ ಅನ್ನಪೂರ್ಣಾ ದೇವಿಯು ಇದ್ದುದರಿಂದಲೇ.

ಶಾಸ್ತ್ರಗಳಲ್ಲಿ ಹೇಳುವ ಕನ್ಯಾದಾನ, ಭೂದಾನ, ಗೋದಾನ ಮೊದಲಾದ ಷೋಡಶ ದಾನಗಳಲ್ಲಿ ಅನ್ನದಾನವೇ ಶ್ರೇಷ್ಠವಾದದ್ದು. ಇನ್ನುಳಿದ ದಾನಗಳನ್ನು ಎಷ್ಟುಕೊಟ್ಟರೂ ಮಾನವನ ಆಸೆ ಹಿಂಗುವದಿಲ್ಲ. ಆದರೆ ಅನ್ನದಾನಮಾಡುವಲ್ಲಿಮಾತ್ರ ಮಾನವನು ಸಾಕು ಎಂದು ಹೇಳುವನು. ಅಂದರೆ ಊಟಕ್ಕೆ ಕುಳಿತ ಅತಿಥಿಯು ಹೊಟ್ಟೆತುಂಬುವ ತನಕ ಉಂಡು ಮತ್ತೆ ನೀಡಹೋದರೆ ಸಾಕು, ಸಾಕಪ್ಪಸಾಕು ಎಂದು ಹೇಳುವನು.ಆದರೆ ಯಾಚಕನಿಗೆ ಎಷ್ಟು ಹೇಮ, ಭೂಮಿ ಕೊಟ್ಟರೂ ಅಲ್ಲಿ ಇನ್ನೂಬೇಕೆಂಬ ಆಶೆಯೇ ಇರುವದು.

ಲೋಕದಲ್ಲಿ ಘಟಸರ್ಪವು, ಭುಸ್ಸೆಂದು ಹೆಡೆದೆಗೆದು ಕಚ್ಚಿ ವಿಷವೇರಿ ಸಾವಿಗೆ ತುತ್ತಾಗುವ ಸಂಕಟಸಮಯದಲ್ಲಿ ಗಾರುಡಿಗನು ಬಂದು ಮಾಟಮಂತ್ರದಿಂದಲೋ, ಗಿಡಮೂಲಿಕೆಗಳನ್ನು ಕೊಟ್ಟೋ ಬದುಕಿಸುವನು.ಸುಪ್ರಸಿದ್ಧ ವಚನಕಾರರಾದ ದೇವರ ದಾಸಿಮಯ್ಯನವರು ಲೋಕದಲ್ಲಿರುವ ಎಲ್ಲಹಾವುಗಳಿಗಿಂತಲೂ ವಿಚಿತ್ರವಾದ ಹಾವೊಂದಿರುವದು. ಅದು ಕಚ್ಚುವ ಸ್ಥಾನವೇ ಬೇರೆ, ಆ ವಿಷವನ್ನು ಇಳಿಸುವ ಔಷಧವೇ ಬೇರೆ ಎಂದು ಹೇಳಿರುವರು.

« ಹಸಿವೆಂಬ ಹೆಬ್ಬಾವು ಬಸಿರ ಬಂದುಹಿಡಿದಡೆ ।
ವಿಷವೇರಿತ್ತಯ್ಯ ಆಪಾದಮಸ್ತಕಕ್ಕೆ ।
ಹಸಿವಿಗನ್ನವನಿಕ್ಕಿ ವಿಷವನಿಳುಹಬಲ್ಲಡೆ ।
ವಸುಧೆಯೊಳಗಾತನೇ ಗಾರುಡಿಗಕಾಣಾ ರಾಮನಾಥಾ ॥ »

ದಿನಬೆಳಗಾದರೆ ಕೋಟಿಕೋಟಿ ಮಾನವರಿಗಾಗುವ ಹಸಿವೆಯೇ ಒಂದು ಹೆಬ್ಬಾವು. ಈ ಹಾವು ಕೈಕಾಲುಗಳಿಗೆ ಕಚ್ಚದೇ ನೇರವಾಗಿ ಹೊಟ್ಟೆಗೇಕಚ್ಚುವದು. ಆಗ ವಿಷವು ನಖಶಿಖಾಂತ ಏರುವದು. ಆ ವಿಷವು ಮಂತ್ರ ಮಾಟಗಳಿಂದಲೂ. ಗಿಡಮೂಲಿಕೆಗಳಿಂದಲೂ ಇಳಿಯದು. ಹಸಿದ ಮಾನವನ ಬಸಿರಿನ ಹಸಿವೆಯು ಅನ್ನವನ್ನುಂಡಾಗಲೇ ಹಿಂಗುವದು. ಕಾರಣ ಅನ್ನವೇ ದಿವ್ಯೌಷಧವು.

ದಾಸೋಹವು ಅನ್ನದಾಸೋಹ, ಜ್ಞಾನದಾಸೋಹ ಎಂದು ಎರಡು ಬಗೆಯಾಗಿದೆ. ಈ ಎರಡು ವಿಧ ದಾಸೋಹದಲ್ಲಿ ಜ್ಞಾನದಾಸೋಹವು ತಾತ್ತ್ವಿಕ ದೃಷ್ಟಿಯಿಂದ ಮೇಲೆನಿಸಿದರೂ ತತ್ತ್ವಚಿಂತನೆಗೆ ಮೂಲವಾದ ಅನ್ನದಾಸೋಹವೂ ಮೇಲಾದುದೇ. ಅಂತೆಯೇ ಮಹಾರಾಷ್ಟ್ರಸಂತರು ''ಆದೀ ಪೋಟೋಬಾ ಮಗ ವಿಠೋಬಾ'' ಎಂದು ಹೇಳಿರುವರು. ಭಕ್ತಿಭಾಂಡಾರಿ ಬಸವಣ್ಣನವರು ೧೨ನೆಯ ಶತಮಾನದಲ್ಲಿ ಶೂನ್ಯಸಿಂಹಾಸನವನ್ನು ಸಂಸ್ಥಾಪಿಸಿ ಅದರ ಅಧ್ಯಕ್ಷ ಪದವಿಯನ್ನು ಅಲ್ಲಮಪ್ರಭುವಿಗೆ ಒಪ್ಪಿಸಿ, ಅವರ ಮುಖಾಂತ ಜ್ಞಾನದಾಸೋಹವನ್ನು ನಡೆಸುತ್ತಿದ್ದುದರ ಜೊತೆಗೆ ಜಂಗಮ ದಾಸೋಹವನ್ನು ನಡೆಯಿಸುತ್ತಿದ್ದರೆಂಬುದು ಇತಿಹಾಸ ಪ್ರಸಿದ್ಧ ವಿದ್ಯೆ, ಇಂದು ಸಮಾಜದ ಅನೇಕಾನೇಕ ಧರ್ಮಪೀಠಗಳಲ್ಲಿ

ಪುಣ್ಯಕ್ಷೇತ್ರಗಳಲ್ಲಿ ನಿರಂತರ ಅನ್ನ ದಾಸೋಹ ನಡೆಯುತ್ತಿರುವದು. ಪೃಥ್ವಿಯಿಂದಾದ ಆಹಾರವೇ ಅನ್ನವೆಂದೂ, ಪಂಚಭೂತಗಳಲ್ಲಿ ದ್ವಿತೀಯ ಭೂತವೆನಿಸಿದ ಅಪ್ಪು ನೀರೆಂದೂ ಹೇಳಲ್ಪಡುತ್ತವೆ. ಲೌಕಿಕದಲ್ಲಿ ಹೇಳುವ ಅನ್ನ ನೀರುಗಳೇ ಪರಮಾರ್ಥದಲ್ಲಿ ಪ್ರಸಾದ ಪಾದೋದಕಗಳೆಂದು ಹೇಳಲ್ಪಡುತ್ತವೆ.

ಹತ್ತಿಗೆ ಸಂಸ್ಕಾರವನ್ನಿತ್ತರೆ ಅದು ಬೆಲೆಯುಳ್ಳ ಬಟ್ಟೆಯಾಗುವದು
ಗೋಮಯಕ್ಕೆ ಸಂಸ್ಕಾರವಾದರೆ ಅದು ಪಾವನ ವಿಭೂತಿಯಾಗುವದು
ಕಗ್ಗಲ್ಲು ಶಿಲ್ಪಿಗನಿಂದ ಸಂಸ್ಕಾರ ಹೊಂದಿದರೆ ಅದು ಸುಂದರ ವಿಗ್ರಹವಾಗಿ ದೇವರಾಗುವದು
ಕಬ್ಬಿಗೆ ಸಂಸ್ಕಾರಕೊಟ್ಟರೆ ಅದು ಸಕ್ಕರೆಯಾಗುವದು
ಗೋದಿಗೆ ಸಂಸ್ಕಾರವಾದರೆ ಅದು ಪಾಯಸ ಪರಡಿಯಾಗುವದು

ಹೀಗೆಯೇ ಅನ್ನನೀರುಗಳಿಗೆ ಸಂಸ್ಕಾರವನ್ನು ಕೊಟ್ಟರೆ ಅವು ಪ್ರಸಾದ ಪಾದೋದಕಗಳಾಗುವವು. ಸಂಸ್ಕಾರದಿಂದಲೇ ಜೀವನು ದೇವನಾಗುವನು; ಮನವನು ಮಹಾಮಾನವನಾಗುವನು, ಪ್ರಕೃತಿಯ ವಿಕೃತಿಯಳಿದು ಸಂಸ್ಕೃತಿಯಿಂದ ಶಿವಯೋಗಿಯಾಗುವನು. ಹೊಲದಲ್ಲಿ ಬೆಳೆದ ದವಸಧಾನ್ಯಗಳು, ಬಾವಿಕೆರೆಗಳಲ್ಲಿದ್ದ ನೀರು ಪದಾರ್ಥವೆನಿಸುವದು. ಆ ದವಸ ಧಾನ್ಯಗಳೇ ಪಾಚಕನ ವಿಶಿಷ್ಟ ಕ್ರಿಯೆಯಿಂದ ಪಾಕವಾಗಿ ಅದು ಗುರುಲಿಂಗ ಜಂಗಮರಿಗೆ ಅಥವಾ ದೇವತಾದಿಗಳಿಗೆ ಸಮರ್ಪಿತವಾದಾಗ ಪ್ರಸಾದವೆನಿಸುವದು. ಬಾವಿಕೆರೆಯ ನೀರನ್ನು ಮಂತ್ರಿಸಿದಾಗ ಅಥವಾ ಗುರುಜಂಗಮರ ಪಾದಪದ್ಮಕ್ಕೆ ಸ್ಪರ್ಶಿಸಿದಾಗ ಅದು ಮಂತ್ರೋದಕ ಅಥವಾ ಪಾದೋದಕ ಎನಿಸುವದು. ಫಲರೂಪವೆನಿಸಿದ ಪಾದೋದಕ, ಪ್ರಸಾದಗಳ ಮಹಿಮೆಯನ್ನು—

"ಪಾಕಾರಂ ಪರಮಂ ಜ್ಞಾನಂ ದೋಕಾರಂ ದೋಷವರ್ಜನಂ ।
ದ ಕಾರಂ ದಹತೇ ಜನ್ಮ ಕಕಾರಂ ಕರ್ಮನಾಶನಂ ॥"

" ಭವಭೂಜ ಕುಠಾರಾಯ ಪಾಪಪಂಕಸ್ಯ ಭಾನವೇ ।
ಅಜ್ಞಾನಗಿರಿವಜ್ರಾಯ ಪಾದತೀರ್ಥಾಯತೇನಮಃ ॥ "

" ಚರಣಂ ಪವಿತ್ರಂ ವಿತತಂಪುರಾಣಂ
ಯೇನಪೂತಸ್ತರತಿ, ದುಷ್ಕೃತಾನಿ ।
ತೇನಶುದ್ಧೇನ ಅತಿಪಾಪ್ಮಾನಮರಾತಿಂ ತರೇಮ ॥ "

ಎಂದು ಕೊಂಡಾಡಲಾಗಿದೆ.

ತ್ರಿವೇಣಿಯಲ್ಲಿ ಅಂದರೆ ಗಂಗಾ ಯಮುನಾ ಸರಸ್ವತಿ ನದಿಗಳ ಸಂಗಮಸ್ಥಾನದಲ್ಲಿ ಸಪ್ತ ಸಾಗರಗಳಲ್ಲಿ, ೬೮ ತೀರ್ಥಗಳಲ್ಲಿ ಸ್ನಾನಮಾಡಿದ ಫಲವು ಹರಗುರು ಚರಮೂರ್ತಿಗಳ ಚರಣದಿಂದ ಹುಟ್ಟಿದ ಪಾದತೀರ್ಥದ ಒಂದು ಬಿಂದುಸೇವನೆಯಿಂದ ಉಂಟಾಗುವ ಫಲಕ್ಕೆ ಸರಿಯಾಗಲಾರದು ಎಂದು ಹೈಚಾರ ಬಸವಲಿಂಗ ಶರಣರು ಮಾರ್ಮಿಕವಾ

ಹೇಳಿರುವರು. ಪಾವನವಾದ ಪಾದತೀರ್ಥವು ಯಾವ ಪಾದಪದ್ಮದಿಂದ ಹುಟ್ಟುವದೋ ಆ ಪಾದಪದ್ಮಗಳನ್ನು ವಿಚಿತ್ರರೀತಿಯಿಂದ ಪ್ರಶಂಸಿಸಿರುವರು. ಶ್ರೀಮನ್ನಿಜಗುಣ ಶಿವ ಯೋಗಿಗಳು ಶ್ರೀಪಾದಪದ್ಮದಬಗ್ಗೆ -

" ಶರಣಜನರ ಸದುಹೃದಯನಳಿನದೊಳು
ಪರಿಶೋಭಿಸುತ್ತಿಹುದು ನಿನ್ನಪಾದ... "

ಎಂದು ಮೊದಲಾಗಿ ಒಂದು ಸುದೀರ್ಘ ಪದ್ಯವನ್ನೇ ರಚಿಸಿರುವರು. ೧೨ನೆಯ ಶತಮಾನದಲ್ಲಿ ಓರ್ವ ಶರಣನು ಶಿವಯೋಗಿಗಳ ಪಾದುಕೆಗಳನ್ನೇ ಮಾಲೆಯನ್ನಾಗಿ ಮಾಡಿ ಹೂಮಾಲೆಯಂತೆ ಕೊರಳಲ್ಲಿ ಹಾಕಿಕೊಳ್ಳುತ್ತಿದ್ದನಂತೆ. ತನ್ನ ಕಣ್ಣನ್ನೇ ಕಿತ್ತು ಮುಕ್ಕಣ್ಣನಿತ್ತು ಶಿವನನ್ನು ಒಲಿಸಿದ ಬೇಡರಕಣ್ಣಪ್ಪನ ಪಾದುಕೆಯನ್ನು ನನ್ನ ಮದುವೆಯಾಗುವ ಪ್ರಸಂಗದಲ್ಲಿ ತಲೆಗೆ ಬಾಸಿಂಗದಂತೆ ಕಟ್ಟು ಎಂದು ಓರ್ವ ಸದ್ಭಕ್ತನು ಬೇಡಿಕೊಂಡಿರುವನು. ಶ್ರೀರಾಮನು ಹದಿನಾಲ್ಕುವರ್ಷ ವನವಾಸಕ್ಕೆ ಹೋದಾಗ ತಮ್ಮನಾದ ಭರತನು ಶ್ರೀರಾಮನ ಪಾದುಕೆಗಳನ್ನೇ ಸಿಂಹಾಸನದ ಮೇಲಿಟ್ಟು ರಾಜ್ಯಭಾರ ಮಾಡಿದನು. ಭಕ್ತಜನ ಭಾಗ್ಯನೆನಿಸಿದ ಬಸವಣ್ಣನವರಿಗೆ ಮಾಡಿದ ಪಾದರಕ್ಷೆಗಳನ್ನು ಹರಳಯ್ಯ ಕಲ್ಯಾಣಮ್ಮಗಳು ತಂದೊಪ್ಪಿಸಲು ಅವನ್ನು ಮೆಟ್ಟದೇ ತಲೆಯಮೇಲಿಟ್ಟುಕೊಂಡು ಬಸವಣ್ಣನವರು ಕುಣಿದುದು ಇತಿಹಾಸ ಪ್ರಸಿದ್ಧವಿದೆ. ಆದ್ಯಶಂಕರಾಚಾರ್ಯರು ಭಕ್ತಿಯ ಅಗಾಧ ಮಹಿಮೆಯನ್ನು ಬಣ್ಣಿಸುವಾಗ-

" ಮಾರ್ಗಾವರ್ತಿತ ಪಾದುಕಾ ಪಶುಪತೇ
ರಂಗಸ್ಯ ಕುರ್ಚಾಯತೇ " ಎಂದು ಹೇಳಿರುವರು.

ಮುಗ್ಧನಾದರೂ ಶಿವಭಕ್ತಿಯಲ್ಲಿ ಧುರಂಧರನಾದ ಕಣ್ಣಪ್ಪನು ಶಿವಲಿಂಗದ ಶಿರೋಭಾಗದಲ್ಲಿರುವ ಧೂಳಿಯನ್ನು ತನ್ನ ಪಾದುಕೆಯಿಂದ ಜಾಡಿಸಿ ತೆಗೆದನಂತೆ ! ಆದರೆ ಶಿವನಿಗೆ ಆ ಪಾದುಕಾಸ್ಪರ್ಶವು ಹೂಪತ್ರಿಗಳನ್ನು ಏರಿಸಿದಷ್ಟು ಸಂತಸವುಂಟುಮಾಡಿತು.

" ಮೇಲಾಗಲೊಲ್ಲೆನು ಕೀಳಾಗಲೊಲ್ಲದೆ ।
ಕೀಳಿಂಗಲ್ಲದೆ ಹಯನ ಕರೆವುದೇ ?
ಮೇಲಾಗಿ ನರಕದೊಳೋಲಾಡಲಾರೆನು ।
ನಿಮ್ಮ ಶರಣರ ಪಾದಕ್ಕೆ ಕೀಳಾಗಿರಿಸು ಕೂಡಲಸಂಗಮದೇವಾ"

"ಬ್ರಹ್ಮಪದವಿಯನೊಲ್ಲೆ ವಿಷ್ಣುಪದವಿಯನೊಲ್ಲೆ ।
ರುದ್ರಪದವಿಯನೊಲ್ಲೆ ಮತ್ತಾವ ಪದವಿಯನೊಲ್ಲೆನಯ್ಯಾ ।
ಕೂಡಲಸಂಗಮದೇವಾ ನಿಮ್ಮಸದ್ಭಕ್ತರ ।
ಪಾದವನರಿದಿಪ್ಪ ಮಹಾಪದವಿಯನೆ ಕರುಣಿಸಯ್ಯಾ"

"ಕಾಗೆವಿಪ್ಪಿಸುವ ಹೊನ್ನ ಕಳಸವಹುದರಿಂದ
ಒಡೆಯರು ಜೋಗೈಸುವ ಚಮ್ಮಾವುಗೆಯುಮಾಡಯ್ಯ।
ಅಯ್ಯಾ ನಿಮ್ಮ ಶರಣರ ಪಾದಕ್ಕೆ ಚಮ್ಮಾವುಗೆಯ ಮಾಡಯ್ಯ।"

ಇಂತಹ ಅನೇಕ ವಚನಗಳು ಪಾದದ ಮೇಲ್ಮೆಯನ್ನು ಸುಂದರವಾಗಿ ನಿರೂಪಿಸುತ್ತವೆ.

ಮಕರ ಸಂಕ್ರಮಣ, ಸೂರ್ಯಗ್ರಹಣ, ಚಂದ್ರಗ್ರಹಣ ಮೊದಲಾದ ಪರ್ವಕಾಲಗಳಲ್ಲಿ ಗಂಗಾ, ಕೃಷ್ಣಾ ಮೊದಲಾದ ನದಿಗಳಲ್ಲಿ ಸ್ನಾನಮಾಡಿ ದೇವತಾಸಂದರ್ಶನ ಪಡೆದರೆ ಪಾಪವೆಲ್ಲ ಪರಿಹಾರವಾಗಿ ಪುಣ್ಯವಂತರಾಗುತ್ತೇವೆಂಬುದು ಆಸ್ತಿಕ ಜನರ ನಂಬುಗೆ. ಅತ್ತ ಸುರಾಪಾನ, ಮಾಂಸಭಕ್ಷಣ. ಪರಸ್ತ್ರೀಗಮನ, ಜೂಜಾಟ ಮೊದಲಾದ ಪಾಪಕೃತ್ಯಗಳಲ್ಲಿ ಮುಳುಗಿ ಏಳುವದಕ್ಕೂ ಆಳತೆಯಿಲ್ಲ. ಇತ್ತ ತೀರ್ಥಜಲದಲ್ಲಿ ಮುಳುಗಿ ಏಳುವದಕ್ಕೂ ಬೇಸರವಿಲ್ಲ. ಗಂಗಾ ಯಮುನಾದಿ ನದಿಗಳನ್ನು, ಮಹಾಮಹಾ ತೀರ್ಥಗಳನ್ನು ಪವಿತ್ರ ಮಾಡುವಷ್ಟು ಅದ್ಭುತ ಸಾಮರ್ಥ್ಯವು ಮಹಾನುಭಾವರ ಮಹಾಪಾದದಲ್ಲಿ ಇರುವದೆಂಬುದರಲ್ಲಿ ಸಂದೇಹವಿಲ್ಲ. ಅಂತೆಯೇ ನಾರದರು ತಮ್ಮ ಭಕ್ತಿಸೂತ್ರದಲ್ಲಿ "ತೀರ್ಥೀಕುರ್ವಂತಿ ತೀರ್ಥಾನಿ" ಎಂದು ಹೇಳಿರುವರು.

ಮಹಾರಾಷ್ಟ್ರದ ಓರ್ವ ಸುಪ್ರಸಿದ್ಧ ಕವಿಯು ತನ್ನ ಸುಶ್ಲೋಕಲಾಘವ ಎಂಬ ಗ್ರಂಥದಲ್ಲಿ ಸರ್ವಜ್ಞನಾದ ದೇವರಿಗೇನೇತನ್ನ ಪಾದದ ಮಹಿಮೆಯು ತನಗೇ ತಿಳಿಯುಲಿಲ್ಲ ಎಂಬ ಬಗೆಗೆ ಒಂದು ಸುಂದರ ಕಥೆಯನ್ನೇ ಕಟ್ಟಿರುವನು.

"ವಿರಕ್ತಾ ಮುಕ್ತಾ ಅಪ್ಯನಿಶಮನುರಕ್ತಾಃಪದಮಿದಂ।
ಭಜಂತೇ ತತ್ಕೋಽಸ್ಮಿನ್ ಮಧುರಿಮಗುಣೋನಾಸ್ಮಿಕಲಯೇ॥
ನ ಸಂಪ್ರತ್ಯಾಸ್ವಾದ್ಯಃ ಯದಿತದುಪಹಾಸೋಽತ್ರದದಜಃ।
ಶಿಶುಸ್ಸನ್ನಂಗುಷ್ಠಂ ರಸಯತಿ ಜಲೇಽಂತರ್ವಟದಲೇ" ।
"ವಟಸ್ಯ ಪತ್ರಸ್ಯ ಪುಟೇಶಯಾನಂ"

ಮಹಾಮಹಾ ವಿರಕ್ತರೂ, ಜೀವನ್ಮುಕ್ತರೂ, ರಾಜಮಹಾರಾಜರೂ, ನನ್ನ ಪಾದಪದ್ಮಗಳ ಸಂದರ್ಶನಕ್ಕಾಗಿ ಹಗಲಿರುಳೂ ದಾರಿಕಾಯುತ್ತ ಕುಳಿತುಕೊಳ್ಳುವರು. ಆ ಮಹಾಪಾದಗಳ ಮುಂದೆ ಭೋಗಭಾಗ್ಯಗಳೂ ಇಂದ್ರ, ಚಂದ್ರಾದಿಪದವಿಗಳೂ ತುಚ್ಛವೆಂದು ತಿಳಿಯುವರು. ಆ ಪಾದಪದ್ಮದಿಂದುಂಟಾದ ಧೂಳಿಪಾದೋದಕವನ್ನು ಮನೆಯು ಶುದ್ಧವಾಗಲೆಂಬ ಕಾರಣದಿಂದ ಮನೆಯತುಂಬ ಸಿಂಪಡಿಸುವರು. ಆ ಪಾದತೀರ್ಥವನ್ನು ಕುಡಿಯುವರು. ಪಾದಾರ್ಪಣೆ ಮಾಡಿದ ಚಿನ್ನದಹಾವುಗೆಗಳನ್ನು ಮೇಣೆ ಪಲ್ಲಕ್ಕಿಗಳಲ್ಲಿಟ್ಟು ಮೆರೆಯಿಸುವರು. ಆ ಪಾದದಲ್ಲಿ ಪಾದಾಂಗುಷ್ಠಗಳಲ್ಲಿ ಏನು ಸವಿಯಿದೆ? ಏನು ಸೊಗಸಿದೆ? ಇದನ್ನು ನನ್ನ ನಾಲಗೆಯಿಂದ ಸೀಪಿಯೇ ನೋಡಬೇಕೆಂದು ವೈಕುಂಠವಾಸಿಯಾದ ವಿಷ್ಣುವಿನ ಮನದಲ್ಲಿ ವಿಚಾರ ಹೊಳೆಯಿತಂತೆ. ಆದರೆ ಇಂಥ ಪ್ರೌಢವಯಸ್ಸಿನಲ್ಲಿ, ದೊಡ್ಡಸ್ತಿಕೆಯಲ್ಲಿ ನನ್ನ ಪಾದಾಂಗುಷ್ಠವನ್ನು ನಾನೇ ಸೀಪಿದರೆ ಜನರು ಚಪ್ಪಾಳೆ ತಟ್ಟಿ ನಗಲಿಕ್ಕಿಲ್ಲವೇ? ಎಂದು

ಸುದೀರ್ಘವಿಚಾರಮಾಡಿ ವಿಷ್ಣುವು ಸಣ್ಣ ಮಗುವಿನ ರೂಪವನ್ನು ಧರಿಸಿ ಆಲದ ಎಲೆಯ ಮೇಲೆ ತನ್ನ ಪಾದಾಂಗುಷ್ಠವನ್ನು ತಾನೇ ಸೀಪುತ್ತ ಮಲಗಿದನಂತೆ!

ವಾಮನಾವತಾರವನ್ನು ತಾಳಿದ ವಿಷ್ಣುವು ಅಹಂಕಾರದಿಂದ ಮದೋನ್ಮತ್ತನಾದ ಬಲಿಚಕ್ರವರ್ತಿಯ ಮಸ್ತಕದಮೇಲೆ ತನ್ನ ಪಾದವನ್ನಿಟ್ಟು ಅವನ ಗರ್ವಭಂಗ ಮಾಡಲಿಲ್ಲವೇ? ಪ್ರಚಂಡ ಭುಜಬಲವುಳ್ಳ ರಾವಣನು ಗರ್ವದಿಂದ ಕೈಲಾಸ ಪರ್ವತವನ್ನೇ ತನ್ನ ಭುಜಬಲದಿಂದ ಎತ್ತಲು ಹೋಚಹಾಕಿದಾಗ ಶಿವನು ಅವನ ಇಂಗಿತವನ್ನು ತಿಳಿದು ಗರ್ವಹರಣ ಮಾಡುವದಕ್ಕಾಗಿ ಪಾದದಿಂದಲೇ ಪಾತಾಳಕ್ಕಿಳಿಯುವಂತೆ ತುಳಿಯಲಿಲ್ಲವೇ? ಅಂಧಕಾಸುರನೆಂಬ ರಾಕ್ಷಸನು ಶಿವನನ್ನು ಕುರಿತು ತಪಸ್ಸುಮಾಡಿ ಎಲೈ ಶಂಕರನೇ ನೀನು ಯಾವಾಗಲೂ ನನ್ನ ಎದೆಯ ಮೇಲೆ ತಾಂಡವ ನಾಟ್ಯವನ್ನು ಮಾಡಬೇಕು; ಅಂದರೆ ನಿನ್ನ ಪಾದದರ್ಶನವು ನನಗೆ ಆಗುವದು ಎಂದು ವರಬೇಡಿದನೆಂದು ಹೇಳುವರು.

"ಜಂಗಮ ಪಾದವು ಪರಮಪವಿತ್ರವಾಗಿರ್ಪುದಯ್ಯಾ!
ಜಂಗಮ ಪಾದವು ಜಗದ್ಭರಿತವಾಗಿರ್ಪುದಯ್ಯಾ!
ಜಂಗಮ ಪಾದವು ಆದಿಯಿಂದತ್ತತ್ತಲಾಗಿರ್ಪುದಯ್ಯಾ!
"ಚರಣಂ ಪವಿತ್ರಂ ವಿತತಂ ಪುರಾಣಂ"
ಎಂದುದಾಗಿ ಜಂಗಮದ ಶ್ರೀಪಾದವ ಭಕ್ತಿಯಿಂದ
ಪಿಡಿದ ಸದ್ಭಕ್ತನು ದುರಿತಾಂಬುಧಿಯಿಂದ
ದೂರನಾಗಿರ್ಪನಯ್ಯಾ ಕೂಡಲಸಂಗಮದೇವಾ"

ಎಂದು ಷಟ್‌ಸ್ಥಲಚಕ್ರವರ್ತಿ ಚನ್ನಬಸವಣ್ಣನವರು ಜಂಗಮ ಮೂರ್ತಿಯ ಮಹಾಪಾದದ ಮಹಿಮೆಯನ್ನು ಸಪ್ರಮಾಣವಾಗಿ ಉದಾಹರಿಸಿದ್ದಾರೆ. ಈ ಮಹಾಪಾದದಿಂದ ದೊರೆಯುವ ಪಾದೋದಕವು ಪರಮಪವಿತ್ರವಾದುದು.

"ಬ್ರಹ್ಮಾಂಡದಲ್ಲಿರುವ ಸರ್ವತೀರ್ಥಗಳಿಗಿಂತಲೂ ಜಂಗಮ ಪಾದೋದಕವು ಅತೀ ಪರಿಶುದ್ಧವಾದುದು ಎಂದು ಓರ್ವ ಕವಿಗಳು–

"ಗಂಗೆಯು ಯಮುನೆ ಸರಸ್ವತಿ।
ತುಂಗೆಯು ಕಾವೇರಿ ಸಿಂಧು ಗೋದಾವರಿಗಿಂ।
ಮಂಗಲ ನರ್ಮದೆಗಿಂತಲು।
ಜಂಗಮ ಪಾದೋದಕುತ್ತಮವು ಗುರುನಂದೀಶಾ॥

ಎಂಬ ಪದ್ಯದಿಂದ ಹೇಳಿರುವರು.

"ಶೋಷಣಂ ಪಾಪಪಂಕಸ್ಯ ದೀಪನಂಜ್ಞಾನತೇಜಸಃ।
ಗುರುಪಾದೋದಕಂ ಚಿತ್ರಂ ಸಂಸಾರದ್ರುಮನಾಶನಂ॥"
"ಅಕಾಲ ಮೃತ್ಯುಮಥನಂ ಸರ್ವವ್ಯಾಧಿವಿನಾಶನಂ।
ಸರ್ವಪಾಪೋಪಶಮನಂ ಶಂಭು ಪಾದೋದಕಂ ಶುಭಂ॥

"ಸರ್ವಕಲ್ಯಾಣಕೃತ್ತೋಯಂ ಸರ್ವಕಾಮಫಲಪ್ರದಂ ।
ಸರ್ವಸಿದ್ಧಿಫಲಂ ಸಾಧ್ಯಂ ಸರ್ವದಾಮುಕ್ತಿದಾಯಕಂ ॥"

ಎಂದು ಮೊದಲಾಗಿ ಅನೇಕ ಶಾಸ್ತ್ರ ಪ್ರಮಾಣಗಳು ಪಾದೋದಕದ ಮಹಿಮೆಯನ್ನು ಸಾರಿ ಹೇಳುತ್ತವೆ.

ಶ್ರೀಗಿರಿ, ಕಾಶಿ, ಹಂಪಿ, ರಾಮೇಶ್ವರ ಮೊದಲಾದ ಕ್ಷೇತ್ರಗಳಲ್ಲಿರುವ ಪಾತಾಳಗಂಗೆ, ಭಾಗೀರಥಿ, ತುಂಗಭದ್ರೆ, ಧನುಷ್ಕೋಟಿ ಮೊದಲಾದ ತೀರ್ಥಗಳಿಗೆ ಹೋಗಿ ಸ್ನಾನಮಾಡಿ ಪರಿಶುದ್ಧರಾದೆವೆಂದು ಭಾವಿಸುವ ಲೌಕಿಕ ಜನರನ್ನು ಕಂಡು ಮುಗ್ಧಯುಮಾಯಿದೇವರು-

"ಮೊದಲೊಳ್ಗುಹ್ಯ ಗುದಂಗಳಂತೊಳೆದು ಮತ್ತಾತೀರ್ಥಮಂ ಕಾಲ್ಗಳಿಂ ।
ದೊದೆದಾತೀರ್ಥದೊಳಾಹ ಪೊಕ್ಕ ಕಟ ಮತ್ತಾ ತೀರ್ಥದಿಂ ಮೋರೆಯಂ ।
ಸದೆದಾತೀರ್ಥಮನಾಹ ಮುಕ್ಕಳಿಸಿ ಮತ್ತಾತೀರ್ಥಮಂಮಿಂದುಲೋ ।
ಕದಮರ್ತ್ಯರ್ ಕೃತಪುಣ್ಯರಪ್ಪುದಿದುತಾಂಚೋದ್ಯಂ ಶಿವಾವಲ್ಲಭಾ ॥"

ಯಾವ ನೀರನ್ನು ತೀರ್ಥವೆಂದು ತಿಳಿಯುವರೋ ಅದೇ ಜಲದಲ್ಲಿ ಗುದಗುಹ್ಯಗಳನ್ನು ತೊಳೆದುಕೊಂಡು, ಮರಳಿ ಅದೇ ಜಲವನ್ನು ಕಾಲಿನಿಂದ ತುಳಿದು, ಆ ತೀರ್ಥ ಜಲದಿಂದಲೇ ಮುಖವನ್ನುತೊಳೆದು ಆ ಜಲದಿಂದಲೇ ಬಾಯಿ ಮುಕ್ಕಳಿಸಿ, ಆ ನೀರಿನಲ್ಲಿ ಸ್ನಾನಮಾಡಿ ಪುಣ್ಯವಂತರಾದೆವೆಂದು ಭಾವಿಸುವದು ಆಶ್ಚರ್ಯವಲ್ಲವೇ ? ಎಂದು ಉದ್ಗಾರತೆಗೆದಿರುವರು,

« ಕಪ್ಪೆಗಳು ಸರ್ಪಗಳು ಇಪ್ಪುದುದು ತೀರ್ಥವೇ ...... » ಎಂದು ಸರ್ವಜ್ಞಕವಿಯು ತೀರ್ಥಗಳ ಖಂಡನೆಮಾಡಿರುವನು. ಮಂಗಲಮೂರ್ತಿಯಾದ ಜಂಗಮವರೇಣ್ಯನ ಪಾದಾಂಗುಷ್ಠದಿಂದುದಿಸಿದ ಪಾದೋದಕದ ಅಥವಾ ಪಾದತೀರ್ಥದ ಮಹಿಮೆಯೇಬೇರೆ.

ಭಾರತ ದೇಶದಲ್ಲಿರುವ ದ್ವಾದಶ ಜ್ಯೋತಿರ್ಲಿಂಗಗಳಿಗಾಗಲಿ, ದೇವತಾದಿವಿಗ್ರಹಗಳಿಗಾಗಲಿ, ಇಷ್ಟಲಿಂಗಕ್ಕಾಗಲಿ ಮಹಾರುದ್ರಾಭಿಷೇಕವನ್ನು ಮಾಡುವ ಪ್ರಸಂಗದಲ್ಲಿ ಉಪಯೋಗಿಸಲ್ಪಡುವ ಸುವರ್ಣೋದಕ, ರತ್ನೋದಕ, ಗಂಧೋದಕ, ನಾರಿಕೇಲೋದಕ ಮೊದಲಾದ ಉದಕಗಳ ಪರಿಯೇ ಬೇರೆ.

ಸುವರ್ಣ, ರತ್ನ, ಗಂಧ, ಇವುಗಳ ಸಂಪರ್ಕದಿಂದ ಉದಕವು ಸುವರ್ಣೋದಕ, ರತ್ನೋದಕ, ಗಂಧೋದಕವೆಂದೂ ತೆಂಗಿನಕಾಯಿಯೊಳಗಿನ ನೀರು ನಾರಿಕೇಲೋದಕವೆಂದೂ ಹೇಳಲ್ಪಡುವಂತೆ. ಜಂಗಮನ ಪಾದಸ್ಪರ್ಶದಿಂದ ಕೂಡಿದ ಉದಕವು ಪಾದೋದಕವೆಂದು ಹೇಳಲ್ಪಡುವುದು, ಸುವರ್ಣೋದಕ, ರತ್ನೋದಕ, ಗಂಧೋಧಕ ಈ ಉದಕಗಳಲ್ಲಿರುವ ಸುವರ್ಣ, ರತ್ನ, ಗಂಧಗಳು ಜಡವಾಗಿರುವಂತೆ ಉದಕವೂ ಜಡವಾಗಿರುವದು

ಪಾದೋದಕ ಎಂಬ ಪದದಲ್ಲಿರುವ ಪಾದ–ಉದಕ ಎಂಬ ಎರಡು ಪದಗಳಲ್ಲಿ ಉದಕವು ಜಡವೆನಿಸಿದರೂ ಪರಮ ನಿರಂಜನ ಮೂರ್ತಿಯಾದ ಜಂಗಮವರೇಣ್ಯನ ಶ್ರೀ ಪಾದವು ಜಡವಲ್ಲ, ಅದು ಚೇತನವಾದುದು. ಪರುಷಮಣಿಯು ಸಂಪರ್ಕದಿಂದ ಕೀಳು ಕಬ್ಬಿಣವು ಮೇಲಾದ ಚಿನ್ನವಾದಂತೆ, ತುಂಬಿಯು ಸಹವಾಸದಿಂದ ಹುಳು ತುಂಬಿಯಾದಂತೆ ಹರಗುರುಚರಮೂರ್ತಿಗಳ ಚರಣಸಂಪರ್ಕದಿಂದ ನೀರೂ ಪರಮಪಾವನವೆನಿಸಿ ಪಾದೋದಕವೆನಿಸುವದು. ಅದು ನೀರಲ್ಲ. ಅದು ಚಿತ್‌ಸ್ವರೂಪವಾಗಿರುತ್ತದೆಂದು ತಿಳಿಯಬೇಕು. ಕೇವಲ ಯಾಂತ್ರಿಕ ರೀತಿಯಿಂದ ಹೇಳುವ ಆಚರಣೆಯು ಇದಲ್ಲ. ಇದನ್ನು ಭಾವನಾಪ್ರಧಾನವಾಗಿ ಮತ್ತು ಅದರ ಮರ್ಮವನ್ನು ತಿಳಿದು ಆಚರಿಸಿದರೆ ಅದು ಭಕ್ತ ಜಂಗಮರ ಸರ್ವಾಂಗವನ್ನು ಭೇದಿಸುತ್ತದೆ. ಈ ಪಾದೋದಕ ಸೇವನೆಯಿಂದ ಸರ್ವಾಂಗ ಲಿಂಗಿಯಾಗುತ್ತಾನೆ.

ಪಾದೋದಕದಲ್ಲಿ ಗುರುಪಾದೋದಕ, ಕ್ರಿಯಾಪಾದೋದಕ, ಜ್ಞಾನಪಾದೋದಕ ಎಂದು ಮೂರು ಭಾಗ ಮಾಡುವರು. ಪಾದೋದಕವು ದೇಹದಲ್ಲಿ ಶುದ್ಧಿಯನ್ನುಂಟು ಮಾಡಿ ಲಿಂಗ ಚೈತನ್ಯವನ್ನು ಹುಟ್ಟಿಸುತ್ತದೆ. ಗುರುಪಾದೋದಕದಿಂದ ಸ್ಥೂಲದೇಹದ ಶುದ್ಧಿಯು. ಕ್ರಿಯಾಪಾದೋದಕದಿಂದ ಸೂಕ್ಷ್ಮದೇಹದ ಶುದ್ಧಿಯು. ಜ್ಞಾನಪಾದೋದಕದಿಂದ ಕಾರಣ ದೇಹದ ಶುದ್ಧಿಯು. ಪಾದೋದಕವು ಪ್ರತ್ಯಕ್ಷ ಪರಬ್ರಹ್ಮವೆಂದು ಹೇಳಲ್ಪಡುತ್ತದೆ ಮೊದಲು ಉದಕವು ಹೋಗಿ ಗುರುಪಾದೋದಕವಾಗುತ್ತದೆ.ಆ ಗುರುಪಾದೋದಕವೇ ಕ್ರಿಯಾಪಾದೋದಕವಾಗುತ್ತದೆ. ಆ ಕ್ರಿಯಾಪಾದೋದಕವೇ ಜ್ಞಾನಪಾದೋದಕವಾಗುತ್ತದೆ. ಗುರುಪಾದೋದಕದಿಂದ ಸಂಚಿತಕರ್ಮವು, ಲಿಂಗಪಾದೋದಕದಿಂದ ಪ್ರಾರಬ್ಧ ಕರ್ಮವು, ಜಂಗಮಪಾದೋದಕದಿಂದ ಆಗಾಮಿ ಕರ್ಮವು ನಷ್ಟವಾಗುತ್ತವೆ. ಈ ಮೂರು ಪಾದೋದಕಗಳಿಗೆ ಅನುಕ್ರಮವಾಗಿ ದೀಕ್ಷಾ ಪಾದೋದಕ, ಶಿಕ್ಷಾ ಪಾದೋದಕ, ಜ್ಞಾನ ಪಾದೋದಕವೆಂತಲೂ ಮತ್ತು ಇವುಗಳಿಗೆ ಕರುಣಜಲ,ವಿನಯಜಲ, ಸಮತೆಜಲ ಎಂದೂ ಅನುಕ್ರಮವಾಗಿ ಹೇಳುವರು. ಪಾದೋದಕವನ್ನು ಗುರುಪಾದೋದಕ, ಲಿಂಗಪಾದೋದಕ, ಜಂಗಮಪಾದೋದಕ ಎಂದು ಮೂರು ಬಗೆಯಾಗಿ ವಿಭಾಗ ಮಾಡುವದಲ್ಲದೆ ಈ ಮೂರರಲ್ಲಿ ಸ್ಪರ್ಶನೋದಕ, ಅವಧಾನೋದಕ, ಆಪ್ಯಾಯನೋದಕ, ಹಸ್ತೋದಕ ಪರಿಣಾಮೋದಕ, ನಿರ್ನಾಮೋದಕ, ಸತ್ಯೋದಕ ಎಂಬ ಏಳನ್ನು ಕೂಡಿಸಿ ದಶವಿಧ ಪಾದೋದಕಗಳೆಂದೂ ಹೇಳುವರು. ಪಾದೋದಕವನ್ನು ಮಾಡಿಕೊಳ್ಳುವಲ್ಲಿ ಮತ್ತು ಅದನ್ನು ಸ್ವೀಕರಿಸುವಲ್ಲಿ ಈ ಹತ್ತು ವಿಧಗಳುಂಟಾಗುತ್ತವೆ. ಇವು ಆಚರಣೆಗೆ ಸಂಬಂಧಪಟ್ಟರೂ ಭಾವನಾ ಪ್ರಧಾನವಾದವುಗಳು.

ಲೌಕಿಕದಲ್ಲಿ ತಾಯಿತಂದೆಗಳು ತಾವು ಹಡೆದ ಮಗುವನ್ನು ಎತ್ತಿ ಮುದ್ದಾಡಿ ನಲಿದಾಡುವಂತೆ, ನಾನೂ ಶ್ರೀ ಗುರುದೇವನೆಂಬ ಗಂಡನೊಡನೆ ಬಾಳುವೆ ಮಾಡಿ ಪಡೆದ ಲಿಂಗಯ್ಯನೆಂಬ ಮಗುವನ್ನು ಅಂಗೈ ಎಂಬ ತೊಟ್ಟಿಲೊಳಗಿಟ್ಟು ತಾಯಾಗಿ ಜೋಗುಳ

ಹಾಡಿ ಮುದ್ದಾಡಿ ನಲಿದಾಡುವೆನು-ಎಂದು ಬಾಲಲೀಲಾ ಮಹಾಂತ ಶಿವಯೋಗಿಗಳು ಹೇಳಿದ್ದಾರೆ. ಮೈಲಾರದ ಬಸವಲಿಂಗ ಶರಣರೂ ಗುರುಶಿಷ್ಯರ ಸಮಾಗಮದಿಂದ ಉದಿಸಿದ "ಪಾದೋದಕ"ವೆಂಬ ಸತ್ಪುತ್ರನನ್ನು ಪಡೆದು ನಲಿದಾಡುವೆನು ಎಂಬುದನ್ನು-

"ಮಂತ್ರಮಯ ಚರಲಿಂಗದಡಿಗೆ ಭಕ್ತನುಕರವ ।
ಸಂತಸದೊಳಿಟ್ಟು ಪತಿಭಕ್ತಿಯಿಂದುಪಚರಿಸಿ ।
ಮುಂತೆ ಪರಬ್ರಹ್ಮರಂಧ್ರದೊಳಿರ್ಪ ಸತ್ತ್ಯೋದಕವ ಚರಣದಿಂದ ಪಡೆದು ।
ಇಂತೊಗೆದ ಸುಜ್ಞಾನ ತೀರ್ಥಪುತ್ರನು ಶರಣ ।
ಸಂತತಿಗಳಾಲಿಂಗಿಸುತಲೆತ್ತಿ ಮುದ್ದಾಡಿ ।
ಸಂತೈಸುತಾ ಪಾದತೀರ್ಥದಾಚರಣೆಯೊಳಗಿರ್ಪ ಸದ್ಭಕ್ತನಧಿಕಂ ।"

ಎಂಬ ಪದ್ಯದಿಂದ ಸರಸವಾಗಿ ಹೇಳಿರುವರು. ದತ್ತಕವಿಧಿ, ಲಗ್ನವಿಧಿ, ದೀಕ್ಷಾವಿಧಿ ಮೊದಲಾದ ವಿಧಿಗಳಿಗಿಂತಲೂ ಪಾದೋದಕವಿಧಿಯು ಅರ್ಥಪೂರ್ಣವಾಗಿದೆ. ಸತಿಯಿಲ್ಲದ ಪತಿಯಿಂದಾಗಲಿ, ಪತಿಯಿಲ್ಲದ ಸತಿಯಿಂದಾಗಲಿ,ಪುತ್ರೋತ್ಪತ್ತಿಯಾಗದೇ ಉಭಯರ ಸರಸ ಸಂಯೋಗದಿಂದಲೇ ಪುತ್ರೋತ್ಪತ್ತಿಯಾಗುವದಲ್ಲವೇ ? ಪಾದೋದಕವು ಸಿದ್ಧವಾಗಬೇಕಾದರೂ ಕೇವಲ ಪಡೆದುಕೊಳ್ಳುವ ಶಿಷ್ಯನಿಂದಲೂ ಆಗದು. ಕೊಡುವ ಗುರುವಿನಿಂದಲೂ ಆಗದು. ಗುರುಶಿಷ್ಯರ ಶುಭ ಸಮಾಗಮದಲ್ಲಿಯೇ ಅದು ಉದಯವಾಗುವದು.

ಪಾದೋದಕವನ್ನು ಪಡೆದುಕೊಳ್ಳುವ ಶಿಷ್ಯನು ತನ್ನ ಸಮ್ಮುಖದಲ್ಲಿ ಕುಳಿತ ಜಂಗಮಮೂರ್ತಿಯ ಶ್ರೀಪಾದದ ಪಂಚಾಂಗುಲಿಗಳಲ್ಲಿ ಪಂಚಪ್ರಣವಗಳನ್ನೂ ಮಧ್ಯದಲ್ಲಿ ಮೂಲಮಂತ್ರವನ್ನೂ ಬರೆಯಬೇಕು. ಪಾದಪೂಜೆಯನ್ನು ಮಾಡುವ ಕಾಲಕ್ಕೆ ಕ್ರಿಯಾ ಪಾದೋದಕವನ್ನು ಮಾಡಿದ ಬಳಿಕ ಮಹಾಪೂಜೆಯನ್ನು ಮಾಡುವಾಗ ಜಂಗಮನ ಮಸ್ತಕವನ್ನು ಪೂಜಿಸಿ ಪರಬ್ರಹ್ಮರಂಧ್ರದೊಳಿರುವ ಸತ್ತ್ಯೋದಕವೇ ಪಾದಾಂಗುಷ್ಠದ ಮೂಲಕ ಬರುವದೆಂದು ಭಾವಿಸಬೇಕು. ಉಭಯ ಪಾದಾಂಗುಷ್ಠದ ಮೇಲೆ ಕ್ರಿಯಾ ಪಾದೋದಕವನ್ನು ಎರೆದರೆ ಜ್ಞಾನಪಾದೋದಕವು ನಿಷ್ಪನ್ನವಾಗುವದು. ಸದ್ಭಕ್ತನು ಜಂಗಮಮೂರ್ತಿಯ ಪಾದವನ್ನು ಪತಿಭಕ್ತಿಯಿಂದುಪಚರಿಸಿ ಜ್ಞಾನಪಾದೋದಕವನ್ನು ಅಥವಾ ಚಿದ್ರಸವನ್ನು ಪಡೆಯಬೇಕು. ಸತಿಪತಿಗಳು ತಾವು ಹಡೆದ ಮುದ್ದು ಮಗುವನ್ನು ಮುದ್ದಿಸಿ ನಲಿದಾಡುವಂತೆ ಗುರುಶಿಷ್ಯರು ಪಾದೋದಕವನ್ನು ಸ್ವೀಕರಿಸಿ ಮೈಮಸ್ತಕಗಳಿಗೆ ಪೂಸಿಕೊಂಡು ಕೃತಾರ್ಥರಾದೆವೆಂದು ಸಂತಸಪಡುವರು.

ಮಸ್ತಕ ಪಾದಾಂಗುಷ್ಠಗಳಲ್ಲಿ ವೈಚಾರಿಕ, ವೈಜ್ಞಾನಿಕ, ಯೌಗಿಕ, ತಾತ್ವಿಕ, ವ್ಯಾವಹಾರಿಕ ದೃಷ್ಟಿಯಿಂದ ನಿಕಟ ಸಂಬಂಧವಿದೆ. ದೇಹದ ಗಮನಾಗಮನಾದಿಕ್ರಿಯೆಗಳೆಲ್ಲವು ಪಾದದಿಂದಲೇ ನಡೆಯುವವು. ಪಶ್ಚಿಮ ಚಕ್ರಕ್ಕೂ, ಪಾದಾಂಗುಷ್ಠಕ್ಕೂ ಅತ್ಯಂತ ಸಂಬಂಧವಿರುವದು. ಅಂಗುಷ್ಠದ ದೊಡ್ಡನರಕ್ಕೆ ಪೆಟ್ಟುಬಿದ್ದರೆ ಅಥವಾ ಮನುಷ್ಯನ ಸಣ್ಣ ಮೆದುಳಿಗೆ

ಭಕ್ತಿಯಾದರೆ ಮೂರ್ಛೆಬಂದು ಬೀಳುವದೂ, ಇಲ್ಲವೆ ಮರಣಕ್ಕೆ ತುತ್ತಾಗುವದೂ ಅನುಭವಸಿದ್ಧ ಮಾತಾಗಿದೆ. ಉದರರೋಗ ಬಂದಲ್ಲಿ ಅಥವಾ ಅರದೆಲೆಎದ್ದಲ್ಲಿ ಹೆಬ್ಬೆರಳಿನ ನರವನ್ನು ಬಲವಾಗಿಹಿಡಿದು ರೋಗ ನಿವಾರಣೆಮಾಡುವದೂ, ಯೋಗಾಸನ, ಷಟ್ಕರ್ಮ ಪ್ರಾಣಾಯಾಮ ಮಾಡಿ ಯೌಗಿಕಕರ್ಮಗಳನ್ನು ಮಾಡುವಾಗ ಅಂತಶ್ಶಕ್ತಿಯು ವಿಕಸನ–ಕ್ಕಾಗಿ ಅಂಗುಷ್ಠಬಂಧನ ಮಾಡುವದೂ, ಅತಿ ಉಷ್ಣತೆಯಿಂದ ತಲೆಯು ಕಾಯ್ದು ಕಣ್ಣುರಿಪಾದಾಗ ಅಂಗಾಲಿಗೆ ಎಣ್ಣೆ ಹಚ್ಚಿ ತಿಕ್ಕುವದೂ, ಸ್ವಾಮಿಯು ಸೇವಕನಮೇಲೆ ಸಿಟ್ಟಾದಾಗ ಸೇವಕನು ಕೈಂಕರ್ಯದಿಂದ ಒಡೆಯನ ಕಾಲಿಗೆಬಿದ್ದು ಒಡೆಯನನ್ನು ಸಮಾಧಾನ ಪಡಿಸುವದೂ ಪ್ರಸಿದ್ಧವಿದೆ. ಶಿಷ್ಯನು ಶ್ರೀಗುರುವಿನ ಪಾದಾಂಗುಷ್ಠಗಳಿಗೆ ಹಣೆಯನ್ನು ಹಚ್ಚಿ ನಮಸ್ಕರಿಸಿದರೆ ಶಿಷ್ಯನ ಭ್ರೂಮಧ್ಯದಲ್ಲಿರುವ ಆಜ್ಞಾಚಕ್ರವು ಸದ್ಗುರುಗಳ ಪಾದ ಸ್ಪರ್ಶದಿಂದ ಜಾಗೃತವಾಗಿ ಜ್ಞಾನಪ್ರಕಾಶವು ಸೂಕ್ಷ್ಮವಾಗಿ ಪ್ರಕಟವಾಗುವದು. ಹೀಗೆ ಪಾದೋದಕವು ವೈಚಾರಿಕ, ವೈಜ್ಞಾನಿಕ, ವ್ಯಾವಹಾರಿಕ, ತಾತ್ವಿಕ, ಧಾರ್ಮಿಕ, ಆರೋಗ್ಯ ಹೀಗೆ ಎಲ್ಲ ವಿಧದಿಂದಲೂ ಮಾನವನ ಸರ್ವಾಂಗೀಣ ಉನ್ನತಿಗೆ ಕಾರಣವಾಗಿದೆ.

ಕೇವಲ ಭೌತಿಕದೇಹಕ್ಕೆ ಬಂದಿರುವ ಹಸಿವೆತೃಷೆಗಳನ್ನು ಕಳೆವ ಅನ್ನನೀರುಗಳನ್ನು ಹರಗುರು ಚರಮೂರ್ತಿಗಳಿಗೆ ಸಮರ್ಪಣೆ ಮಾಡಿದಾಗ ಅವು ಪಾದೋದಕವೆನಿಸುತ್ತವೆ. ಅಂತಹ ಪವಿತ್ರ ಪಾದೋದಕ ಪ್ರಸಾದಗಳನ್ನೇ ದೃಢನಿಷ್ಠೆಯಿಂದ ಸ್ವೀಕರಿಸಿದ ಶರಣರ ಚರಿತ್ರೆ, ಹಾಗೂ ಮಹಾಕ್ಷೇತ್ರಗಳಲ್ಲಿರುವ ತೀರ್ಥಗಳಿಗಿಂತಲೂ ಪಾದತೀರ್ಥವೇ ಮೇಲೆಂಬ ಬಗ್ಗೆ ಅನೇಕಘಟನೆಗಳು ಐತಿಹ್ಯಗಳು ಹಲವು ಗ್ರಂಥಗಳಲ್ಲಿ ಕಂಡುಬರುತ್ತವೆ.

ನೀರಿಲ್ಲದೆ ಅನ್ನಮಾಡಿ ನೀಡಿ ಯಾವ ಕನ್ನೆಯು ಉಣಿಸುವಳೋ ಆ ಕನ್ಯೆಯಪಾಣಿ ಗ್ರಹಣ ಮಾಡುವೆನೆಂದು ದೃಢಸಂಕಲ್ಪ ಮಾಡಿದವನು ಸುಪ್ರಸಿದ್ಧ ವಚನಕಾರನಾದ ದೇವರ ದಾಸಿಮಯ್ಯನು.ನಾಡತುಂಬ ಅಲೆದಾಡಿದರೂ ಈ ಪರೀಕ್ಷೆಯಲ್ಲಿ ತೇರ್ಗಡೆಯಾದ ಕನ್ಯೆಯು ದೊರೆಯಲಿಲ್ಲ.ಕೊನೆಗೆ ಗೊಬ್ಬೂರು ಎಂಬಗ್ರಾಮದಲ್ಲಿ ಮಲ್ಲಿನಾಥ ಮಹಾದೇವಿಯರ ಮಗಳಾದ ದುಗ್ಗಳೆಯು ದಾಸಿಮಯ್ಯನ ಪರೀಕ್ಷೆಯಲ್ಲಿ ತೇರ್ಗಡೆಯಾದಳು. ಅವನಿಗೆ ಒಪ್ಪಿಗೆಯಾದ ದುಗ್ಗಳೆಯು ಗುರುಪಾದೋದಕದಲ್ಲಿ ಅನ್ನವನ್ನು ಸಿದ್ಧಮಾಡಿ ನೀಡಿ ಉಣಿಸಿದಳು. ದೇವರ ದಾಸಿಮಯ್ಯನು ಆಕೆಯ ಕೈಹಿಡಿದು ದೇವರಂತೆ ಮೆರೆದನು. ಪಾದೋದಕ ಪಾದೋದಕವೇ ! ನೀರು ನೀರೇ ! ಪಾದೋದಕ ನೀರಲ್ಲ. ನೀರು ಪಾದೋದಕವಲ್ಲ. ಒಂದು ಪಾರಮಾರ್ಥಿಕ, ಇನ್ನೊಂದು ಲೌಕಿಕ; ಒಂದು ನಿವೃತ್ತಿಪರ ಇನ್ನೊಂದು ಪ್ರವೃತ್ತಿ ಪರ; ಒಂದು ಊರ್ಧ್ವಮುಖ ಇನ್ನೊಂದು ಅಧೋಮುಖ.

ಭಕ್ತೋದ್ಧಾರಕ್ಕಾಗಿ ದೇಶಸಂಚಾರವ ಕೈಕೊಂಡ ಜಗದ್ಗುರು ತೋಂಟದ ಸಿದ್ಧಲಿಂಗೇಶ್ವರರು ಸಹ್ಯಾದ್ರಿಗೆ ದಯಮಾಡಿಸಿ ಅಲ್ಲಿರುವ ಮಹಾಬಲೇಶ್ವರ ಲಿಂಗಕ್ಕೆ ತಮ್ಮ ಪಾದೋದಕದಿಂದಲೇ ಅಭಿಷೇಕ ಮಾಡುವದನ್ನು ಕಂಡು ಅರ್ಚಕರು ಸಿಟ್ಟಿಗೆದ್ದು ಅವರನ್ನು ಅಲ್ಲಿಂದ ಹೊರಗಟ್ಟಿದರು. ಆಗ ಲಿಂಗದ ಮೇಲಿಂದ ಗಂಗೆಯು ಬತ್ತಿ ಹೋಯಿತು.

ಪಾದೋದಕದಿಂದ ಅಭಿಷೇಕ ಮಾಡಿದ ಅನಾಚಾರಕ್ಕಾಗಿಯೇ ಲಿಂಗದ ಮಸ್ತಕದ ಮೇಲಿರುವ ಗಂಗೆಯು ಬತ್ತಿ ಹೋಯಿತು ಎಂಬ ಭ್ರಮೆಯಿಂದ ವಿಪ್ರರು ಅದರ ನಿವಾರಣೆಗೆ ಶಾಂತಿಕರ್ಮಗಳನ್ನೂ, ಹೋಮಹವನಗಳನ್ನೂ ಮಾಡಲಾಗಿ ಯಾವ ಪ್ರಯೋಜನವೂ ಆಗಲಿಲ್ಲ. ಆಗ ಸ್ವಯಂ ಮಹಾಬಲೇಶ್ವರನೇ ವಿಪ್ರರೇ ಮಹಾಮಹಿಮನಾದ ಶ್ರೀಸಿದ್ಧಲಿಂಗೇಶ್ವರನ ಶ್ರೀಪಾದಗಳು ನನ್ನ ತಲೆಯಲ್ಲಿ ಇರುವಂತೆ ವ್ಯವಸ್ಥೆ ಮಾಡಿರಿ ಅಂದರೆ ಗಂಗೆಯು ಉದಯಿಸುವಳು ಎಂದು ಹೇಳಿದನಂತೆ ! ವಿಪ್ರರು ಅದರಂತೆ ಮಾಡಲು ತತ್ಕ್ಷಣವೇ ಬತ್ತಿಹೋದ ಗಂಗೆಯು ಮತ್ತೆ ಉದಯಿಸಿತಂತೆ ! ಪಾದೋದಕವು ಜೀವನನ್ನು ದೇವನನ್ನಾಗಿ ಮಾಡುವ ದಿವ್ಯೌಷಧವು. ತಾಪತ್ರಯದಿಂದ ನೊಂದು ಬೆಂದವರಿಗೆ ಪರಮ ಶಾಂತಿಯನ್ನೀಯುವ ಪರಮಾಮೃತವು. ಜೀವನ ಸಂಗ್ರಾಮದಲ್ಲಿ ಕಾಮಾದಿ ಷಡ್ರಿಪುಗಳು ಬಿಡುವ ಬಾಣಗಳು ತಾಕದಂತೆ ಕಾಯುವ ಭದ್ರವಾದ ರಕ್ಷಾಕವಚವಿದು.

ಇಷ್ಟಲಿಂಗವನ್ನು ಶ್ರೀರುದ್ರ, ಪುರುಷ ಸೂಕ್ತ, ಶತರುದ್ರ ಮುಂತಾದವುಗಳ ಪಠನದಿಂದಲೂ ಸುವರ್ಣೋದಕ, ರತ್ನೋದಕ, ಗಂಧೋದಕ, ನಾರಿಕೇಲೋದಕ ಮುಂತಾದ ಪಾದ್ಯ, ಅರ್ಘ್ಯ, ಆಚಮನ, ಮಧುಪರ್ಕ, ಪಂಚಾಮೃತ ಮುಂತಾದ ಅಭಿಷೇಕದ ಸಾಹಿತ್ಯದಿಂದಲೂ ಮಾಡುವ ಅಭಿಷೇಕಕ್ಕಿಂತಲೂ ಜಂಗಮದಪಾದೋದಕದಿಂದ ಮಾಡುವ ಲಿಂಗಾಭಿಷೇಕವು ಶ್ರೇಷ್ಠವೆಂದು ಸೂತಸಂಹಿತೆಯು ಹೇಳುತ್ತದೆ. ಪಾದೋದಕಸೇವನೆಯಿಂದ ಆಗುವ ಫಲದಬಗ್ಗೆ ಒಂದು ಕಥೆಯು ದಾನಮ್ಮದೇವಿ ಪುರಾಣದಲ್ಲಿ ಬರುತ್ತದೆ.

ಆದಿತ್ಯನೆಂಬರಾಜನು ಮೂರುಪೇಳೆಯಲ್ಲಿಯೂ ತಪ್ಪದೆ ಶಿವಲಿಂಗಪೂಜೆಯನ್ನು ಭಕ್ತಿಯಿಂದ ಮಾಡುತ್ತಿರಲು ಆ ಪೂಜಾಪ್ರಭಾವದಿಂದ ಆತನಿಗೆ ದೇವೇಂದ್ರ ಪದವಿಯು ದೊರಕಿತು. ಆಗ ಶಿವನು ಸಪ್ತರ್ಷಿಗಳನ್ನು ಕರೆದು ಇಂದ್ರಪದವಿಯನ್ನು ಪಡೆದ ಆದಿತ್ಯರಾಜನನ್ನು ಪಲ್ಲಕ್ಕಿಯಲ್ಲಿ ತನ್ನಬಳಿಗೆ ಕರೆದುಕೊಂಡು ಬರಲು ಆಜ್ಞಾಪಿಸಿದನು. ಶಿವಾಜ್ಞೆಯಂತೆ ರಾಜನನ್ನು ಪಲ್ಲಕ್ಕಿಯಲ್ಲಿ ಕೂಡಿಸಿಕೊಂಡು ಹೋಗುವಾಗ ರಾಜನು ಮದಾಂಧನಾಗಿ ಸಪ್ತರ್ಷಿಗಳನ್ನು ಕುರಿತು ಸರಸರನೆ ನಡೆಯಿರೆಂದು ಆಜ್ಞಾಪಿಸಲು ಋಷಿಗಳು ಕ್ರುದ್ಧರಾಗಿ ವಿವೇಕಭ್ರಷ್ಟನಾದ ರಾಜನನ್ನು ಕುರಿತು ಸರ್ಪವಾಗು ಎಂದು ಶಾಪವಿತ್ತರು. ಆಗ ಆದಿತ್ಯರಾಜನು ಪಶ್ಚಾತ್ತಾಪದಿಂದ ಋಷಿಗಳಿಗೆ ಕೈಮುಗಿದು ಶಾಪವಿಮೋಚನೆ ಮಾಡಿರೆಂದು ಸೆರಗೊಡ್ಡಿ ಬೇಡಿಕೊಂಡನು. ಆಗ ಅವರು ಅನುಕಂಪದಿಂದ ಎಲೈ ರಾಜನೇ ನಿನಗೆ ಜಂಗಮ ಪಾದೋದಕ ಸಿಕ್ಕದಿನವೇ ಶಾಪವಿಮೋಚನೆಯಾಗುವದು ಎಂದು ಅಭಯವಿತ್ತರು. ಆದಿತ್ಯನು ಸರ್ಪವಾಗಿ ಭೂಮಿಯಲ್ಲಿ ಬಿದ್ದನು. ಚಳಿಗಾಲವಿದ್ದಮೂಲಕ ಚಳಿಗೆ ಅಂಜಿ ಹಾವು ಹೂಬಿಸಿಲಲ್ಲಿ ಬಿದ್ದಿರಲು ಕಳ್ಳನ ಕೈಗೆ ಸಿಕ್ಕ ಶಿವರ್ವ ಜಂಗಮಪುಂಗವರು ಓಡುತ್ತ ಅದೇ ಸ್ಥಳದಲ್ಲಿ ಹೋಗಲಾಗಿ ಅವರ ಪಾದಕ್ಕೆ ಹತ್ತಿದ ಇಬ್ಬನಿಯು ಬಾಯ್ತೆರೆದ ಹಾವಿನ ಬಾಯಲ್ಲಿ ಬಿದ್ದಿತು. ಹಿಂದೆ ಜಂಗಮನ ಬೆಂಬತ್ತಿ ಓಡುತ್ತ ಬರುವ ಕಳ್ಳನು ಹಾವನ್ನು ತುಳಿಯಲಾಗಿ ಕೂಡಲೇ ಹಾವು ಅವನನ್ನು ಕಚ್ಚಿತು. ಕಳ್ಳನೂ ಹಾವನ್ನು ಕೊಂದು ತಾನೂ ವಿಷವೇರಿ ಸತ್ತನು. ಯಮದೂತರು ಕಳ್ಳನನ್ನು ಒಯ್ಯುವದಕ್ಕಾಗಿ

ಬರಲು ಶಿವದೂತರು ಬಂದು ಈ ಕಳ್ಳನು ಜಂಗಮಪಾದ ತೀರ್ಥಕುಡಿದ ಹಾವು ಕಚ್ಚಿ ಸತ್ತಿರುವನು. ಆದ್ದರಿಂದ ಇವನನ್ನು ಮುಟ್ಟಬೇಡಿರಿ ಎಂದು ಹೇಳಿ ಸರ್ಪಜನ್ಮದಿಂದ ಮುಕ್ತನಾದ ಆದಿತ್ಯರಾಜ ಮತ್ತು ಕಳ್ಳ ಇವರನ್ನು ಕೈಲಾಸಕ್ಕೆ ಒಯ್ದರು.

ಗುರುಜಂಗಮರ ಪವಿತ್ರ ಚರಣದಿಂದ ವಿಧಿಪೂರ್ವಕವಾದ ಉದಕವು ಪಾದೋದಕ ವೆನಿಸಿದರೆ ಗುರುಲಿಂಗ ಜಂಗಮರಿಗೆ ಸಮರ್ಪಿಸಿ ಎಡೆಮಾಡಿ ತಿರುಗಿ ಪಡೆದುದು ಪ್ರಸಾದ ವೆನಿಸುವದು. ಪ್ರಸಾದಶಬ್ದಕ್ಕೆ ಅನುಗ್ರಹ, ತಿಳಿಯಾಗುವಿಕೆ, ಪ್ರಸನ್ನತೆ, ದಯೆ ಹೀಗೆ ವಿವಿದಾರ್ಥಗಳಿವೆ. ವೀರಶೈವ ಧರ್ಮಪುರುಷನಿಗೆ ಆತ್ಮನಂತಿರುವ ಷಟ್‌ಸ್ಥಲಗಳಲ್ಲಿ ಪ್ರಸಾದಿಸ್ಥಲವು ಬಹಳ ಮುಖ್ಯವಾದುದು. ಧನವುಳ್ಳವನು ಧನೀ ಎಂದು ಕರೆಯಲ್ಪಡುವಂತೆ ಪ್ರಸಾದವುಳ್ಳವನು ಪ್ರಸಾದಿ ಎಂದು ಕರೆಯಲ್ಪಡುವನು.

"ಲಿಂಗಮುಖಾರ್ಪಣೀಯವಹ ಸರ್ವವಿಶುದ್ಧ ಪದಾರ್ಥಜಾತಮಂ ।
ಸ್ವಾಂಗವಚೋಮನಃಕರಣ ಕಾಯಕವಾಚಿಕ ಮಾನಸಕ್ರಿಯಾ ।
ಸಂಗತ ಸಾವಧಾನ ಸುವಿವೇಕದಿನರ್ಪಿಸಿ ತತ್ಪ್ರಸಾದಮಂ ।
ಪಿಂಗದೆ ಭೋಗಿಪಲ್ಲಿ ಬಳಿಕಾ ಸ್ಥಲಸಿದ್ಧಿದಿಟಂ ಶಿವಾಧವಾ ।

ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳಿಗೆ ಅಥವಾ ಗುರುಜಂಗಮರಿಗೆ ಅರ್ಪಿಸಲು ಯೋಗ್ಯವಾದ ಪರಿಶುದ್ಧ ಪದಾರ್ಥ ಸಮೂಹವನ್ನು ಅವಧಾನ ಭಕ್ತಿಪೂರ್ವಕ ಆ ಪೂಜ್ಯ ವಸ್ತುಗಳಿಗೆ ಅರ್ಪಿಸಿ, ಆ ಪೂಜ್ಯವಸ್ತುಗಳಿಂದ ಮರಳಿ ಪ್ರಸಾದವನ್ನು ಪಡೆದು ಸೇವಿಸು ವವನೇ ಪ್ರಸಾದಿ ಎನಿಸುವನು.

ಮನುಷ್ಯನಿಗೆ ಅಂಗ, ಕರಣ, ಭಾವವೆಂಬವುಗಳಿವೆ, ಇವುಗಳ ಮುಖಾಂತರವೇ ಮಾನವನು ಸಕಲಕಾರ್ಯಗಳನ್ನು ಮಾಡುತ್ತಾನೆ. ಇವು ಶುದ್ಧವಾದಲ್ಲಿ ಮಾಡುವ ಕ್ರಿಯೆಯೂ ಶುದ್ಧ ವಾಗುವದು. ಇಷ್ಟಲಿಂಗಕ್ಕೆ ಅಂಗವನ್ನು, ಪ್ರಾಣಲಿಂಗಕ್ಕೆ ಮನವನ್ನು, ಭಾವಲಿಂಗಕ್ಕೆ ಭಾವವನ್ನು ಅರ್ಪಿಸಬೇಕು. ಹೀಗೆ ಅರ್ಪಿಸಿದಲ್ಲಿ ಅವು ಅನುಕ್ರಮವಾಗಿ ಕಾಯಾರ್ಪಣ, ಕರಣಾರ್ಪಣ, ಭಾವಾರ್ಪಣ ಎನಿಸುತ್ತವೆ.

ಪದಾರ್ಥ ಸೇವನೆಯಲ್ಲಿ ರೂಪು, ರುಚಿ, ತೃಪ್ತಿಗಳೆಂಬವುಗಳನ್ನು ಅನುಭವಿಸ ಬೇಕಾಗುತ್ತದೆ. ಆ ರೂಪವನ್ನು ಕಾಯದ ಕೈಯಲ್ಲಿ ಇಷ್ಟಲಿಂಗಕ್ಕೆ ಅರ್ಪಿಸತಕ್ಕದ್ದು ಅದು ಶುದ್ಧ ಪ್ರಸಾದವು. ರುಚಿಯಾಗಿ ಬಂದ ಪದಾರ್ಥವನ್ನು ಮನದ ಕೈಯಲ್ಲಿ ಜಿಹ್ವೆಯ ಮುಖ ದಲ್ಲಿ ಪ್ರಾಣಲಿಂಗಕ್ಕೆ ಅರ್ಪಿಸಬೇಕು. ಅದು ಸಿದ್ಧಪ್ರಸಾದವು. ಪರಿಣಾಮವಾಗಿ ಬಂದ ಪದಾರ್ಥವನ್ನು ಭಾವದ ಕೈಯಲ್ಲಿ ಹೃದಯ ಮುಖದಲ್ಲಿ ಭಾವಲಿಂಗಕ್ಕೆ ಅರ್ಪಿಸಬೇಕು, ಅದು ಪ್ರಸಿದ್ಧ ಪ್ರಸಾದವು. ಹೀಗೆ ಮಾಡಿದಲ್ಲಿ ಅಂಗ, ಮನ, ಭಾವಗಳು ಲಿಂಗಮಯ ವಾಗುವವು.

ಮನುಷ್ಯನಿಗೆ ನೇತ್ರ, ಶ್ರೋತ್ರ, ಜಿಹ್ವೆ, ಘ್ರಾಣ, ತ್ವಕ್ಕು ಎಂದು ಪಂಚಕರಣಗಳಿ ರುತ್ತವೆ. ನೇತ್ರವು ನೋಡುತ್ತದೆ, ಶ್ರೋತ್ರವು ಕೇಳುತ್ತದೆ, ಜಿಹ್ವೆಯು ರುಚಿಸುತ್ತದೆ,

ಘ್ರಾಣವು ಮೂಸುತ್ತದೆ, ತ್ವಕ್ಕು ಮುಟ್ಟುತ್ತದೆ. ಇವುಗಳೆಲ್ಲವನ್ನು ಲಿಂಗಾಂಗಿಯು ಲಿಂಗಾರ್ಪಿತಮಾಡಿ ಲಿಂಗ ಭೋಗೋಪಭೋಗಿಯಾಗುತ್ತಾನೆ. ಇವನೇ ಪ್ರಸಾದಿಯು. ಈ ಪಂಚ ಕರಣಗಳಲ್ಲಿ ನಾಸಿಕದಲ್ಲಿ ಆಚಾರಲಿಂಗವು, ಜಿಹ್ವೆಯಲ್ಲಿ ಗುರುಲಿಂಗವು, ನೇತ್ರದಲ್ಲಿ ಶಿವಲಿಂಗವು, ತ್ವಕ್ಕಿನಲ್ಲಿ ಜಂಗಮಲಿಂಗವು, ಶ್ರೋತ್ರದಲ್ಲಿ ಪ್ರಸಾದಲಿಂಗ ಇರುತ್ತವೆ. ಪಂಚೇಂದ್ರಿಯಗಳನ್ನು ಅನುಕ್ರಮವಾಗಿ ಆಯಾ ಲಿಂಗಗಳಿಗೆ ಅರ್ಪಿಸಿದಲ್ಲಿ ಆ ಪಂಚೇಂದ್ರಿಯಗಳಿಂದ ಅನುಭವಿಸುವ ಪಂಚವಿಷಯಗಳ ಅಂದರೆ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ವಿಷಯುಗಳು ಶಬ್ದಪ್ರಸಾದ, ಸ್ಪರ್ಶಪ್ರಸಾದ, ರೂಪಪ್ರಸಾದ, ರಸಪ್ರಸಾದ, ಗಂಧ ಪ್ರಸಾದಗಳಾಗಿ ಪರಿಣಮಿಸುವವು. ಹೀಗೆ ಲಿಂಗಮುಖವಾಗಿ ಇಂದ್ರಿಯ ಭೋಗ ಮಾಡಬೇಕು. ಆಗ ಮನುಷ್ಯನ ಶ್ರೋತ್ರ, ನೇತ್ರ, ಘ್ರಾಣ, ಜಿಹ್ವೆ. ತ್ವಕ್ಕುಗಳು ಶಿವನ ಇಂದ್ರಿಯಗಳು. ಅವನ ಶಿರ, ಮುಖ, ಹೃದಯ, ಪಾದ, ಬಾಹುಗಳು ಶಿವನ ಅವಯುವಗಳು. ಅವನ ಅಂತಃಕರಣ ಚತುಷ್ಟಯವು ಅವನ ಪಂಚಪ್ರಾಣಗಳು ಲಿಂಗಮಯುವಾಗುತ್ತವೆ. ಹೀಗೆ ಲಿಂಗಾಂಗಿಯ ಭೋಗವೆಲ್ಲವು ಲಿಂಗಮವಾಗಿರುವದರಿಂದ ಅವನು ಲಿಂಗಭೋಗೋಪಭೋಗಿಯಾಗುವನು. ತನುಮನಭಾವಂಗಳಿಗೆ ಸಂಬಂಧಿಸಿದ ಶುದ್ಧ, ಸಿದ್ಧ, ಪ್ರಸಿದ್ಧ ಪ್ರಸಾದಗಳಿಂದ ತನುವಿಕಾರ, ಮನೋವಿಕಾರ, ಭಾವಭ್ರಮೆಗಳು ಅಳಿಯುವವು. ಪ್ರಸಾದವು ಎರಡು ಬಗೆಯಾಗಿ, ಮೂರುಬಗೆಯಾಗಿ, ಹನ್ನೊಂದುಬಗೆಯಾಗಿ ಹೇಳಲ್ಪಡುತ್ತದೆ. ಪ್ರಸಾದಸೇವನೆಯಿಂದ, ಅಧೋಮುಖಿಯಾದ ಪ್ರಕೃತಿಯ ವಿಕೃತಿಯಳಿದು ಕಾಯಮನ ಭಾವಗಳು ಸಂಸ್ಕೃತಿ, ಸತ್ಕೃತಿಗಳ ನೆಲೆವೀಡಾದಿ ಪ್ರಸಾದಕಾಯ, ಸುಮನ, ಸದ್ಭಾವಗಳೆನಿಸುವವು. ಪ್ರಸಾದಿಗಳು ವೈಷಯಿಕ ವ್ಯಾಮೋಹದಿಂದ ಬಹುದೂರವಿದ್ದು ಲಿಂಗಸ್ವರೂಪರಾಗಿರುವರು. ಇತರ ಮತಾನುಯಾಯಿಗಳು ಯಜ್ಞಯಾಗಾದಿ ಕರ್ಮ, ಯೋಗಾಭ್ಯಾಸ, ಕಷ್ಟಸಾಧ್ಯವಾದ ಕೃಚ್ಛ ಚಾಂದ್ರಾಯಣಾದಿ ತಪಸ್ಸುಗಳನ್ನು ಮಾಡುವದುಂಟು. ಆದರೆ ವೀರಶೈವರು ಅಷ್ಟಾವರಣನಿರತರಾಗಿ, ಮಂತ್ರಮೂಲಕ ಪಾದೋದಕಪ್ರಸಾದ ಗ್ರಾಹಕರಾಗಿ ಲಿಂಗಾಂಗ ಸಾಮರಸ್ಯರೂಪ ನಿಜಸಮಾಧಿಯನ್ನು ಪಡೆಯುವರು.

ಪ್ರಸಾದವು ಪಾದೋದಕಕ್ಕಿಂತಲೂ ಸೂಕ್ಷ್ಮವಾದುದು, ವ್ಯಾಪಕವಾದುದು. ಪಾದೋದಕವು ಮನುಷ್ಯನ ಅಂತರಂಗ ಮತ್ತು ಬಹಿರಂಗಗಳನ್ನು ಶುದ್ಧಗೊಳಿಸುತ್ತದೆ. ಆದರೆ ಪ್ರಸಾದವು ಮನುಷ್ಯನ ಯಾವತ್ತು ಅಂತರಂಗ ಮತ್ತು ಬಾಹ್ಯ ಕ್ರಿಯೆಗಳ ಮೇಲೆ ಪರಿಣಾಮಮಾಡುತ್ತದೆ. ಅವನ ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳು ಅವನ ಇಂದ್ರಿಯಗಳು, ಕರಣಗಳು, ಭಾವ, ಜ್ಞಾನಗಳು ಇವುಗಳ ಮೇಲೆಲ್ಲ ಅದು ತನ್ನ ಪರಿಣಾಮವನ್ನು ಬೀರುತ್ತದೆ.

ಆಹಾರವು ಸಾತ್ವಿಕ, ರಾಜಸ, ತಾಮಸ ಎಂದು ಮೂರು ಬಗೆಯಾಗಿದೆ. ಸಾತ್ವಿಕಾಹಾರ ಸೇವನೆಯಿಂದ ಶಾಂತಿ, ಸತ್ಯ, ವಿನಯ, ಭಕ್ತಿ ಮೊದಲಾದ ಸದ್ಗುಣಗಳು ಉಂಟಾಗುತ್ತವೆ. ರಾಜಸ ಆಹಾರಸೇವನೆಯಿಂದ ಚಂಚಲತೆ, ಡಂಭ ದೊದಲಾದ ಅನಿಷ್ಟಗಳುಂಟಾಗುತ್ತವೆ ತಾಮಸ ಆಹಾರಸೇವನೆಯಿಂದ ಆಲಸ್ಯ, ಕ್ರೌರ್ಯ, ಅಸೂಯೆ, ಮಾತ್ಸರ್ಯ, ಗರ್ವ, ಪರವಧುವಿನಕೂಟ, ಅಭಕ್ಷ್ಯ ಸೇವನೆ ಮೊದಲಾದ ನೀಚಗುಣಗಳು ಹುಟ್ಟುತ್ತವೆ. ಆಧ್ಯಾತ್ಮ

ಜೀವನಮಾಡುವ ಸಾಧಕನು ಆಹಾರವಿಹಾರಾದಿಗಳಲ್ಲಿ ನಿಗ್ರಹಹೊಂದಿರಬೇಕೆಂದು ತತ್ವ ಶಾಸ್ತ್ರಗಳು ಹೇಳುತ್ತವೆ. ಸಾಮಾನ್ಯವಾಗಿ ಊಟ ಮಾಡುವ ಆಹಾರವು ಮೂರುಬಗೆಯ ರೂಪವನ್ನು ಹೊಂದುವದು. ಆಹಾರದ ಸ್ಥೂಲಭಾಗವು ಮಲಮೂತ್ರ ರೂಪದಿಂದ ಹೊರಬಿದ್ದುಹೋಗುವದು. ಅದರ ಒಂದುಭಾಗವು ರಸರಕ್ತಾದಿ ಸಪ್ತಧಾತುಗಳ ಪರಿಣಾಮವನ್ನು ಹೊಂದುವದು. ಇನ್ನೊಂದು ಭಾಗವು ಸೂಕ್ಷ್ಮವಾಗಿ ಮನಸ್ಸಾಗುವದು. ಅಂದರೆ ಸಾತ್ವಿಕಾಹಾರದಿಂದ ಮನದಲ್ಲಿ ಸಾತ್ವಿಕಗುಣ, ರಾಜಸಾಹಾರದಿಂದ ರಜೋಗುಣ, ತಾಮಸಾಹಾರದಿಂದ ತಮೋಗುಣಗಳು ಹುಟ್ಟುವವು.

ವಯೋವೃದ್ಧರೂ, ಜ್ಞಾನವೃದ್ಧರೂ ಆದ ಭೀಷ್ಮಾಚಾರ್ಯರು ಮರಣಶಯ್ಯೆಯಲ್ಲಿ ಮಲಗಿದಾಗ ಪಂಚಪಾಂಡವರನ್ನು ಹತ್ತಿರಕರೆದು "ಸತ್ಯೇಷುಯತಿತವ್ಯಂವಃ" 'ಸತ್ಯಂಹಿಪರಮಂಬಲಂ" "ಸತ್ಯಮೇವಜಯತೇ" "ನಪರದಾರಾನ್ ಗಚ್ಛೇತ್" ಎಂದು ಮುಂತಾಗಿ ಉಪದೇಶಮಾಡುವಾಗ ದ್ರೌಪದಿಯು ಕಂಗಳಿಂದ ಕೆಂಡಕಾರುತ್ತ, ಸಿಡಿಲಿನಂತೆ ಘುಡುಘುಡಿಸುತ್ತ ಸಾಯುವಸಮಯದಲ್ಲಿ ನೀತಿಸಂಹಿತೆಯನ್ನು ಹೇಳುವ ಭೀಷ್ಮಾಚಾರ್ಯರೇ! ತುಂಬಿದರಾಜಸಭೆಯಲ್ಲಿ ಕಾಮಾಂಧರಾದ, ನೀತಿಭ್ರಷ್ಟನಾದ ದುರ್ಯೋಧನ ದುಶ್ಶಾಸನರು ನನ್ನಸೀರೆಯನ್ನು ಸೆಳೆದು ಮಾನಭಂಗ ಮಾಡುವಾಗ ಅವರಿಗೆ ಉಪದೇಶ ಮಾಡದೆ ಮೂಕರಂತೆ ಕುಳಿತಿರಲ್ಲವೇ? ಆಗ ಒಂದೂಶಬ್ದವನ್ನು ನುಡಿಯದೇ ಈಗ ಶಾಸ್ತ್ರಗಳ ಸುರಿಮಳೆಯನ್ನೇ ಸುರಿಸುವಿರಲ್ಲ! ಎನ್ನಲು ವಯೋವೃದ್ಧರಾದ ಭೀಷ್ಮಾಚಾರ್ಯರು ತಂಗೀದ್ರೌಪದಿ, ನೀನು ನುಡಿಯುವದು ನೂರಕ್ಕೆನೂರು ದಿಟವಾದುದು. ತುಂಬಿದ ರಾಜಸಭೆಯಲ್ಲಿ ನನ್ನ ನಾಲಗೆಯಿಂದ ಒಂದೂ ನೀತಿಸಂಹಿತೆಯ ಮಾತು ಬಾರದಿರುವದಕ್ಕೆ ಮುಖ್ಯ ಕಾರಣವೆಂದರೆ ಪಾಪಿಷ್ಠನಾದ ದುರ್ಯೋಧನನ ಅನ್ನವನ್ನುಣ್ಣುತ್ತಿದ್ದುದು. ತತ್ಪರಿಣಾಮವಾಗಿಯೇ ನನ್ನ ನಾಲಿಗೆಯಿಂದ ಒಂದೂ ಒಳ್ಳೇಮಾತುಗಳು ಹೊರಬರಲಿಲ್ಲವೆಂದು ಹೇಳಿದನು. ತಾತ್ಪರ್ಯವಿಷ್ಟೇ! ಯಾವವಿಧವಾದ ಅನ್ನವನ್ನುಣ್ಣುತ್ತೇವೆಯೋ ಆ ಅನ್ನಕ್ಕೆ ಅನುರೂಪವಾದಗುಣಗಳೇ ಮಾನವನಹೃದಯದಲ್ಲಿ ಮೂಡಿಬರುತ್ತವೆ. "ಆಹಾರಶುದ್ಧೌ ಸತ್ವಶುದ್ಧಿಃ" "ಸತ್ವಶುದ್ಧೌಧ್ರುವಾಸ್ಮೃತಿಃ ಎಂದು, ಅಭಿಜ್ಞರು ಹೇಳಿರುವರು.

"ಯದನ್ನಂ ಭಕ್ಷತೇನಿತ್ಯಂ ಜಾಯತೇತಾದೃಶೀಪ್ರಜಾ।
ದೀಪೋ ಭಕ್ಷಯತೇಧ್ವಾಂತಂ ಕಜ್ಜಲಂಚಪ್ರಸೂಯತೇ" ॥

ಯಾವವಿಧವಾದ ಅನ್ನವನ್ನು ಉಣ್ಣುತ್ತೇವೆಯೋ ಆ ಅನ್ನಕ್ಕೆ ಅನುಗುಣವಾದ ಮಕ್ಕಳು ಹುಟ್ಟುವವು. ದೀಪವನ್ನು ಹಚ್ಚಿದಾಕ್ಷಣ ಕತ್ತಲೆಯು ಚದುರಿಹೋಗುವದು. ಅಂದರೆ ದೀಪವು ಕತ್ತಲೆಯನ್ನು ನುಂಗಿದಂತಾಯಿತು. ಕಪ್ಪುಬಣ್ಣದ ಕತ್ತಲೆಯನ್ನು ತಿಂದುದರಿಂದಲೇ ದೀಪವು ಕಾಡಿಗೆಯಂಥ ಕಪ್ಪು ಮಗುವನ್ನು ಹಡೆಯಿತು.

ಆಹಾರಸೇವನೆಗೆ ಅನುರೂಪವಾದ ಗುಣಗಳೇಬರುತ್ತವೆ ಎಂಬಬಗ್ಗೆ ಒಂದುಮಾರ್ಮಿಕ ಕಥೆ ಜನಪದಸಾಹಿತ್ಯದಲ್ಲಿ ಬರುತ್ತದೆ. ಓರ್ವಗುರುಗಳು ಬಹಳದಿವಸದನಂತರ ತಮ್ಮ ಒಬ್ಬಶಿಷ್ಯನ ಮನೆಗೆ ದಯಮಾಡಿಸಿದರು. ಎಂದಿಲ್ಲೊಮ್ಮೆ ಗುರುಗಳು ಬಂದಿರುವರೆಂಬ

ಸಂತೋಷದಿಂದ ಭಕ್ತಿಯಆವೇಶದಲ್ಲಿ ಶಿಷ್ಯನು ಸನಿಹದಲ್ಲಿರುವ ಅಂಗಡಿಕಾರನಲ್ಲಿಗೆ ಹೋಗಿ ಸಾಕಷ್ಟು ಸಾಮಗ್ರಿಗಳನ್ನು ಉದ್ದರಿತಂದು ಮೃಷ್ಟಾನ್ನಭೋಜನ ಮಾಡಿಸಿ ಗುರುಗಳನ್ನು ತಣಿಸಿದನು. ಗುರುಗಳು ಶಿಷ್ಯನ ಭಕ್ತಿಗೆಮೆಚ್ಚಿ ಪೂಜೆ ಪ್ರಸಾದಗಳನ್ನು ಮುಗಿಸಿ ಅಂದು ಪಯಣ ಬೆಳೆಯಿಸದೇ ಮತ್ತೊಂದುದಿನ ಇರುವದಾಗಿ ಹೇಳಿದರು. ಬಡ ಶಿಷ್ಯನಿಗೆ ಒಂದು ದಿನದ ಬಿನ್ನಹಮಾಡುವಲ್ಲಿ ಸಾಕಾಗಿಹೋಗಿತ್ತು. ಮತ್ತೊಂದುದಿನ ಇರುವದಾಗಿ ಹೇಳಿದಾಗ ಶಿಷ್ಯನಿಗೆ ಪೇಚಾಟಬಂದಿತು. ಏನೇಆದರೂ ಗುರುಗಳು ಇರುವೆವೆಂದು ಅಜ್ಞೆ ಮಾಡಿದಾಗ ಅವರ ಗೌರವಕ್ಕೆ ತಕ್ಕಂತೆ ಊಟ ಉಪಚಾರಗಳ ವ್ಯವಸ್ಥೆ ಮಾಡಬೇಕಲ್ಲವೇ!

ಮರುದಿನ ಕೈಚೀಲ ತಕ್ಕೊಂಡು ಸಾಮಾನುಗಳನ್ನು ತರುವದಕ್ಕಾಗಿ ಅಂಗಡಿ ಹೋಗುವಷ್ಟರಲ್ಲಿ ಅಂಗಡಿಕಾರನು ಏನೋ ಒಂದು ಮಹತ್ವದ ಕಾರ್ಯಕ್ಕಾಗಿ ಹೊರಗೆ ಹೋಗಿದ್ದನು. ಸಾಮಾನುಗಳನ್ನು ತರಹೋದ ಬಡಶಿಷ್ಯನು ಎಡಬಲ ನೋಡಿದನು. ಅತ್ತಿತ್ತ ಕತ್ತೆತ್ತಿ ನೋಡಿದನು. ಯಾರೂ ಕಾಣಲಿಲ್ಲ. ಆಗ ಅವಸರದಿಂದ ಬೇಳೆ, ಬೆಲ್ಲ ಅಕ್ಕಿ, ಮೊದಲಾದವುಗಳನ್ನು ಚೀಲದಲ್ಲಿ ತುಂಬಿಕೊಂಡು ಬಂದು ಗುರುಗುಳಿಗೆ ಯಥಾ ಪ್ರಕಾರ ಭೋಜನದವ್ಯವಸ್ಥೆ ಮಾಡಿದನು. ಗುರುಗಳು ಲಿಂಗಪೂಜೆಯನ್ನು ಮುಗಿಸಿ ಪ್ರಸಾದವನ್ನು ಸ್ವಿಕರಿಸಿ ಸಾಯಂಕಾಲ ಪಯಣ ಬೆಳೆಯಿಸಿದರು. ಪಯಣಕ್ಕೆಹೊರಡುವ ಸಮಯದಲ್ಲಿ ಎಂದೆಂದೂ ಪರಧನ, ಪರವಸ್ತುಗಳಿಗಾಗಿ ಆಶೆಮಾಡದ ಗುರುಗಳಿಗೆ ಶಿಷ್ಯನ ಮನೆಯೊಳಗಿದ್ದ ಒಂದು ಬೆಳ್ಳಿಯ ಬಟ್ಟಲವನ್ನು ಕದಿಯಬೇಕೆಂಬ ದುರ್ಬುದ್ಧಿ ಹುಟ್ಟಿತು. ಯಾರಿಗೂ ಗೊತ್ತಾಗದಂತೆ ಗುರುಗಳು ಅದನ್ನು ಕಳವುಮಾಡಿ ಚೀಲದಲ್ಲಿ ಹಾ ಸೇವಕನೊಡನೆ ಪಯಣಬೆಳೆಯಿಸಿ ಒಂದೆರಡು ಮೈಲು ಹೋಗುವಷ್ಟರಲ್ಲಿ ಒಂದು ಹ ಬಂದಿತು. ಗುರುಗಳು ಶೌಚವಿಧಿಯನ್ನು ಮುಗಿಸಿ ಮುಖ ಪಕ್ಷಾಳನ ಮಾಡಿಕೊಂಡು ಕ್ಷಣಕಾಲ ಹಳ್ಳದ ಪ್ರಶಾಂತವಾದ ದಂಡೆಯಲ್ಲಿ ಕುಳಿತರು. ಆಗ ಗುರುಗಳು ಎಂದೆಂದು ಪರಧನ ಪರವಸ್ತುಗಳಿಗಾಗಿ ಆಶೆ ಮಾಡದ ನನಗೆ ಇಂದೇಕ ಶಿಷ್ಯನ ಮನೆಯಲ್ಲಿರುವ ಬೆಳ್ಳಿಯ ಬಟ್ಟಲವನ್ನು ಕದಿಯಬೇಕೆಂಬ ದುರ್ಬುದ್ಧಿ ಹುಟ್ಟಿತು ? ಪರಧನವನ್ನು ಮುಟ್ಟ ಬಾರದೆಂದು ಪರರಿಗೆ ಉಪದೇಶ ಮಾಡುವ ನಾವೇ ಪರಧನವನ್ನು ಮುಟ್ಟಬೇಕೇ ? ಇದು ಮಹಾಪರಾಧ. ಆದದ್ದು ಆಗಿಹೋಯಿತು. ಈಗಾದರೂ ಶಿಷ್ಯರ ಮನೆಯಿಂದ ತಂದ ಬಟ್ಟಲವನ್ನು ತಿರುಗಿ ಅವನಿಗೆ ಮುಟ್ಟಿಸುವದು ಸೂಕ್ತವಾದದ್ದು ಎಂದು ವಿಚಾರಮಾಡಿ ಮರಳಿ ಶಿಷ್ಯನ ಮನೆಗೆ ಬಂದು ಅವನ ಬಟ್ಟಲವನ್ನು ಅವನಿಗೊಪ್ಪಿಸಿ ಅಂದು ಮಾಡಿದ ಮೃಷ್ಟಾನ್ನ ಭೋಜನದ ಸಾಮಗ್ರಿಯನ್ನು ಎಲ್ಲಿಂದ ತಂದೆ ಎಂದು ಶಿಷ್ಯನನ್ನು ಕೇಳಿದರು. ಆಗ ಶಿಷ್ಯನು ಸದ್ಗುರುವೇ ಇಂದಿನ ಸಾಮಗ್ರಿಯು ಕಳುವಿನಿಂದ ತಂದದ್ದು ಎಂದು ಶಿ ಇದ್ದದ್ದನ್ನು ಇದ್ದಕ್ಕಿದ್ದಂತೆಯೇ ಹೇಳಿದನು. ಆಗ ಗುರುಗಳು ಕದ್ದುತಂದ ಪದಾರ್ಥದಿಂದ ಮಾಡಿದ ಅಡಿಗೆಯನ್ನು ಉಂಡದ್ದರಿಂದಲೇ ನಮಗೂ ಬೆಳ್ಳಿಯ ಬಟ್ಟಲವನ್ನು ಕದ್ದು ಯ್ಯುವ ಬುದ್ಧಿಬಂದಿತು ಎಂದು ತಿಳಿದಕೊಂಡರು. ಶುದ್ಧ ಅನ್ನದಿಂದ ಶುದ್ಧ ಬುದ್ಧಿಯು ಅಶುದ್ಧ ಅನ್ನದಿಂದ ದುರ್ಬುದ್ಧಿಯೂ ಹುಟ್ಟುತ್ತವೆ.

ಪದಾರ್ಥವೇ ಬೇರೆ, ಪ್ರಸಾದವೇ ಬೇರೆ. ಪದಾರ್ಥವು ಪ್ರಸಾದವಾಗದು, ಪ್ರಸಾದವು

ಪದಾರ್ಥವಾಗದು. ಪ್ರಸಾದಗ್ರಹಣದಿಂದ ಮನಸ್ಸು ಪರಿಶುದ್ಧವಾಗಿ ಪ್ರಸನ್ನವಾಗುತ್ತದೆ. ಅಮರಗಣಾಧೀಶ್ವರರಲ್ಲಿ, ಬಸವೇಶ್ವರರ ಶಿವಾನುಭವ ಮಂಟಪದಲ್ಲಿ ಪ್ರಸಾದದ ಭೀಮಯ್ಯ, ಪ್ರಸಾದಿ ಭೋಗಣ್ಣ, ಪ್ರಸಾದಿ ಲೆಂಕಬಂಕಣ್ಣ, ಬಿಬ್ಬಿ ಬಾಚಯ್ಯ, ದಾಸೋಹದಸಂಕಣ್ಣ ಮುಂತಾದ ಮಹಾನುಭಾವರು ಪೂಜಾಫಲಗಳೆನಿಸಿದ ಪಾದೋದಕ ಪ್ರಸಾದಗಳಲ್ಲಿ ದೃಢಭಕ್ತಿಯುಳ್ಳವರಿದ್ದರೆಂಬುದು ಅವರ ನಾಮದ ಹಿಂದಿರುವ ವಿಶೇಷಣಗಳಿಂದಲೇ ತಿಳಿದುಬರುವದು.

ಪ್ರಸಾದಿ ಭೀಮಯ್ಯನೆಂಬ ಶಿವಶರಣನು ದಿನದಿನದಲ್ಲಿಯೂ ಜಂಗಮಾರ್ಚನೆ ಮಾಡಿ ಪಾದೋದಕ ಪ್ರಸಾದಗಳನ್ನು ಸ್ವೀಕರಿಸುವ ವ್ರತವನ್ನು ಕೈಕೊಂಡಿದ್ದನು. ಇದರಿಂದ ಅವನು ಶಿವಾನುಭವಿ ಎಂದು ಸುಪ್ರಸಿದ್ಧನಾದನು. ಇದನ್ನು ಕಂಡು ಅಸೂಯೆಯಿಂದ ಹಲವಾರು ಬ್ರಾಹ್ಮಣರು ಪಾದೋದಕ ಪ್ರಸಾದಗಳನ್ನು ಕಟುವಾಗಿ ಟೀಕಿಸಿದರು. ಇದರಿಂದ ಸ್ವಲ್ಪೇ ದಿನದಲ್ಲಿ ನಿಂದಕರಿಗೆ ತೊನ್ನುಹತ್ತಿತು. ಪಶ್ಚಾತ್ತಾಪದಿಂದ ನೊಂದುಕೊಂಡು ಹಿರಿಯರ ಸಲಹೆಯ ಪ್ರಕಾರ ಪ್ರಸಾದಿ ಭೀಮಯ್ಯನು ಉಗುಳಿದ ನೀರಿನಲ್ಲಿ ಸ್ನಾನ ಮಾಡಲು ಅವರಿಗೆ ಹತ್ತಿದ ತೊನ್ನುರೋಗ ವಾಸಿಯಾಗಿ ಶರೀರವು ಚಿನ್ನದಂತೆ ಹೊಳೆಯ ಹತ್ತಿತು. ಪ್ರಸಾದವು ದೇಹಕ್ಕೆ ಅಂಟಿದ ರೋಗವನ್ನು ಕಳೆಯುವದಲ್ಲದೆ, ಸೂಕ್ಷ್ಮದೇಹಕ್ಕೆ ಸಂಬಂಧಿಸಿದ ಭವರೋಗವನ್ನೂ ಕಳೆಯುವದು.

ಆಧ್ಯಾತ್ಮಶಾಸ್ತ್ರದಲ್ಲಿ ತಪಸ್ಸು, ಕರ್ಮ, ಜಪ, ಧ್ಯಾನ, ಜ್ಞಾನ ಇವುಗಳ ನಿರೂಪಣೆಯು ಬರುತ್ತದೆ. ತಪಸ್ಸೆಂದರೆ ಶಿವಪೂಜಾ ಸಾಮಗ್ರಿಗಳನ್ನು ಅಣಿಮಾಡುವದಕ್ಕೆ ದೇಹವನ್ನು ದಂಡಿಸುವದು. ಕರ್ಮವೆಂದರೆ ಅಷ್ಟವಿಧಾರ್ಚನೆ, ಷೋಡಶೋಪಚಾರಗಳಿಂದ ಶಿವಲಿಂಗ ಪೂಜೆ ಮಾಡುವದು. ಜಪವೆಂದರೆ ಪಂಚಾಕ್ಷರ ಮಂತ್ರಾನುಷ್ಠಾನವೆಂದು, ಧ್ಯಾನವೆಂದರೆ ಪರಾತ್ಪರವೆನಿಸಿದ ಶಿವಲಿಂಗಮೂರ್ತಿಯನ್ನು ಜಾನಿಸುವದು, ಜ್ಞಾನವೆಂದರೆ ಶಿವಾನುಭವ ಶಾಸ್ತ್ರದ ಪರಿಜ್ಞಾನವೆಂದು ಹೇಳುವರು. ಅಪ್ರಾಕೃತರಾದ ವೀರಶೈವರು ಇದನ್ನೇ ಪಂಚವಿಧವಾದ ಶಿವಯಜ್ಞಗಳೆಂದು ಹೇಳುವರು. ಪ್ರಾಕೃತರು ಹೇಳುವ ಯಜ್ಞಾದಿ ವಿಧಿಗಳಿಗೂ, ಅಪ್ರಾಕೃತರಾದ ವೀರಶೈವರು ಹೇಳುವ ಯಜ್ಞಾದಿ ವಿಧಿಗಳಿಗೂ ಅಜಗಜಾಂತರವಿರುವದು. ಶಿವಾರ್ಚನ, ಶಿವಾರ್ಪಿತ, ಶಿವಾನುಭವಗಳು ಶಿವಯಜ್ಞಗಳೆಂದು ಹೇಳಲ್ಪಡುತ್ತವೆ. ಉಣ್ಣದ, ಉಡದ, ಬೇಡದ, ಕಾಡದ ಲಿಂಗಕ್ಕೆ ನೈವೇದ್ಯ ಮಾಡುವದಕ್ಕಿಂತಲೂ ಪ್ರತ್ಯಕ್ಷ ಉಣ್ಣುವ, ಉಡುವ, ಬೇಡುವ, ಕಾಡುವ ಜಂಗಮಕ್ಕೆ ನೀಡಿ ಸಂತೃಪ್ತಿಯಾದರೆ ಲಿಂಗವೂ ಸಂತೃಪ್ತಿಯಾಗುವದು. ಇದನ್ನೆ ಜಗದ್ಗುರು ರೇಣುಕರು ಸಿದ್ಧಾಂತ ಶಿಖಾಮಣಿಯಲ್ಲಿ–

"ಶಿವಯೋಗಿನಿ ಸಂತೃಪ್ತೇ ತೃಪ್ತೋಭವತಿ ಶಂಕರಃ ।
ತತ್ತೃಪ್ತ್ಯಾತನ್ಮಯಂ ವಿಶ್ವಂ ತೃಪ್ತಿಮೇತಿಚರಾಚರಂ ॥"

ಎಂದು ಹೇಳಿರುವರು. ಜಂಗಮಾರ್ಚನೆ ಮಾಡದ ಕೇವಲ ಲಿಂಗಪೂಜಕರನ್ನು ಕುರಿತು ಶ್ರೀ ಬಸವೇಶ್ವರರು–

"ಆಜುತ್ತ ಹಾಡುತ್ತ ಭಕ್ತಿಯ ಮಾಡಬಹುದು ಲಿಂಗಕ್ಕೆ !
ಆದು ಬೇಡದು ಬೆಸಗೊಂಡು
ತಂದೊಮ್ಮೆ ನೀಡಬಹುದು.
ಕಾಡುವ ಬೇಡುವ ಜಂಗಮ ಬಂದರೆ
ನೀಡಲು ಬಾರದು ಕೂಡಲಸಂಗಮದೇವ ॥"

"ಉಂಬುವ ಜಂಗಮ ಬಂದರೆ ನಡೆಎಂಬರಯ್ಯ,
ಉಣ್ಣದ ಲಿಂಗಕ್ಕೆ ಬೋನವ ಹಿಡಿವರಯ್ಯ ॥"

ಎಂದು ವಿಡಂಬನೆ ಮಾಡಿರುವರು.

ಜೈಮಿನಿ ಋಷಿಗಳು ಹೇಳುವ ಪೂರ್ವಮೀಮಾಂಸೆಯಲ್ಲಿ ಜ್ಯೋತಿಷ್ಟೋಮಾದಿ ಯಜ್ಞಗಳ ವಿಧಿವಿಧಾನಗಳು ಅಂದರೆ ಹೋಮಕುಂಡ ನಿರ್ಮಾಣ, ದೇವತೆಗಳ ಪ್ರಾಮುಖ್ಯಸಿದ ಅಗ್ನಿ ಪ್ರತಿಷ್ಠಾಪನೆ, ಹವಿರ್ದ್ರವ್ಯಗಳ ನಿರೂಪಣ ಮೊದಲಾದವು ಬರುತ್ತವೆ. ಅಗ್ನಿ ಕುಂಡದಲ್ಲಿ ವಿವಿಧ ಹವಿರ್ದ್ರವ್ಯಗಳನ್ನು ಸುರುವಿ ಮಾಡುವ ಯಜ್ಞಕ್ಕಿಂತಲೂ ಜೀವಂತ ದಲಿತರ ದೇಹದಲ್ಲಿರುವ ಜಠರಾಗ್ನಿಯಲ್ಲಿ ಭಕ್ಷ್ಯಭೋಜ್ಯಾದಿಗಳನ್ನು ಹಾಕಿ ಸಂತೃಪ್ತಿ ಪಡಿಸುವದೇ ಶ್ರೇಷ್ಠವಾದ ಮಹಾಯಜ್ಞವು ಎಂದು ಸ್ವಾಮಿರಾಮತೀರ್ಥರು "ಯಜ್ಞ ರಹಸ್ಯ ಎಂಬ ತಮ್ಮ ವ್ಯಾಖ್ಯಾನದಲ್ಲಿ ಹೇಳಿರುವರು.

ಶ್ರೀಕೃಷ್ಣ ಪರಮಾತ್ಮನು ಭಗವದ್ಗೀತೆಯಲ್ಲಿ–

''ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।
ಪ್ರಾಣಾಪಾನ ಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಂ ॥''

ವಿಶ್ವದಲ್ಲಿರುವ ಸಮಸ್ತ ಪ್ರಾಣಿಗಳ ಉದರದಲ್ಲಿ ಜಠರಾಗ್ನಿಯಾಗಿ ನಾನೇ ಪಾಕಕ್ಕೆ ಸಹಕಾರಿಗಳಾದ ಪ್ರಾಣಾಪಾನ ವಾಯುಗಳಿಂದ ಅಂದರೆ ಉಚ್ಛ್ವಾಸ ನಿಶ್ವಾಸಗಳಿಂದ ದೇದೀಪ್ಯಮಾನವಾಗಿ ಪ್ರಾಣಿಗಳು ಉಣ್ಣುವ ಭಕ್ಷಭೋಜ್ಯಾದಿಗಳನ್ನು ಬೇಯಿಸುತ್ತೇನೆ ಎಂದು ಹೇಳಿರುವನು. ಗೋವಿನ ಮೈದೊಳೆದು, ಮೇಯಿಸಿ, ನೀರ್ಗುಡಿಸಿ ಸಾಕಿಸಲಹುವದು ಹಾಲಿಗಾಗಿಯಲ್ಲವೇ ? ಸಸಿಯನ್ನು ನೆಟ್ಟು ನೀರುಣಿಸಿ, ಗೊಬ್ಬರ ಹಾಕಿ ದನಕರುಗಳು ತಿನ್ನದಂತೆ ಕಾಪಾಡುವದು ಹಣ್ಣು ಪಡೆಯುವದಕ್ಕಾಗಿಯಲ್ಲವೇ ? ಹಾಗೆಯೇ ಹರಗುರುಚರ ಮೂರ್ತಿಗಳ ಅರ್ಚನೆ ಮಾಡುವದು ಅಲೌಕಿಕ ಫಲವೆನಿಸಿದ ಪಾದೋದಕ ಪ್ರಸಾದಗಳ ಪ್ರಾಪ್ತಿಗಾಗಿಯೆ. ಅಷ್ಟವಿಧಾರ್ಚನೆ, ಷೋಡಶೋಪಚಾರಗಳಿಂದ ವಿಧಿಪೂರ್ವಕ ಇಷ್ಟ ಲಿಂಗವನ್ನು ತ್ರಿಕಾಲದಲ್ಲಿಯೂ ತಪ್ಪದೇ ಪೂಜಿಸುವ ಸದ್ಭಕ್ತನು ಜಂಗಮಾರ್ಚನೆಯಾಗಿ ಪಾದೋದಕ ಪ್ರಸಾದಗಳು ಸಿದ್ಧವಾದಾಗ ಆತನು ಕೂಡಲೇ ತನ್ನ ಲಿಂಗಪೂಜೆಯನ್ನು ಬಿಟ್ಟು ಜಂಗಮಮೂರ್ತಿಗೆ ಸಾಷ್ಟಾಂಗ ಮಾಡಿ ಪಾದೋದಕ ಪ್ರಸಾದ ಕೈಕೊಳ್ಳಲು ಅಣಿಯಾಗುವನು. ಆದರ ಕಾರಣವಿಷ್ಟೇ ! ಅರ್ಚನಾದಿ ಕ್ರಿಯೆಗಳನ್ನು ಮಾಡಿ ಬೇಡುವ ಫಲವೇ ಅಂದರೆ ಪಾದೋದಕ ಪ್ರಸಾದಗಳೇ ದೊರೆತಾಗ ಮತ್ತೇಕೆ ಲಿಂಗಪೂಜೆಯನ್ನು ಮಾಡಬೇಕು ? ಸಾಧ್ಯವು ಕರಗತವಾದಾಗ ಮತ್ತೆ ಸಾಧ್ಯದ ಹಂಬಲದಿಂದ ಸಾಧನ

ದು ಮಂದಮತಿಯ ಲಕ್ಷಣವಲ್ಲವೇ ?

"ದಿನದಿನದುಚಿತವೇಳೆಯೊಳುಪಚರಿಪುದು ನಿನಗೆ
ಕುಳವೆಲೆಯೋಗಿ ಬಿಡದೆವನು । ....
ಶಿವನ ಸುಖಮಯವಾದ ಪಾದತೀರ್ಥವನು
ಶಿವನ ಕರುಣಾತ್ಮವಹ ಸುಪ್ರಸಾದವನು ॥"

ಪ್ರತಿಯೊಬ್ಬ ವೀರಶೈವನು ತಪ್ಪದೇ ಶಿವಲಿಂಗಾರ್ಚನೆ ಮಾಡಿ ಪಾದೋದಕ, ಪ್ರಸಾದಗಳನ್ನು ಸ್ವೀಕರಿಸಬೇಕು. ಇದುವೇ ವೀರಶೈವನಲಕ್ಷಣವೆಂದು ಶ್ರೀಮನ್ನಿಜಗುಣ ಶಿವಯೋಗಿಗಳು ಹೇಳಿರುವರು. ಸಮಾಜಸೇವೆಗಾಗಿಯೇ ಜೀವನವನ್ನು ಮೀಸಲಾಗಿರಿಸಿದ ಹಾನಗಲ್ಲ ಕುಮಾರಸ್ವಾಮಿಗಳು, ಧಾರವಾಡದ ಮೃತ್ಯುಂಜಯ ಮಹಾಸ್ವಾಮಿಗಳವರು ಲಿಂಗಪೂಜೆಯನ್ನು ಸಾಂಗೋಪಾಂಗವಾಗಿ ಮಾಡಲು ಅವಕಾಶ ದೊರೆಯದ ಕಾರಣ ಪಾದೋದಕ ಪ್ರಸಾದಗಳಿಗಾಗಿಯೇ ತಮ್ಮಬಳಿ ಕ್ರಿಯಾಮೂರ್ತಿಗಳನ್ನು ಇಟ್ಟುಕೊಂಡು ಅವರು ಪಾದೋದಕ, ಸಿದ್ಧಪಾಡಲ್ಲೇ ಸಂಕ್ಷಿಪ್ತ ಲಿಂಗಾರ್ಚನೆಯನ್ನು ಮಾಡಿ ಕ್ರಿಯಾಮೂರ್ತಿಗಳಿಗೆ ಸಾಷ್ಟಾಂಗಮಾಡಿ ಪಾದೋದಕ ಪ್ರಸಾದಗಳನ್ನು ಸ್ವೀಕರಿಸುತ್ತಿದ್ದರು. ಇದಕ್ಕೆ ಸಹಚಾರಣೆ ಎನ್ನುವರು. ಒಂದು ವೇಳೆ ಜಂಗಮವರೇಣ್ಯರು ದೊರೆಯುವದು ಅಸಾಧ್ಯವಾದಲ್ಲಿ ಗುರು ಕರುಣಿಸಿದ ಲಿಂಗದಲ್ಲಿಯೇ ಗುರುಜಂಗಮರಿರುವರೆಂದು ಭಾವಿಸಿ ಲಿಂಗೋದಕವನ್ನು ಸ್ವೀಕರಿಸುವದೇ ಸಂಬಂಧಾಚರಣೆಯು ಎಂದು ಹೇಳಲಾಗಿದೆ.

ಪೂಜ್ಯವಸ್ತುಗಳಿಗೆ ಭೋಜ್ಯ ವಸ್ತುಗಳನ್ನು ಸಮರ್ಪಣ ಮಾಡಿ ಮರಳಿ ಅವರಿಂದ ಬಂದುದು ಪ್ರಸಾದವೂ, ಆ ಪ್ರಸಾದವನ್ನು ಸ್ವೀಕರಿಸಿದವನು ಪ್ರಸಾದಿಯೂ ಎಂಬುದು ದಿಟವಾದರೂ ಆ ಪ್ರಸಾದ, ಪ್ರಸಾದಿ ಶಬ್ದಗಳು ಇಷ್ಟೇ ಅರ್ಥದಲ್ಲಿ ವಿರಾಮ ಪಡೆಯದೇ ಇನ್ನೂ ವ್ಯಾಪಕವಾದ ಅರ್ಥದಲ್ಲಿ ಉಪಯೋಗಿಸಲ್ಪಟ್ಟವೆ. ಅಲ್ಲಮ ಪ್ರಭುದೇವರು–

"ಒಕ್ಕುದು ಪ್ರಸಾದವೆಂಬರು, ಮಿಕ್ಕುದು ಪ್ರಸಾದವೆಂಬರು
ಒಕ್ಕುದು ಮಿಕ್ಕುದನಲ್ಲಾ ಬೆಕ್ಕುಕೊಳ್ಳದೇ ?
ಒಕ್ಕು ಮಿಕ್ಕು ಹೋಗುವ ಸಂಚಸಕೀಲವಬಲ್ಲರೆ
ಗುಹೇಶ್ವರ ಲಿಂಗದಲ್ಲಿ ಆತನೇ ಪರಮಪ್ರಸಾದಿ ॥"

ದೇವರಿಗೋ, ಗುರುಗಳಿಗೋ, ಅರ್ಪಿಸಿದ್ದು ಪ್ರಸಾದವಾಗಿ, ಆ ಪ್ರಸಾದವನ್ನು ಸ್ವೀಕರಿಸಿದವನು ಪ್ರಸಾದಿಯಾದರೆ ಒಂದು ಬೆಕ್ಕು ಕೂಡ ಅಂತಹ ಪ್ರಸಾದವನ್ನು ತಿನ್ನುವದಿಲ್ಲವೇ? ಆ ಬೆಕ್ಕು ಪ್ರಸಾದಿಯೇ ? "ಒಕ್ಕಮಿಕ್ಕು ಹೋಗುವ ಸಂಚ ಸಕೀಲವ ಬಲ್ಲವನು, ಅಂದರೆ ತನ್ನನ್ನೇ ಪ್ರಸಾದವನ್ನಾಗಿ ಅರ್ಪಿಸಿಕೊಂಡು ಆ ಭೂಮಿಕೆಯನ್ನೂ ಮೀರಿ ಮೇಲೇರಿ ಹೋಗುವ ರಹಸ್ಯವನ್ನು ಅರಿತವನು ಪರಮಪ್ರಸಾದಿಯು ಎಂದು ಹೇಳಿರುವರು. ದೇವರ ದಾಸಿಮಯ್ಯನೂ–

"ತರ್ಕೈಸಿ ನಿಮ್ಮವನಪ್ಪಿಕೊಂಡೊಡೆ ಅದೇ ನಿಶ್ಚಯ ಪ್ರಸಾದ ಕಾಣಾ"

ದೇವನನ್ನು ಅಪ್ಪಿಕೊಳ್ಳುವದು ನಿಜವಾದ ಪ್ರಸಾದ ತನ್ನನ್ನೇ ಶಿವನಿಗೆ ಅರ್ಪಿಸಿಕೊಂಡ ವನು ಮತ್ತು "ಈಶಾವಾಸ್ಯಮಿದಂ ಸರ್ವಂ" "ಸರ್ವಂ ಶಿವಮಯಂ ಜಗತ್" ಎಂಬಂತೆ ಈ ವಿಶ್ವವೆಲ್ಲಾ ಶಿವನ ಪ್ರಸಾದವೆಂದು ಕಾಣಬಲ್ಲವನು ನಿಜವಾದ ಪ್ರಸಾದಿಯು. ಇಂತಹ ಒಂದು ಭವ್ಯ ಜೀವನದ ಆದರ್ಶವನ್ನು ಪ್ರಸಾದಿಯು ತನ್ನ ದೈನಂದಿನ ಬಾಳಿ ನಲ್ಲಿ ಕಂಡು ನಲಿದಾಡುವನು. ತನ್ನನ್ನೇ ಶಿವನಿಗರ್ಪಿಸಿ ದೇವನ ಮಹಾಪ್ರಸಾದವನ್ನು ಪಡ ಯುವನು ಎಂದು ಹೇಳಿರುವನು.

"ಶಿರಮಂ ಜಿಹ್ವೆಯನಕ್ಷಿಯಂ ಕರಮನೇಕೀವವ್ಯ ರ್ಥಾಭಕ್ತಿತ ।
ತ್ಪರಭಾವಂ ನೆಲೆಗೊಳ್ಳದಜ್ಞರಿದರಿಂದೇಂ ಸಿದ್ಧಿ ತನ್ನಂ ಶಿವಂ ।
ಗಿರದೀವುತ್ತಮಸತ್ವಮಂ ಮರೆದು ತನ್ನಿಂದನ್ಯಮಪ್ಪಂಗಮಂ ।
ಅರಿದಿತ್ತಲ್ಲಿ ವಿಮುಕ್ತಿ ಸೌಖ್ಯ ಪದಮುಂಟೇ ಪೇಳ್ ಶಿವಾವಲ್ಲಭಾ ।"

ತನ್ನನ್ನೇ ಲಿಂಗಕ್ಕರ್ಪಿಸುವ ಶ್ರೇಷ್ಠವಾದ ಆತ್ಮಾರ್ಪಣ ಭಕ್ತಿಯನ್ನರಿಯದೇ ಮೂಢರು ಅದನ್ನು ಮರೆತು ತನ್ನಿಂದನ್ಯವಾದ ತಲೆಯನ್ನೋ, ನಾಲಿಗೆಯನ್ನೋ, ಕಣ್ಣನ್ನೋ, ಕೈಯನ್ನೋ ವ್ಯರ್ಥವಾಗಿ ದೇವರಿಗೆ ಕೊಡುವರು. ಇದರಿಂದ ಶಿವಾನುಗ್ರಹವಾದೀತೇ? ದೇವರು ಪ್ರಸನ್ನನಾಗುವನೇ ? ಎಂದು ವಗ್ಗ್ಗಿಯ ಮಾಯಿದೇವರು ಹೇಳಿರುವರು.

ಶ್ರೀ ಬಸವೇಶ್ವರರು ಸಂಸ್ಥಾಪಿಸಿದ ಶಿವಾನುಭವ ಮಂಟಪದ ಅಧ್ಯಕ್ಷರಾದ ವಿರಾಗ ವಿಭು ಪ್ರಭುದೇವರ ಸಾನಿಧ್ಯದಲ್ಲಿ ಸ್ವಾನುಭಾವದ ನೆಲೆಯನ್ನರಿತ ಅಕ್ಕಮಹಾದೇವಿಯು ತನ್ನ ಯೋಗಾಂಗತ್ರಿವಿಧಿಯಲ್ಲಿ–

"ಹತ್ತು ಸಾಗರದೊಳಗೆ ಮತ್ತೆ ಜಳಕವ ಮಾಡಿ ।
ಹತ್ತೊಂದುವಿಧದ ಉಣಿಸುಗಳ ನಾನುಂಡು ।
ಕಿತ್ತೆನು ಮಾಯದ ಬಲೆಗಳ ।। "

ಎಂದು ಹಾಡಿದ್ದಾಳೆ. ಲೋಕದಲ್ಲಿ ಲಕ್ಷೋಪಲಕ್ಷ ಜನರು ತ್ರಿವೇಣೀ ಸಂಗಮದಲ್ಲಿ,ಗಂಗಾದಿ ಪಾವನ ತೀರ್ಥಗಳಲ್ಲಿ, ಸಮುದ್ರದಲ್ಲಿ ಸ್ನಾನಮಾಡಿ ದೇವತಾ ಸಂದರ್ಶನ ಪಡೆದು ಪ್ರಸಾದ ಸ್ವೀಕರಿಸಿ ಕೃತಾರ್ಥರಾದೆವೆಂದು ಭಾವಿಸುವರು. ನಾನು ಹತ್ತು ಸಾಗರದಲ್ಲಿ ಸ್ನಾನಮಾಡಿ ಅಂದರೆ ದಶವಿಧ ಪಾದೋದಕವನ್ನು ಸ್ವೀಕರಿಸಿ, ಏಕಾದಶ ಪ್ರಸಾದಗ್ರಹಣ ಮಾಡಿ ಮಾಯೆಯ ಪಾಶವನ್ನು ಹರಿದೊಗೆದು ಮುಕ್ತಳಾದೆನು ಎಂದು ಮಹಾದೇವಿಯಕ್ಕ ಹೇಳಿರುವಳು.

ಕಲ್ಯಾಣ ಪಟ್ಟಣವು ಚಾಲುಕ್ಯರ ರಾಜಧಾನಿಯಾಗಿ "ನಾಸೀದಸ್ತಿ ಭವಿಷ್ಯತಿ ಕ್ಷಿತಿತಲೇ ಕಲ್ಯಾಣಕಲ್ಪಂಪುರಂ ।" ಅಂದರೆ ಈ ಲೋಕದಲ್ಲಿ ಕಲ್ಯಾಣ ಪಟ್ಟಣಕ್ಕೆ ಸಮಾನವಾದ ನಗರವು ಹಿಂದೆ ಇರಲಿಲ್ಲ, ಈಗ ಇಲ್ಲ, ಮುಂದೆ ಆಗುವದಿಲ್ಲ ಎಂಬ ಘನತೆಗೌರವಗಳನ್ನು ಪಡೆದಿತ್ತು. ಆ ಪಟ್ಟಣವನ್ನು ಚಕ್ರವರ್ತಿಯಾದ ಬಿಜ್ಜಳ ಭೂಪಾಲನು ಆಳುತ್ತಿದ್ದನು. ದ್ವಿತೀಯ ಶಂಭು ಎನಿಸಿದ ಶ್ರೀ ಬಸವೇಶ್ವರರು ಮಹಾಮಂತ್ರಿಯಾಗಿದ್ದರು. ಅವರು

ಮುಮುಕ್ಷುಗಳ ಆತ್ಮೋನ್ನತಿಗಾಗಿ, ಮನ ಬುದ್ಧಿಗಳ ವಿಕಾಸಕ್ಕಾಗಿ ವೀರಶೈವ ಷಟ್‌ಸ್ಥಲ ಸಿದ್ಧಾಂತದ ಮೂವತ್ತಾರು ಮೂಲತತ್ತ್ವಗಳ ಪ್ರತೀಕಗಳೇನೋ ಎಂಬಂತಿರುವ ಮೂವತ್ತಾರು ಕಂಬಗಳು, ಷಟ್‌ಸ್ಥಲಗಳನ್ನು ಸೂಚಿಸುವಂತಿರುವ ಆರು ಸೋಪಾನಗಳು, ಅಷ್ಟಾವರಣ ಪಂಚಾಚಾರ ಸೂಚಕ ಪ್ರಭಾವಳಿ, ಓಂಕಾರಸೂಚಕವಾದ ಗದ್ದುಗೆಯು ಇವುಗಳಿಂದ ಕೂಡಿದ ಶೂನ್ಯಪೀಠವನ್ನು ಅನುಭವಮಂಟಪದಲ್ಲಿ ವಿರಚಿಸಿದ್ದರು. ಅನುಭವ ಮಂಟಪದ ಮಹಾದ್ವಾರದ ಮೇಲ್ಭಾಗದಲ್ಲಿ "ನುಡಿದಂತೆನಡೆ ನಡೆದಂತೆನುಡಿ," "ನಿನ್ನ ನೀನರಿತುಕೋ" ಎಂದು ಬರೆಯಲಾಗಿತ್ತು. ಅನುಭವಮಂಟಪದ ಕಾಲದಲ್ಲಿ ೧೨೦೦೦ ಷಟ್‌ಸ್ಥಲಬ್ರಹ್ಮಿಗಳೂ, ೭೭೦ ಅಮರಗಣಾಧೀಶ್ವರರೂ, ಲಕ್ಷದ ಮೇಲೆ ೯೬ ಸಾವಿರ ಮಾಹೇಶ್ವರರೂ ಇದ್ದರೆಂದು ತಿಳಿದುಬರುವದು. ಈ ಅನುಭವಮಂಟಪಕ್ಕೆ ಅಧೀನವಾಗಿ, ಪ್ರಸಾದಮಂಟಪ, ವಿಶಾಲಮಂಟಪ, ಜ್ಞಾನಪ್ರಕಾಶ ಮಂಟಪ, ವಿಚಾರಮಂಟಪಗಳಿದ್ದು ಮೊದಲು ಶರಣರು ಈ ಮಂಟಪದಲ್ಲಿ ಚರ್ಚೆಮಾಡಿ ಕೊನೆಯತೀರ್ಮಾನಕ್ಕೆ ಅನುಭವ ಮಂಟಪಕ್ಕೆ ಬರುತ್ತಿದ್ದರಂತೆ. ಅನುಭವಮಂಟಪವು ಏಕಮೇವಾದ್ವಿತೀಯ ಆಧ್ಯಾತ್ಮಸಂಸ್ಥೆವೆನಿಸಿ ವೈಶಿಷ್ಟ್ಯಪೂರ್ಣವಾಗಿತ್ತು. ಉಪನಿಷತ್ಕಾಲದೊಳಗೆ ಋಷ್ಯಾಶ್ರಮದಲ್ಲಿನಡೆಯುವ ವಿಚಾರಗೋಷ್ಠಿಗಳಾಗಲಿ, ಜನಕನ ಆಸ್ಥಾನದಲ್ಲಿ ಚರ್ಚಿಸುವ ಜಿಜ್ಞಾಸಾಮಂದಿರಗಳಾಗಲಿ, ಬುದ್ಧನಕಾಲದ ವಿಹಾರಗಳಾಗಲಿ, ಜೈನರಕಾಲದ ಬಸದಿಗಳಾಗಲಿ, ಯಾಜ್ಞವಲ್ಕ್ಯ ಮೈತ್ರೇಯಿ ಸಂವಾದವಾಗಲಿ, ಗ್ರೀಕದೇಶದ ಪ್ಲೇಟೋನ ಸಂಭಾಷಣೆಗಳಾಗಲಿ ಅನುಭವ ಮಂಟಪಕ್ಕೆ ಸರಿಯಾಗಲಾರವು.

ದೇಹದಿಂದ ಮಾಡುವ ಆಡಂಬರದ ದೈಹಿಕ ಕ್ರಿಯೆಗಳಾಗಲಿ, ವೃಥಾ ಕಂಠಶೋಷಣದಿಂದ ಮಾಡುವ ಮೌಖಿಕವಾದವಿವಾದಗಳಾಗಲಿ, ಬುದ್ಧಿಗೆ ಕಸರತ್ತನ್ನುಂಟುಮಾಡುವ ತರ್ಕವಿತರ್ಕಗಳಾಗಲಿ, ಅನುಭಾವಿಗಳ ಅನುಭವೋಕ್ತಿಯ ಮುಂದೆ ಹೇಳಹೆಸರಿಲ್ಲದೆ ಹೊರಟುಹೋಗುವವು. ಅಂತೆಯೇ ಬ್ರಹ್ಮಸೂತ್ರಕಾರರು-

"ತರ್ಕಾಪ್ರತಿಷ್ಠಾನಾತ್" ಎಂದೂ, ವಚನಕಾರರು

"ವೇದವೆಂಬುದು ಓದಿನಮಾತು, ಶಾಸ್ತ್ರವೆಂಬುದು ಸಂತೆಯಸುದ್ದಿ, ಪುರಾಣವೆಂಬುದು ಪುಂಡರಗೋಷ್ಠಿ, ತರ್ಕವೆಂಬುದು ತಗರ ಹೋರಾಟ ...ಎಂದೂ ಹೇಳಿರುವರು.

"ವೇದವೇಹಿರಿದೆಂದು ವಾದವನುಮಾಡುವಿರಿ ।
ವೇದದೊಳಗೇನಿಹುದು ಅನುಭವಿಯು ।
ವೇದವೇ ವೇದ ಸರ್ವಜ್ಞ ॥ ಎಂದು ಕವಿ ಜನತೆಯ ಅನುಭವಕ್ಕೇನೇ ಪ್ರಾಶಸ್ತ್ಯವನ್ನಿತ್ತಿದ್ದಾನೆ.

"ಅನುಭಾವವೆಂಬುದು ಅಂತರಂಗದರತ್ನ, ಅನುಭಾವವೆಂಬುದು ಆತ್ಮವಿದ್ಯೆ, ಅನುಭಾವವೆಂಬುದು ನಿಜನಿವಾಸದಲ್ಲಿರಿಸುವದು ಮುಂತಾಗಿ ಶರಣರು ಹೇಳುವ ಸೂಕ್ತಿಗಳು ಅನುಭಾವದ ಮಹತ್ವವನ್ನೇ ಸಾರುತ್ತವೆ. ಷಟ್‌ಸ್ಥಲಚಕ್ರವರ್ತಿ ಚನ್ನಬಸವಣ್ಣನವರು-

" ಅನಂತಕಾಲಕೋಟಿ ತರುಮರಾದಿಗಳಲ್ಲಿ
ಜಪತಪಮಾಡುವದಕ್ಕಿಂತ ಒಂದುದಿನದ ಗುರುಚರಣ
ಸೇವೆಸಾಲದೇ ? ಅನಂತಕಾಲ ಗುರುಚರಣ ಸೇವೆ
ಮಾಡುವದಕ್ಕಿಂತ ಒಂದುದಿನದ ಲಿಂಗಪೂಜೆಸಾಲದೇ ?
ಅನಂತಕಾಲ ಲಿಂಗಪೂಜೆ ಮಾಡುವದಕ್ಕಿಂತ ಒಂದು
ದಿನದ ಜಂಗಮಸಂತೃಪ್ತಿ ಸಾಲದೇ ? ಅನಂತಕಾಲ
ಜಂಗಮ ಸಂತೃಪ್ತಿ ಮಾಡುವದಕ್ಕಿಂತ ಒಂದು
ನಿಮಿಷ ನಿಮ್ಮ ಶರಣರ ಅನುಭಾವ ಸಾಲದೇ ?
ಕೂಡಲ ಚನ್ನಸಂಗಮದೇವಾ" ॥

ಎಂಬ ವಚನದಲ್ಲಿ ಜಪ, ತಪ, ಗುರುಸೇವೆ, ಲಿಂಗಪೂಜೆ, ಜಂಗಮಸಂತೃಪ್ತಿ ಮೊದಲಾದವುಗಳನ್ನು ಅನಂತಕಾಲ ಮಾಡುವದಕ್ಕಿಂತಲೂ ಒಂದು ನಿಮಿಷ ಶರಣರೊಡನೆ ಅನುಭಾವಗೋಷ್ಠಿ ಮಾಡುವದು ಮೇಲೆಂದು ಹೇಳಿರುವರು.

" ಅಯ್ಯಾ ನಿಮ್ಮನುಭಾವಿಗಳ ಸಂಗದಿಂದ
ಎನ್ನ ತನು ಶುದ್ಧವಾಯಿತ್ತು,
ಅಯ್ಯಾ ನಿಮ್ಮನುಭಾವಿಗಳ ಸಂಗದಿಂದ
ಎನ್ನ ಮನ ಶುದ್ಧವಾಯಿತ್ತು,
ಅಯ್ಯಾ ನಿಮ್ಮನುಭಾವಿಗಳೆನ್ನನೊರೆದೊರೆದು
ಅಗಿ ಮಾಡಿದ ಕಾರಣ ಚನ್ನಮಲ್ಲಿಕಾರ್ಜುನನ
ನಿಮಗಾನು ತೊಡಿಗೆಯಾದೆನು "

" ಮರಮರ ಮಥನಿಸಿ ಕಿಚ್ಚು ಹುಟ್ಟಿ ।
ಸುತ್ತಣ ತರುಮರಾದಿಗಳ ಸುಡಲಾಯಿತ್ತು,
ಆತ್ಮವಾತ್ಮ ಮಥನಿಸಿ ಅನುಭಾವ ಹುಟ್ಟಿ
ತನುಗುಣಾದಿಗಳ ಸುಡಲಾಯಿತ್ತು,
ಇದು ಕಾರಣ ನಿಮ್ಮ ಮಹಾನುಭಾವಿಗಳ
ಅನುಭಾವವ ತೋರಿ ಎನ್ನೊಡಲನುಳುಹಿಕೊಳ್ಳಾ ಚನ್ನಮಲ್ಲಿಕಾರ್ಜುನಾ"

" ಅರುಹಿನತೃಪ್ತಿಗೆ ಅನುಭಾವವೇ ಆಶ್ರಯ,
ಲಿಂಗಾನುಭಾವದಿಂದ ನಿಮ್ಮ ಕಂಡೆನ್ನ ಮರೆದೆ ಕಾಣಾ
ಕೂಡಲ ಸಂಗಮದೇವಾ "

ಎಂಬ ಅಕ್ಕನ ಮತ್ತು ಅಣ್ಣನವರ ವಚನಗಳೂ—

" ಜ್ಞಾನಸ್ಯ ಅನುಭವಮೇವ ಪರ್ಯವಸಾನಂ "

ಎಂಬ ತತ್ವಜ್ಞಾನಿಗಳ ಪ್ರಮಾಣವಚನವೂ, ಆದ್ಯ ಜಗದ್ಗುರು ಶಂಕರಾಚಾರ್ಯರು,

ಮಹಾರಾಷ್ಟ್ರದ ಸಂತಶಿರೋಮಣಿಯಾದ ಜ್ಞಾನೇಶ್ವರರು, ವೇದವೇದಾಂತಗಳನ್ನೆಲ್ಲ ಕನ್ನಡಿಸಿದ ಶ್ರೀಮನ್ನಿಜಗುಣಶಿವಯೋಗಿಗಳು ತಮ್ಮ ಗ್ರಂಥಗಳಿಗೆ ಅಪರೋಕ್ಷಾನುಭೂತಿ ಅಮೃತಾನುಭವ, ಅನುಭವಸಾರ, ಪರಮಾನುಭವ ಬೋಧೆ, ಅನುಭವಾಮೃತ, ಅನುಭವ ಚಿಂತಾಮಣಿ ಮುಂತಾಗಿ ನಾಮಕರಣ ಮಾಡಿದ್ದೂ ಅನುಭವದ ಶ್ರೇಷ್ಠತೆಯನ್ನೇ ಸೂಚಿಸುತ್ತವೆ. ಅನುಭವವೆಂದರೆ ಪಂಚೇಂದ್ರಿಯಗಳ ಮುಖಾಂತರ ಹೃದಯಕ್ಕೆ ಆಗುವ ಸುಖ ದುಃಖಗಳ ಅನಿಸಿಕೆಯು. ಓರ್ವ ಮಹಾರಾಜನು ಅರಮನೆಯೊಳಗೆ ಭೋಜನ ಶಾಲೆಯಲ್ಲಿ ಕುಳಿತು ಬೇರೆಬೇರೆಬಟ್ಟಲುಗಳಲ್ಲಿ ಪಂಚಪಕ್ವಾನ್ನಗಳನ್ನು ಹೇಗೆಊಟಮಾಡುವನೋ ಹಾಗೆ ದೇಹವೆಂಬ ಅರಮನೆಯಲ್ಲಿ ಜೀವಾತ್ಮನು, ಇದ್ದುಕೊಂಡು ಪಂಚೇಂದ್ರಿಯವೆಂಬ ಹರಿವಾಣ ದಲ್ಲಿ ಶಬ್ದಾದಿ ಪಂಚವಿಷಯಗಳನ್ನು ಭೋಗಿಸುತ್ತಿರುವನು. ಪಂಚವಿಧವಿಷಯಗಳನ್ನು ಶಿವ ನಿಗೆ ಅರ್ಪಿಸದೆ ತಾನೇತಕ್ಕೊಂಡರೆ ಆ ವಿಷಯಗಳು ವಿಷದಂತೆ ದುಃಖವನ್ನುಂಟು ಮಾಡು ವವು. ಅಂದರೆ ಭವಬಂಧನಕಾರಕಗಳಾಗುವವು. ಆ ವಿಷಯಗಳನ್ನೇ ಗುರುಲಿಂಗ ಜಂಗಮರಿಗೆ ಸಮರ್ಪಣ ಮಾಡಿ ಶಬ್ದಪ್ರಸಾದ, ಸ್ಪರ್ಶ ಪ್ರಸಾದಮಾಡಿ ಸ್ವೀಕರಿಸಿದಲ್ಲಿ ಭವ ಬಂಧನ ವಿಮೋಚಕಗಳಾಗುವವು. ದೇವರಿಗೆ ಅರ್ಪಿತವಾದ ಪದಾರ್ಥವೇ ಪ್ರಸಾದವಾಗುವದು. ಅದು ಅನರ್ಪಿತವಾದಲ್ಲಿ ಪದಾರ್ಥವೆನಿಸುವದು. ಪ್ರಸಾದವು ಭವಬಂಧನ ವಿಮೋಚಕ ವಾದರೆ ಪದಾರ್ಥವು ಭವಬಂಧನಕಾರಕವಾಗುವದು. ಪದಾರ್ಥ ಗ್ರಹಣದಿಂದ ಆಗುವ ಅನುಭವವು ವಿಷಯಾನುಭವ, ಲೌಕಿಕಾನುಭವ ಎನಿಸಿದರೆ, ಪ್ರಸಾದಗ್ರಹಣದಿಂದ ಆಗುವ ಅನುಭವವು ಶಿವಾನುಭವ, ಅಲೌಕಿಕಾನುಭವ ಎನಿಸುವದು. ಲೌಕಿಕದಲ್ಲಿಯೇ ಆಗಲಿ, ಪರಮಾರ್ಥಲ್ಲಿಯೇ ಆಗಲಿ, ಅನುಭವಕ್ಕೆ ಬಹಳೇ ಬೆಲೆಯುಂಟು. ಅನುಭವವಿಲ್ಲದೆ ಕೇವಲ ಶುಷ್ಕಜ್ಞಾನದಿಂದ ಕೆಲಸ ಮಾಡಿದಲ್ಲಿ ಎಂತೆಂತಹ ಅನರ್ಥಗಳಾಗುತ್ತವೆಂಬುದಕ್ಕೆ ಜಾನಪದ ಸಾಹಿತ್ಯದಲ್ಲಿ ವಿವಿಧ ಕಥೆಗಳೂ ಅನೇಕ ಸನ್ನಿವೇಶಗಳೂ ಸಿಗುತ್ತವೆ.

ಜ್ವರದಿಂದ ಬಳಲುವ ಒಬ್ಬ ಶಿಕ್ಷಕನು ವೈದ್ಯನ ಬಳಿಗೆ ಹೋಗಿ ತನ್ನ ನಾಡೀಪರೀಕ್ಷೆಯನ್ನು ಮಾಡಿಸಲಾಗಿ ವೈದ್ಯನು ಶಿಕ್ಷಕನಿಗೆ ಕಂಟಕಾರಿ ವನಸ್ಪತಿಯನ್ನು ಕುದಿಸಿ ಕಷಾಯವನ್ನು ತೆಗೆದುಕೋ ಎಂದು ಹೇಳಿದನು. ಶಿಕ್ಷಕನು ಮನೆಗೆ ಬಂದು ಕಂಟಕಾರಿ ಶಬ್ದದ ಅರ್ಥ ತಿಳಿಯದೇ ಶಬ್ದಕೋಶವನ್ನು ತೆಗೆದುನೋಡಲಾಗಿ ಕಂಟಕ ಅಂದರೆ ಮುಳ್ಳು, ಅರಿ ಅಂದರೆ ವೈರಿ, ಮುಳ್ಳಿನ ವೈರಿ ಅದರೆ ಪಾದರಕ್ಷೆ ಎಂದು ಅರ್ಥಮಾಡಿ ಕಷಾಯಕ್ಕಾಗಿ ಪಾದರಕ್ಷೆ ಯನ್ನು ಉಪಯೋಗಿಸಿದನಂತೆ.

ಅಜೀರ್ಣದಿಂದ ಹೊಟ್ಟೆ ಕಡಿತಕ್ಕೆ ಒಳಗಾದ ಓರ್ವಪಂಡಿತನು ಡಾಕ್ಟರರ ಬಳಿ ಹೋಗಿ ಔಷಧ ಕೇಳಲು ಡಾಕ್ಟರರು ಪರೀಕ್ಷೆ ಮಾಡಿ ಅಜೀರ್ಣದಿಂದ ಹೊಟ್ಟೆಯ ನೋವು ಎಂದು ತಿಳಿದು ಇದಕ್ಕೆ " ಲಂಘನಂ ಪರಮೌಷಧಂ " ಎಂದು ವಿಚಾರ ಮಾಡಿ ಲಂಘನ ಮಾಡು ಎಂದು ಹೇಳಿದರು. ಪಂಡಿತನು ಮನೆಗೆ ಹೋಗಿ ಲಂಘನ ಶಬ್ದದ ನಿಜವಾದ ಅರ್ಥ ತಿಳಿಯದೇ ಲಂಘನ ಶಬ್ದಕ್ಕೆ ಹಾರು, ಜಿಗಿ ಎಂದು ಅರ್ಥಮಾಡಿ ಎತ್ತರವಾದ ಕಟ್ಟೆಯಿಂದ ಒಂದೆರಡುಸಾರೆ ಜಿಗಿದು ತನ್ನ ಪ್ರಾಣವನ್ನೇ ಕಳೆದುಕೊಂಡನು. ಲಂಘನ ಮಾಡು ಅಂದರೆ ಉಪವಾಸಮಾಡು ಎಂಬುದು ವೈದ್ಯನ ತಾತ್ಪರ್ಯ. ಆದರೆ ಪಂಡಿತನು

ಮಾಡಿದ ಶಾಬ್ದಿಕ ಜ್ಞಾನವೇ ಬೇರೆಯಶಾಯಿತು. ಅನುಭವವಿಲ್ಲದೇ ಕೇವಲ ಶಾಬ್ದಿಕ ಜ್ಞಾನದಿಂದ ಆಗುವ ಅನರ್ಥವಿದು.

ಒಂದು ಊರಲ್ಲಿ ಒಬ್ಬ ಆಗರ್ಭಶ್ರೀಮಂತನು ಅವಿವೇಕಿಯಾದ ಮಕ್ಕಳ ಕೈಯಲ್ಲಿ ಗಂಟನ್ನು ಕೊಡದೇ ಅದನ್ನು ಚೈತ್ರ ಶುದ್ಧ ಪ್ರತಿಪದೆಯ ದಿನ ಮುಂಜಾನೆ ಎಂಟುಗಂಟೆಗೆ ಮನೆಯ ಹತ್ತಿರದಲ್ಲಿರುವ ಗುಡಿಯ ಶಿಖರದ ನೆಳಲು ಬೀಳುವ ಸ್ಥಾನದಲ್ಲಿ ಹೂಳಿದನು. ತಾನು ಸತ್ತ ಮೇಲೆ ಗಂಟು ಹೂಳಿದ್ದು ಮಕ್ಕಳಿಗೆ ಗೊತ್ತಾಗಲೆಂಬ ಸದುದ್ದೇಶದಿಂದ ಒಂದು ಬುಕ್ಕಿನಲ್ಲಿ ಚೈತ್ರಶುದ್ಧ ಪ್ರತಿಪದೆಯ ದಿವಸ ಮುಂಜಾನೆ ಎಂಟು ಗಂಟೆಗೆ ಗುಡಿಯ ಶಿಖರದಲ್ಲಿ ಹಣವನ್ನು ಹೂಳಿ ಇಟ್ಟಿರುವೆನು ಎಂದು ಬರೆದಿಟ್ಟನು. ತಂದೆಯು ತೀರಿಕೊಂಡ ಮೇಲೆ ಮಕ್ಕಳು ಪುಸ್ತಕದಲ್ಲಿ ಬರೆದ 'ಶಿಖರದಲ್ಲಿ ಹಣ ಹೂಳಿ ಇಟ್ಟಿರುವೆನು' ಎಂಬುದನ್ನು ಓದಿ ಹಣದಾಶೆಯಿಂದ ಗುಡಿಯ ಶಿಖರವನ್ನೇ ಕೆಡವಿದರು; ಹಣ ಸಿಕ್ಕಲಿಲ್ಲ. ಪುಸ್ತಕದಲ್ಲಿ ಬರೆದದ್ದೇನೋ ನಿಜ, ಆದರೆ ಹಣ ಸಿಕ್ಕಲಿಲ್ಲ. ಸುಮ್ಮಸುಮ್ಮನೇ ನಮ್ಮ ತಂದೆಯವರು ಬರೆಯತಕ್ಕವರಲ್ಲ, ಏಕೆ ಬರೆದರು ? ಎಂದು ವಿಚಾರ ಮಾಡುತ್ತ ಕೆಲವು ಸಮಯ ಕಳೆಯುತ್ತಿರಲು ಓರ್ವ ವಯೋವೃದ್ಧರೂ, ಅನುಭವಿಗಳೂ ಆದ ಯಜಮಾನರು ಅವರ ಮನೆಗೆ ಬಂದರು. ಆಗ ಮಕ್ಕಳೆಲ್ಲರೂ ಕೂಡಿ ತಮ್ಮ ತಂದೆಯವರು ಬರೆದಿಟ್ಟದ್ದನ್ನು ತಂದು ತೋರಿಸಿದರು. ಆಗ ಅನುಭವಿಗಳಾದ ಆವರು ಯಾರಾದರೂ ಎಂದಾದರೂ ಶಿಖರದಲ್ಲಿ ಗಂಟನ್ನು ಹೂಳುವರೇ ? ಮೇಲಾಗಿ ಚೈತ್ರಶುದ್ಧ ಪ್ರತಿಪದೆಯ ದಿನ ಮುಂಜಾನೆ ಎಂಟು ಗಂಟೆಗೆ ಶಿಖರದಲ್ಲಿ ಇಟ್ಟಿರುವೆನೆಂದು ಬರೆದಿರುವರು. ಸುಮ್ಮನೆ ಇಟ್ಟಿರುವೆನೆಂದು ಬರೆದಿದ್ದರೆ ನಡೆಯುತ್ತಿತ್ತು. ಎಂಟು ಗಂಟೆಗೆ ಎಂದು ಬರೆಯಲು ಕಾರಣ ವೇನು ? ಈ ಬರಹದಲ್ಲಿ ಏನೋ ರಹಸ್ಯವಿದೆ ಎಂದು ಸುದೀರ್ಘ ವಿಚಾರಮಾಡಿ ಚೈತ್ರ ಶುದ್ಧ ಪ್ರತಿಪದೆಯ ದಿವಸ ಮುಂಜಾನೆ ಎಂಟು ಗಂಟೆಗೆ ಶಿಖರದ ನೆರಳು ಯಾವ ಭಾಗದಲ್ಲಿ ಬೀಳುವದೋ ಆ ಭೂಪ್ರದೇಶವನ್ನು ಗುದ್ದಲಿಯಿಂದ ಅಗಿಸಲು ಅಲ್ಲಿ ಚಿನ್ನದ ನಾಣ್ಯಗಳಿಂದ ತುಂಬಿದ ಕುಂಭವು ದೊರಕಿತು. ಅನುಭವವಿಲ್ಲದ ಓದಿನಿಂದ ಗುಡಿಯ ಶಿಖರವನ್ನು ಕೆಡವಿ ಮತ್ತಿಷ್ಟು ಹಾನಿಯನ್ನೇ ಅನುಭವಿಸಬೇಕಾಯಿತು.

ಅನುಭವವಿರದೆ ಬೇಸಾಯ ಮಾಡಿದ ಶಿವನ, ಹಾಗೂ ಅನುಭವವಿಲ್ಲದೆ ಅಡಿಗೆಯನ್ನು ಮಾಡಿದ ಪಾರ್ವತಿಯ ಕಥೆ ಜನಪದ ಸಾಹಿತ್ಯದಲ್ಲಿ ಬರುವದು.

ಒಮ್ಮೆ ಶಿವನು ಕೈಲಾಸದಲ್ಲಿ ಪ್ರಮಥರೊಡನೆ ವಿನೋದ ಗೋಷ್ಠಿಯನ್ನು ಮಾಡುತ್ತ ಆನಂದಪರವಶನಾಗಿರಲು ಪಾರ್ವತಿಯು ಶಿವನನ್ನು ಕುರಿತು ಪ್ರಿಯನೇ! ನಮ್ಮ ಸಂಸಾರ ಬಹಳ ದೊಡ್ಡದು. ಓರ್ವ ಮಗನು ಆನೆಯ ಮೊಗದವನು, ಮತ್ತೊಬ್ಬನು ಆರು ಮೊಗದವನು. ತಾವು ಐಮೊಗದವರು ಹೀಗಿರುವಾಗ ಸುಮ್ಮನೇ ಕುಳಿತರೆ ಸಂಸಾರ ನಡೆಯುವದೇ ? ಕೈಲಾಸ ಪರ್ವತದ ಎಡಬಲ ಭಾಗಗಳಲ್ಲಿ ಸಾಕಷ್ಟು ಭೂಮಿ ಇದೆ. ಎತ್ತುಗಳನ್ನು ತಂದು ಹೊಲದ ಕೆಲಸ ಮಾಡಿದರೆ ಸಾಕಷ್ಟು ಬೆಳೆ ಬರುವದು ಎನ್ನಲು ಶಿವನು ಆಗಲಿ ಎಂದು ಗಿರಿಜೆಯ ಮಾತಿಗೊಪ್ಪಿ ನಾನು ಬರುವಷ್ಟರಲ್ಲಿ ಅಡಿಗೆ ಸಿದ್ಧ ಮಾಡು

ಎಂದು ಹೇಳಿ, ತಾನೇರುವ ಮುದಿ ಎತ್ತನ್ನು ತಕ್ಕೊಂಡನು. ಮತ್ತೊಂದೆತ್ತು ಇಲ್ಲದುದಕ್ಕೆ ಯಮನ ಬಳಿಗೆ ಹೋಗಿ ಅವನ ಕೋಣವನ್ನೇ ತಕ್ಕೊಂಡು ಹರಗುವ ಕೆಲಸ ಪ್ರಾರಂಭಿಸಿದನು. ಮುಂಜಾವಿನಿಂದ ಸಂಜೆಯತನಕ ಹರಗಿದರೂ ಎತ್ತು ಏರಿಗೆ ಕೋಣ ಕೇರಿಗೆ ಎಂಬಂತಾಗಿ ಒಂದು ಸುತ್ತು ತಿರುಗುವದೂ ಆಗಲಿಲ್ಲ. ಎಂದೆಂದೂ ಒಕ್ಕಲುತನ ಮಾಡದ ಮುಕ್ಕಣ್ಣನು ಮುದಿ ಎತ್ತು, ಕೊಬ್ಬಿದ ಕೋಣ ಇವುಗಳ ಕೂಡ ಹೋರಾಡಿ ಬೇಸತ್ತು ಹಸಿವೆಯಿಂದ ಕಂಗೆಟ್ಟನು.

ಇತ್ತ ಎಂದೆಂದೂ ಅಡಿಗೆ ಮಾಡದ ಪಾರ್ವತಿಯು ಅನ್ನವನ್ನು ಹೇಗೆ ಮಾಡ ಬೇಕೆಂಬುದನ್ನು ತಿಳಿಯದೇ ಲಕ್ಷ್ಮಿ ಸರಸ್ವತಿಯರ ಬಳಿಗೆ ಹೋಗಿ ಕೇಳಲು ಅವರು ಅನ್ನ ಮಾಡುವದೇನು ಕಷ್ಟ ? ಪಾತ್ರೆಯಲ್ಲಿ ಅಕ್ಕಿಯನ್ನು ಹಾಕಿ ಮೇಲೆ ಎರಡಂಗುಲ ನೀರಿಟ್ಟು ಕೆಳಗೆ ಸರಿಯಾಗಿ ಒಲೆ ಹೊತ್ತಿಸಿದರಾಯಿತು. ಕೂಡಲೇ ಅನ್ನ ಸಿದ್ಧವಾಗುವದು ಎಂದು ಹೇಳಿದರು. ಅಡಿಗೆಯ ಅನುಭವವಿಲ್ಲದ ಪಾರ್ವತಿಯು ಒಂದು ಪಾತ್ರೆಯಲ್ಲಿ ಅಕ್ಕಿಯನ್ನು ಹಾಕಿ ಅದರ ಮೇಲೊಂದು ಪಾತ್ರೆಯನ್ನಿಟ್ಟು ಅದರಲ್ಲಿ ನೀರು ಹಾಕಿ ಉರಿಹಚ್ಚಿದಳು. ಒಲೆಯ ಮೇಲಿದ್ದ ಪಾತ್ರೆಯೊಳಗಿನ ಅಕ್ಕಿಯೆಲ್ಲ ಕರಕಾಗಿ ಹೋದವು. ಅನುಭವವಿಲ್ಲದ ಒಕ್ಕಲುತನದಿಂದ ಹಾಗೂ ಕೇವಲ ಶಾಬ್ದಿಕ ಜ್ಞಾನದಿಂದ ಮಾಡಿದ ಪಾಕದಿಂದ ಏನೂ ಪ್ರಯೋಜನವಿಲ್ಲ ಎಂಬುದು ಮೇಲಿನ ವಿವರಣೆಯಿಂದ ತಿಳಿದುಬರುವದು. ಅನುಭವಕ್ಕೆ ಮಹತ್ವವಿದ್ದುದರಿಂದಲೇ ಶ್ರದ್ಧಾ, ನಿಷ್ಠಾದಿ ಷಡ್ವಿಧಭಕ್ತಿಗಳಲ್ಲಿ ಅನುಭವಭಕ್ತಿಯೊಂದನ್ನು ಹೇಳಲಾಗಿದೆ. ಆನಂದಾವಿರ್ಭಾವಕ್ಕೆ ಮೂಲವಾದುದು ಅನುಭವ.ಅಂತೆಯೇ ಶ್ರದ್ಧಾಭಕ್ತಿ, ನಿಷ್ಠಾಭಕ್ತಿ ಮುಂತಾಗಿ ಹೇಳುವ ಷಡ್ವಿಧ ಭಕ್ತಿಗಳ ಕ್ರಮದಲ್ಲಿ ಅನುಭವ ಭಕ್ತಿಯ ನಂತರ ಆನಂದಭಕ್ತಿಯ ಉಲ್ಲೇಖವಿದೆ.

" ಅನುಭವದಡಿಗೆಯ ಮಾಡಿ ಅದಕ್ಕನುಭವಿಗಳುಬಂದು
ನೀವೆಲ್ಲ ... "

" ಬಾಯ ಬ್ರಹ್ಮವ ನುಡಿದ ಅನುಭವ
ವಿಲ್ಲದ ಮಾಯಾ ಮೋಹಿಗೆ ಮೋಕ್ಷ
ವೆಂದೇದಿಗಹುದೋ ? "

" ಅದ್ವೈತಕೋಡಾಡಿ ಇದ್ದುದನು ಹೋಗಾಡಿ ।
ಉದ್ದನಾ ಮರನ ತಲಗೇರಿ ತಲೆಯೂರಿ ।
ಬಿದ್ದು ಸತ್ತಂತೆ ಸರ್ವಜ್ಞ "

ಮುಂತಾದ ಹಾಡುಗಳು ಅನುಭವದ ಘನತೆಯನ್ನೇ ಹೇಳುತ್ತವೆ. ಅಂತೆಯೇ ಶ್ರೀ ಬಸವೇಶ್ವರರು ಅನುಭವ ಮಂಟಪ ಎಂಬ ಅತ್ಯಪೂರ್ವ ಸಂಸ್ಥೆಯನ್ನು ಸಂಸ್ಥಾಪಿಸಿದರು. ಲೋಕದಲ್ಲಿ ಲಗ್ನಮಂಟಪ, ಲತಾಮಂಟಪ, ಶಿಲಾಮಂಟಪ, ಏಕಾದಶಮಂಟಪ, ಕಲ್ಯಾಣ ಮಂಟಪ ಹೀಗೆ ಮಂಟಪಗಳು ಬಹುಬಗೆಯಾಗಿವೆ. ಈ ಎಲ್ಲ ಮಂಟಪಗಳಿಗಿಂತಲೂ ಅನುಭವ ಮಂಟಪ ಮೇಲಾದುದು.

"ಲಗ್ನ ಮಂಟಪದಲ್ಲಿ ಎರಡು ಪ್ರಾಣ್ಮಯ ದೇಹಗಳು ಒಂದಕ್ಕೊಂದು ಕೂಡಿ ಕ್ಷಣಿಕಾನಂದದಲ್ಲಿ ಸಂತೃಪ್ತಿ ಪಡೆಯುತ್ತಿದ್ದರೆ ಅನುಭವಮಂಟಪದಲ್ಲಿ ಎರಡು ಚಿನ್ಮಯಾತ್ಮರು ಅಂದರೆ ಲಿಂಗ ಅಂಗರು ಸಾಮರಸ್ಯದಿಂದ ಒಂದಾಗಿ ನಿತ್ಯಾನಂದದಲ್ಲಿ ಲೋಲಾಡುವರು. ಶಿಲಾಮಂಟಪ ಲತಾಮಂಟಪಗಳು ಬೇಸಿಗೆಯ ಬಿಸಿಲಿನಿಂದ ಬೆಂದು ಬೆಂಡಾದವರಿಗೆ ತಣ್ಣೆಳಲನ್ನಿತ್ತು ಶಾಂತಿಸಮಾಧಾನವನ್ನುಂಟು ಮಾಡಿದರೆ, ಅನುಭವ ಮಂಟಪವು ಸಂಸಾರತಾಪತ್ರಯಗಳಿಂದ ಕಂಗಾಲಾದವರಿಗೆ ಅನುಭವಾಮೃತವ ನೀಡಿ ಅವರ್ಣನೀಯ ಸುಖವನೀಯುವದು. ಪ್ರಜೆಗಳಿಂದ ಚುನಾಯಿತರಾದ ಶಾಸಕರು ವಿಧಾನಸಭೆ, ಲೋಕಸಭೆಗಳಲ್ಲಿ ಒಂದೆಡೆ ಸೇರಿ ಜನರ ಆಸೆಆಕಾಂಕ್ಷೆಗಳನ್ನು ಪೂರೈಸಲು ಚರ್ಚೆಮಾಡುವಂತೆ ಸತ್ಯಸಂಧರಾದ ಶರಣರ, ಅನುಭವಮಂಟಪದಲ್ಲಿ ಸೇರಿ ಮುಮುಕ್ಷುಗಳ ಜಿಜ್ಞಾಸಾ ಬುದ್ಧಿಯ ಸಂತೃಪ್ತಿಗಾಗಿ ವಿವಿಧ ರೀತಿಯಿಂದ ಆಧ್ಯಾತ್ಮಿಕ ವಿಷಯಗಳನ್ನು ಚರ್ಚಿಸುತ್ತಿದ್ದರು. ಇಂತಹ ಲೋಕೋತ್ತರರ, ಏಕಮೇವಾದ್ವಿತೀಯರು ಎನಿಸಿದ ಅನುಭವ ಮಂಟಪಕ್ಕೆ ಓರ್ವ ಏಕಮೇವಾದ್ವಿತೀಯ ಮಹಾಪುರುಷರೇ ಅಧ್ಯಕ್ಷರಾದರು.

" ಅಲ್ಲಮನೆ ಗುರುವಾದ ಕಲ್ಯಾಣ ಮಂಟಪಕೆ,
ಅಲ್ಲಮಗೆ ಹುದ್ದೆ ಕಲ್ಯಾಣ ಗದ್ದುಗೆಯೋ "

ಸ್ವಯಂಜ್ಯೋತಿಯಾದ ನಿರಂಜನಮೂರ್ತಿ ಅಲ್ಲಮಪ್ರಭುವೇ ಅನುಭವ ಮಂಟಪದ ಅಧ್ಯಕ್ಷಪೀಠವನ್ನು ಅಲಂಕರಿಸಿದ್ದನೆಂದು ಹಳ್ಳಿಗರೂ ಹಾಡುವರು.

ಶೂನ್ಯಪೀಠದ ಮೇಲೆ ಶೂನ್ಯ ಮೂರ್ತಿಯು ಮುಹೂರ್ತಮಾಡಿ ಅಪೂರ್ಣವಾದ ಶೂನ್ಯವಾದ ( ನಿರೀಶ್ವರವಾದ ) ವನ್ನು ಹೇಳದೇ ಶೂನ್ಯವಾದ ಅಂದರೆ ಪೂರ್ಣವಾದ-

" ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತೇ ।
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ "

ಎಂದು ಉಪನಿಷದುಕ್ತವಾದ ಪೂರ್ಣವಾದವನ್ನು ಹೇಳುತ್ತಿದ್ದರು.

" ಪ್ರಾಣಲಿಂಗಕ್ಕೆ ಕಾಯವೇ ಸಜ್ಜೆ,
ಆಕಾಶ ಗಂಗೆಯಲ್ಲಿ ಮಜ್ಜನ,
ಹೃದಯ ಕಮಲದಲ್ಲಿ ಪರಿಮಳದ ಪೂಜೆ,
ಇದು ಅದ್ವೈತ ಕಾಣಾ ಗುಹೇಶ್ವರ "

" ಗಗನವೇ ಗುಂಡಿಗೆ ಆಕಾಶವೇ ಅಗ್ಘವಣಿ,
ಚಂದ್ರ ಸೂರ್ಯರಿಬ್ಬರು ಪುಷ್ಪ,
ಬ್ರಹ್ಮಧೂಪ ವಿಷ್ಣು ದೀಪ
ರುದ್ರನೋಗರ ಸಯಿದಾನ ನೋಡಾ
ಗುಹೇಶ್ವರಲಿಂಗಕ್ಕೆ ಪೂಜೆ ನೋಡಾ "

ಚಿತ್ಪ್ರಭೆಯುಳ್ಳ ಪ್ರಭುವಿನ ಪ್ರಸಾದವಾಣಿಯಿಂದ ಹೊರಹೊಮ್ಮಿದ ಜ್ಞಾನದ ಶಲಾಕೆಯಂತಿರುವ ವಚನಗಳನ್ನು ಓದಿದರೆ ಎಂತಹ ಅಜ್ಞಾನದ ಕಾರ್ಗತ್ತಲೆಕವಿದ ನಾಸ್ತಿಕನ ಹೃದಯದಲ್ಲಿಯೂ ಚಿತ್ಪ್ರಭೆಯು ಬೀಳದಿರಲಾರದು. ಚಿತ್ಪ್ರಭೆಯ ಪುಂಜದಂತಿರುವ ಪ್ರಭುವಿನ ವಚನಗಳೇ ಪ್ರಭುವಿನ ಘನವಾದ ವ್ಯಕ್ತಿತ್ವದ ಅಳತೆಗೋಲುಗಳೆನ್ನಬಹುದು.

" ಕರತಳಾಮಳಕವಾದುದು ತತ್ತ್ವವೇತ್ತಂಗೆ ।
ಪರಮಶಿವಯೋಗ ನಿಜವಾದ್ದುದ್ಧಿಲೀತಂಗೆ ।
ಶಿವನನೋಳ್ಪಂತೆಲ್ಲವಂ ನೋಳ್ಪನಲ್ಲಮಂ ।
ಭವನೊಳಗೆ ಇರುತೆಲ್ಲರೊಳಗಿರ್ಪನಲ್ಲಮಂ ॥ "

ಎಂದು ಹರಿಹರ ಕವಿಯು ಹಾಡಿದ ರೀತಿಯಲ್ಲಿ ಶಿವಯೋಗ ಸಾಮ್ರಾಜ್ಯದ ಸಾರ್ವಭೌಮ ಎನಿಸಿದ ಅಲ್ಲಮಪ್ರಭುಗಳು ಅಧ್ಯಕ್ಷರಾಗಿಯೂ, ಷಟ್‌ಸ್ಥಲಚಕ್ರವರ್ತಿ ಶ್ರೀ ಚನ್ನಬಸವಣ್ಣನವರು ಉಪಾಧ್ಯಕ್ಷರಾಗಿಯೂ, ಭಕ್ತಿಭಂಡಾರಿ ಎನಿಸಿದ ಶ್ರೀ ಬಸವೇಶ್ವರರು ಸಂಸ್ಥಾಪಕರಾಗಿಯೂ, ಶ್ರೀಸಿದ್ಧರಾಮೇಶ್ವರ, ಮಡಿವಾಳ ಮಾಚಯ್ಯ, ಮೋಳಿಗೆಯಮಾರಯ್ಯ, ಕಿನ್ನರಿಬ್ರಹ್ಮಯ್ಯ, ಆಯ್ದಕ್ಕಿಮಾರಯ್ಯ, ಘನಲಿಂಗಿರುದ್ರಮುನಿ, ನೀಲಾಂಬಿಕೆ, ಗಂಗಾಂಬಿಕೆ, ಅಕ್ಕನಾಗಮ್ಮ ಮುಂತಾದವರೆಲ್ಲ ಸದಸ್ಯರಾಗಿಯೂ ಮೆರೆದರು. ಮಾನವ ಧರ್ಮಕ್ಕೆ ಮೂಲಭೂತವಾದ ಹಕ್ಕುಗಳಬಗ್ಗೆ ಶಿವಶರಣರು ಅಮೋಘವಾದ ಚರ್ಚೆಯನ್ನು ನಡೆಯಿಸಿ ಕೊನೆಗೊಂದು ನಿರ್ಣಯಕ್ಕೆ ಬರುತ್ತಿದ್ದರು, ವೀರಶೈವರು ಆಚರಿಸಬೇಕಾದ ಅರ್ಚನ, ಅರ್ಪಿತ, ಅನುಭವಗಳು ದಿನವಿಡಿ ಅಲ್ಲಿ ನಡೆಯುತ್ತಿದ್ದವು. ನಿತ್ಯ ಲಿಂಗಾರ್ಚನೆ. ನಿತ್ಯ ಜಂಗಮಾರ್ಚನೆ, ನಿತ್ಯನಿತ್ಯ ಪಾದೋದಕ ಪ್ರಸಾದಗ್ರಹಣ ಮಾಡುವ ಅಚ್ಚಪ್ರಸಾದಿಗಳು. ನಿಚ್ಚಪ್ರಸಾದಿಗಳು, ಸಮಯಪ್ರಸಾದಿಗಳು ಅನುಭವ ಮಂಟಪದಲ್ಲಿ ಕಾಣುತ್ತಿದ್ದರು.

" ಜಂಗಮಪಾದವು ಪರಮಪವಿತ್ರವಾಗಿರ್ಪುದಯ್ಯ ।
ಜಂಗಮಪಾದವು ಜಗದ್ಭರಿತವಾಗಿರ್ಪುದಯ್ಯ ।
ಜಂಗಮಪಾದವು ಆದಿಯಿಂದತ್ತತ್ತಲಾಗಿರ್ಪುದಯ್ಯ ।
ಚರಣಂ ಪವಿತ್ರಂ ವಿತತಂ ಪುರಾಣಂ ಎಂದುದಾಗಿ
ಜಂಗಮ ಶ್ರೀಪಾದವ ಭಕ್ತಿಯಿಂದ ಪಿಡಿದಸದ್ಭಕ್ತನು ।
ದುರಿತಾಂಬುಧಿಯಿಂದ ದೂರನಾಗಿರ್ಪನಯ್ಯ ಕೂಡಲ
ಚೆನ್ನಸಂಗಮದೇವ ॥ "

ಎಂದು ಜಂಗಮಪಾದದ ಮಹಿಮೆಯನ್ನು ಹಾಡಿದ ಸ್ವಯಂ ಚನ್ನಬಸವೇಶ್ವರರೇ ಪ್ರಭುದೇವರ ಪಾದಪೂಜೆಯನ್ನು ಮಾಡಿಕೊಳ್ಳುತ್ತಿದ್ದರು. ಶಿವಾರ್ಚನ, ಜಂಗಮಾರ್ಪಿತದನಂತರ ಶಿವಾನುಭವವು ತಪ್ಪದೇ ನಡೆಯುತ್ತಿತ್ತು.

ಇದರಿಂದ ಕಲ್ಯಾಣಪಟ್ಟಣ ಎಂಬ ಪದವು ಅಂಕಿತನಾಮವಾಗಿರದೆ, ಅನ್ವರ್ಥಕನಾಮವಾಗಿತ್ತು. ಅಂತೆಯೇ ವೀರವಿರಾಗಿಣಿಯಾದ ಅಕ್ಕಮಹಾದೇವಿಯು —

" ಕಲ್ಯಾಣವೆಂಬುದು ಆರಿಗೆ ಹೊಗಬಾರದು,
ಹೊಗಬಾರದು. ಹೊಗಬಾರದು. ಅಸಾಧ್ಯವಯ್ಯಾ !
ಆಶೆ ಆಮಿಷಗಳಳಿದವಂಗಲ್ಲದೆ ಕಲ್ಯಾಣದತ್ತ
ಅಡಿಯಿಡಬಾರದು. ಒಳಹೊರಗು ಶುದ್ಧವಾದವಂಗಲ್ಲದೆ
ಕಲ್ಯಾಣವ ಹೊಗಬಾರದು, ನಾನೆಂಬುದ ಅರಿದವಂಗಲ್ಲದೆ
ಕಲ್ಯಾಣವ ಹೊಗಬಾರದು. ಒಳಗು ತಿಳಿದು ಚೆನ್ನಮಲ್ಲಿ
ಕಾರ್ಜುನಂಗೊಲಿದು ಕಲ್ಯಾಣವ ಕಂಡು ನಮೋನಮೋ
ಎನುತಿರ್ದೆನು "

ವಿವಿಧಕಾಯಕಗಳನ್ನು ಕೈಕೊಂಡ ಕಾಯಕಯೋಗಿಗಳಿಂದಲೂ, ಶಿವನನ್ನು ಭಕ್ತಿಯಿಂದ ಒಲಿಸಿಕೊಂಡ ಶಿವಯೋಗಿಗಳಿಂದಲೂ, ಶಿವನ ನೆನಹಿನಲ್ಲೇ ಕಾಲ ಕಳೆವ ಶಿವಭಕ್ತರಿಂದಲೂ ಮೋಳಿಗೆಯ ಮಾರಯ್ಯ, ಆಯ್ದಕ್ಕಿ ಮಾರಯ್ಯ, ಮುಕ್ತಾಯಿ, ಲಿಂಗಮ್ಮ, ಅಕ್ಕ ನಾಗಮ್ಮ ಮೊದಲಾದ ಶರಣ ಶರಣೆಯರಿಂದಲೂ ಕೂಡಿದ ಕಲ್ಯಾಣಪಟ್ಟಣವು ಸಾಮಾನ್ಯ ವಾದುದಲ್ಲ; ಅಲ್ಲಿ ಸಾಮಾನ್ಯ ಜನರು ಪ್ರವೇಶ ಮಾಡಕೂಡದು, ಆಶೆಆಮಿಷಗಳನ್ನೆಲ್ಲ ದೂರ ಬಿಟ್ಟು, ಅಂತರಂಗ ಬಹಿರಂಗದಲ್ಲಿ ಪರಿಶುದ್ಧರಾಗಿ ಯಾರು ಸ್ವಸ್ವರೂಪವನ್ನು ತಿಳಿಯಲು ಆತುರರಾಗುವರೋ ಅವರು ಮಾತ್ರ ಕಲ್ಯಾಣದೊಳಗೆ ಅಡಿ ಇಡಬೇಕು ಅದಿಲ್ಲದವರು ಅಲ್ಲಿ ಅಡಿ ಇಡಲು ಅನರ್ಹರು ಎಂದು ಹೇಳಿ ಕಲ್ಯಾಣಪಟ್ಟಣಕ್ಕೆ ಕೈಮುಗಿದಿರುವಳು. ಕಲ್ಯಾಣದ ಧವಳಕೀರ್ತಿಯು ನಾಡತುಂಬ ಪಸರಿಸಿತು. ವಿವಿಧ ಸುಗಂಧ ಕುಸುಮಗಳಿಂದ ಘಮಘಮಿಸುವ ಹೂದೋಟಕ್ಕೆ ಆರಡಿಗಳು ಮಕರಂದ ವನ್ನೀಂಟಲು ಧಾವಿಸಿ ಬರುವಂತೆ, ಪರ್ವಕಾಲದಲ್ಲಿ ಲಕ್ಷೋಪಲಕ್ಷ ಜನರು ತೀರ್ಥಕ್ಷೇತ್ರ ಗಳಿಗೆ ಹೋಗುವಂತೆ, ತತ್ತ್ವಜಿಜ್ಞಾಸುಗಳಾದ ಮುಮುಕ್ಷುಗಳು ತಾತ್ತ್ವಿಕ ವಿವೇಚನೆ ಯನ್ನು ಮಾಡುವವಕ್ಕೋ, ಮಹೋನ್ನತ ಮಟ್ಟಕ್ಕೆ ಮುಟ್ಟಿದ ಮಹಾಮಹಾ ಶಿವ ಯೋಗಿಗಳ, ಸದ್ಭಕ್ತರ ಸಂದರ್ಶನಕ್ಕೋ ದೇಶದ ಮೂಲೆಮೂಲೆಗಳಿಂದ ಮುಮುಕ್ಷು ಗಳು ಬರಹತ್ತಿದರು.

ಕಾಶ್ಮೀರದಿಂದ ಅರಸನಾದ ಭೂಪಾಲನೂ, ರಾಣಿಯಾದ ಮಹಾದೇವಿಯೂ, ರಾಜಕುಮಾರಿಯಾದ ಬೊಂತಾದೇವಿಯೂ, ಆಂಧ್ರಪ್ರಾಂತದಿಂದ ಪಂಡಿತತ್ರಯರಲ್ಲಿ ಒಬ್ಬರಾದ ಶಿವಲೆಂಕಮಂಚಣ್ಣನವರೂ, ಉರಿಲಿಂಗದೇವ, ಉರಿಲಿಂಗಪೆದ್ದಿ, ಕಾಶ್ಮೀರದ ಸೌರಾಷ್ಟ್ರದಿಂದ ಆದಯ್ಯ ಮತ್ತು ಸೊಡ್ಡಳಬಾಚರಸರೂ, ಮಾಳವ ದೇಶದಿಂದ ಡೋಹರ ಕಕ್ಕಯ್ಯನವರೂ, ಓಡಿಸಾಪ್ರಾಂತದಿಂದ ಸುಜ್ಞಾನಿದೇವರೂ, ದಕ್ಷಿಣದ ಕಲ್ಲುಕುರಿಕೆಯಿಂದ ಸಕಲೇಶಮಾದರಸರೂ ಅಫಗಾನಿಸ್ಥಾನದಿಂದ ಮರುಳಶಂಕರದೇವರೂ ಒಂದರು ಸೊನ್ನಲಿಗೆಯಿಂದ ಸಿದ್ಧರಾಮದೇವರು ಮತ್ತು ಅಮುಗಯ್ಯ, ವರದಾನಿ ಎಂಬ ದಂಪತಿ ಗಳು, ಉಮರಾಣಿಯಿಂದ ದಾನಮ್ಮದೇವಿಯು ಹಿಪ್ಪರಗಿಯಿಂದ ಮಡಿವಾಳಮಾಚಯ್ಯ ನವರು ಹೋದರೆಂದು ತಿಳಿದುಬರುವದು.

ಅಚ್ಚ ಪ್ರಸಾದಿಯೆನಿಸಿದ ಅಂದರೆ ದಿನದಿನದಲ್ಲಿಯೂ ಜಂಗಮಾರ್ಚನೆಗೈದು ಪಾದೋದಕ ಪ್ರಸಾದಗಳನ್ನು ಕೈಕೊಂಬುವ ನುಲಿಯ . ಚಂದಯ್ಯನವರು ದಿನದಂತೆ ಹುಲ್ಲು ಕೊಯ್ಯಲು ಅಡವಿಗೆ ಹೋಗಿ ನೀರಿನ ಮಡುವಿನ ಬಳಿ ಹುಲ್ಲು ಕೊಯ್ಯುವಾಗ ಲಿಂಗಯ್ಯನು ಚಂದಯ್ಯನ ಭಕ್ತಿಯನ್ನು ಪರೀಕ್ಷೆಮಾಡಬೇಕೆಂದು ನೀರಿನಲ್ಲಿ ಬಿದ್ದನು. ಆಗ ಚಂದಯ್ಯನು ನೀರಿನಲ್ಲಿ ಬಿದ್ದ ಲಿಂಗವನ್ನು ಹುಡುಕುತ್ತ ವೇಳೆಗಳೆದರೆ ಜಂಗಮಾರ್ಚನೆಗೆ ವೇಳೆಯಾಗುವದೆಂದು ವಿಚಾರಿಸಿ ಹಾಗೆಯೇ ಹೊರಟನು. ಆಗ ಲಿಂಗಯ್ಯನು ಚಂದಯ್ಯನ ಬೆನ್ನುಹತ್ತಿ ಬರಲು ಚಂಧಯ್ಯನು ಲಿಂಗಯ್ಯನನ್ನು ಕುರಿತು, ಮೊದಲು ನನ್ನನ್ನು ಬಿಟ್ಟು ಸುಮ್ಮನೆ ಹೋದುದೇಕೆ ? ಮತ್ತೆ ಈಗ ಬರುವದೇಕೆ ? ನಿನ್ನೊಡನೆ ಮಾತಾಡುತ್ತ ನಿಂತರೆ ಜಂಗಮಾರ್ಚನೆಗೆ ವಿಲಂಬವಾಗುವದು ಎಂದು ಹೇಳಿ ಅವರು ಅನುಭವಮಂಟಪಕ್ಕೆ ಹೋಗಿ ಶೂನ್ಯ ಸಿಂಹಾಸನಾಧೀಶ್ವರನಾದ ಅಲ್ಲಮಪ್ರಭುವಿಗೆ ಎಲ್ಲ ಸಂಗತಿಯನ್ನು ತಿಳಿಸಿದರು. ಆಗ ಮಡಿವಾಳ ಮಾಚಿದೇವರು –

> " ಕಾಯಕದಲ್ಲಿನಿಂದ ಶರಣಂಗೆ ಸೇವೆಯುವರ ತಪ್ಪ ಹಿಡಿದಿಹೆ
> ನೆಂದರೆ ಕಾಯಕವೆಂತು ನಡೆವುದಯ್ಯಾ !
> ಅವಗುಣಕ್ಕೆ ಮುನಿಯಬೇಕಲ್ಲದೆ ಲಾಂಛನಕ್ಕೆ ಮುನಿಯಬಹುದೇ ?
> ಮುಗ್ಗಿದ ತುರಗದ ಕಾಲ ಕತ್ತರಿಸಿದವರುಂಟೇ ?
> ಕಚ್ಚುವ ತಗಣೆಗಾಗಿ ಮನೆಯ ಸುಟ್ಟವರುಂಟೇ ?
> ಕಲಿದೇವರದೇವನಲ್ಲಿ ತಪ್ಪ ಹಿಡಿಯಲಿಲ್ಲ ಕೇಳಾ ಚಂದಯ್ಯ ॥ "

> " ಜಂಗಮಸೇವೆ ಲಿಂಗಸಹಿತವಾದಿರಬೇಕು.
> ಲಿಂಗವೆಂಬುದು ಜಂಗಮದಂಗ. ಅಂಗವಿಲ್ಲದೆ ಪ್ರಾಣ
> ವುಂಟೇ ? ಹಣ್ಣಿಲ್ಲದೆ ರುಚಿರಸವುಂಟೇ ? "

ಎಂದು ಹೇಳಿದರು. ಶ್ರೀ ಚನ್ನಬಸವೇಶ್ವರರು–

> " ... ಅಂಗದ ಮೇಲೆ ಲಿಂಗವಿಲ್ಲದಿರ್ದಡೆ ಜಂಗಮ ಸೇವೆಯ ಕೈಕೊಳ್ಳ;
> ಅದುಕಾರಣ ಒಂದ ಬಿಟ್ಟು ಒಂದರಲ್ಲಿ ನಿಂದಡೆ ಅಂಗವಿಲ್ಲದ
> ಆತ್ಮನಂತೆ, ಶಕ್ತಿಯಿಲ್ಲದ ಶಿವನಂತೆ, ದೀಪವಿಲ್ಲದ
> ಪ್ರಕಾಶದಂತೆ ಒಂದಂಗ ಶೂನ್ಯವಾಗಿ ಭಕ್ತಿಯುಂಟೇ ? ಅವಯವ
> ಹೀನನು ರಾಯಪಟ್ಟಕ್ಕೆ ಸಲುವನೇ ? ಲಿಂಗಹೀನನು ಭಕ್ತಾ
> ಚಾರಕ್ಕೆ ಸಲುವನೇ ? ಅದು ದೇವತ್ವಕ್ಕೆ ಸಲ್ಲದು ನಮ್ಮ ಕೂಡಲ
> ಚನ್ನಸಂಗಯ್ಯನಲ್ಲಿ ತ್ರಿವಿಧ ಸನ್ಮತವೇ ಚರಸೇವೆಯಯ್ಯಾ ಚಂದಯ್ಯ "

ಎಂದು ಅಂತಿಮ ನಿರ್ಣಯ ಹೇಳಿ ಶರಣಸತಿ-ಲಿಂಗಪತಿಗಳ ತಾತ್ವಿಕಕಲಹ ಬಗೆಹರಿಸಿದರು.

ಗಟ್ಟಿಗನಾದ ಗಟ್ಟಿವಾಳಯ್ಯನು ಬಸವಣ್ಣನವರ ದಾಸೋಹದಲ್ಲಿ ಉಂಡುಂಡು ತಿರುಗುವ ಪುಂಡ ಜಂಗಮರನ್ನು ಕುರಿತು ಸಿಟ್ಟಿಗೆದ್ದು–

"ಜಂಗಮವಾಗಿ ಹುಟ್ಟಿದವರು ಹಿಂದಣ ಹೆಜ್ಜೆಯ ಮೆಟ್ಟಲುಂಟೇ ?
ಜಂಗಮವೆಂಬ ಮಾತಿಗೊಳಗಾದಲ್ಲಿ ಮಲತ್ರಯಂಗಳ ಹಿಂಗಿರಬೇಕು
ಅನಂಗನ ಬಲೆಗೆ ಎಂದಿಗೂ ಸಿಲುಕದಿರಬೇಕು ಈ ಗುಣ ಆರಿಗೂ ಇಲ್ಲ"

ಎಂದು ವಿಡಂಬಿಸಲು ಎಲ್ಲ ಜಂಗಮರು ಕೋಪದಿಂದ ಅವನ ಇಷ್ಟಲಿಂಗವನ್ನೇ ಕಸಿದು ಕೊಂಡುಬಿಟ್ಟರು. ಆಗ ಗಟ್ಟಿವಾಳಯ್ಯನು ಜಂಗಮರಿಗೆ ನೀಡಲು ಇಟ್ಟಿರುವ ವಿವಿಧ ಪಕ್ವಾನ್ನಗಳಿಂದ ತುಂಬಿದ ಪಾಕಶಾಲೆಯ ಬಾಗಿಲಕ್ಕೇನೇ ದೊಡ್ಡ ಕಲ್ಲನ್ನು ಅನಿಸಿ ಸ್ವಸ್ಥ ಕುಳಿತನು. ಒಳಗಿನವರು ಒಳಗೇ, ಹೊರಗಿನವರು ಹೊರಗೇ ಆದರು. ಊಟಕ್ಕೆ ಕುಳಿತ ಜಂಗಮರಿಗೆ ಊಟ ಮಾಡಲು ಆಹಾರವೇ ಇಲ್ಲದಾಯಿತು. ಆಗ ಹಾಹಾಕಾರವಿದ್ದು ಪ್ರಭು, ಚನ್ನಬಸವ ಮೊದಲಾದ ಮಹಾನುಭಾವರು ಗಟ್ಟಿವಾಳಯ್ಯನಿಗೆ ಸಮಾಧಾನ ಹೇಳಿ ಅವನಲಿಂಗವನ್ನು ಅವನಿಗೆ ಕೊಡಿಸಿದರು.

ವೀರನಾಚಯ್ಯನೆಂಬ ಶರಣನ ಧರ್ಮಪತ್ನಿಗೆ ಗುರುಗಳು ಬಂದು ಅಷ್ಟಮ ಮಾಸ ದಲ್ಲಿ ಗರ್ಭಕ್ಕೆ ಲಿಂಗಧಾರಣ ಮಾಡಿದರು. ಆದರೆ ಆ ಸಾಧ್ವಿಯು ಎರಡು ಮಕ್ಕಳನ್ನು ಹಡೆದಳು. ಮೊದಲು ಹುಟ್ಟಿದ ಕೂಸಿಗೆ ಲಿಂಗಧಾರಣವಾಗಿ ಅದಕ್ಕಷ್ಟೇ ಮೊಲೆಗುಡಿಸಿ, ಹಿಂದುಗಡೆ ಹುಟ್ಟಿದ ಕೂಸಿಗೆ ಲಿಂಗಧಾರಣವಿಲ್ಲದ್ದಕ್ಕಾಗಿ ಅದು ಭವಿಯೆಂದು ಬಗೆದು ಅದಕ್ಕೆ ಮೊಲೆಗುಡಿಸಲಾರೆ ಎಂದು ಹಟಹಿಡಿದಳು. ಆಗ ಅನುಭವಮಂಟಪದಲ್ಲಿ ಪ್ರಭು, ಚನ್ನಬಸವ, ಮುಂತಾದವರು ಕೂಸು ಹುಟ್ಟಿದ ಮೇಲೆಯೂ ಲಿಂಗಧಾರಣ ಮಾಡಲು ಬರುವದೆಂದು ಸಮಾಧಾನಹೇಳಿ ಕೂಸಿಗೆ ಲಿಂಗಧಾರಣಮಾಡಿ ಮೊಲೆಗುಡಿಸಲು ಹೇಳಿದರು.

ಲಿಂಗಪೂಜೆಯಲ್ಲಿ ಬೆರೆತು ಕಾಯಕದಲ್ಲಿ ಔದಾಸೀನ್ಯ ತಾಳಿದ ಆಯ್ದಕ್ಕಿ ಮಾರಯ್ಯನ ಧರ್ಮಪತ್ನಿಯಾದ ಲಕ್ಕಮ್ಮನವರು–

"ಕಾಯಕ ನಿಂದಿತ್ತು, ಹೋಗಯ್ಯಾ ಎನ್ನಾಳ್ದನೇ !
ಭಾವಶುದ್ಧವಾಗಿ ಮಹಾಶರಣರ ತಿಪ್ಪಿಯ ತಪ್ಪಲ ಅಕ್ಕಿಯ
ತಂದು ನಿಶ್ಚಯಿಸಿ ಮಾಡಬೇಕು, ಮಾರಯ್ಯ ಪ್ರಿಯ
ಅಮರೇಶ್ವರಲಿಂಗಕ್ಕೆ ಬೇಗ ಹೋಗು ಮಾರಯ್ಯ"

ಎಂದು ಹೇಳಲು ಅವರು ಅವಸರದಿಂದ ಬಸವೇಶ್ವರನ ಅಂಗಳಕ್ಕೆ ಹೋಗಿ ಅಲ್ಲಿ ಚೆಲ್ಲಿದ ಅಕ್ಕಿಗಳನ್ನು ಕೂಡಿಸಿ ಗಂಟು ಕಟ್ಟಿಕೊಂಡು ಬರಲು ಲಕ್ಕಮ್ಮದೇವಿಯು,

"ಆಶೆಯೆಂಬುದು ಅರಸಿಂಗಲ್ಲದೇ ಶಿವಭಕ್ತರಿಗುಂಟೇ ಅಯ್ಯಾ,
ರೋಷವೆಂಬುದು ಯಮದೂತರಿಗಲ್ಲದೆ ಅಜಾತರಿಗುಂಟೇ ಅಯ್ಯಾ !
ಈಸಕ್ಕಿಯ ಆಶೆ ನಿಮಗೇಕೆ ? ಈಶ್ವರನೊಪ್ಪ, ಮಾರಯ್ಯ ಪ್ರಿಯ
ಅಮರೇಶ್ವರ ಲಿಂಗಕ್ಕೆ ದೂರ ಮಾರಯ್ಯಾ"

ಆಸೆ ಆಮಿಷಗಳಿಂದ ತಂದ ಪಡಿಪದಾರ್ಥಕ್ಕಿಂತಲೂ ಸತ್ಯಶುದ್ಧ ಕಾಯಕದಿಂದ ತಂದ ಹಿಡಿ ಪದಾರ್ಥವೇ ಮೇಲು ಎಂದು ಹೇಳಿ ಹಿಡಿಯಕ್ಕಿಯಲ್ಲಿಯೇ ಪ್ರಸಾದವನ್ನು ಮಾಡಿ ಬಸವೇಶ್ವರರ ದಾಸೋಹದಲ್ಲಿರುವ ಇಡೀ ಜಂಗಮರಿಗೆ ಉಣಬಡಿಸಿ ಸಂತೃಪ್ತಿಗೊಳಿಸಿದಳು.

ಲೌಕಿಕ ಜಂಜಾಟಗಳ ಸದ್ದುಗದ್ದಲವಿಲ್ಲದೆ ಕೇವಲ ಪರಮಾರ್ಥಪಥ ಪ್ರದರ್ಶಕಗಳಾದ ಆಧ್ಯಾತ್ಮಿಕ ವಾದವಿವಾದಗಳೇ ಅನುಭವ ಮಂಟಪದಲ್ಲಿ ನಡೆಯುತ್ತಿದ್ದವು. ೨೦ನೆಯ ಶತಮಾನದಲ್ಲಿ ಅರವಿಂದರ ಪಾಂಡಿಚೇರಿ ಆಶ್ರಮಕ್ಕೆ ದೇಶವಿದೇಶಗಳಿಂದ ಅನೇಕ ಸಾಧಕ ಸಾಧಕಿಯರು ಬರುವಂತೆ ೧೨ನೆಯ ಶತಮಾನದಲ್ಲಿ ಬಸವಣ್ಣನವರು ಸಂಸ್ಥಾಪಿಸಿದ ಅನುಭವ ಮಂಟಪಕ್ಕೆ ಅನೇಕ ಮಹಾನುಭಾವರು, ಸಾಧಕ ಸಾಧಕಿಯರು ಬರುತ್ತಿದ್ದರು. ಶ್ರೀ ಬಸವೇಶ್ವರರ ಮಹಾಮನೆಯಲ್ಲಿರುವ ಶಿವಯೋಗಿಗಳಿಂದ ಒಕ್ಕು ಮಿಕ್ಕ ಪ್ರಸಾದವನ್ನು ತಕ್ಕೊಂಡು ಕೃತಾರ್ಥರಾಗಬೇಕೆಂಬ ಸದುದ್ದೇಶದಿಂದ ಮರುಳಶಂಕರದೇವರೆಂಬವರು ಬಂದು ಬಸವೇಶ್ವರರ ಮಹಾಮನೆಯ ಅಂಗಳದ ಪ್ರಸಾದ ಕುಂಡದ ಬಳಿಯಲ್ಲಿ ಯಾರಿಗೂ ಗೊತ್ತಾಗದಂತೆ ಇರುತ್ತಿದ್ದರು. ಜಂಗಮಲೋಲನೂ, ಅನುಪಮ ಶೀಲನೂ, ನಿರಹಂಭಾವ ಭರಿತನೂ ಆದ ಬಸವದಂಡಾಧೀಶ್ವರರ ಧವಳಕೀರ್ತಿಯನ್ನು ಕೇಳಿ ತೇಜೋಮೂರ್ತಿಯಾದ ನಿರಂಜನ ಪ್ರಭುದೇವರು ಕಲ್ಯಾಣದಲ್ಲಿರುವ ಬಸವರಸರ ರಾಜಭವನಕ್ಕೆ ತೆರಳಲು ಪ್ರಸಾದ ಕುಂಡದ ಬಳಿ ಇರುವ ಮರುಳಶಂಕರದೇವರು, ಹುಣ್ಣಿಮೆಯ ಚಂದ್ರನುದಯಕ್ಕೆ ಸಮುದ್ರವು ಉಕ್ಕಿಬರುವಂತೆ, ಪ್ರಭುದೇವರ ಬಳಿಗೆಬಂದು ಸಾಷ್ಟಾಂಗ ಪ್ರಣಾಮ ಮಾಡಿದರು. ಪ್ರಸಾದ ತೇಜೋಭರಿತನಾಗಿ ಪ್ರಭಾಪುಂಜದಂತಿರುವ ಮಹಾ ಪ್ರಸಾದಿಯಾದ ಮರುಳಶಂಕರದೇವರನ್ನು ಕಂಡು ಪ್ರಭುದೇವರು ಬಸವರಾಜನೇ ನಿನ್ನ ಮಹಾಮನೆಗೆ ಇಂದು ಒಂದು ಮಹಾಅದ್ಭುತವನ್ನು ನೋಡಿದೆವು ಎಂದು ಹೇಳಲು ಬಸವೇಶ್ವರರು ದೇವಾಧಿದೇವ ತಮ್ಮ ಶುಭಾಗಮನಕ್ಕಿಂತಲೂ ಹೆಚ್ಚಿನ ಅಚ್ಚರಿಯ ಸಂಗತಿಯು ಅದಾವುದಿದೆ? ಲೋಕದಲ್ಲಿ ಪರುಷಮಣಿಗಿಂತ ಮೇಲಾದ ಮಣಿಯುಂಟೇ ? ನಿಮ್ಮಿಂದಲಧಿಕವಾದ ಅಚ್ಚರಿಯುಂಟೇ ? ಎಂದುಸುರಲು, ಬಸವರಾಜನೇ ನಾವು ಬರುವದಕ್ಕಿಂತ ಮುನ್ನವೇ ಓರ್ವ ಮಹಾನುಭಾವರು ಬಂದಿರುವರು. ಅವರ ಶುಭಾಗಮನದ ಸುಳುಹು ನಿನಗೆ ತಿಳಿದಿಲ್ಲ.

> " ಬೀದಿಯಲ್ಲಿ ಬಿದ್ದ ಮಾಣಿಕ್ಯವ, ಹೂಳಿರ್ದನಿಧಾನವನಾರಿಗೂ
> ಕಾಣಬಾರದು ನೋಡಾ ಮರಣವುಳ್ಳವರಿಗೆ ಮರುಜೀವಣಿ
> ಸಿಕ್ಕುವದೇ ? ಪಾಪಿಯ ಕಣ್ಣಿಗೆ ಪರುಷ ಕಲ್ಲಾಗಿಪ್ಪಂತೆ,
> ಇಪ್ಪರಯ್ಯ ಶಿವಶರಣರು. ನಮ್ಮ ಗುಹೇಶ್ವರನ ಶರಣ ಮರುಳ
> ಶಂಕರದೇವರ ನಿಲವ ನೋಡಾ ಸಂಗನ ಬಸವಣ್ಣ ನಿನ್ನ ಭಕ್ತಿವೃಕ್ಷದ
> ಪಸರಣೆಯನ್ನು ಆಶ್ರಯಿಸಬೇಕೆಂದು ಒಸೆದು ಬಂದ ಮಹಾತ್ಮರು
> ಅಗಣಿತ. ಅವರಲ್ಲಿ ಈತನಿಗೆ ವಸುಮತಿಯಲ್ಲಿ ಎಣೆಯಿಲ್ಲ,
> ಇಂತಪ್ಪ ಅಸಮರೆಲ್ಲರೂ ನಿನ್ನ ಬಾಗಿಲವನ್ನು ಮುಸುರಿಕೊಂಡಿಹರಾಗಿ
> ನೀನೇ ಕೃತಾರ್ಥನಲ್ಲವೇ ? "

ಮರುಳ ಶಂಕರದೇವನು ಅರಿವಿನ ತಿರುಳು, ಲಿಂಗಾಗಮನದ ಹೊಳಹಿನ ಹುರುಳು, ಕರಣವೆಲ್ಲವು ಕರಗಿ ಅಂತಃಕರಣ ಶುದ್ಧಿಯ ಪಡೆದು ಶಂಕರನ ಸಾಧಕರೊಕ್ಕು ಮಿಕ್ಕುದನುಂಡು ಕಾಮದಲಿ ಕಂಗೆಡದೆ. ಕ್ರೋಧಸ್ತೋಮದಲಿ ಮುಂಗೆಡದೆ,...... ಬಾಳಿಕೆಗೆ ನಿರ್ಬಾಧಕದ ಸಮ್ಮೇಳನವೆಂದು ಈಶಪ್ರಸಾದವ ಮೆಚ್ಚಿದ ಮಹಿಮನೀತ. ಇಂದ್ರಿಯವನಲ್ಲಿಗಳೆದು ಅಳುಪಿನ ದಂದುಗವ ಧಿಕ್ಕರಿಸಿ ಭವಬಂಧನದ ಬೇರಿಗೆ ಕಿಚ್ಚನಿಕ್ಕಿದ ಅಚ್ಚಶರಣನೀತ. ಎಂದು ಪ್ರಭುದೇವರೇ ಮರುಳ ಶಂಕರದೇವರ ಮಹೋನ್ನತವಾದ ಮಹಿಮೆಯನ್ನು ಕೊಂಡಾಡಿರುವರು.

ಪ್ರಸಾದವೇ ಪ್ರಾಣವಾಗಿ, ಪ್ರಸಾದವೇ ಕಾಯವಾಗಿ, ಪ್ರಸಾದವೇ ಜ್ಞಾನ, ಪ್ರಸಾದವೇ ಧ್ಯಾನ, ಲಿಂಗಭೋಗೋಪಭೋಗಿಯಾದ ಮರುಳ ಶಂಕರದೇವರು ಪ್ರಸಾದ ಕುಂಡದ ಪಕ್ಕದಿಂದ ಹೊರಬಂದು ಪ್ರಭುದೇವರಿಗೆ ಸಾಷ್ಟಾಂಗಪ್ರಣಾಮಮಾಡಿ ಪರಮ ಹರುಷದಿಂದ —

" ಗುರುವ ಕಂಡೆನು ಎನ್ನ ಭಾಗ್ಯದ !
ತರುವ ಕಂಡೆನು ಎನ್ನ ಮುಕ್ತಿಯ ।
ಸಿರಿಯು ಕಂಡೆನು ॥ "

" ಬಾರೆನ್ನ ಕುಲವೆ ಚಲವೇ । ಬಾರೆನ್ನಯ ಸುಕೃತದೊಲವೆ
ನಿತ್ಯದ ಬಲವೇ । ಬಾರೆನ್ನ ಬಗೆಯ ನಲವೇ ।
ಬಾರೆನ್ನಯ ನಿಜದ ನಿಲವೇ ಪರಮಪ್ರಭುವೇ "

ಎಂದು ಹಿಗ್ಗಿಹಾಡಿ ಕುಣಿದಾಡಿದನು. ಮತ್ತೂ

" ಗರ್ಭದೊಳಗಣ ಶಿಶು ನವಮಾಸವ ಹಾರಿಕೊಂಡಿರ್ಪಂತೆ ಇರ್ದೆನಯ್ಯಾ ।
ಎನ್ನ ಜನ್ಮ ಸಫಲವಾಯಿತ್ತಯ್ಯಾ । ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ
ಪ್ರಭುವೇ ಶಾಂತಮಲ್ಲಿಕಾರ್ಜುನದೇವಯ್ಯ ಬಸವರಾಜ ದೇವರ
ದಯದಿಂದ ಪ್ರಭುದೇವರ ಶ್ರೀಮೂರ್ತಿಯಕಂಡು ಬದುಕಿದೆನು
ಶರಣು ಶರಣಾರ್ಥಿ ಸಕಲಪುರಾತನರಿಗೆ, ಎಂದು ಎಲ್ಲರಿಗೆ ಕೈಮುಗಿದು ನಿಂತನು.

ಮರುಳಶಂಕರದೇವರು ೧೨ವರುಷ ಪ್ರಸಾದಕುಂಡದ ಪಕ್ಕದಲ್ಲಿದ್ದರೂ ಯಾರಿಗೂ ಕಾಣದೇ ಹೇಗೆ ಗುಪ್ತರಾಗಿದ್ದರೆಂಬುದನ್ನು ಚಾಮರಸನು—

" ಶಿಲೆಯ ಮರೆಯುಲಿ ಹೊನ್ನುನೆಟ್ಟನೆ ।
ತಿಲದ ಮರೆಯಲಿ ತೈಲ ಭಾವಿಸೆ ।
ನೆಲದ ಮರೆಯ ನಿಧಾನವಿಹವೊಲು ಮರುಳವೇಷದಲಿ ।
ಬಳಿಯಲಿಗೆ ಸಾಕಾರ ಶಂಕರ ।
ನೆಲಸಿ ತನ್ನಂಗಣದಲಾತನ ।
ಹೊಲಬನರಿಯನು ಬಸವನೆನುತಲ್ಲಮನು ಬೆರಗಾದ ॥

ಎಂದು ಹೇಳಿರುವನು. ಮಹಾಮಹಿಮರಾದ ಮರುಳಶಂಕರದೇವರು ನನ್ನ ಮನೆಯ ಅಂಗಳದಲ್ಲಿಯೇ ಇದ್ದರೂ ಅವರನ್ನು ತಿಳಿಯದೇ ಹೋದೆನಲ್ಲ ಎಂದು ಬಸವಣ್ಣನವರು ಮರುಗಿ–

"ನಡುತೊರೆಯೊಳಗೆ ಹರಿಗೋಲನಿಳಿದಂತಾಯಿತ್ತೆನ್ನ ಭಕ್ತಿ
ಮರನೇರಿ ಕೈಯ ಬಿಟ್ಟಂತಾಯಿತ್ತೆನ್ನ ಭಕ್ತಿ
ಶಿವಶಿವ ಕೆಟ್ಟೆನಲ್ಲ ಗುರುವೆ ಕೂಡಲಸಂಗಮದೇವ
ಈ ಮರುಳ ಶಂಕರದೇವರಕೃಪೆ ಎನಗಿನ್ನೆಂತಪ್ಪುದು ಹೇಳಾ ಪ್ರಭುವೇ"

ಎಂದು ಅಂಗಲಾಚಿ ಬೇಡಿಕೊಂಡರು. ಆಗ ಪ್ರಭುದೇವರು–

"ಹೂಮಿಡಿಯ ಹರಿದು ಒತ್ತಿ ಹಣ್ಣು ಮಾಡಿಹೆನೆಂದರೆ
ಹಣ್ಣಾಗಬಹುದೇ ? ಪರಿಮಳವಿಲ್ಲದ ನನೆಯನರಳಿಸಿ
ಮುಡಿದಿಹೆನೆಂದರೆ ಸೌರಭ ಉಂಟೇ ? ಶಿವಶರಣರ
ನಿಲವ ಕಾಂಬ ಕಾಲಕ್ಕೆ ಕಾಣಬಹುದಲ್ಲದೆ ಎಲ್ಲ ಹೊತ್ತು
ಕಾಣಬಹುದೇ ? ಆಹ ಕಾಲಕ್ಕೆ ತಾನೆಯಪ್ಪುದು
ಗುಹೇಶ್ವರನ ಶರಣರನಿಲವ ಕಂಡಬಳಿಕ ಮರುಹು
ಬೆಳಗಕಂಡ ಕತ್ತಲೆಯಂತೆ ಹರಿವುದು ನೋಡಾ ಸಂಗನಬಸವಣ್ಣ"

ಎಂದು ಹೇಳಲು ಬಸವಣ್ಣನವರು ಮರುಳಶಂಕರರ ಶ್ರೀಪಾದಕ್ಕೆ ಸಾಷ್ಟಾಂಗವೆರಗಿ–

"ಮುಗಿಲ ಮರೆಯ ಮಿಂಚಿನಂತೆ
ಒಡಲ ಮರೆಯ ಆತ್ಮನಂತೆ
ನೆಲದಮರೆಯ ನಿಧಾನದಂತೆ ಇಪ್ಪ ನಿಮ್ಮ ನಿಲವನಾರುಬಲ್ಲರು ?
ದೇವ ನಿಮ್ಮ ನಿಲವ ಹಲಕಾಲದಿಂದ
ಕಂಡು ಕಂಡು ಕಡೆಗಾಣಿಸಿ ಮರೆದು ಮತಿಗೆಟ್ಟು
ಮರುಳಾದೆನು. ಎನ್ನ ತಪ್ಪಿಂಗೆ ಕಡೆ ಇಲ್ಲ ಕಾಣಾ
ತ್ರಾಹಿ ತ್ರಾಹಿ ಕಾಯಯ್ಯಾ ಕೂಡಲ ಸಂಗಮದೇವಾ"

ಎಂದು ಬೇಡಿಕೊಂಡರು.

ವಿರಾಗ ವಿಭುವಾದ ಪ್ರಭುದೇವರು, ಕರ್ಮಯೋಗಿ ಶ್ರೀ ಸಿದ್ಧರಾಮದೇವರು, ಭಕ್ತಿಭಾಂಡಾರಿ ಬಸವಣ್ಣನವರು, ಷಟ್‌ಸ್ಥಲಚಕ್ರವರ್ತಿ ಚನ್ನಬಸವೇಶ್ವರರು, ನ್ಯಾಯ ನಿಷ್ಠುರವಾದಿ ಮಡಿವಾಳ ಮಾಚಯ್ಯನವರು, ದಯಾಮೂರ್ತಿ ಕಿನ್ನರಿ ಬ್ರಹ್ಮಯ್ಯ ಮುಂತಾದ ಪ್ರಮಥರು ಮಹಾಪ್ರಸಾದಿಯಾದ ಮರುಳಶಂಕರದೇವರನ್ನು ಹಾಡಿ ಹರಸಿದರು.

ಲಿಂಗಭೋಗೋಪಭೋಗಿಯೂ, ಮಹಾಪ್ರಸಾದಿಯೂ, ನಾನೀ ಎಂಬ ಶಬ್ದ ಭೇದ ರಹಿತನೂ, ಬಾಹ್ಯ ಪ್ರಪಂಚ ಪ್ರಜ್ಞಾರಹಿತನೂ ಆದ ಮರುಳಶಂಕರದೇವರು ಪ್ರಭು

ದೇವರ ಪ್ರಭಾವದಿಂದ, ಆಕಾಶದಲ್ಲಿ ಇಂದ್ರಧನುಸ್ಸೂ, ದೊಡ್ಡಗಾಳಿಯಲ್ಲಿ ಸುಳಿಗಾಳಿಯೂ, ಬೆಂಕಿಯಲ್ಲಿ ಕಿಡಿಯೂ, ನೀರಿನಲ್ಲಿ ಆಣೇಕಲ್ಲೂ, ಅಪ್ಪುವಿನಲ್ಲಿ ಉಪ್ಪೂ ಕೂಡಿದಂತೆ ಅನಾದಿ ಪರಶಿವನಲ್ಲಿ " ನಾನು ಬಸವಣ್ಣನ ಮುಂದೆ ಬಯಲಾದೆನಯ್ಯಾ " ಎಂದು ಬಯಲಾದರು.

ಜ್ಯೋತಿ ಕಪ್ಪುರಗಳು ಬೇರೆ ಬೇರೆಯಾಗಿದ್ದರೂ ಬೇರಿದ್ದ ಕಪ್ಪುರವು ಜ್ಯೋತಿಯ ಸಂಗವಮಾಡಿ ತಾನೂ ಜ್ಯೋತಿಯೇ ಆಗಿ ಹೋಗುವಂತೆ ಲಿಂಗ ಭೋಗೋಪಭೋಗಿಯಾದ ಮರುಳಶಂಕರದೇವರು ಲಿಂಗದ ಸಂಗದಿಂದ ತಾವೂ ಲಿಂಗವೇ ಆಗಿಹೋದರು. ಆಗ ಸುಜ್ಞಾನಿಯಾದ ಚನ್ನಬಸವಣ್ಣನವರು –

" ಮಾಡಬಾರದ ಭಕ್ತಿಯನೆ ಮಾಡಿ,
ನೋಡಬಾರದ ನೋಟವನೆ ನೋಡಿ,
ಕೂಡಬಾರದ ಕೂಟವನೆ ಕೂಡಿ,
ಸ್ತುತಿಸುವವರಿಗೆ ಸ್ತುತಿಗೆ ಬಾರದೆ,
ಬಟ್ಟಬಯಲಾಗಿ ಹೋದ ಮರುಳಶಂಕರದೇವರ
ಮಹಾತ್ಮೆಗೆ ನಮೋನಮೋ ಎಂದು ಬದುಕಿದೆನು
ಕಾಣಾ ಕೂಡಲಚನ್ನಸಂಗಮದೇವಾ ! "

ಎಂದು ಹಾಡಿದರು; ಉಳಿದ ಪ್ರಮಥರು ಹಿಮ್ಮೇಳದವರಂತೆ ತಮ್ಮ ದನಿಗೂಡಿಸಿದರು.

## ೧೬ನೆಯ ಗತಿ

# ಇಷ್ಟಲಿಂಗದ ವಿವರಣೆ

ಬ್ರಹ್ಮಾಂಡದಲ್ಲಿ ಕೋಟಿ ಕೋಟಿ ಮಾನವರು ಬಾಳಿ ಬದುಕುವರು. ಶಿಲಾಯುಗದ ಮಾನವನನ್ನು ಮೊದಲುಗೊಂಡು ಆಧುನಿಕ ವಿಜ್ಞಾನಯುಗದ ಮಾನವನವರೆಗೆ ವಿಚಾರಿಸಿದರೂ ಅವರೆಲ್ಲರೂ ಒಂದಿಲ್ಲೊಂದುಬಗೆಯಲ್ಲಿ ದೇವೋಪಾಸಕರಾಗಿ ಸುಖಕ್ಕಾಗಿಯೇ ಹಂಬಲಿಸುವರೆಂದು " ಸುಖಮೇವಹಿ ಸರ್ವೇಷಾಂ ದೇಹಿನಾಂಧ್ಯೇಯಮಾಹುಃ " ಎಂಬ ಋಷಿವಾಣಿಯಿಂದ ತಿಳಿದುಬರುವದು. ಜೀವನದ ಪರಮೋಚ್ಚಧ್ಯೇಯವೆನಿಸಿದ ಸುಖಪ್ರಾಪ್ತಿಯನ್ನು ಹೇಗೆ ಮಾಡಿಕೊಳ್ಳಬೇಕು ? ಅದಕ್ಕೆ ಸಾಧನವೇನು ? ಈ ಮಹತ್ವದ ತಾತ್ವಿಕ ಪ್ರಶ್ನೆಗೆ –

" ಸುಖಸ್ಯ ಮೂಲಂಧರ್ಮಃ " " ಸುಖಂತುನವಿನಾಧರ್ಮಾತ್ "
ತಸ್ಮಾದ್ಧರ್ಮ ಪರೋಭವೇತ್ ।
" ಸಂಸಾರ ಸಾಗರೇऽಗಾಧೇ ಕಾಮಾದಿಗ್ರಹಸಂಕುಲೇ ।
ಮಜ್ಜತಾಂ ಮನುಜಾನಾಂಹಿ ಧರ್ಮಃ ಪರತರಾನೌಃ " ।
" ಧರ್ಮಏವ ಹತೋಹಂತಿ ಧರ್ಮೋ ರಕ್ಷತಿ ರಕ್ಷಿತಃ "

ಎಂದು ಋಷಿಗಳು ಸದುತ್ತರವನ್ನಿತ್ತಿರುವರು.

" ಧ್ರೀಯತೇಲೋಕಃ ಅನೇನ ಇತಿ ಧರ್ಮಃ "
ಪತಿತಂ, ಪತಂತಂ, ಪತಿಷ್ಯಂತಂ ಧರತೀತಿ ಧರ್ಮಃ "

ದುಃಖ ಸಾಗರದಲ್ಲಿ ಬಿದ್ದು ಒದ್ದಾಡುವ ಬದ್ಧಜೀವನು ಯಾವ ಒಳ್ಳೆಡೆ ಒಳ್ನುಡಿಗಳಿಂದ ಉದ್ಧರಿಸಲ್ಪಡುವನೋ ಅದೇ ಧರ್ಮ. ಶ್ರೀಮನ್ನಿಜಗುಣರು:-

" ಹಿತವಾವುದು ಇಹಪರದೊಳು ? " ಎಂದು ಪ್ರಶ್ನಿಸಿ " ಧರ್ಮರತಿ " ಎಂದು ತಾವೇ ಉತ್ತರವನ್ನು ಕೊಟ್ಟಿರುವರು. ಈ ಧರ್ಮವು ಸಾಮಾನ್ಯಧರ್ಮ, ವಿಶೇಷಧರ್ಮವೆಂದು ಇಬ್ಬಗೆಯಾಗಿದೆ. ಮಾತೃದೇವೋಭವ ಪಿತೃದೇವೋಭವ " ಸತ್ಯಂವದ " " ಧರ್ಮಂಚರ" " ಮಾಹಿಂಸ್ಯಾತ್ ಸರ್ವಭೂತಾನಿ " " ನಪರದಾರಾನ್ ಗಚ್ಛೇತ್ " ಕಳಬೇಡ ಕೊಲಬೇಡ ಹುಸಿಯನುಡಿಯಲುಬೇಡ, ತನ್ನಬಣ್ಣಿಸಬೇಡ ಇವು ಅಖಿಲಮಾನವಕೋಟಿಗೆ ಅನ್ವಯಿಸುವ ಸಾಮಾನ್ಯ ಧರ್ಮವೆನಿಸಿದರೆ, " ಶಿವಲಿಂಗಂ ತ್ರಿಸಂಧ್ಯಂ ಅಭ್ಯರ್ಚಯೇತ್ " ಅಹರಹಃ ಸಂಧ್ಯಾಮುಪಾಸೀತ " " ಪರತರ ಶಿವಲಿಂಗವೆಳಸಿ ನಿನಗಾಗಿ ಕರಕಂಜದೊಳು ಕಾಣಿಸಿತು ಯೋಗಿಯಜಿಸು " ಎಂಬ ಆದ್ಯರ ಪ್ರಮಾಣವಚನಗಳು ಕೆಲಜನರಿಗೆ ವಿಶಿಷ್ಟ ಧರ್ಮವನ್ನು ಬೋಧಿಸುತ್ತವೆ.

ಚತುರ್ವೇದಗಳಲ್ಲಿ, ಆಗಮಗಳಲ್ಲಿ, ಈಶಾವಾಸ್ಯಾದಿದಶೋಪನಿಷತ್ತುಗಳಲ್ಲಿ, ಸ್ಥೂಲವಾಗ್ಗಿ, ಸೂಕ್ಷ್ಮವಾಗಿ, ಸೂಕ್ಷ್ಮಾತಿಸೂಕ್ಷ್ಮವಾಗಿ, ಷಡ್ದರ್ಶನಗಳ ಷಣ್ಮತಗಳ, ಎಲ್ಲಮತ-

ತಾಂತರಗಳ ಹಲವಾರು ತಾತ್ವಿಕ ಮೌಲ್ಯಗಳು ಇದ್ದೇಇರುತ್ತವೆ. ಬೇರೆಬೇರೆ ದಾರ್ಶನಿಕರು, ಮತಸಂಸ್ಥಾಪಕರು ವಿವಿಧಮತ-ಪಂಥ-ದರ್ಶನಗಳನ್ನು ಹೇಳಿದರೂ ಅವೆಲ್ಲವೂ ವಿಶ್ವದಲ್ಲಿ ರುವ ನಾಸ್ತಿಕ, ಆಸ್ತಿಕ ಎಂಬ ಎರಡೇಮತಗಳಲ್ಲಿ ಸಮಾವೇಶಗೊಳ್ಳುತ್ತವೆ.

ಉಪನಿಷತ್ಕಾರರು ಜಗತ್ಕಾರಣೀಭೂತನಾದ ಪರಾತ್ಪರ ಪರಶಿವನ ಸ್ವರೂಪವನ್ನು-

"ನಜಾಯತೇಮ್ರಿಯತೇವಾ ವಿಪಶ್ಚಿನ್ನಾಯಂ
ಕುತಶ್ಚಿನ್ನಬಭೂವಕಶ್ಚಿತ್, । ಅಜೋನಿತ್ಯಃ
ಶಾಶ್ವತೋ ಽ ಯಂ ಪುರಾಣಃ ನಹನ್ಯತೇಹನ್ಯಮಾನೇ
ಶರೀರೇ ॥ " ಅಣೋರಣೀಯಾನ್. ಮಹತೋ
ಮಹೀಯಾನ್ । ಎಂದು ಬಣ್ಣಿಸಿದರೆ, ವಚನಕಾರರು-

" ಆದಿಅನಾದಿಇಲ್ಲದಂದು । ಹಮ್ಮುಬಿಮ್ಮುಗಳಿಲ್ಲದಂದು,
ಸುರಾಳನಿರಾಳವಿಲ್ಲದಂದು । ಶೂನ್ಯನಿಶೂನ್ಯವಿಲ್ಲದಂದು
ಸಚರಾಚರವೆಲ್ಲರಚನೆಗೆ ಬಾರದಂದು
ಗುಹೇಶ್ವರನೊಬ್ಬನೇ ಇದ್ದೆಯಲ್ಲ, ಇಲ್ಲದಂತೆ"

" ತಾಯಿ ತಂದೆ ಇಲ್ಲದಕಂದಾ ನಿನಗೆನೀನೆ ಹುಟ್ಟಿಬೆಳೆದೆಯಲ್ಲ
ನಿನ್ನಪರಿಣಾಮವೇ ನಿನಗೆತೃಪ್ತಿಯಾಗಿ ಇದ್ದೆಯಲ್ಲ !
ಭೇದಕರಿಗೆ ಅಭೇದ್ಯನಾಗಿ ನಿನ್ನನೀನೇ ಬೆಳಗುತಿರ್ದೆಯಲ್ಲ !
ನಿನ್ನಚಾರಿತ್ರ್ಯ ನಿನಗೆಸಹಜ ಗುಹೇಶ್ವರಾ,, ॥ ಎಂದು ಎದೆದುಂಬಿ

ಹಾಡಿರುವರು. ಆ ನಿರ್ಗುಣ, ನಿರಂಜನ, ನಿರವಯ, ನಿರುಪಮ, ನಿರಾಲಂಬ, ನಿಷ್ಕ್ರಿಯ ನಿರಘ, ನಿಶ್ಶೂನ್ಯ, ಪರಾತ್ಪರ ಪರವಸ್ತುವನ್ನೇ ಏಕಂಸದ್ವಿಪ್ರಾಬಹುಧಾವದಂತಿ, ದೇವ-ನೊಬ್ಬ ನಾಮಹಲವು, ಎಂಬುಕ್ತಿಯಂತೆ ಓರ್ವ ದೇವನನ್ನೇ ಹಲವು ಮಂತೀಯರು ಹಲವು ನಾಮಗಳಿಂದ ಕರೆಯುವರು.

" ಯಂಶೈವಾಃ ಸಮುಪಾಸತೇ ಶಿವ ಇತಿ ।
ಬ್ರಹ್ಮೇತಿ ವೇದಾಂತಿನಃ ।
ಬೌದ್ಧಾ ಬುದ್ಧ ಇತಿ ಪ್ರಮಾಣ ಪಟವಃ ।
ಕರ್ತೇತಿನೈಯಾಯಿಕಾಃ ।
ಅರ್ಹನ್ನಿತ್ಯರ್ಥ ಜೈನಶಾಸನರತಾಃ ।
ಕರ್ಮೇತಿ ಮೀಮಾಂಸಕಾಃ ।
ಸೋಯಂನೋವಿದಧಾತು ವಾಂಛಿತಫಲಂ ।
ತ್ರೈಲೋಕ್ಯನಾಥೋವಿಭುಃ ॥

ಈ ಶ್ಲೋಕವು ಶಿಲಾಶಾಸನದಲ್ಲಿ ಮೂಡಿ ಬಂದಿದೆ. ಶ್ರೀಮನ್ನಿರಂಜನ ಜಗದ್ಗುರು ಶಿವಯೋಗಿಗಳು-

"ಶ್ರುತಿಮತಿ ನಿಷ್ಕಳ ಬ್ರಹ್ಮವೆ ಎಂದು ।
ನುತ ತಾಂತ್ರಿಕನರಿದು ಪರಶಿವನೆಂದು ।
ಮತ್ತೆ ಕೆಲರು ನಿಜಲಿಂಗಮಿದೆಂದು ।
ಮತ್ತೆ ಕೆಲರು ನಾರಾಯಣನೆಂದು ।
ಆ ಸಾಂಖ್ಯರುಗಳೆ ಪುರುಷನಿದೆಂದು ।
ವೈಶೇಷಿಕರಿದನೀಶ್ವರನೆಂದು ।
ಕೆಲಬರು ಬೌದ್ಧರು ಶೂನ್ಯಮಿದೆಂದು ।
ಸಂಕಲ್ಪದ ಭೇದವನುಳ್ಳಂತೆ ।
ಶಂಕಿಸದುಸುರುವರವರರಿದಂತೆ ॥"

ಎಂದು ಪರಮಾರ್ಥಗೀತೆಯಲ್ಲಿ ಹೇಳಿರುವರು.

ವಿವಿಧ ಶಾಖೆಗಳುಳ್ಳ ಶಿವವೆಂಬ ಮಹಾವೃಕ್ಷದ ಸುಮಧುರ ಫಲದಂತಿರುವದು ವೀರಶೈವವು. ಆಸೇತುಹಿಮಾಚಲದ ಪರ್ಯಂತರ ಇದ್ದ ಕೇದಾರೇಶ್ವರ, ಶ್ರೀ ಸೋಮನಾಥ, ಮಲ್ಲಿಕಾರ್ಜುನ ಮುಂತಾದ ದ್ವಾದಶಜ್ಯೋತಿರ್ಲಿಂಗಗಳೂ, ಮತ್ತು ಶಹರ ಗ್ರಾಮಗಳಲ್ಲಿರುವ ಅನೇಕಲಿಂಗಗಳೂ, ದೇವಾಧಿದೇವತೆಗಳು ಪೂಜಿಸುವ ಸುವರ್ಣಲಿಂಗ, ರಜತಲಿಂಗ, ಸ್ಫಟಿಕಲಿಂಗಗಳೂ, ಶಬರವೇಷವ ತಾಳ್ದ ಶಂಕರನಿಂದ ಸೋಲುಂಟಾದಾಗ ಅರ್ಜುನನು ಪೂಜಿಸಿದ ಮಳಲಲಿಂಗವೂ, ಪ್ರಭುಲಿಂಗಲೀಲೆಯಲ್ಲಿ ಚಾಮರಸನು ಹಿಂದೆ ೧೫ ಗತಿಗಳೊಳಗೆ ಒಂದೊಂದು ಗತಿಯಲ್ಲಿ ಅಂದರೆ ೨ ನೆಯ ಗತಿಯಲ್ಲಿ « ಪಾರ್ವತೀ ಪರಮೇಶ್ವರ ಸಂವಾದ » ವನ್ನು ಹೇಳಿ ೧೧ - ೧೨ ನೆಯ ಗತಿಗಳಲ್ಲಿ ಗೊಗ್ಗಯ್ಯ ಮುಕ್ತಾಯಕ್ಕಗಳ ವಿಷಯವನ್ನು ಹೇಳಿ ೧೬ ನೆಯ ಗತಿಯಲ್ಲಿ ಕೇವಲ ಇಷ್ಟಲಿಂಗದ ವಿಷಯವನ್ನೇ ಹೇಳುತ್ತಾನೆ. ಆದುದರಿಂದ ೧೬ ನೆಯ ಗತಿಯ ಶಿರೋನಾಮೆ ಇಷ್ಟಲಿಂಗವೆಂದಿದೆ. ಸಾಮಾನ್ಯವಾಗಿ ಲಿಂಗವೆಂಬ ಶಬ್ದಕ್ಕೆ ಚಿಹ್ನ. ಗುರುತು, ಶಿವನ ಒಂದು ಪ್ರತೀಕ,ಪುರುಷ ಚಿಹ್ನ, ಗಂಡೇ ಹೆಣ್ಣೇ ಅಥವಾ ಬೇರೆಯೇ ಎಂಬುದನ್ನುಸೂಚಿಸುವ ವ್ಯಾಕರಣ ಪ್ರಕ್ರಿಯೆ ಹೀಗೆ ವಿವಿದಾರ್ಥಗಳಿವೆ. ಶೈವರು ದೇವಾಲಯಗಳಲ್ಲಿ ಪೂಜಿಸುವ ಲಿಂಗಕ್ಕೆ ಸ್ಥಾವರ ಲಿಂಗವೆಂದು ಹೇಳುವರು. ವೀರಶೈವರು ಲಿಂಗದ ಮೇಲೆ ಧರಿಸಿ ಅಂಗೈಯೊಳಗೆ ಪೂಜಿಸುವಲಿಂಗಕ್ಕೆ ಇಷ್ಟಲಿಂಗ, ಶಿವಲಿಂಗ, ಚಿಲ್ಲಿಂಗ, ಚರಲಿಂಗ ಎಂದು ಹೇಳುವರು.

ತತ್ತ್ವಶಾಸ್ತ್ರದಲ್ಲಿ ಓಂಕಾರವು ಹೇಗೆ ಸಕಲ ವೇದಶಾಸ್ತ್ರಾಗಮ ಪುರಾಣಗಳ ಸಾರವೆನಿಸಿ ಮೇಲೆನಿಸಿ ಮೆರೆವುದು. ಅಂತೆಯೇ ಅದಕ್ಕೆ ಮೂಲಮಂತ್ರ, ಮೂಲಪ್ರಣವ ಎಂದು ಹೇಳುವರು. ಸಕಲ ಮಂತ್ರಗಳ ಆದಿಯಲ್ಲಿ ಓಂ, ಎಂಬ ಮೂಲಮಂತ್ರವಿದ್ದೇ ಇರುವದು, ಅದಿಲ್ಲದ ಮಂತ್ರ ನಿಷ್ಪ್ರಯೋಜಕ, ನಿಷ್ಫಲ, ನಿರರ್ಥಕ. ಓಂಕಾರವು ಹೇಗೆ ತತ್ತ್ವಶಾಸ್ತ್ರದಲ್ಲಿ ಪ್ರಾಮುಖ್ಯತೆಯನ್ನು ಪಡೆದಿದೆಯೋ ಹಾಗೆ ಶಿವ ಸಾಹಿತ್ಯದಲ್ಲಿ ಲಿಂಗವೆಂಬ ಶಬ್ದವಾದರೂ ಅನೇಕ ಅರ್ಥಗಳನ್ನು ಗರ್ಭೀಕರಿಸಿಕೊಂಡು ಪ್ರಾಧಾನ್ಯತೆಯನ್ನು ಪಡೆದಿದೆ.

ಶೈವರು ಪೂಜಿಸುವ ಸ್ಥಾವರ ಲಿಂಗಗಳು ಅಂದರೆ ಸುವರ್ಣಲಿಂಗ, ಪಚ್ಚೆಲಿಂಗ ರಜತಲಿಂಗ, ಸ್ಫಟಿಕಲಿಂಗ, ಮೃಣ್ಮಯಲಿಂಗ, ಮಳಲಲಿಂಗ ಮೊದಲಾದ ಲಿಂಗಗಳಿಗೂ ವೀರಶೈವರು ಅಂಗೈಯಲ್ಲಿ ಪೂಜಿಸುವ ಇಷ್ಟಲಿಂಗಕ್ಕೂ ಮಹದಂತರವಿದೆ. ವೀರಶೈವರು ಧರಿಸುವಲಿಂಗವು ಪಂಚಸೂತ್ರಕ್ಕೆ ಅನುಸರಿಸಿಯೇ ಇರಬೇಕೆಂದು ಹೇಳುವರು.

ಶ್ರೀ ಗುರುವು ಶಿಷ್ಯನಲ್ಲಿರುವ ಪರಾತ್ಪರ ಪರವಸ್ತುವನ್ನೇ ಘೃತಕಾಠಿನ್ಯ ನ್ಯಾಯದಂತೆ ನಿರಾಕಾರವಾದ ಪರಬ್ರಹ್ಮವನ್ನೇ ಸಾಕಾರವಾಗಿಸಿ ಶಿಷ್ಯನ ಕರಕಮಲಕ್ಕೀಯುವನು.ಆ ಇಷ್ಟ ಲಿಂಗವೇ ಅರ್ಚಕನ ಪೂಜಾಪ್ರಭಾವದಿಂದ ಮನಭಾವಂಗಳಲ್ಲಿ ಭೇಧಿಸಿ ಪ್ರಾಣಲಿಂಗ ಭಾವ ಲಿಂಗವಾಗುವದು. ಶಿವಲಿಂಗ ಪೂಜಕನಿಗೆ ಸರ್ವಾಂಗಲಿಂಗ ಸಾಹಿತ್ಯವು ಅಳವಟ್ಟು ಸರ್ವಾಂಗ ಲಿಂಗಿಯಾಗುವನು. ಶೈವರು ಶಿವಾಲಯಗಳಲ್ಲಿರುವ ಲಿಂಗವನ್ನು ಪೂಜಿಸಿದರೆ ವೀರಶೈವರು ಅಂಗದಮೇಲಿರುವ ಲಿಂಗವನ್ನು ಪೂಜಿಸುವರು. ಶೈವ ಹಾಗೂ ವೀರಶೈವರೀರ್ವರೂ ಲಿಂಗವನ್ನೇ ಪೂಜಿಸುತ್ತಿದ್ದರೂ ಅವರು ಅರ್ಚಿಸುವ ಲಿಂಗದ ವಿವೇಚನೆಯಲ್ಲಿ ಮತ್ತು ಲಿಂಗಪೂಜಾಪದ್ಧತಿಯಲ್ಲಿ ಹಾಗೂ ಪೂಜಾಫಲವೆನಿಸಿದ ಮುಕ್ತಿಯಲ್ಲಿ, ಕಟ್ಟುವ ದೇವಾಲಯ, ಲಿಂಗದ ಪರಿವಾರ ಮುಂತಾದ ವಿಷಯಗಳಲ್ಲಿ ಬಹಳ ಅಂತರವಿರುವದು. ಶೈವರು ಶಿವಾಲಯಗಳಲ್ಲಿರುವ ಲಿಂಗಗಳನ್ನು ಶಿವನ ಕುರುಹೆಂದು ಪೂಜಿಸುವರು. ಒಂದು ಭವ್ಯವಾದ ದೇವಾಲಯವನ್ನು ಕಟ್ಟಿಸಿ ಅಲ್ಲಿ ಲಿಂಗ ಪ್ರತಿಷ್ಠಾಪನೆ ಮಾಡಿ ವೈದಿಕರ ಮಂತ್ರ ಪಠನಪೂರ್ವಕ ಸಂಸ್ಕಾರಮಾಡಿ ದೇವತಾಹ್ವಾನವನ್ನಗಿ ಪ್ರಾಣ ಪ್ರತಿಷ್ಠಾಪನೆಗೈದು ಆ ಲಿಂಗವನ್ನು ಪೂಜಾವಿಧಿಗೆ ಯೋಗ್ಯವಾಗುವಂತೆ ಮಾಡುವರು. ಅರ್ಚಕನು ಅರ್ಚನ ಮಾಡುವ ಸಮಯದಲ್ಲಿ ದೇವತೆಯನ್ನು ಆಹ್ವಾನಮಾಡಿ ಪೂಜೆಯು ಸಮಾಪ್ತಿಯಾದ ನಂತರ ದೇವತಾ ವಿಸರ್ಜನ ಮಾಡುವನು. ಪೂಜಾಪ್ರಾರಂಭದಲ್ಲಿ ದೇವತಾಹ್ವಾನ ಮಾಡಿ ಪೂಜಾಂತ್ಯದಲ್ಲಿ ದೇವತಾ ವಿಸರ್ಜನೆ ಮಾಡುವ ಪದ್ಧತಿಯು ವೀರಶೈವ ಷಟ್‌ಸ್ಥಲ ಸಿದ್ಧಾಂತಕ್ಕೆ ಸಲ್ಲದ ಮಾತು. ಇದನ್ನೇ ಜಗದ್ಗುರು ರೇಣುಕಾಚಾರ್ಯರು ಸಿದ್ಧಾಂತ ಶಿಖಾ ಮಣಿಯಲ್ಲಿ ಆಹ್ವಾನನಿರಸನಸ್ಥಲವೆಂದು ಹೇಳಿ ವೀರಶೈವರಲ್ಲಿರುವ ಭೇದವನ್ನು ತೋರಿಸಿರುವರು.

"ಕರೆದೊಡೆಬಂದು ಮತ್ತೆ ತಗುಳ್ಕಡಿಯಿಟ್ಟೊಡೆ ದೈವಮಕ್ಕೆಮೇ"

ಕರೆದಾಗಬಂದು ಹೋಗೆಂದಾಗ ಹೋಗುವವನೆಂತಹ ದೇವರು ? ಎಂದು ಮರಿ ತೋಂಟ ದಾರ್ಯರು ಶೈವಪದ್ಧತಿಗೆ ಗದಾಪ್ರಹಾರ ಮಾಡಿರುವರು. ವಚನಕಾರರು–

"ಜಗದೊಳಹೊರಗೆಲ್ಲ ತೆರಹಿಲ್ಲದೆ ಸಂಭ್ರಮಿಸಿ ತುಂಬಿರ್ಪ.
ಪರವಸ್ತುವ ಆಹ್ವಾನಿಸಿಕರೆದು ವಿಸರ್ಜಿಸಬಿಡುವುದಕ್ಕೆ
ಇಂಬುಂಟೇನೋಮರುಳೆ ? ಇಂತೀ ಅಖಂಡ ಪರಿಪೂರ್ಣ
ಮಾದ ಪರಬ್ರಹ್ಮದ ನಿಲವನರಿಯದೆ ಖಂಡಿತ ಬುದ್ಧಿಯಿಂದ
ಕಲ್ಪಿಸಿ, ಪೂಜಿಸಿ ಕರ್ಮದಬಲೆಯಲ್ಲಿ ಸಿಲ್ಕಿಕಾಲಂಗೆ
ಗುರಿಯಾದವರ ಕಂಡು ಬೆರಗಾದೆನಯ್ಯಾ ಅಖಂಡೇಶ್ವರ !

" ಆಹ್ವಾನವಿಲ್ಲ ಪ್ರಾಣಲಿಂಗವಾಗಿ ।
ವಿಸರ್ಜನೆಯಿಲ್ಲ ಲಿಂಗವನೆಲೆಗೊಂಡಿಪ್ಪುದಾಗಿ ।
ಇದುಕಾರಣ ಆಹ್ವಾನವಿಸರ್ಜನೆಯಿಲ್ಲ,
ಶರಣರ ಪರಿಬೇರೆ : ಅಂಗಸಂಗವೇಲಿಂಗ
ಲಿಂಗವೇ ಮನ. ಕೂಡಲಸಂಗನಶರಣ ಸುಯಿದಾನಿ "

ಎಂದು ಮುಂತಾಗಿ ಹೇಳಿ, ವೀರಶೈವಸಿದ್ಧಾಂತದಲ್ಲಿ ಆಹ್ವಾನವಿಸರ್ಜನಗಳಿಲ್ಲವೆಂಬುದನ್ನು ಚೆನ್ನಾಗಿ ಪ್ರತಿಪಾದಿಸಿರುವರು.

ಶೈವರು ಶಿವಾಲಯದಲ್ಲಿರುವ ಲಿಂಗಕ್ಕೆ ಶಿವನಕುರುಹೆಂದು ಹೇಳುವಂತೆ ವೀರಶೈವರು ತಮ್ಮಅಂಗದಮೇಲಿರುವ ಲಿಂಗದಬಗೆಗೆ ಹೇಳುವದಿಲ್ಲ. ವೀರಶೈವರು ಧರಿಸುವ ಲಿಂಗದ ವೈಶಿಷ್ಟ್ಯವನ್ನು ಶ್ರೀತೋಂಟದಸಿದ್ಧಲಿಂಗೇಶ್ವರರು–

" ಬ್ರಹ್ಮರಂಧ್ರದಲ್ಲಿಪ್ಪನಾದಿ ಚೈತನ್ಯವಪ್ಪ ಪರಮಚಿತ್ಕಳೆಯನೇ
ಭಾವ ಮನ ಕರದಲ್ಲಿ ಶ್ರೀಗುರುತಂದು ಸಾಹಿತ್ಯವ ಮಾಡಿದನಾಗಿ
ಭಾವದಲ್ಲಿ ಸತ್ಸ್ವರೂಪವಪ್ಪ ಭಾವಲಿಂಗವಾಗಿ,
ಪ್ರಾಣದಲ್ಲಿ ಚಿತ್ಸ್ವರೂಪವಪ್ಪ ಪ್ರಾಣಲಿಂಗವಾಗಿ,
ಕರಸ್ಥಲದಲ್ಲಿ ಆನಂದ ಸ್ವರೂಪವಪ್ಪ ಇಷ್ಟಲಿಂಗವೆನಿಸಿ,
ಒಂದೇವಸ್ತು ತನುಮನ ಭಾವಗಳಲ್ಲಿ ಇಷ್ಟ, ಪ್ರಾಣ, ಭಾವವಾದ
ಭೇದವನರಿದು, ಇಷ್ಟಲಿಂಗವ ದೃಷ್ಟಿಯಿಂದ ಗ್ರಹಿಸಿ,
ಪ್ರಾಣಲಿಂಗವ ಮನಜ್ಞಾನದಿಂದ ಗ್ರಹಿಸಿ, ತೃಪ್ತಿಲಿಂಗವ ಭಾವಜ್ಞಾನ
ದಿಂದ ಗ್ರಹಿಸಿ ಈ ಲಿಂಗತ್ರಯವಿಡಿದು ಆಚರಿಸಿ, ಲಿಂಗದೊಡನೆ
ಕೂಡಿ ಆ ಲಿಂಗವೇ ತಾನು ತಾನಾಗಿ ರಾರಾಜಿಸುತ್ತಿರ್ಪುದೀಗ
ಶಿವಯೋಗನೋಡಾ ಮಹಾಲಿಂಗಗುರುಸಿದ್ಧೇಶ್ವರಪ್ರಭುವೇ ! "

ಎಂಬ ವಚನದಲ್ಲಿ ಹೃದಯಕ್ಕೆ ವೇದ್ಯವಾಗುವಂತೆ ಹೇಳಿದ್ದಾರೆ.

ಶ್ರೀಗುರುವು ಕುಂಡಮಂಡಲಿಕಾದಿರಚನೆ, ಪಂಚಕಲಶಾಭಿಷೇಕ ಮುಂತಾದ ಪ್ರಮುಖ ವಿಧಿಯುಳ್ಳ ಕ್ರಿಯಾ ದೀಕ್ಷೆಯಿಂದ ಶಿಷ್ಯನ ಸ್ಥೂಲ ಶರೀರದ ಪೂರ್ವಾಶ್ರಯುವ ಕಳೆದು ಕರಸ್ಥಲದಲ್ಲಿ ಇಷ್ಟಲಿಂಗವನ್ನು, ಶಿಷ್ಯನ ಬಲಗಿವಿಯಲ್ಲಿ ಶಿವಪಂಚಾಕ್ಷರೀ ಮಂತ್ರೋಪದೇಶವಂಗೈದು ಸೂಕ್ಷ್ಮತನುವಿನ ಪೂರ್ವಾಶ್ರಮುವಕಳೆದು ಅಲ್ಲಿ ಪ್ರಾಣಲಿಂಗವನ್ನು, ಮಂತ್ರಪೂತವಾದ ಹಸ್ತವಂ ಶಿಷ್ಯನ ಮಸ್ತಕದಲ್ಲಿರಿಸಿ ಸಚ್ಛಿಷ್ಯನನ್ನು ಅವಲೋಕಿಸಿ ಕಾರಣ ತನುವಿನಲ್ಲಿ ಭಾವಲಿಂಗವನ್ನು ನೆಲೆಗೊಳಿಸುವನು.

ಶ್ರೀಗುರುವು ಶಿಷ್ಯನ ಬ್ರಹ್ಮರಂಧ್ರದಲಿರ್ಪ ಚಿತ್ಕಳೆಯನ್ನು ಭಾವಕ್ಕೂ, ಭಾವದಿಂದ ಮನಕ್ಕೂ, ಮನಸ್ಸಿನಿಂದ ನೇತ್ರಸ್ಥಕ್ಕೆ ತಂದು ಸಾಕಾರವಾಗಿಸಿ ಶಿಷ್ಯನ ಕರಸ್ಥಲಕ್ಕೆ ಕೊಡುವನು. ಇದನ್ನೇ ಮಗ್ಗೆಯ ಮಾಯಿದೇವರು –

" ಭಾವ ಹಸ್ತದಿಂ ಮನದ ಹಸ್ತತಳಕ್ಕೆ ಮನಃಕರಾಬ್ಜದಿಂ ।
ಪಾವನಮಪ್ಪ ನೇತ್ರದ ಕರಕ್ಕೆ ತದೀಯಕರಾಂಬುಜಾತದಿಂ ।
ಕೋವಿದ ಚಕ್ರವರ್ತಿ ಗುರು ಕಾಯದ ಹಸ್ತಸರೋರುಹಕ್ಕೆ ಪೂ
ಜಾವಿಧಿ ಯೋಗ್ಯಲಿಂಗಮುಮನಿತ್ತ ಬಳಿಕ್ಕರಿದೇಂ ಶಿವಾಧವಾ ॥

ಎಂಬ ಪದ್ಯದಿಂದ ಹೇಳಿದಂತೆ, ಮೈಲಾರದ ಬಸವಲಿಂಗಶರಣರೂ-

" ಪಾವನಾತ್ಮಕ ಸುಪುತ್ರನ ಮಸ್ತಕದೊಳು
ಗುರುದೇವಕರವಾಂತು ಸಾಸಿರದಳದ ಚಿತ್ಕಳೆಯ
ಭಾವದಿಂ ಮನ, ಮನದಿ ನೇತ್ರ, ನೇತ್ರಂಗಳಿಂ
ತೆಗೆದಿಷ್ಟರೂಪಗೊಳಿಸಿ, ........ "

ಎಂದು ಹಾಡಿರುವರು. ಕರಸ್ಥಲದಲ್ಲಿ ಧರಿಸಿದ ಇಷ್ಟಲಿಂಗಕ್ಕೂ ಮತ್ತು ಪರಾತ್ಪರ ಶಿವನಿಗೂ ಅಭೇದವಿರುವದು. ಷಟ್‌ಸ್ಥಲಚಕ್ರವರ್ತಿ ಶ್ರೀಚನ್ನಬಸವಣ್ಣನವರೂ-

" ತಿಳಿದುಪ್ಪ ಗಟ್ಟಿದುಪ್ಪಕ್ಕೆ ಭೇದವುಂಟೆ ?
ದೀಪಕ್ಕೆ ದೀಪ್ತಿಗೆ ಭಿನ್ನವುಂಟೇ ?
ಆತ್ಮಕ್ಕೆಯೂ ದೇಹಕ್ಕೆಯೂ ಸಂದುಂಟೇ ?
ಕ್ಷೀರಕ್ಕೆಯೂ ಸ್ವಾದುವಿಂಗೆಯೂ ಭಿನ್ನವುಂಟೇ ?
ಇದು ಕಾರಣ ಸಾಕಾರವೇ ನಿರಾಕಾರವೆಂದರಿದು
ಅಂಗಲಿಂಗ ಸಂಬಂಧವಿಲ್ಲದವರ ಸಂಗಭಂಗವೆಂದು
ಕೂಡಲ ಚನ್ನಸಂಗಯ್ಯನ ಶರಣರು ಮೆಚ್ಚರಯ್ಯ "

ಎಂದು ಸಾಕಾರ ನಿರಾಕಾರಗಳ ಅಭೇದವನ್ನೇ ಹೇಳಿರುವರು.

" ಕಾಣಬಾರದಲಿಂಗವೆನ್ನ ಕರಸ್ಥಲಕ್ಕೆ ಬಂದರೆ
ಎನಗಿದು ಸೋಜಿಗ ಸೋಜಿಗ ಎನಲಮ್ಮೆನು
ಅಲ್ಲೆನಲಮ್ಮೆನು ಗುಹೇಶ್ವರಲಿಂಗ ನಿರಾಳ ನಿರಾಕಾರ
ಬಯಲು ಸಾಕಾರವಾಗಿ ಎನ್ನ ಕರಸ್ಥಲಕ್ಕೆ ಬಂದರೆ
ಹೇಳಲಮ್ಮೆ ಕೇಳಲಮ್ಮೆ. "

ಎಂದು ಪ್ರಭುದೇವರು,

" ಪರತರಶಿವಲಿಂಗವೆಳಸಿ ನಿನಗಾಗಿ ಕರಕಂಜದೊಳು
ಕಾಣಿಸಿತುಯೋಗಿ ಯಜಿಸು ।
ತರುವಿಸ್ತಾರವನೊಳಕೊಂಡಿರ್ದಬೀಜದಪರಿಯಂತಿರಾರ
ಧ್ಯಗಳಿಗಿಂಬುವಡೆದ । ಪರಬೊಮ್ಮದಾಶ್ರಯಮಾಗಿಹ ನಿಜಶಕ್ತಿ ।
ವೆರಸಿ ತನಗೆ ತಾನಾಧಾರಮಾಗಿರ್ಪ ॥ "

ಎಂದು ಶ್ರೀಮನ್ನಿಜಗುಣರೂ,

" ಬೀಜವೃಕ್ಷದುತೆ ನೀನಿಪ್ಪೆಯಯ್ಯಾ,
ನಿರಾಕಾರವೇ ಮೂರ್ತಿಯಾಗಿ ಮೂರ್ತಿಯೇ ನಿರಾಕಾರವಾಗಿ
ಇದೆಲ್ಲವನಳಿದು ಬಯಲಾಗಿಪ್ಪೆ ಎನ್ನ ಕಪಿಲಸಿದ್ಧಮಲ್ಲಿಕಾರ್ಜುನದೇವ "

ಎಂದು ಸಿದ್ಧರಾಮದೇವರೂ,

" ಅಣುವಿಗೆ ಅಣು, ಮಹತ್ತಿಂಗೆ ಮಹತ್ತು
ಎನಿಸುವ ಲಿಂಗದೇವನ ಕಂಡೆನಯ್ಯಾ,
ಎನ್ನ ಕರಸ್ಥಲದಲ್ಲಿ ಉಪಮಾತೀತ, ವಾಙ್ಮನಕ್ಕಗೋಚರ
ನೆನಿಸುವ ಲಿಂಗದೇವನ ಕಂಡೆನಯ್ಯ, ಎನ್ನಕರ
ಸ್ಥಲದಲ್ಲಿ ಶ್ರುತಿತತಿಯ ಶಿರದ ಮೇಲೆ ದಶಾಂಗುಲನು
ಎನಿಸುವ ಲಿಂಗದೇವನ ಕಂಡೆನಯ್ಯ, ಎನ್ನ ಕರಸ್ಥಲದಲ್ಲಿ
ಭಾವಭರಿತ ಭಾವಗಮ್ಯನು ಎನಿಸುವ ಲಿಂಗದೇವನ ಕಂಡೆ
ನಯ್ಯ, ಎನ್ನ ಕರಸ್ಥಲದಲ್ಲಿ ಅಖಂಡೇಶ್ವರನೆಂಬ ಅನಾದಿ ಪರಶಿ
ವನ ಕಂಡೆನಯ್ಯ ಎನ್ನ ಕರಸ್ಥಲದಲ್ಲಿ "

ಎಂದು ಷಣ್ಮುಖಸ್ವಾಮಿಗಳೂ ಮೇಗಣ ಅಭಿಪ್ರಾಯವನ್ನೇ ಪುಷ್ಟೀಕರಿಸಿರುವರು. ಬೀಜ ವೃಕ್ಷಗಳಿಗೆ, ಬಿಂದು ದೇಹಗಳಿಗೆ, ಶ್ವೇತವರ್ಣ ಸಪ್ತವರ್ಣಗಳಿಗೆ, ಮೇಘ ಮಿಂಚುಗಳಿಗೆ ಅಭೇದವಿರುವಂತೆ ಸಾಕಾರ ನಿರಾಕಾರಗಳಿಗೆ ಅಭೇದವಿರುವದು. ಕಲ್ಲೊಳಗಿನ ಕಿಚ್ಚು ಕ್ರಿಯೆಯಿಲ್ಲದೆ ಉರಿಯಬಹುದೇ ? ಬೀಜದೊಳಗಿನ ವೃಕ್ಷ ಕ್ರಿಯೆಯಿಲ್ಲದೆ ಅಂಕುರಿಸಬಹುದೇ ? ಇದರಂತೆ ತಿಲದೊಳಗಿನ ತೈಲ, ಕಾಷ್ಟದೊಳಗಣ ಅಗ್ನಿ ಕಾಣದು, ಶ್ರೀ ಗುರು ದೀಕ್ಷೆಯೆಂಬ ಸತ್ಕ್ರಿಯೆಯಿಂದ ಶರೀರಾಂತರ್ಗತ ಚೈತನ್ಯವನ್ನು ಭಾವ ಮನದೃಷ್ಟಿಗಳ ಮೂಲಕ ಹೊರತಂದು ಶಿಷ್ಯನ ಕರಸ್ಥಲಕ್ಕೀಯುವನು. ಇದೇ ಇಷ್ಟಲಿಂಗವು. ಭಕ್ತರ ಸಕಲ ಇಷ್ಟಾರ್ಥಗಳನ್ನು ಪೂರೈಸುವದರಿಂದ ಇದಕ್ಕೆ ಇಷ್ಟಲಿಂಗವೆಂದು ಹೇಳುವರು.

ಶೈವಾದಿಗಳು ಲಿಂಗವನ್ನು ಸಾಮಾನ್ಯವಾಗಿ ಸರ್ಪಭೂಷಣ, ವೃಷಭವಾಹನ, ಗಣಪತಿ ವೀರಭದ್ರ ಮುಂತಾದ ವಿಶಿಷ್ಟ ರೂಪದಲ್ಲಿ ಪೂಜಿಸುವರು. ಶ್ರೀಗುರುವು ಶೈವನಿಗೆ ಮತ್ತು ವೀರಶೈವನಿಗೆ ಲಿಂಗವನ್ನು ಪೂಜೆಮಾಡಲು ಅನುಗ್ರಹಿಸುವನು. ಶೈವ ಗುರುವು ತನ್ನ ಶಿಷ್ಯನಿಗೆ ಲಿಂಗವನ್ನು ಎದುರಿಟ್ಟು ಭಕ್ತಿಯಿಂದ ಪೂಜಿಸಲು ಹೇಳುವನು. ವೀರಶೈವ ರಲ್ಲಿ ಸದ್ಗುರುವು ಶಿಷ್ಯನಿಗೆ ಬ್ರಹ್ಮರಂಧ್ರಗತ ಚಿತ್ಕಳೆಯನ್ನು ಕರಗಿದ ತುಪ್ಪ ಹೆತ್ತುಪ್ಪವಾದಂತೆ ಸಾಕಾರವನ್ನಾಗಿಸಿ ಕರಸ್ಥಲಕ್ಕಿತ್ತು—

" ಇಷ್ಟಲಿಂಗಮಿದಂ ಸಾಕ್ಷಾತ್ ಅನಿಷ್ಟಪರಿಹಾರಕಂ ॥
ಪ್ರಾಣವದ್ಧಾರಣೀಯಂ ಪ್ರಾಣಲಿಂಗಮಿದಂತವ ।
ಕದಾಚಿತ್ ಕುತ್ರಚಿದ್ವಾಪಿ ಮಾವಿಯೋಜಯ ದೇಹತಃ "

ಎಂದು ಉಪದೇಶಿಸಿ ಯಾವಾಗಲೂ ಅಂಗವೆಂಬ ಪೀಠದಲ್ಲಿ ಧರಿಸಲಿಕ್ಕೆ ಹೇಳುವನು.

ಶೈವರು ಗುಡಿಯಲ್ಲಿರುವ ಲಿಂಗವನ್ನು ಶಿವನ ಪ್ರತಿನಿಧಿಯೆಂದು ಭಾವಿಸಿದರೆ ವೀರ ಶೈವರು ತಮ್ಮ ದೇಹವೆಂಬ ಗುಡಿಯ ಮೇಲಿರುವ ಲಿಂಗವನ್ನು ಸ್ವಸ್ವರೂಪವೆಂದು ಭಾವಿಸುವರು. ಸ್ವಸ್ವರೂಪವೆನಿಸಿದ ಲಿಂಗಧಾರಣ ಮಾಡಿದ ಮೇಲೆ ವೀರಶೈವರು ಅನ್ಯರು ಎಷ್ಟೇ ಸುಜಾತಿಯವರಿದ್ದರೂ ಅವರ ಬೆರಸಲಾಗದು. ಭಸಿತ ರುದ್ರಾಕ್ಷಿಗಳ ಧಾರಣ ಬೇಕಲ್ಲದೆ ಮತ್ತಾವ ದೇವತೆಯ ಸಂಕೇತಗಳನ್ನೂ ಧರಿಸಕೂಡದು. ಲಿಂಗಾಂಗ ಸಾಮರಸ್ಯವು ವೀರಶೈವ ಸಿದ್ಧಾಂತದ ಅಂತಿಮ ಗುರಿಯಾಗಿರುವದರಿಂದ ಕೈಲಾಸ ಪದವಿ ಗಣಪದವಿ, ರುದ್ರಪದವಿ ಮುಂತಾದ ಪದವಿಗಳನ್ನು ಮನ್ನಿಸಬಾರದೆಂದು ತೋಂಟದ ಸಿದ್ಧಲಿಂಗಸ್ವಾಮಿಗಳು ಹೇಳಿರುವರು.

" ಲಂಬಿಕಾಯೋಗಿಗಳ ಡೊಂಬರಿಗೆ ಸರಿಯೆಂಬೆ
ಹಠಯೋಗಿಗಳ ಅಟ್ಟಿಮಟಗಾರರೆಂಬೆ
ಅಷ್ಟಾಂಗಯೋಗಿಗಳ ಕಷ್ಟಕರ್ಮಿಗಳೆಂಬೆ
ಲಯಯೋಗಿಗಳ ನಾಯಿಗಿಂತ ಕಡೆ ಎಂಬೆ ।
ಮಂತ್ರವೇಲಿಂಗ, ಲಿಂಗವೇ ಮಂತ್ರವೆಂದರಿದು ಲಿಂಗದ
ನೆನಹು ಸಂಬಂಧಿಸಿಕೊಳ್ಳಲರಿಯದೇ ಲಿಂಗವಿರಹಿತರಾಗಿ
ಮಾಡುತಿಪ್ಪರಾಗಿ ಅದ ಲಿಂಗ ಸಂಬಂಧಿಗಳು ಮೆಚ್ಚರು ನೋಡಾ
ರಾಜಯೋಗವೆಂಬುದು ಗಾಜಂಗೋಜು ನೋಡಾ ಇವು ಲಿಂಗಾಂಗ
ಯೋಗದ ಹೆಜ್ಜೆ ನೋಡಾ "

ವೀರಶೈವರು ಮಂತ್ರಯೋಗ, ಲಯಯೋಗ, ಹಠಯೋಗ, ರಾಜಯೋಗ, ಶಿವಯೋಗ ಎಂಬ ಐದು ಯೋಗಗಳಲ್ಲಿ ಶಿವಯೋಗಕ್ಕೆ ಅತೀವ ಪ್ರಾಶಸ್ತ್ಯವನ್ನು ಕೊಟ್ಟಿರುವರು. ಶಿವಯೋಗದಲ್ಲಿ ಪ್ರಾಣವೇ ಲಿಂಗ ಲಿಂಗವೇ ಪ್ರಾಣವಾಗಿ ಹೋಗುವದು. ಶಿವಯೋಗಿಯು ತನು ಮನ ಕರಣ ಭಾವಂಗಳೆಲ್ಲ ಅಂಗಮಯವಾಗಿ ಲಿಂಗವೇ ತಾನೆಂಬ ಅಭೇದ ಸ್ಥಿತಿಗೆ ಮುಟ್ಟುವನು. ಶಿವಯೋಗಾನಂದ ಸಾಗರದಲ್ಲಿ ಈಜುವ ಶಿವಯೋಗಿಗೆ ಈ ರಾಜಯೋಗಾದಿಗಳು ಕಿಂಚಿತ್ತು ಎನಿಸುವವು.

" ಅಷ್ಟವಿಧಾರ್ಚನೆಯಿಂದ ಮಾಡುವದು ಇಷ್ಟಲಿಂಗ ಪೂಜೆ,
ಆ ಲಿಂಗವ ಮನಸ್ಸಿನಲ್ಲಿ ಧ್ಯಾನಿಸಿ ಆ ಮನೋಮಧ್ಯದಲ್ಲಿಪ್ಪ
ನಿಷ್ಕಲ ಬ್ರಹ್ಮವನು ಧ್ಯಾನವೆಂಬ ಹಸ್ತದಲ್ಲಿ ಪಿಡಿದು, ಕರ
ಸ್ಥಲದಲ್ಲಿರ್ದ ಲಿಂಗದ ಗೊತ್ತಿನಲ್ಲಿ ಕಟ್ಟಿನೆರೆವುದೀಗ ಪ್ರಾಣ
ಲಿಂಗಪೂಜೆ, ಮನಸ್ಸು ಲಿಂಗದಲ್ಲಿ ತಲ್ಲೀನವಾಗಿ ನಚ್ಚಿ ಮೆಚ್ಚಿ
ಅಚ್ಚೊತ್ತಿ ಅಗಲದಿರ್ಪುದೇ ಭಾವಲಿಂಗ ಪೂಜೆ "

ಈ ಕ್ರಮವು ಶೈವನಿಗೆ ಎಂದೂ ಇಲ್ಲ ಎಂದು ತೋಂಟದ ಸಿದ್ಧಲಿಂಗ ಶ್ರೀಗಳವರು ಹೇಳಿರುವರು.

" ಅಷ್ಟಾಷಷ್ಟಿ ಕೋಟಿ ತೀರ್ಥವಿುಂದಡಿಲ್ಲ
ಲಕ್ಷಕೋಟಿ ಜಪ ಮಾಡಿದಡಿಲ್ಲ, ಶ್ರೀ ಗುರುವು
ಕರುಣಾಕಟಾಕ್ಷದಿಂದ ಕರುಣಿಸಿಕೊಟ್ಟ ಪರಶಿವಲಿಂಗವ
ಮನತುಂಬಿ, ಭಾವತುಂಬಿ, ಕರತುಂಬಿ, ಕಂಗಳುತುಂಬಿ,
ಹೃದಯತುಂಬಿ, ಸರ್ವಾಂಗ ತುಂಬಿ ಕೂಡಿನೆರೆಯಬಲ್ಲರೆ
ಇದೇ ನಿಶ್ಚಯ

ಎಂದು ಸಂಗನ ಬಸವೇಶ್ವರರು ಅಂಗದಲ್ಲಿ ಲಿಂಗವು ಪರಿಪೂರ್ಣತುಂಬಿ ತುಳುಕಿ ಅಂಗವು ಲಿಂಗವಾಗುವ ಬಗೆಯನ್ನು ಹೇಳಿದ್ದಾರೆ.

ಬಿಂಬವನ್ನು ತೋರಿಸುವ ಕನ್ನಡಿಯ ಮೇಲೆ ಧೂಳು ಬಿದ್ದರೆ ಅದು ಬಿಂಬವನ್ನು ನಿಚ್ಚಳವಾಗಿ ತೋರಿಸದಂತೆ ಜೀವನಿಗೆ ಆಣವಾದಿ ಮಲತ್ರಯಗಳು ಆವರಿಸಿದರೆ ಅವನಿಗೆ ಸ್ವಸ್ವರೂಪವು ಕಾಣಲಾರದು. ಆ ಮಲತ್ರಯಗಳ ನಿವಾರಣೆಗಾಗಿಯೇ ಸದ್ಗುರುವಿನಿಂದ ದೀಕ್ಷೆ ಪಡೆದು ಸ್ವಸ್ವರೂಪ ಸಾಕ್ಷಾತ್ಕಾರಕ್ಕಾಗಿ ಇಷ್ಟಲಿಂಗೋಪಾಸನೆ ಮಾಡಬೇಕಾಗುವದು. ಇಲ್ಲಿ ಇಷ್ಟಲಿಂಗೋಪಾಸನೆಯೆಂದರೆ ಉಪಾಸಕನು ಲಿಂಗವನ್ನು ಎದುರಿಗಿಟ್ಟುಕೊಂಡು ಪೂಜಿಸುವದಲ್ಲ. ಇಷ್ಟಲಿಂಗೋಪಾಸನೆಯಲ್ಲಿ ಮೊದಮೊದಲು ದ್ವೈತ ಭಾವನೆಯಿದ್ದಂತೆ ತೋರಿದರೂ ಕೊನೆಯಲ್ಲಿ ಪೂಜೆಯು ಅದ್ವೈತದಲ್ಲಿ ಪರ್ಯವಸಾನವಾಗುವದು. ಇಲ್ಲಿ ಕೊನೆಯ ಹಂತದಲ್ಲಿ ಪೂಜಿಸುವ ಪೂಜಕ ಪೂಜೆಗೊಂಬ ದೇವ ಈರ್ವರೂ ಒಂದೇ.

ಓರ್ವ ಮಹಾರಾಣಿಗೆ ತನ್ನ ರೂಪಲಾವಣ್ಯಗಳನ್ನು ನೋಡಿಕೊಳ್ಳುವ ಇಚ್ಛೆ ಯಾದಾಗ ಆಕೆಯು ತನ್ನ ದಾಸಿಯನ್ನು ಕುರಿತು ನೋಡಲಿಕ್ಕೆ ಕನ್ನಡಿಯು ಬೇಕಾಗಿದೆ ತೆಗೆದುಕೊಂಡು ಬಾ ಎಂದು ಹೇಳುವಳು. ರಾಣಿಯು ಕನ್ನಡಿಯನ್ನು ನೋಡುವಳು, ಇಲ್ಲಿ ರಾಣಿಯು ಕನ್ನಡಿಯನ್ನು ನೋಡುತ್ತಾಳೆ ಎಂದು ಹೇಳುತ್ತಿದ್ದರೂ ಆ ರಾಣಿಯು ಥಳಥಳ ಹೊಳೆಯುವ ಕನ್ನಡಿಯನ್ನು ಇಲ್ಲವೆ ಅದರ ಚೌಕಟ್ಟನ್ನು ನೋಡುವಳೇ ? ಇಲ್ಲಿಲ್ಲ, ಆಕೆ ನೋಡುವದು ಕನ್ನಡಿಯನ್ನಲ್ಲ, ಆಕೆ ನೋಡುವದು ಕನ್ನಡಿಯಲ್ಲಿ ತನ್ನ ಮುಖವನ್ನು ಮಾತ್ರ. ಕನ್ನಡಿಯನ್ನು ನೋಡುವದಕ್ಕಿಂತ ಮುಂಚೆ ಇದು ಕನ್ನಡಿ ಎಂಬ ಭಾವವಿರುವದೇ ಹೊರತು ಕನ್ನಡಿಯಲ್ಲಿ ರೂಪಲಾವಣ್ಯಗಳನ್ನು ನೋಡಿದ ನಂತರ ಇದು ಕನ್ನಡಿ ಎಂಬ ಭಾವವಿರುವದೇ ? ಹಾಗೆ, ಇಷ್ಟ ಲಿಂಗೋಪಾಸನೆಯಲ್ಲಿ ಶರಣನು ಲಿಂಗವನ್ನು ಪೂಜಿಸುವ ನೆಂದು ಬಗೆದರೂ ಅವನು ಭೇದಾತ್ಮಕವಾಗಿ ಪೂಜೆ ಮಾಡಲಾರನು. ಇದನ್ನೇ ಮಗ್ಗೆಯ ಮಾಯಿದೇವರು—

" ಮುಕುರವನೀಕ್ಷಿಪಂಗನೆಯ ಬುದ್ಧಿಯದೇಂ ವರರೂಪ ಹಾವಭಾ ।
ಕಲಿತ ವಿಭ್ರಮಾಪ್ತ ನಿಜಮಂಗಳ ಮೂರ್ತಿಯ ನೀಕ್ಷಿಪಲ್ಲಿಯೋ
ಮುಕುರವನೇ ನಿರೀಕ್ಷಿಪೆಡೆಯಲ್ಲಿಯೋ ತನ್ನನೆ ನೋಳ್ಪಳೈಸಲ್ಮೆಂ ।
ಗಿಕ ನಿಯಮಾರ್ಚನಾನುಭವ ದರ್ಪಣದೊಳ್ ಶರಣಂ ಶಿವಾಧವಾ ॥
ನೋಡದ ಮುನ್ನ ದರ್ಪಣದ ಭಾವಮುಂಟು
ನೋಡಿದ ನಂತರಂ ಮರಳಿ ದರ್ಪಣ ಭಾವಮದುಂಟೆ ? "

ಎಂಬ ಪದ್ಯಗಳಿಂದ ಹೇಳಿರುವರು. ಸ್ತ್ರೀಯು ಕನ್ನಡಿಯಲ್ಲಿ ಸೌಂದರ್ಯವನ್ನು ನೋಡಿಕೊಂಡ ಮೇಲೆ ಕನ್ನಡಿಯ ಜ್ಞಾನವು ಮರೆಯಾಗುವಂತೆ ಶರಣನಿಗೆ ತನ್ನಲ್ಲಿ ಲಿಂಗಸ್ವರೂಪವನ್ನು ಕಂಡುಕೊಂಡ ಮೇಲೆ ದ್ವೈತಭಾವವು ಮರೆಯಾಗಿ ಹೋಗುವದು. ಭಿನ್ನ ಭಾವಳಿದು ತಾನೇ ಲಿಂಗಸ್ವರೂಪನಾಗಿಯೂ ಶರಣನಕ್ರಿಯೆಗಳೆಲ್ಲವೂ ಲಿಂಗಕ್ರಿಯೆಗಳಾಗಿಯೂ ಪರಿಣಮಿಸುವವು.

ಶೈವರು ಉಪಾಸ್ಯ-ಉಪಾಸಕ, ಪೂಜ್ಯ-ಪೂಜ್ಯಕ, ಆರಾಧ್ಯ-ಆರಾಧಕ ಎಂಬದ್ವೈತ ಭಾವನೆಯಿಂದಲೇ ಪೂಜೆ ಮಾಡುವರು. ಮತ್ತು ಶೈವರ ಪೂಜೆಯು ಕೊನೆಯಲ್ಲಿ ದ್ವೈತ ಭೂಮಿಕೆಯಲ್ಲಿಯೇ ಮುಕ್ತಾಯವಾಗುವದು. ಈ ಭೇದವು ಕೇವಲ ಪ್ರಾರಂಭಾವಸ್ಥೆಯಲ್ಲಿ ಅಷ್ಟೇ ಅಲ್ಲ, ಮುಕ್ತಿ ಸ್ಥಿತಿಯಲ್ಲಿಯೂ ಇದ್ದೇ ಇರುವದು. ವೀರಶೈವ ಪುರುಷನಿಗೆ ಅಷ್ಟಾವರಣವೇ ಅಂಗ, ಪಂಚಾಚಾರಗಳೇ ಪ್ರಾಣ, ಷಟ್‌ಸ್ಥಲವೇ ಆತ್ಮವಾಗಿಹುದು. ಲಿಂಗಪೂಜೆಯನ್ನು ಮಾಡುವ ಸದ್ಭಕ್ತನು ದೇವರೊಡನೆ ಗೂಡಲು ವಿವಿಧ ಸಂಬಂಧಗಳನ್ನು ಕಲ್ಪನೆ ಮಾಡಿದರೂ ವೀರಶೈವರಲ್ಲಿ ಮಾತ್ರ ಶರಣ ಸತಿ, ಲಿಂಗ ಪತಿ ಎಂಬ ಭಾವನೇ ಪ್ರಾಮುಖ್ಯವಾಗಿರುವದು. ಈ ವಿಷಯದಲ್ಲಿ –

" ಶರಣಸತಿಯ ಮದುವೆಯ ಸಂಭ್ರಮವನು ನೋಡಿರಮ್ಮ ।
ಪರಮಾನಂದ ಪಯೋನಿಧಿಯೊಳಗೋಲಾಡಿರಮ್ಮ " ॥

ಎಂಬ ಶ್ರೀಮನ್ನಿಜಗುಣಶಿವಯೋಗಿಗಳ ಗೀತವಿದೆ.

" ಜಗವೆಲ್ಲರಿಯಲು ಎನಗೊಬ್ಬ ಗಂಡನುಂಟು,
ಆನು ಮುತ್ತೈದೆ ಆನು ನಿಷ್ಠೈದೆ ಕೂಡಲ ಸಂಗಯ್ಯನಂತಪ್ಪ
ಎನಗೊಬ್ಬ ಗಂಡನುಂಟು, "

ಎಂಬ ಶ್ರೀ ಬಸವೇಶ್ವರರ ವಚನವು ಪ್ರಮಾಣಗಳಾಗಿರುವವು. ಲಿಂಗವಂತನು ಇಷ್ಟಲಿಂಗವನ್ನೇ ಪತಿಯೆಂದು ಭಾವಿಸಿ ಲಿಂಗಪೂಜೆ ಮಾಡಲುಪಕ್ರಮಿಸುವನು.

ಷಟ್‌ಸ್ಥಲಗಳಲ್ಲಿ ಭಕ್ತ, ಮಹೇಶ, ಪ್ರಸಾದಿ ಸ್ಥಲಗಳಲ್ಲಿ ಉಪಾಸಕನು ದ್ವೈತ ಭಾವನೆಯಿಂದಲೂ, ಪ್ರಾಣಲಿಂಗಿ, ಶರಣ, ಐಕ್ಯಸ್ಥಲಗಳಲ್ಲಿ ಅದ್ವೈತ ಭಾವನೆಯಿಂದಲೂ ಪೂಜಿಸುವನು, ಅಂತೆಯೇ ವೀರಶೈವ ಮತಕ್ಕೆ ದ್ವೈತಾದ್ವೈತವೆಂದು ಕರೆಯುವರು. ಪ್ರಾರಂಭದಲ್ಲಿ ದ್ವೈತವಿದ್ದು ಅಂತಿಮದಲ್ಲಿ ಅದ್ವೈತವಾಗುತ್ತದೆಂಬುದು ಇದರ ತಾತ್ಪರ್ಯ.

" ಪೂಜೆಯುಳ್ಳನ್ನಬರ ಲಿಂಗವ ಹಾಡಿದೆ,
ಮಾಟವುಳ್ಳನ್ನಬರ ಜಂಗಮವ ಹಾಡಿದೆ,
ಜಿಹ್ವೆಯುಳ್ಳನ್ನಬರ ಪ್ರಸಾದವ ಹಾಡಿದೆ,
ತ್ರಿವಿಧನಾಸ್ತಿಯಾದ ಬಳಿಕ ಎನ್ನ ನಾ ಹಾಡಿಕೊಂಡೆ ಕೂಡಲಸಂಗಮದೇವಾ " ॥

" ಜ್ಯೋತಿ ಮುಟ್ಟಿದ ಬತ್ತಿಯೆಲ್ಲ ಜ್ಯೋತಿಯಪ್ಪುದಯ್ಯಾ,
" ನಾಗಸರ ಮುಟ್ಟಿದವರೆಲ್ಲ ನಾಗರವಪ್ಪ ...

ಪ್ರಸಾದ ಮುಟ್ಟಿದ ಪದಾರ್ಥವೆಲ್ಲ ಪ್ರಸಾದವಪ್ಪುದಯ್ಯಾ,
ಲಿಂಗವ ಮುಟ್ಟಿದ ಅಂಗವೆಲ್ಲ ಲಿಂಗವಪ್ಪುದಯ್ಯಾ,
ಸಕಲೇಶ್ವರದೇವ ನಿಮ್ಮ ಮುಟ್ಟಿದವರು ನಿಮ್ಮಂತಪ್ಪರಯ್ಯ."

ಮುಂತಾದ ಅನುಭಾವಿಗಳ ನುಡಿಗಳು ಹರನಭಕ್ತರು ಹರನಪೂಜಿಸಿ ಹರನೇ ಆಗುವ ಪರಿಯನ್ನುಉಸುರುತ್ತಿರುವವು.
ಶಿವಲಿಂಗದ ಸಂಗದಿಂದ ಶಿವಯೋಗಿಗಳ ಸಹವಾಸದಿಂದ ಭವಿಯಾದ ಮಾನವನು ಶಿವನೇ ತಾನಾಗುವನು. ಶಿವಯೋಗ, ಶಿವಸಾಮರಸ್ಯ ಶಿವೈಕ್ಯ, ಲಿಂಗೈಕ್ಯ ಮುಂತಾದ ಶಬ್ದಗಳು ಏಕಾರ್ಥ ಪ್ರತಿಪಾದಕಗಳು-ಶಿವನೊಡನೆ ಅವಿನಾಭಾವದಿಂದ ಕೂಡಿರುವದೇ ಶಿವಯೋಗವು.

ಲಿಂಗಾಯತ, ಲಿಂಗಧಾರೀ, ಲಿಂಗೀ, ಲಿಂಗವಂತ, ಲಿಂಗಾಢ್ಯ ಮುಂತಾದ ಶಬ್ದಗಳು ವೀರಶೈವವನ್ನೇ ಉದ್ದೇಶಿಸಿ ಹೇಳುತ್ತವೆ. ಎಲ್ಲ ಶಬ್ದಗಳ ಅರ್ಥವು ಲಿಂಗವನ್ನು ಧರಿಸಿದವ, ಅಂಗದ ಮೇಲೆ ಯಾವಾಗಲೂ ಲಿಂಗವುಳ್ಳವ, ಲಿಂಗದಿಂದ ಶ್ರೇಷ್ಠತೆಯನ್ನು ಪಡೆದವ ಎಂದಾಗುತ್ತದೆ. ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ ಇವೆಲ್ಲಕ್ಕೂ ಲಿಂಗವೇ ಮೂಲ ವಾದದ್ದು. ಅಂತೆಯೇ ವಚನಕಾರರು –

" ಲಿಂಗವೆಂಬುದು ಸರ್ವಕಾರಣ ನಿರ್ಮಲ,
ಲಿಂಗವೆಂಬುದು ಸಚ್ಚಿದಾನಂದ ಪರಿಪೂರ್ಣ,
ಲಿಂಗವೆಂಬುದು ಸರ್ವಲೋಕೋತ್ಪತ್ತಿಗೆ ಕಾರಣ.
ಲಿಂಗವೆಂಬುದು ಸರ್ವತತ್ವ ಪೂರ್ಣ ನಿಜಚೈತನ್ಯವು.
ಲಿಂಗವೆಂಬುದು ಶರಣನ ಹೃದಯದಲ್ಲಿ
ಬೆಳಗುವ ಜ್ಯೋತಿರ್ಮಯ ಲಿಂಗವು.
ಇಂತೀಲಿಂಗದ ಮರ್ಮವನರಿದವನೇ ಅರಿವನು
ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ ।"

" ಲಿಂಗವಿಲ್ಲದೆ ನಡೆವವನ ಲಿಂಗವಿಲ್ಲದೆ ನುಡಿವವನ,
ಲಿಂಗವಿಲ್ಲದೆ ಉಗುಳನುಂಗಿದರೆ ಅಂದುದಿಗೆ ಕಿಲ್ಬಿಷವಯ್ಯ,
ಏನೆಂಬೆನೇನೆಂಬೆ, ಲಿಂಗವಿಲ್ಲದೆ ನಡೆವವನ, ಲಿಂಗವಿಲ್ಲದ ನುಡಿವವನ,
ಅಂಗಲೌಕಿಕ ಮುಟ್ಟಲಾಗದು, ಲಿಂಗವಿಲ್ಲದೆ ನುಡಿವ ಶಬ್ದ
ಸೂತಕವ ಕೇಳಲಾಗದು, ಲಿಂಗವಿಲ್ಲದೆ ಗಮಿಸಿದರೆ ಆ ನಡೆ
ನುಡಿಗೊಮ್ಮೆ ವ್ರತಗೇಡಿ ಕೂಡಲಚನ್ನಸಂಗಮದೇವ."

ಎಂದು ಹೇಳಿರುವರು. ಶಿರಸ್ಥಲದಲ್ಲಿರುವ ಪರಂಜ್ಯೋತಿಯೇ ಕರಸ್ಥಲದಲ್ಲಿ ಪರಂಜ್ಯೋತಿಯಾಗಿ ಮೆರೆಯುತ್ತಿರುವದು. ಆ ಪರಾತ್ಪರ ಪರಂಜ್ಯೋತಿಯನ್ನೇ ಉರಸ್ಥಲದಲ್ಲಿ ನಿರಂತರ ಧರಿಸುವವನೇ ಲಿಂಗವಂತನು ಎಂದು ಹೇಳಲ್ಪಡುವನು. ಅಗಮ್ಯ, ಅಗೋಚರ, ಅಪ್ರಮಾಣ ಎನಿಸಿದ ಆ ಇಷ್ಟಲಿಂಗದ ವಿಷಯವನ್ನೇ ಚಾಮರಸನು ೧೬ ನೆಯ ಗತಿಯಲ್ಲಿ ಚಿತ್ರಿಸಿದ್ದಾನೆ.

ಇಷ್ಟಲಿಂಗ

ದಳವಿಲ್ಲದ ಕುಸುಮದ ಗದ್ದುಗೆಯಲ್ಲಿ ಒಡಲಿಲ್ಲದ ಘನವು ಮೂರ್ತಿಗೊಂಡಿರೆ ವಿಚಿತ್ರವಾಯಿತ್ತು ಜಗಕ್ಕೆಲ್ಲ. ಕೂಡಲ ಸಂಗಮದೇವರ ಶರಣ ಪ್ರಭುದೇವರ ಶ್ರೀಪಾದಕ್ಕೆ ನಮೋ ನಮೋ ಎಂಬೆ ಎಂದು ಬಸವದಂಡಾಧೀಶರು ಚಿನ್ಮಯಮೂರ್ತಿಯನ್ನು ಶೂನ್ಯಪೀಠದಲ್ಲಿ ಕೂಡಿಸಿ ಅರ್ಚಿಸಿ ಕೈಮುಗಿದು ಮಹಾಗುರುವೆ ! ಕುರುಡನು ಕೈಯಲ್ಲಿ ಕನ್ನಡಿಯನ್ನು ಹಿಡಿದರೂ ಅವನಿಗೆ ಮುಖವು ತೋರದಂತೆ, ಹುಚ್ಚನಿಗೆ ಇಲ್ಲವೆ ಮೂಕನಿಗೆ ಕನಸುಬಿದ್ದರೆ ಹೇಳಲಿಕ್ಕೆ ಬಾರದ ಹಾಗೆ ಭಕ್ತಿಯ ವೈಭವವು ಹೇಳಲು ಬಾರದು,

" ಭಕ್ತಿಯೆಂಬುದ ಮಾಡಬಾರದು,
ಕರಗಸದಂತೆ ಹೋಗುತ್ತ ಕೊಯ್ವುದು ಬರುತ್ತ ಕೊಯ್ವುದು !
ಘಟಸರ್ಪದಲ್ಲಿ ಕೈದುಡುಕಿದರೆ ಹಿಡಿವುದ ಮಾಣ್ಬುದೆ
ಕೂಡಲಸಂಗಮದೇವಾ, "

" ಉದಯದ ಮಾಗಿಯಬಿಸಿಲು ಅಂಗಕ್ಕೆ ಹಿತವಾಯಿತ್ತು.
ಮಧ್ಯಾಹ್ನದಬಿಸಿಲು ಅಂಗಕ್ಕೆ ಕರಕಠಿಣವಾಯಿತ್ತು,
ಮೊದಲಲ್ಲಿ ಲಿಂಗಭಕ್ತಿ ಹಿತವಾಯಿತ್ತು.
ಕಡೆಯಲ್ಲಿ ಜಂಗಮಭಕ್ತಿ ಕಠಿಣವಾಯಿತ್ತು
ಇದು ಕಾರಣ ಕೂಡಲಸಂಗಮದೇವರ ಬಲ್ಲನಾಗಿ ಒಲ್ಲನಯ್ಯಾ "

ತಿಳಿಯಲಸಾಧ್ಯವಾದ ಭಕ್ತಿಯ ರಹಸ್ಯವನ್ನು ವಿವರಿಸಿ ಹೇಳೆನ್ನಲು ಪ್ರಭುದೇವರು ಬಸವದಂಡಾಧೀಶನೇ ! ಪ್ರಪಂಚದಲ್ಲಿ ಕಾಣುವ ಜೀವರಾಶಿಗಳ ಶರೀರಗಳೆಲ್ಲ ಭೋಗ ತನುಗಳು. ಅಂದರೆ ಹೊಸದಾಗಿ ಯಾವ ಕರ್ಮಗಳನ್ನೂ ಮಾಡದೇ ಹಿಂದೆ ಮಾಡಿದ ಕರ್ಮಗಳ ಫಲವನ್ನು ಅನುಭವಿಸಿ ಅವಸಾನ ಪಡೆವ ತನುಗಳು. ಹಿಂದೆ ಮಾಡಿದ ಸಂಚಿತಾದಿ ಕರ್ಮಗಳ ಪ್ರಾಬಲ್ಯದಿಂದ ಕಾಲಕರ್ಮ ಮಾಯೆ ಇವರುಗಳ ಮೋಹಪಾಶಕ್ಕೆಸಿಲುಕಿದರೂ

" ಕಾಲಕರ್ಮ ಮಾಯೆಯೆಂಬಿವರನು ಗೆಲಲಹುದು ವಿಶಾಲ
ಮತಿಗಳು ಶಿವಭಕ್ತಿಯುಕ್ತರಾಗಿರೆ "

ಎಂಬುಕ್ತಿಗನುಸರಿಸಿ ಸತ್ಕ್ರಿಯೆ, ಸಮ್ಯಕ್‌ಜ್ಞಾನ, ಸದ್ಭಕ್ತಿಗಳ ಪ್ರಭಾವದಿಂದ ಆ ಮೂರರ ಸದ್ದು ಅಡಗಿಸಿ, ಗೆದ್ದ ಬುದ್ಧಿವಂತರ ಇಲ್ಲವೇ —

" ಅಂಧಂತಮಃ ಪ್ರವಿಶಂತಿ ಯೇಽವಿದ್ಯಾಮುಪಾಸತೇ "

ಎಂಬ ಉಪನಿಷದುಕ್ತಿಯಂತೆ ಕಾಮ್ಯ ಕರ್ಮಗಳನ್ನು ಇಲ್ಲವೆ ನಿಷಿದ್ಧ ಕರ್ಮಗಳನ್ನು ಮಾಡಿ ಭ್ರಮಾತ್ಮಕ ಸಂಸಾರದಲ್ಲಿ ಪರಿಭ್ರಮಣ ಮಾಡುವ ಬದ್ಧರ ಶರೀರಗಳು ಕರ್ಮ ತನುಗಳು ಎಂದು ಹೇಳಲ್ಪಡುತ್ತವೆ. ಶಿಖರಗಳಲ್ಲಿ ಗೌರೀಶಂಕರ, ನಕ್ಷತ್ರ ಮಂಡಲದಲ್ಲಿ

ಮಂಡಲವಲ್ಲಿ ಚಂದ್ರಬಿಂಬ, ಪರ್ವತಗಳಲ್ಲಿ ಹಿಮಾಲಯ ಮಂತ್ರಗಳಲ್ಲಿ ಪ್ರಣವ ಹೆಚ್ಚಿನವೆನಿಸಿ ಮೆರೆಯುವ ಹಾಗೆ ಎಲ್ಲ ಪ್ರಾಣಿಗಳಲ್ಲಿ ಮಾನವ ಜನ್ಮವೇ ಮೇಲಾದುದು. ಮಾನವನು ತನ್ನ ದೈಹಿಕ, ಬೌದ್ಧಿಕ,ಮಾನಸಿಕ, ಆತ್ಮಿಕ ಶಕ್ತಿಯ ಬಲದಿಂದ ದೇವಮಾನವ ನಾಗಬಲ್ಲ; ಅಥವಾ ದೇವನೇ ಆಗಬಲ್ಲ. ಹಾಲು ಬೆಣ್ಣೆಗಳಿದ್ದಾಗ ಯಾರಿಗೂ ಹೇಳದೇ ಕೇಳದೇ ಹಬ್ಬವನ್ನು ಮಾಡುವಂತೆ, ಗಾಳಿ ಬಿಟ್ಟಾಗ ತೂರಿಕೊಳ್ಳುವಂತೆ, ಅಂಬಿಗನಿದ್ದಾಗ ಹೊಳೆಯನ್ನು ದಾಟುವಂತೆ, ವೈದ್ಯ ದೊರೆತಾಗ ರೋಗದಚಿಕಿತ್ಸೆ ಮಾಡಿಸಿಕೊಳ್ಳುವಂತೆ ಕೈಕಾಲು ಕಣ್ಣು ಸದೃಢವಾಗಿದ್ದಾಗಲೇ ಗುರುಲಿಂಗ ಜಂಗಮರ ಸೇವೆ ಮಾಡಬೇಕು. ಗುರುವು ಕರುಣಿಸಿದ ಪರಶಿವ ಲಿಂಗವನ್ನು ಮರೆಯದೇ ಭಕ್ತಿಯಿಂದ ಪೂಜಿಸಬೇಕು. ಹಸ್ತಮಸ್ತಕ ಸಂಯೋಗಮಾಡಿ , ಶಿಷ್ಯನನ್ನು ಕೃಪಾದೃಷ್ಟಿಯಿಂದ ನೋಡಿ, ಶಿಷ್ಯನ ಹಸ್ತದಲ್ಲಿ ನೀಡಿದ ಲಿಂಗವು–

" ಹರಿವನದಿಗೆ ಮೈಯೆಲ್ಲಾಕಾಲು,<br>
ಉರಿವ ಅಗ್ನಿಗೆ ಮೈಯೆಲ್ಲಾ ನಾಲಿಗೆ,<br>
ಬೀಸುವ ಗಾಳಿಗೆ ಮೈಯೆಲ್ಲಾ ಕೈ,<br>
ಗುಹೇಶ್ವರ ನಿಮ್ಮ ಶರಣಂಗೆ ಸರ್ವಾಂಗಲಿಂಗ "

ಎಂಬಂತೆ ಸರ್ವಾಂಗದಲ್ಲಿ ವ್ಯಾಪಿಸುವದು. ಶರೀರದ ಯಾವದೇ ಭಾಗದಲ್ಲಿ ಹಾವು ಕಚ್ಚಿದರೂ ವಿಷವು ಮೈತುಂಬ ವ್ಯಾಪಿಸುವಂತೆ, ಭೂತ ಪ್ರೇತ. ಪಿಶಾಚಿಪೀಡಿತ ನಾದವನು ಭೂತಪ್ರೇತವೇ ಆಗಿ ಬಡಬಡಿಸುವಂತೆ, ಲಿಂಗವ ಧರಿಸಿದ ಲಿಂಗಾಯತನು ಅದನ್ನು ಪೂಜಿಸಿ ಲಿಂಗವೇ ತಾನಾಗಿ ಹೋಗುವನು. ಲಿಂಗವನ್ನು ಕೇವಲ ಕಟ್ಟಿಕೊಂಡ ರಾಗದು. ಅದನ್ನು ನಿಷ್ಠೆಯಿಂದ ಪೂಜಿಸಬೇಕು.

" ಹೊಟ್ಟೆಯ ಮೇಲೆ ಕಟ್ಟೋಗರದ ಮೊಟ್ಟೆಯ ಕಟ್ಟಿದೊಡೇನು ?<br>
ಹಸಿವು ಹೋಹುದೇ ? ಅಂಗದ ಮೇಲೆ ಲಿಂಗ ಸ್ವಾಯತವಾದರೇನು ?<br>
ಇಟ್ಟಿಕಲ್ಲು ಮೆಳೆಯ ಮೇಲೆ ಸಿಕ್ಕಿದಡೆ<br>
ಆ ಕಲ್ಲು ಲಿಂಗವೇ ? ಆ ಮೆಳೆ ಭಕ್ತನೇ ?<br>
ಇಟ್ಟಾತ ಗುರುವೇ ? ಇಂತಪ್ಪವರ ಕಂಡರೆ ನಾನು<br>
ನಾಚುವೆನಯ್ಯಾ, ಗುಹೇಶ್ವರಾ "

ಸ್ಥೂಲ ತನುವಿನಲ್ಲಿ ಇಷ್ಟಲಿಂಗ ಸಂಬಂಧವಾದಂತೆ ಸೂಕ್ಷ್ಮ, ಕಾರಣ ಶರೀರಗಳಲ್ಲಿ ಪ್ರಾಣ ಲಿಂಗ, ಭಾವಲಿಂಗ ಸಂಬಂಧವಾಗಬೇಕು. ಈ ವಿಷಯವನ್ನೇ ತೋಂಟದಸಿದ್ಧಲಿಂಗ ಯತೀಶ್ವರರು –

" ಬಯಲ ಮೂರ್ತಿಯ ಮಾಡಿ ಎನ್ನ ಕರಸ್ಥಲಕ್ಕೆ<br>
ಕೊಟ್ಟನಯ್ಯಾ ಶ್ರೀಗುರು.<br>
ಬಯಲ ಮೂರ್ತಿಯ ಅಮೂರ್ತಿಯ ಮಾಡಿ<br>
ಎನ್ನ ಪ್ರಾಣದೊಳಗೆ ಇರಿಸಿಧನಯ್ಯಾ ಶ್ರೀಗುರು,

ಬಯಲು ಬಯಲನೆ ಬಲಿಸಿ ಬಯಲೆಂದೆನಿಸಿ
ಎನ್ನ ಭಾವದಲ್ಲಿರಿಸಿದನಯ್ಯಾ ಶ್ರೀಗುರು.
ಇದು ಕಾರಣ ಎನ್ನ ಕರಸ್ಥಲ, ಮನಸ್ಥಲ ಭಾವಸ್ಥಲದಲ್ಲಿ ಧರಿಸಿ
ನಾನು ಅಂಗಲಿಂಗ ಸಂಬಂಧಿಯಾದೆನಯ್ಯಾ
ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ "

ಎಂದು ಹೇಳಿರುವರು.

ದೀಪ, ದೀಪದ ಕಿರಣ, ದೀಪದ ಬೆಳಕುಗಳಂತೆ ಇಷ್ಟ, ಪ್ರಾಣ, ಭಾವಲಿಂಗಗಳು ಒಂದಕ್ಕೊಂದು ಹೊಂದಿಕೊಂಡಿರುವವು. ದೀಪವ ಬಿಟ್ಟು ದೀಪದ ಕಿರಣವಿಲ್ಲ. ಕಿರಣವ ಬಿಟ್ಟು ಬೆಳಕಿಲ್ಲ. ಹಾಗೆ ಇಷ್ಟಲಿಂಗವ ಬಿಟ್ಟು ಪ್ರಾಣಲಿಂಗವಿಲ್ಲ. ಪ್ರಾಣಲಿಂಗವ ಬಿಟ್ಟು ಭಾವಲಿಂಗವಿಲ್ಲ, ತನುವಿನ ಮೇಲೆ ಧರಿಸಿದ ಇಷ್ಟಲಿಂಗವನ್ನು ಅಷ್ಟವಿಧಾರ್ಚನೆ ಷೋಡಶೋಪಚಾರಗಳಿಂದ ಪೂಜಿಸುವಂತೆ ಸೂಕ್ಷ್ಮ ಕಾರಣ ಶರೀರಗಳಿಗೆ ಸಂಬಂಧಿಸಿದ ಪ್ರಾಣಲಿಂಗ, ಭಾವಲಿಂಗಗಳನ್ನು ಅಂತರಂಗದ ಸಾಮುಗ್ರಿಗಳಿಂದ ಪೂಜಿಸಬೇಕೆಂಬುದನ್ನು ಸರ್ಪಭೂಷಣ ಶಿವಯೋಗಿಗಳು –

" ಲಿಂಗಪೂಜೆಯ ಮಾಡಿರೋ ನಿಮ್ಮೊಳು ಪ್ರಾಣ ।
ಲಿಂಗಪೂಜೆಯ ಮಾಡಿರೋ ॥
ಗಂಗೆಯಮುನೆಗಳ ಸಂಗಮದೊಳು ಮಿಂದು
ಶೃಂಗಾಟದುಪರಿಯ ರಂಗಮಂಟಪದೊಳು ॥ ಪ ॥

ವರಭಕ್ತಿ ಜಲವ ನೀಡಿ ಮಜ್ಜನಗೈದು ವಿರತಿ ಗಂಧವನೆ ತೀಡಿ ।
ಕರಣೇಂದ್ರಿಯಗಳೆಂಬ ಮಿರುಗುವಕ್ಷತೆಯ ನಿ ।
ಟ್ಟರಿವೆಂಬ ನಿರ್ಮಲ ಸರಸ ಪುಷ್ಪವ ಸೂಡಿ ॥ ೧ ॥

ಹರುಷವೆಂಬುವ ಧೂಪವ ಸಮರ್ಪಿಸಿ ।
ವರಬಿಂದು ರುಚಿದೀಪವ ।
ನಿರದತ್ತಿ ಪರಿಪೂರ್ಣ ನೈವೇದ್ಯವನೆ ಮಾಡಿ ।
ಮೆರೆವ ತ್ರಿಗುಣವೆಂಬ ತಾಂಬೂಲವ ಕೊಟ್ಟು ॥ ೨ ॥

ಕರದಿಷ್ಟಲಿಂಗವಿದೆ ಶರೀರದಲ್ಲಿ ಪರವಸ್ತು ತಾನಾಗಿದೆ।
ಹೊರಗೊಳಗೆರಡನ್ನದರಿವರಿವನೆಮೀರಿ ।
ಗುರುಸಿದ್ಧನಂಗ್ರಿಯೋಳ್ ।
ಬೆರೆದೇಕಮಯವಾಗಿ ॥ ೩ ॥

ಎಂದು ಹೇಳಿರುವರು. ಪ್ರಾಣಲಿಂಗ ಭಾವಲಿಂಗಗಳ ಅನುಸಂಧಾನವಾಗಬೇಕಾದರೆ ಅಂಗದ ಮೇಲೆ ಲಿಂಗವನ್ನು ಸದಾ ಧರಿಸಬೇಕು.

« ಆಕಾಶದಲಾಡುವ ಪಟಕ್ಕಾದರೂ ಮೂಲಸೂತ್ರವಿರಬೇಕು,
ಕಲಿಯಾದಡು ಕಜ್ಜವಿಲ್ಲದಾಗದು.
ಭೂಮಿಯಿಲ್ಲದೆ ಬಂಡಿ ನಡೆಯುವದುಂಟೇ ?
ಅಂಗಕ್ಕೆ ಲಿಂಗಸಂಗವಿಲ್ಲದೆ ನಿಸ್ಸಂಗವಾಗಬಾರದು.
ಕೂಡಲ ಚನ್ನಸಂಗಮದೇವರಲ್ಲಿ ಸಂಗವಿಲ್ಲದೆ ನಿಸ್ಸಂಗಿ
ಎಂದು ನುಡಿಯಬಾರದು.

ಎಂದು ಚನ್ನಬಸವಣ್ಣನವರು ಹೇಳಿರುವರು. ನಭೋಮಂಡಲದಲ್ಲಿ ಗಾಳೀಪಟವು ಸರಿಯಾಗಿ ಹಾರಬೇಕಾದರೆ ಆ ಪಟಕ್ಕೆ ಸೂತ್ರವು ಬೇಕಲ್ಲವೇ? ಎಂತಹ ವೀರಭಟನಾದರೂ ಅವನಿಗೆ ಯುದ್ಧದಲ್ಲಿ ಕಾದಾಡಲು ಕೈಯಲ್ಲಿ ಖಡ್ಗ ಬೇಕಲ್ಲವೇ ? ಎಷ್ಟೇ ಅಚ್ಚುಕಟ್ಟಾದ ಬಂಡಿಯಾದರೂ ಅದು ನಡೆಯಲು ಭೂಮಿಯು ಬೇಕಲ್ಲವೇ ? ಭೂಮಿಯಲ್ಲಿದ್ದ ಗುಪ್ತ ಧನವು ಕಾಣಬೇಕಾದರೆ ಅಂಜನವು ಬೇಕಾದಂತೆ ಕಾಣದ ಪ್ರಾಣಲಿಂಗ ಭಾವಲಿಂಗಗಳ ಅನುಸಂಧಾನಕ್ಕೆ ಇಷ್ಟಲಿಂಗಾರ್ಚನೆಯು ಬೇಕು. ಆಕಾಶದಲ್ಲಿ ಹಕ್ಕಿ ಹಾರಬೇಕಾದರೆ ಅದಕ್ಕೆ ಎರಡು ರೆಕ್ಕೆಗಳು ಬೇಕಾದಂತೆ ಮುಕ್ತಿ ಮಂದಿರಕ್ಕೆ ಹೊರಟ ಮುಮುಕ್ಷುವಿಗೆ ಕ್ರಿಯಾ ಜ್ಞಾನಗಳೆರಡೂ ಅವಶ್ಯಬೇಕು. ಅಗ್ನಿ ಸುಡಲರಿವುದಲ್ಲದೆ ಸುಳಿಯಲರಿಯದು. ಅಗ್ನಿ ವಾಯು ಕೂಡಿದಲ್ಲದೆ ಅಡಿಯಿಡಲರಿಯವು. ಹಾಗೆ ಕ್ರಿಯಾಜ್ಞಾನಗಳು ಅನ್ಯೋನ್ಯ ಸಾಪೇಕ್ಷಗಳು. ಮಾಟಕ್ಕೆ ಎರಡು ಕೈಗಳು, ಓಟಕ್ಕೆ ಎರಡು ಕಾಲುಗಳು, ನೋಟಕ್ಕೆ ಎರಡು ಕಣ್ಣುಗಳು, ಕೂಟಕ್ಕೆ ಎರಡು ದೇಹಗಳು, ಊಟಕ್ಕೆ ಎರಡು ತುಟಿಗಳು ಬೇಕಾದಂತೆ, ಮುಕ್ತಿಯ ಪ್ರಾಪ್ತಿಗೆ ಕ್ರಿಯಾ ಜ್ಞಾನಗಳೆರಡೂ ಬೇಕು. ಕೇವಲ ಅರಿವಿನಿಂದ ಮುಕ್ತಿಯಾಗದು. ಕತ್ತಲೆಯ ಮನೆಯಲ್ಲಿ ಕುಳಿತು ದೀಪ ದೀಪವೆಂದು ಉಚ್ಚರಿಸಿದರೆ ಕತ್ತಲೆಯು ಹೋಗುವದೇ ? ಹಣತೆಯಲ್ಲಿ ಎಣ್ಣೆಯನ್ನು ಸುರಿವಿ ಬತ್ತಿಯನ್ನು ಮತ್ತೊಂದು ದೀಪದಿಂದ ಹೊತ್ತಿಸಿದಾಗ ದೀಪ ಬೆಳಗುವದಲ್ಲವೇ ?

« ಕ್ರಿಯಾಮಥನವಿಲ್ಲದೇ ಕಾಣಬಂದುದೇ ಇಕ್ಷುವಿನೊಳಗಣ ಮಧುರ?
ಕ್ರಿಯಾಮಥನವಿಲ್ಲದೇ ಕಾಣ ಬಂದುದೇ ತಿಲದೊಳಗಣ ತೈಲ ?
ಕ್ರಿಯಾಮಥನವಿಲ್ಲದೇ ಕಾಣಬಂದುದೇ ಕ್ಷೀರದೊಳಗಣ ತುಪ್ಪ
ಕ್ರಿಯಾಮಥನವಿಲ್ಲದೇ ಕಾಣಬಂದುದೇ ಕಾಷ್ಠದೊಳಗಣ ಅಗ್ನಿ ?
ಇದು ಕಾರಣ ಗುಹೇಶ್ವರಲಿಂಗವ ತನ್ನೊಳರಿದೆನೆಂಬ,
ಮಹಾತ್ಮಂಗೆ ಸತ್ಕ್ರಿಯಾಚರಣೆಯೇ ಸಾಧನ ಕಾಣಭೋ »

« ಜ್ಞಾನದಲ್ಲಿ ಅರಿದರೇನಯ್ಯ ಸತ್ಕ್ರಿಯಾಚಾರಿಯಾಗದನ್ನಕ್ಕರ ?
ನೆನೆದ ಮಾತ್ರದಲ್ಲಿ ಕಾಂಬುದೇ ಕಾರ್ಯದಲ್ಲಿಲ್ಲದೆ ?
ಕುರುಡ ಕಾಣ ಪಥವ, ಹೆಳವನಡೆಯಲರಿಯ,
ಒಂದಿಲ್ಲದಿದ್ದರೆ ಒಂದಾಗದು, ಜ್ಞಾನವಿಲ್ಲದ ಕ್ರೀಜಡ,
ಕ್ರೀ ಇಲ್ಲದ ಜ್ಞಾನ ಭ್ರಾಂತಿ, ಇದು ಕಾರಣ ಸಿದ್ಧಸೋಮನಾಥ
ನಲ್ಲಿ ಎರಡೂ ಬೇಕು »

ಈಜು ಬರಬೇಕಾದರೆ ನೀರಲ್ಲಿ ಧುಮುಕಿ ಕೈಕಾಲುಗಳನ್ನು ಬೀಸಿಬೀಸಿ ನೀರನ್ನು ಒದೆದು ಮುಂದಕ್ಕೆ ಸಾಗಿ ನೀರನ್ನು ಅತ್ತಿತ್ತ ಸರಿಸಬೇಕು. ಹೀಗೆ ವಿವಿಧ ಕ್ರಿಯೆಗಳನ್ನು ಮಾಡಿದಾಗ ಹೊಳೆದಾಟಲು ಬರುವದು. ಏನೊಂದೂ ಕ್ರಿಯೆಮಾಡದೇ ಸುಮ್ಮನೇ ನೀರಲ್ಲಿ ಧುಮುಕಿದರೆ ಹಾನಿ ನಿಶ್ಚಿತ. ವೀರಶೈವ ಷಟ್‌ಸ್ಥಲ ಸಿದ್ಧಾಂತದಲ್ಲಿ ಕ್ರಿಯಾಜ್ಞಾನಗಳಿಗೆ ಸಮಸಮುಚ್ಚಯವನ್ನು ಹೇಳುವರಲ್ಲದೆ ಕ್ರಮಸಮುಚ್ಚಯವನ್ನು ಹೇಳುವದಿಲ್ಲ. ಅಂತೆಯೇ ಶ್ರೀ ಚನ್ನಬಸವಣ್ಣನವರು–

« ಕ್ರಿಯೆಯೇ ಜ್ಞಾನ, ಜ್ಞಾನವೇ ಕ್ರಿಯೆ, ಕ್ರಿಯೆಯೆಂದರೆ ಮಾಡುವದು,
ಜ್ಞಾನವೆಂದರೆ ತಿಳಿವುದು, ಪರಸ್ತ್ರೀಭೋಗಿಸಬಾರದೆಂಬುದೇ ಜ್ಞಾನ,
ಅದರಂತೆ ಆಚರಿಸುವದೇ ಕ್ರಿಯೆ, ಅರಿದು ಅಂತು ಆಚರಿಸದಿದ್ದರೆ ಅದೇ
ಅಜ್ಞಾನ ನೋಡಾ ಕೂಡಲಚನ್ನಸಂಗಯ್ಯ »

ಎಂದು ಹೇಳುವರು.

ಹೊನ್ನು, ಹೆಣ್ಣು, ಮಣ್ಣುಗಳ ಮೇಲಿರುವ ದುರಾಶೆಯನ್ನು ದೈಹಿಕ, ಬೌದ್ಧಿಕ, ಮಾನಸಿಕ ದುರ್ವಾಸನೆಗಳನ್ನು ಗಾಳಿಗೆ ತೂರಿ ಮೀರಿ ನಿಂತವರಿಗೆ ಮಾತ್ರ ಪಾರಮಾರ್ಥಿಕ ಸುಧಾಧಾರೆಯು ದೊರೆಯುವದು. ಲೇಸಾದ ಕಾರ್ಯಮಾಡದೇ ಹೇಸಿ ಕರ್ಮವ ಮಾಡುತ್ತ ಕೇವಲ ಡೊಂಬರಂತೆ ಬಹುರೂಪಗಾರರಂತೆ ಕೇವಲ ವೇಷಹಾಕಿ ಛಾಷ ಯಾಡುವ ಮೋಸಗಾರರಿಗೆ ಈಶನೊಲಿವನೇ ? ಆತ ಭಕ್ತನೇ ? ಮುಕ್ತನೇ ? ಎಂದು ಪ್ರಭುದೇವರು ನುಡಿಯಲು –

« ಹೊನ್ನಿನೊಳಗೊಂದೊರೆಯ ವಸ್ತ್ರದ ।
ಮನ್ನಣೆಯಲೊಂದೆಳೆಯನಥವಾ ।
ಧಾನ್ಯದೊಳಗಣುಮಾತ್ರವೆನಗೆನ್ನವರಿಗಿರಲೆಂದು ।
ದೈನ್ಯತೆಯಲಾ ಜಂಗಮುವನತಿ ।
ಮನ್ನಿಸದೆ ಮಲೆತಿರ್ದನಾದೊಡೆ ।
ನಿನ್ನ ಪಾದಕೆ ದೂರ ನಾನಹೆ ದೇವಕೇಳೆಂದ »

« ತನುವ ಬೇಡಿದೊಡೀವೆ, ಮನವ ಬೇಡಿದೊಡೀವೆ,
ಧನವ ಬೇಡಿದೊಡೀವೆ ನಿಮ್ಮ ಶರಣರಿಗೆ, ಎನಗೆ ಬೇಕೆಂಬ
ಭಾವ ಮನದಲಿ ಕೊದ್ದಿದರೆ ಘನ ಮಹಿಮ ನಿಮ್ಮ ಪಾದದಾಣೆ,
ಮನ ವಚನ ಕಾಯದಲ್ಲಿ ನೀವಲ್ಲದೆ ಮತ್ತೊಂದನರಿಯೆನು,
ಅರಿದರೆ ಕೂಡಲಸಂಗಮದೇವ ಭವಘೋರದಲ್ಲಿಕ್ಕಯ್ಯಾ »

ತನುಮನಧನಂಗಳು ನಿರ್ಮಾರ್ಜಿಸಿ ಶುದ್ಧನಾಗಿಪ್ಪೆನೆಂದು ಬಸವರಾಜ ದೇವರುಬಿನ್ನಹ ಮಾಡಲು ಆ ಉತ್ತರವ ಖಂಡಿಸಿ ಪ್ರಭುದೇವರು ನಿರೂಪಿಸಿದ ವಚನ –

" ಮೇರುಗಿರಿಗಳೆಲ್ಲವು ಪ್ರಮಥರೊಡವೆ,
ರಜತಗಿರಿಗಳೆಲ್ಲವು ಪುರಾತನರೊಡವೆ,
ಚತುರ್ದಶ ಭುವನವೆಲ್ಲವು ಲಿಂಗದೊಡವೆ,
ಪೃಥ್ವಿಎಂಬುದು ಕರ್ತಾರನ ಕಮ್ಮಟ,
ಅಚ್ಚಿನಪೊಳೆ ಬಾಣಸದಮನೆ ತನುಮನ ಧನಂಗಳೆಲ್ಲವು
ನಮ್ಮ ಗುಹೇಶ್ವರಲಿಂಗದ ಸೊಮ್ಮು ನೀನೇನಕೊಟ್ಟು
ಭಕ್ತನಾದೆ ಹೇಳಾ ಬಸವಣ್ಣಾ "

" ತನುವರ್ಪಿತವೆಂದರೆ ಗುರುದ್ರೋಹ,
ಮನವರ್ಪಿತವೆಂದರೆ ಲಿಂಗದ್ರೋಹ,
ಧನವರ್ಪಿತವೆಂದರೆ ಜಂಗಮದ್ರೋಹ, ಇಂತೀ
ತನು ಮನ ಧನಂಗಳೆಂಬ ಅನಿತ್ಯವನು ನಿತ್ಯಕ್ಕರ್ಪಿಸಿ
ಭಕ್ತನಾದೆನೆಂದರೆ ಅದು ಅಜ್ಞಾನನೋಡಾ
ಒಡೆಯರಿಗೆ ಉಂಡೆಯ ಮುರಿದಿಕ್ಕಿ
ನಾ ಭಕ್ತನಾದೆನೆಂಬ ಮಾತು ಸಮ್ಯಕ್ ಜ್ಞಾನಿ ಶರಣರು ಮೆಚ್ಚುವರೆ?
ನಮ್ಮ ಗುಹೇಶ್ವರಲಿಂಗಕ್ಕೆ ನೀನಾವುದರಲ್ಲಿ
ಏನನರ್ಪಿಸಿ ಭಕ್ತನಾದೆ ಹೇಳಾ ಬಸವಣ್ಣಾ "

ಎಂದು ಪ್ರಭುದೇವರು ಝಂಕಿಸಿ ನುಡಿಯಲು ಬಸವಣ್ಣನವರು –

" ಎಳ್ಳಿಲ್ಲದ ಗಾಣವನಾಡಿದೆತ್ತಿನಂತಾಯಿತ್ತು ಎನ್ನ ಭಕ್ತಿ,
ಉಪ್ಪು ಅಪ್ಪುವಿನಲ್ಲಿ ಎದ್ದಿ ಮೆಲಿದಂತಾಯಿತೆನ್ನ ಭಕ್ತಿ,
ಕೂಡಲ ಸಂಗಮ ಆನು ಮಾಡಿದೆನೆಂಬ ಕಿಚ್ಚು ಎನ್ನನೇ ಸುಟ್ಟಿತ್ತು,
ಇನ್ನು ಸಾಲದೇ ಹೇಳಾ ಪ್ರಭುವೇ ?

ಅಹಂಭಾವದ ಹುಚ್ಚಾಟದಲ್ಲಿ ಸಿಲುಕದೇ ನಿಚ್ಚ ನಿಚ್ಚ ನಿರಹಂಭಾವದಲ್ಲಿ ನಿಂದು ಪರಿಶುದ್ಧ ಅಂತಃಕರಣವುಳ್ಳವನಾಗಿ ಗುರುವು ಕರುಣೆಯಿಂದ ಕರುಣಿಸಿದ ಪರಶಿವಲಿಂಗವನ್ನು ಪರಭಕ್ತಿಯಿಂದ ಅರ್ಚಿಸಬೇಕು. ಸರ್ವ ಅನಿಷ್ಟಗಳನ್ನು, ಸರ್ವಕಷ್ಟಗಳನ್ನು ಪರಿಹರಿಸಿ ಸರ್ವ ಇಷ್ಟಸಿದ್ಧಿಗಳನ್ನು ಕೊಡುವದರಿಂದ ಈ ಲಿಂಗಕ್ಕೆ ಇಷ್ಟಲಿಂಗವೆಂಬ ಅನ್ವರ್ಥಕ ನಾಮ ಬಂದಿದೆ. ಕರಕಮಲದಲ್ಲಿರುವ ಇಷ್ಟಲಿಂಗವನ್ನು ತ್ರಿಕರಣ ಶುದ್ಧಿಯಿಂದ ಪೂಜೆಮಾಡಿ ನಿತ್ಯ ಸುಖಿಯಾಗು ಎಂದು ಹೇಳಿದರು.

## ೧೭ನೆಯ ಗತಿ

# ಅನುಭವ ಮಂಟಪದಲ್ಲಿ ಮಹಾದೇವಿಯಕ್ಕ

**ಪೂರ್ವ ಪೀಠಿಕೆ :**

ನಾವಿರುವ ಈಲೋಕಕ್ಕೆ ಮೃತ್ಯುಲೋಕವೆಂದೂ, ಕರ್ಮಲೋಕವೆಂದೂ, ಮಧ್ಯಮಲೋಕವೆಂದೂ ಕರೆಯುವರು. ಈಲೋಕಕ್ಕಿಳಿದ ಚಕ್ರವರ್ತಿಯೇ ಆಗಲಿ, ಸಾರ್ವಭೌಮನೇ ಆಗಲಿ, ವೀರ ಸೇನಾಪತಿಯೇಆಗಲಿ ಮೃತ್ಯುದೇವತೆಗೆ ಶರಣು ಹೊಡೆಯಲೇ ಬೇಕಾದುದರಿಂದ ಮೃತ್ಯುಲೋಕವೆಂದೂ; ಇಲ್ಲಿ ಜನ್ಮತಾಳಿದ ಪ್ರತಿಯೊಬ್ಬರೂ ಏನಾದರೊಂದು ಕರ್ಮ ಮಾಡಲೇಬೇಕಾದುದರಿಂದ ಕರ್ಮಲೋಕವೆಂದೂ, ಪೌರಾಣಿಕ ಕಲ್ಪನೆಗನುಸರಿಸಿ ಕೆಳಗೆ ಪಾತಾಳಲೋಕ, ಮೇಲೆಕೈಲಾಸಲೋಕ, ಮಧ್ಯದಲ್ಲಿ ಭೂಲೋಕವಿರುವದರಿಂದ ಇದಕ್ಕೆ ಮಧ್ಯಮಲೋಕವೆಂದೂ ಕರೆಯುವರು.

" ಮನು ಅವಬೋಧನೇ " ಎಂಬ ಧಾತುವಿನಿಂದ ಮಾನವ ಶಬ್ದದ ವ್ಯುತ್ಪತ್ತಿಯಾಗಿದೆ. " ಮತ್ವಾಕರೋತೀತಿ ಮಾನವಃ - ಅಜ್ಞಾನದ ಅಂಧಕಾರದಲ್ಲಿ ಸಿಲುಕಿ ಬಳಲದೇ, ಜ್ಞಾನಪಥದಲ್ಲಿ ನಡೆಯುವ ಜಾಣನೇ ನಿಜವಾದ ಮಾನವನು. ಪರ್ವತಗಳಲ್ಲಿ ಹಿಮಾಲಯು, ನದಿಗಳಲ್ಲಿ ಗಂಗಾ, ನಕ್ಷತ್ರಮಂಡಲದಲ್ಲಿ ಚಂದ್ರಬಿಂಬ ಮೇಲೆನಿಸಿ ಮೆರೆಯುವಂತೆ ವಿಶ್ವದಲ್ಲಿ ತೋರುವ ಪ್ರಾಣಿವರ್ಗದಲ್ಲೆಲ್ಲ ಮಾನವನೇ ಸರ್ವಶ್ರೇಷ್ಠನೆನಿಸಿರುವನು. ಕರ್ತುಂ ಅಕರ್ತುಂ ಅನ್ಯಥಾಕರ್ತುಂ ಸರ್ವಸಮರ್ಥನಾದ ಮಾನವನ ಘನತೆ ಗೌರವಗಳಿಗೆ ಇತಿ ಮಿತಿಇಲ್ಲ. ಮಾನವನು ಘನಮನ ಸಂಪನ್ನನಾಗಿ ಮಾಡಬೇಕಾದುದನ್ನು ಮಾಡಿ ಚಿನುಮಯಾತ್ಮನೂ ಆಗಬಹುದು. ಇಲ್ಲವೆ ಅಲ್ಲದುದನ್ನು ಮಾಡಿ ಇಲ್ಲದ ಅಪವಾದಗಳನ್ನು ಹೊತ್ತು ಹುಲ್ಲಿಗಿಂತಲೂ ಹಗುರವಾಗಿಯೂ ಹೋಗಬಹುದು.

ಮನುಷ್ಯನು ಬಂದುದೆಲ್ಲಿಂದ ? ಮುಂದೆ ಹೋಗುವದೆಲ್ಲಿಗೆ ? ಮಾನವ ಜನ್ಮದ ಅಂತಿಮಧ್ಯೇಯವೇನು ? ಮುಂತಾದ ಮಹತ್ವದಪ್ರಶ್ನೆಗಳಿಗೆ ಮಹಾನುಭಾವಿಗಳಾದ ತತ್ತ್ವಜ್ಞಾನಿಗಳು–

"ಆತ್ಮಾವಾ ಅರೇ ದ್ರಷ್ಟವ್ಯಃ " " ಶಿವ ಏಕೋಧ್ಯೇಯಃ "
ಈ ಮನುಜ ಕುಲಜನ್ಮದ ಲಾಭವಾವುದೆಂದರೆ ಆನಾರೆಂದು ತಿಳಿವುದು.

''ಭೂಮಿ ನಿನ್ನದಲ್ಲ, ಹೇಮ ನಿನ್ನದಲ್ಲ, ಕಾಮಿನಿ ನಿನ್ನದಲ್ಲ,
ನಿನ್ನೊಡವೆ ಎಂಬುದು ಜ್ಞಾನರತ್ನ. ಅಂತಪ್ಪ ಜ್ಞಾನರತ್ನವ
ನಲಂಕರಿಸಿದೆಯಾದೊಡೆ ಗುಹೇಶ್ವರ ಲಿಂಗದಲ್ಲಿ ನಿನ್ನಿಂದ
ಸಿರಿವಂತರಿಲ್ಲಕಾಣಾ ಎಲೆ ಮನವೇ "

ಎಂದು ಪ್ರಭುದೇವರು ಹೇಳಿದ್ದಾರೆ.

ಹೊಟ್ಟೆ ಬಟ್ಟೆಗಳ ಸಲುವಾಗಿ ಕಲಿಯುವ ವಿದ್ಯೆಗಳು ನಿಜವಾದ ವಿದ್ಯೆಗಳಲ್ಲ, ಆತ್ಮ

ವಿದ್ಯೆಯೊಂದೇ ನಿಜವಾದುದು. "ಸಾವಿದ್ಯಾಯಾ ವಿಮುಕ್ತಯೇ" "ಆಧ್ಯಾತ್ಮವಿದ್ಯಾ ವಿದ್ಯಾನಾಂ" "ಭುಕ್ತಯೇ ನತು ಮುಕ್ತಯೇ" "ಶ್ರೇಯೋ ಹಿ ಧೀರಃ ಅಭಿಪ್ರೇಯಸೋ ವೃಣೀತೇ" ಹುಟ್ಟದಿಹ ವಿದ್ಯೆಯನು ಕಲಿವುದು ಮುಂತಾದ ಸೂಕ್ತಿಗಳು ಆಧ್ಯಾತ್ಮ ವಿದ್ಯೆಯ ಪ್ರಾಶಸ್ತ್ಯವನ್ನು ಹೇಳಿದರೆ–

"ತಮಾತ್ಮಸ್ಥಂಯೇಽನು ಪಶ್ಯಂತಿ ಧೀರಾಃ ತೇಷಾಂ
ಶಾಂತಿಃ ನೇತರೇಷಾಂ"

ಇತ್ಯಾದಿ ಉಪನಿಷತ್ಪ್ರಮಾಣಗಳು ಆತ್ಮವಿದ್ಯೆಯಿಂದ ಅತ್ಯಂತಿಕಶಾಂತಿ ಅಮೃತತ್ವಗಳು ಲಭಿಸುತ್ತವೆಂದು ಹೇಳುತ್ತವೆ.

ಲೋಕಕ್ಕೆ ಭಯಂಕರನಾದರೂ ಮುದ್ದುಬಾಲಕನಾದ ನಚಿಕೇತನಿಗೆ ಪ್ರೀತಿಯ ತಂದೆಯಂತಿರುವ ಯಮರಾಜನು ನಚಿಕೇತನೇ ಆತ್ಮವಿದ್ಯೆಯು ಅತ್ಯಂತ ನಿಗೂಢವಾದುದು. ಸಾಮಾನ್ಯ ಜನರ ಬುದ್ಧಿ ಮನಗಳಿಗೆ ನಿಲುಕದಂತಹದು. ಆ ವಿದ್ಯೆಯ ರಹಸ್ಯವನ್ನರಿಯದೆ ಮನುಮುನಿಗಳೂ, ನರಸುರರೂ, ದೇವಾದಿದೇವತೆಗಳೂ ಮುಗ್ಧರಾಗಿ ಹೋಗಿರುವರು. ಅಂತಹ ದುಃಸಾಧ್ಯವಾದ ಆತ್ಮಜ್ಞಾನದ ಪ್ರಾಪ್ತಿಗೋಸುಗ ಹಂಬಲಿಸಬೇಡ. ಅಖಂಡ ಭೂಮಂಡಲಕ್ಕೇನೇ ಸಾರ್ವಭೌಮನಾಗುವ ಇಚ್ಛೆಯಿದ್ದರೆ ಅದನ್ನಾದರೂ ಹೇಳು. ಈಗಿಂದೀಗಲೇ ಪಟ್ಟಗಟ್ಟಿ ಸಾರ್ವಭೌಮನನ್ನಾಗಿ, ಚಕ್ರವರ್ತಿಯನ್ನಾಗಿ ಮಾಡುವೆ. ಇಲ್ಲವೇ ಮತ್ತೇನಾದರೂ ಮಹತ್ವಾಕಾಂಕ್ಷೆಗಳಿದ್ದರೆ ಅದನ್ನು ಹೇಳು. ತಡಮಾಡದೀವೆ. ಆತ್ಮಜ್ಞಾನದ ಪ್ರಶ್ನೆಯನ್ನೇ ಬಿಟ್ಟುಬಿಡು. ಅದರ ಗೋಜಿಗೆ ಹೋಗಬೇಡ ಎನ್ನಲು ನಚಿಕೇತನು – ಯಮರಾಜನೇ ಆವ ವಿದ್ಯೆಯನ್ನು ತಿಳಿಯದೇ ಮನು, ಮುನಿ, ಋಷಿ, ದೇವಾದಿದೇವತೆಗಳೆಲ್ಲರೂ ಮುಗ್ಧರಾಗಿರುವರೋ ಅಂತಹ ಆತ್ಮವಿದ್ಯೆಯನ್ನೇ ನನಗೆ ತಿಳಿಸು ಎಂದು ಹಟಹಿಡಿಯಲು ಯಮರಾಜನು ಆವನಿಗೆ ಆತ್ಮವಿದ್ಯೆಯನ್ನು ಉಪದೇಶಿಸಿದನು. ನಚಿಕೇತ ಮತ್ತು ಯಮರಾಜ ಇವರೀರ್ವರ ನಡುವೆ ನಡೆದ ಸುಂದರ ಸಂವಾದವು ಕಠೋಪನಿಷತ್ತಿನಲ್ಲಿ ಬಂದಿರುವದು.

"ತನ್ನ ತಾನರಿದೊಡೆ ಮುಕ್ತ, ತಾನೆ ತನ್ನ ನರಿಯದೊಡೆ ಹೇಗೆವಿರಕ್ತ ?"

"ಏನಿರ್ದೊಡೇನು ? ನಿಜಬೋಧೆಯೊಂದಿಲ್ಲದಿರ್ದರೆ
ಕಾನನದ ಬೆಳದಿಂಗಳಂತೆ ನಿಷ್ಫಲವು"
ರಂಡೆಗೊದಗಿದ ಯೌವನದಂತೆ ನಿಷ್ಫಲವು !"
ನಾಯಮೊಲೆಯೊಳಗಿರ್ದಹಾಲಿನಂತಿಹುದು ।"
ಹೆಣಕೆ ಮಾಡಿದ ಶೃಂಗಾರದಂತೆ ನಿಷ್ಫಲವು"

"ಕಂಠ ಸೂತ್ರಂವಿನಾನಾರೀ ಸರ್ವಾಭರಣ್ಯೈರ್ಯುತಾ"
...ಲಘು ತಿಲಕ ವಿಹೀನಾಚೇತ್ ರಮಣೀನೈವಕಲ್ಯಾಣೀ"

ಓರ್ವ ಹೆಣ್ಣುಮಗಳು ಮೈತುಂಬ ಬಂಗಾರದ ವಸ್ತು ಒಡವೆಗಳನ್ನಿಟ್ಟರೂ ಒಂದು

ಕುಂಕುಮತಿಲಕ, ಒಂದು ಮಂಗಲಸೂತ್ರ ಇಲ್ಲದಿದ್ದರೆ ಆಕೆಯು ಮುತ್ತೈದೆ ಎಂದು ಹೇಳಿಸಿಕೊಳ್ಳಲು ಅನರ್ಹಳೆನಿಸುವಂತೆ ಮಾನವನಿಗೆ ಅಧಿಕಾರ, ವೈಭವ, ಸಂಪತ್ತು ಬೇಕಾದಷ್ಟಿದ್ದರೂ ಅವನಿಗೆ ತನ್ನರಿವು ಅಂದರೆ ಆತ್ಮವಿದ್ಯೆಯು ಇಲ್ಲದೇಹೋದರೆ ಅವೆಲ್ಲವೂ ವ್ಯರ್ಥವಾಗಿ ಹೋಗುತ್ತವೆ.

ವಿಶ್ವವಿದ್ಯಾಲಯುಗಳಲ್ಲಿಯೋ, ಶಾಲೆ ಕಾಲೇಜುಗಳಲ್ಲಿಯೋ ಶಿಕ್ಷಣ ಮಂದಿರಗಳಲ್ಲಿಯೋ, ಮಹಾಮಹೋಪಾಧ್ಯಾಯರು, ಪ್ರಾಚಾರ್ಯರು, ಪ್ರಾಧ್ಯಾಪಕರು ಹೇಗೆ ವಿದ್ಯೆಯನ್ನು ಕಲಿಸುವರೋ ಹಾಗೆಯೇ ಶ್ರೋತ್ರೀಯ ಬ್ರಹ್ಮನಿಷ್ಠರಾದ ಸದ್ಗುರುಗಳು ಮಠಗಳಲ್ಲಿಯೋ, ಗುರುಕುಲದಲ್ಲಿಯೋ, ತಪೋವನದಲ್ಲಿಯೋ, ಪರ್ಣಕುಟೀರದಲ್ಲಿಯೋ ಮುಮುಕ್ಷುಗಳಿಗೆ, ಜಿಜ್ಞಾಸುಗಳಿಗೆ, ಸಚ್ಛಿಷ್ಯರಿಗೆ ಪರಾವಿದ್ಯೆಯನ್ನು ಅಂದರೆ ಮೋಕ್ಷ ಶಾಸ್ತ್ರವನ್ನು ಹೇಳುವರು. ಅಂತೆಯೇ ಶಬ್ದಾನುಶಾಸನದ ಕರ್ತನಾದ ಅಮರಸಿಂಹನು ಮಠ ಈ ಶಬ್ದದ ನಿರ್ವಚನವನ್ನು " ಮಠಶ್ಛಾತ್ರಾದಿನಿಲಯಃ " ಎಂದು ವ್ಯಾಖ್ಯಾನಿಸಿರುವನು.

ತಾನಾರೆಂದು ತಿಳಿವುದೇ ಅತಿ ಮಹತ್ವದ್ದು. ಅಂತೆಯೇ ಶ್ರೀಬಸವೇಶ್ವರರು–

« ಏನನಾದರೂ ಸಾಧಿಸಬಹುದು ಮತ್ತೇನನಾದರೂ
ಸಾಧಿಸಬಹುದು ತಾನಾರೆಂಬುದ ಸಾಧಿಸಲಾಗದು
ಕೂಡಲ ಸಂಗಮದೇವನ ಕರುಣವುಳ್ಳವಂಗಲ್ಲದೆ »

ಎಂದು ಹೇಳಿರುವರು. ಶ್ರೀ ಮನ್ನಿಜಗುಣಶಿವಯೋಗಿಗಳೂ ತಮ್ಮ ಕೈವಲ್ಯಪದ್ಧತಿಯ ಪ್ರಥಮಪದದಲ್ಲಿಯೇ « ಆರುನಾನೆಂದು ವಿಚಾರಿಸು » ಎಂದು ಹೇಳಿರುವರು.

ಕರ್ನಾಟಕದಲ್ಲಿ ಸುಪ್ರಸಿದ್ಧರಾದ ಹುಬ್ಬಳ್ಳಿಯ ಸಿದ್ಧಾರೂಢರ ಬಳಿಗೆ ಹೈದರಾಬಾದ ನವಾಬರ ಸಂಬಂಧಿಕನೊಬ್ಬ ದರ್ಶನಕ್ಕೆ ಬಂದ.ಆಗ ಸಿದ್ಧಾರೂಢರು ಆತನನ್ನು ಆತ್ಮೀಯತೆಯಿಂದ ಬರಮಾಡಿಕೊಂಡು » ನೀನು ಯಾರು ? ನಿನ್ನ ಊರು ಯಾವುದು ? ಇಲ್ಲಿಗೇಕೆ ಬಂದೆ ಎಂದು ಪ್ರಶ್ನಿಸಿದರು. ಆಗ ಬಂದ ಆಯುವಕನು ಭಯ ಭಕ್ತಿಯಿಂದ ಕೈ ಮುಗಿದು, ಸದ್ಗುರುವೇ ! ನಾನಾರು ? ನನ್ನ ಜೀವನದ ಅಂತಿಮ ಧ್ಯೇಯವೇನು ? ನನ್ನ ನಿಜರೂಪವೇನು ? ಇವುಗಳ ಉತ್ತರವನ್ನು ಪಡೆಯಲೆಂದೇ ತಮ್ಮ ಪಾದಸನ್ನಿಧಿಗೆ ಬಂದಿರುವೆನು. ಈ ಪ್ರಶ್ನತ್ರಯಗಳಿಗೆ ಉತ್ತರವನ್ನು ಪಡೆದು ತಮ್ಮಿಂದ ಉದ್ಧಾರವಾಗಬೇಕೆಂದು ಮಹತ್ವಾಕಾಂಕ್ಷೆಯಿದೆ ಎಂದು ಸಿದ್ಧಾರೂಢರ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡನು. ಆಗ ಸಿದ್ಧಾರೂಢರು ಸಾವಿರಾರು ವರ್ಷಗಳಿಂದ ಸಾಧಕರು ಈ ನಿಗೂಢವಾದ ಯಕ್ಷಪ್ರಶ್ನೆಗೆ ಉತ್ತರವನ್ನು ಹುಡುಕುತ್ತಲೇ ಇದ್ದಾರೆ. ನೀನು ನಿಜವಾದ ಮುಮುಕ್ಷುವಾಗಿ ಬಂದಿರುವೆ. ನಿನ್ನ ಆಧ್ಯಾತ್ಮಿಕ ಹಸಿವಿಗೆ ಅನ್ನವಿದೆ ಬಾ ಎಂದು ಬಳಿ ಕರೆದು ಮೈದಡವಿ ಹದವಾದ ಅವನ ಹೃದಯಭೂಮಿಯಲ್ಲಿ ತತ್ವೋಪದೇಶ ಬೀಜವನ್ನು ಬಿತ್ತಿದರು. ಬಂದ ಸಾಧಕನ ಮೊದಲಿನ ಹೆಸರು ಖಾಜಾಅಲಿ. ಶ್ರೀ ಸಿದ್ಧಾರೂಢರ ಆತ್ಮ ಶ್ರೀಮಂತಿಕೆಯನ್ನು ತನ್ನ ಜೀವನದಲ್ಲಿ ತುಂಬಿಕೊಂಡು, ಆತನು ಪರುಷಹಸ್ತಸ್ಪರ್ಶ

ಪ್ರಭಾವದಿಂದ « ಕೀಟೋ ಭ್ರಮರಯೋಗೇನ ಭ್ರಮರೋ ಭವತಿಧ್ರುವಂ » ಎಂಬಂತೆ ಬಹಳ ಎತ್ತರವಮಟ್ಟಕ್ಕೆ ಹೋಗಿ ಆತನೇ ಕಬೀರದಾಸನೆಂದು ಸುಪ್ರಸಿದ್ಧನಾದನು.

ವಿವಿಧ ಊರುಗಳಿಗೆ ಹೋಗಲಿಚ್ಛೆಯುಳ್ಳ ಸಾವಿರಾರು ಪ್ರಯಾಣಿಕರು ಬಂದು, ಉಗಿಬಂಡಿಯಲ್ಲಿ ಕೂತುಕೊಳ್ಳುವರಷ್ಟೇ ! ಆ ಉಗಿಬಂಡಿಯನ್ನು ನಡೆಯಿಸಲು ಓರ್ವ ಚಾಲಕನು ಬೇಕಾದಂತೆ ದೇಹವೆಂಬ ಉಗಿಬಂಡಿಯಲ್ಲಿ ಕುಳಿತ ಮುಮುಕ್ಷು ಮುಕ್ತಿಯೆಂಬ ಮಂದಿರಕ್ಕೆ ಮುಟ್ಟಲು ಶ್ರೀಸದ್ಗುರುವೆಂಬ ಸಂಚಾಲಕನುಬೇಕೇಬೇಕು. ಅಂತೆಯೇ ಶಾಸ್ತ್ರಗಳು —

« ನಗುರೋರಧಿಕಂ ಶಿವಶಾಸನತಃ,
« ನಾಸ್ತಿ ತತ್ತ್ವಂ ಗುರೋಃ ಪರಂ •
ಗುರುಃ ಸಾಕ್ಷಾತ್ಪರಬ್ರಹ್ಮ
« ಸುರತರುವು ಮರವಲ್ಲ ಸುರಭಿಯೊಂದಾವಲ್ಲ ।
ಪರುಷ ಪಾಷಾಣದೊಳಗಲ್ಲ । ಗುರುರಾಯ ।
ನರರೊಳಗೆ ಅಲ್ಲ ಸರ್ವಜ್ಞ ॥ »

ಎಂದು ಮುಂತಾಗಿ ಗುರುವಿನ ಮಹತ್ವವನ್ನು ಹಾಡಿಪರಸುತ್ತವೆ. ಆಣವಾದಿ ಮಲತ್ರಯಗಳಿಂದ ದೂಷಿತನಾದ, ಅವಿದ್ಯಾದಿ ಪಂಚಕ್ಲೇಶಗಳಿಂದ ದುಃಖಿತನಾದ, ಅರಿಷಡ್ವರ್ಗಗಳಿಂದ ಬಂಧಿತನಾದ, ಷಡ್ಭ್ರಮೆಗಳಿಂದ ಭ್ರಮಿಷ್ಠನಾದ, ತಾಪತ್ರಯಗಳಿಂದ ತಪ್ತನಾದ ಜೀವಾತ್ಮನು ಸಂಸಾರವೆಂಬ ಹಾಳುಭಾವಿಯಲ್ಲಿಬಿದ್ದು ದಿಙ್ಮೂಢನಾಗಿ ಒದ್ದಾಡುತ್ತಿರುವನು.

« ಸತ್ವಂರಜಸ್ತಮ ಇತಿ ಗುಣಾಃಪ್ರಕೃತಿಸಂಭವಾಃ ।
ನಿಬಧ್ನಂತಿ ಮಹಾಬಾಹೋ ದೇಹೇ ದೇಹಿ ನಮವ್ಯಯಃ » ॥

ಗಾಂಧಾರ ದೇಶದ ಓರ್ವ ಮಹಾರಾಜನು ಒಂದುದಿನ ವಿನೋದಕ್ಕೋಸ್ಕರ ಪಟ್ಟಣದ ಹೊರಭಾಗದಲ್ಲಿ ತಿರುಗಾಡಲಿಕ್ಕೆ ಹೊರಟನು. ಏಕಾಕಿಯಾಗಿ ಅವನು ಹೊರಟಿದ್ದನ್ನು ಕಂಡು ರತ್ನ ಕಿರೀಟವನ್ನು ಧರಿಸಿದ, ಚಿನ್ನರನ್ನದೊಡವೆಗಳಿಂದ ಭೂಷಿತನಾದ ಮಹಾರಾಜನ ಸುಲಿಗೆ ಮಾಡಲು ಸುಪ್ರಸಿದ್ಧರಾದ ಮೂವರು ಕಳ್ಳರು ರಾಜನಿಗೆ ಮುತ್ತಿಗೆ ಹಾಕಿದರು. ಆಗ ರಾಜನು ಹೌಹಾರಿದನು. ಕಳ್ಳರು ಹಂಚಿಕೆಮಾಡಿ ದಿಕ್ಕು ಗೊತ್ತಾಗಬಾರದೆಂದು ಆ ಮಹಾರಾಜನ ಎರಡೂ ಕಣ್ಣುಗಳನ್ನು ಅರಿವೆಯ ಪಟ್ಟಿಯಿಂದ ಕಟ್ಟಿ ಗರಗರನೇ ತಿರುಗಿಸಿದರು ಮತ್ತು ಕೈಕಾಲುಗಳನ್ನು ಹಗ್ಗದಿಂದ ಬಿಗಿದುಬಂಧುರವಾಗಿ ಕಟ್ಟಿ ಒಂದು ಹಾಳುಭಾವಿಯಲ್ಲಿ ನೂಕಿಹೋದರು. ಎಂದೆಂದೂ ದುಃಖ ದುಮ್ಮಾನಗಳನ್ನು ಅರಿಯದ ಆ ಮಹಾರಾಜನು ಆ ಹಾಳುಬಾವಿಯಲ್ಲಿ ಹಾ-ಹಾ- ಎಂದು ನರಳುತ್ತ ಬಿದ್ದು ಬಿಟ್ಟನು. ನಿರ್ಜನವಾದ ಅರಣ್ಯದಲ್ಲಿಯ,ಆಳವಾದ ಹಾಳು ಭಾವಿಯಲ್ಲಿ ಬಿದ್ದುದರಿಂದ ಮೇಲಕ್ಕೆ ಏಳುವಂತಿಲ್ಲ, ಯಾರಿಗೂ ಹೇಳುವಂತಿಲ್ಲ. ಹೇಳಬೇಕೆಂದರೆ ಒಬ್ಬರೂ ಕೇಳುವಂತಿಲ್ಲ. ಹಳ್ಳಿಗೆ ಏಕರಾತ್ರಿ, ಪಟ್ಟಣಕ್ಕೆ ಪಂಚರಾತ್ರಿಯಂತೆ ದೇಶಸಂಚಾರ ಕೈಕೊಂಡ

ಒಬ್ಬ ಮಹಾಶಿವಯೋಗಿಗಳು ಆ ಕಾಡಿನಲ್ಲಿಯೇ ಹೊರಟಿದ್ದು ಹಾಳುಬಾವಿಯ ಬಳಿಯಿರುವ ಒಂದು ವಿಶಾಲವಾದ ಗಿಡದಡಿಯ ನೆರಳಲ್ಲಿ ತಂಗಿದ್ದರು. ಶಿವಯೋಗಿಗಳು ತಮ್ಮ ಶಿವಯೋಗಾನುಷ್ಠಾನದ ಸತ್ಕಾರ್ಯಗಳನ್ನು ಮುಗಿಸಿಕೊಂಡು ವಿಶ್ರಾಂತಿಗೋಸುಗ ಕುಳಿತಾಗ ಸಮೀಪದಲ್ಲಿಯೇ ದುಃಖದಿಂದ ನರಳುವ ಧ್ವನಿಯನ್ನು ಕೇಳಿ ಅತ್ತಕಡೆಗೆ ಧಾವಿಸಿ ಹೋದನು. ನಿರ್ಜನಾರಣ್ಯ, ಹಾಳುಭಾವಿ, ಸ್ಫುರದ್ರೂಪಿಯಾದ ಯುವಕ ಸುತ್ತಲೂ ಏನೂಕಾಣಬಾರದೆಂದು ಕಣ್ಣಿಗೆ ಬಿಗಿಯಾಗಿ ಕಟ್ಟಿದ ಅರಿವೆಯ ಕಟ್ಟು, ಹಗ್ಗದಿಂದ ಕೈಕಾಲುಗಳನ್ನು ಬಿಗಿಯಾಗಿ ಕಟ್ಟಿದ್ದಾರೆ. ದುಃಖಾಲಾಪ, ಕರುಳು ಕರಗಿಸುವಂತಹ ನೋಟದಿಂದ ಶಿವಯೋಗಿಗಳು ಮರುಗಿಕಂಬನಿಗರೆದರು. ಇಷ್ಟೇ ಅಲ್ಲ ಬಾವಿಯಲ್ಲಿ ಇಳಿದು ಕೈಕಾಲುಗಳಿಗೆ ಕಟ್ಟಿದ ಹಗ್ಗವನ್ನು ಬಿಚ್ಚಿ ಮತ್ತು ಕಣ್ಣಿಗೆ ಕಟ್ಟಿದ ಪಟ್ಟಿಯನ್ನು ತೆಗೆದು ರಾಜನನ್ನು ಬಾವಿಯಿಂದ ಮೇಲಕ್ಕೆ ಕರೆದುಕೊಂಡು ಬಂದರು. ಬಾವಿಯಲ್ಲಿ ಬಿದ್ದು ಗಾಬರಿಯಾದ ರಾಜನಿಗೆ ಸಮಾಧಾನಕರವಾದ ಮಾತುಗಳನ್ನು ಹೇಳಿ ಮೈಮೇಲೆ ಕೈಯಾಡಿಸಿ ಆಸ್ಫುರದ್ರೂಪಿಯಾದ ಯುವಕನನ್ನು ಕುರಿತು, ಅಯ್ಯಾ ಯುವಕನೇ ನೀನಾರು ? ಯಾರಾರೂ ಇಲ್ಲದ ಈ ಕಾಡಿನ ಹಾಳುಭಾವಿಯಲ್ಲಿ ನಿನ್ನ ಕೈಕಾಲುಗಳನ್ನ ಹಗ್ಗದಿಂದ ಕಟ್ಟಿ ಕಣ್ಣಿಗೆ ಪಟ್ಟಿಯನ್ನು ಬಿಗಿದು ನೂಕಿದವರಾರು ? ಇಂತಹ ಸಂಕಟ ಪ್ರಸಂಗವು ನಿನಗೆ ಬರಲು ಕಾರಣವೇನು ? ಎಂದು ಕೇಳಲು ಆ ಯುವಕನು ಕೈಮುಗಿದು ಮಹಾಮಹಿಮರೇ! ಅನಾಥ ಬಂಧುವೇ ! ನಾನು ಗಾಂಧಾರ ದೇಶದ ಮಹಾರಾಜನು. ನಿನ್ನೆಯದಿನ ನಾನು ನಗರದ ಹೊರಗೆ ವಿನೋದಕ್ಕಾಗಿ ತಿರುಗಾಡಲಿಕ್ಕೆ ಬಂದಾಗ ದುಷ್ಟರಾದ ಕಳ್ಳರು ಹೊಂಚು ಹಾಕಿ ಬಂದು ನನ್ನ ತಲೆಯ ಮೇಲಿನ ಕಿರೀಟವನ್ನು, ಮೈಮೇಲಿರುವ ರತ್ನಾಭರಣಗಳನ್ನು ದೋಚಿಕೊಂಡು ಹೋಗುವದಲ್ಲದೆ ನಾನು ಮತ್ತೆ ಹುಡುಕಿಸಿ ತಮ್ಮನ್ನು ಹಿಡಿದು ಶಿಕ್ಷಿಸುವೆನೆಂಬಭೀತಿಯಿಂದ ನನ್ನನ್ನು ಕೊಲ್ಲಬೇಕೆಂಬ ದುರುದ್ದೇಶವನ್ನಿಟ್ಟುಕೊಂಡು ಕೈಕಾಲುಗಳನ್ನ ಕಟ್ಟಿ ಭಾವಿಯಲ್ಲಿ ನೂಕಿದರು. ಎರಡು ದಿನಗಳಿಂದಲೂ ಹೀಗೆ ನರಳುತ್ತಬಿದ್ದಿದ್ದೆನು. ತಾವು ಬಾರದಿದ್ದರೆ ನನ್ನ ಪ್ರಾಣ ಉಳಿಯುತ್ತಿರಲಿಲ್ಲ. ಕರುಣಾಳುಗಳಾದ ತಾವೇ ನನಗೆ ಜೀವದಾನ ಮಾಡಿದಿರಿ ಎಂದು ರಾಜನು ಯತಿಪುಂಗವರಿಗೆ ಸಾಷ್ಟಾಂಗ ಪ್ರಣಾಮ ಮಾಡಿದನು.

ಬ್ರಹ್ಮಾಂಡದಲ್ಲಿರುವ ಒಬ್ಬ ರಾಜನ ಕಣ್ಣು ಕಟ್ಟಿ ಕಳ್ಳರು ಅವನನ್ನು ಹಾಳುಭಾವಿಯಲ್ಲಿ ನೂಕಿದಂತೆ, ಸತ್ವ, ರಜ, ತಮ ಎಂಬ ಮೂವರು ಕಳ್ಳರು ಪಿಂಡಾಂಡದ ಅರಸನಾದ ಜೀವಾತ್ಮನನ್ನು ಪಂಚಪಾಶಗಳಿಂದ ಬಿಗಿದು ಸಂಸಾರವೆಂಬ ಹಾಳುಭಾವಿಯಲ್ಲಿ ನೂಕಿರುವರು. ಕರುಣಾಳುವಾದ ಶ್ರೀಗುರುವು ಶಿಷ್ಯನನ್ನು ಕೃಪಾದೃಷ್ಟಿಯಿಂದ ನೋಡಿ ಉಪದೇಶಮಾಡಿ ಉದ್ಧರಿಸುವನು.

ಅಮವಾಸ್ಯೆಯ ದಿನ ಬ್ರಹ್ಮಾಂಡದ ತುಂಬ ತುಂಬಿದ ಕತ್ತಲೆಯು ತೈಲದೀಪದಿಂದಲೋ ವಿದ್ಯುದ್ದೀಪದಿಂದಲೋ, ಗ್ಯಾಸಿನಿಂದಲೋ ಕೆಲವಟ್ಟಿಗೆ ಚದುರಿಹೋಗುವದು. ಪ್ರಾತಃಕಾಲದಲ್ಲಿ ಒಬ್ಬನೇ ಸೂರ್ಯ ಮೂಡಿದಾಕ್ಷಣ ಸುತ್ತುಮುತ್ತಿದ ಕತ್ತಲೆಯ ಮೊತ್ತವೆಲ್ಲ ಎತ್ತಲೋ ಹೊರಟುಹೋಗುವದು. ಇನ್ನೊಂದು [illegible] ಕತ್ತಲೆಯಿದ್ದು

ಸಾವಿರ ಸಾವಿರ ದೀಪ ಹಚ್ಚಿದರೂ, ನೂರಾರು ಸೂರ್ಯ ಚಂದ್ರರು ಮೂಡಿ ಬೆಳಗಿದರೂ ಅದು ಹೋಗದು. ಕೇವಲ ಐದೂವರೆ ಅಡಿ ಉದ್ದದ ಈ ಪಿಂಡಾಂಡದ ತುಂಬ ಮುತ್ತಿ ಮುಸುಕಿದ ಕತ್ತಲೆಯಿಂದು. ಇದನ್ನೇ ಪ್ರಭುದೇವರು –

" ಹಿಡಿವಕೈಯ ಮೇಲೆ ಕತ್ತಲೆಯಯ್ಯಾ,
ನೋಡುವ ಕಂಗಳ ಮೇಲೆ ಕತ್ತಲೆಯಯ್ಯಾ,
ನೆನೆವ ಮನದ ಮೇಲೆ ಕತ್ತಲೆಯಯ್ಯಾ,
ಕತ್ತಲೆಯೆಂಬುದು ಇತ್ತಲೆಯಯ್ಯಾ,
ಗುಹೇಶ್ವರ ಲಿಂಗವೆಂಬುದು ಅತ್ತಲೆಯಯ್ಯಾ "

ಎಂದು ಹೇಳಿರುವರು. ಈ ಅಜ್ಞಾನದ ಕತ್ತಲೆಯು ಹೊರಗೆ ಹಚ್ಚಿದ ಹಣತೆಯ ದೀಪ ದಿಂದಾಗಲಿ, ಭಾಸ್ಕರನಿಂದಾಗಲೀ ಹೋಗದು. ಇದು ಹೋಗಬೇಕಾದರೆ ಜ್ಞಾನ ದೀಪವನ್ನೇ ಹಚ್ಚಬೇಕು. ಬ್ರಹ್ಮಾಂಡದಲ್ಲಿ ತೋರುವ ಕತ್ತಲೆಗಿಂತಲೂ ಪಿಂಡಾಂಡ ದಲ್ಲಿರುವ ಕತ್ತಲೆಯು ವಿಲಕ್ಷಣವಾಗಿರುವಂತೆ, ಬ್ರಹ್ಮಾಂಡದಲ್ಲಿರುವ ದೀಪಕ್ಕಿಂತಲೂ ಈ ಜ್ಞಾನದೀಪವು ವಿಲಕ್ಷಣವಾಗಿದೆ.

ಎಣ್ಣೆಯಿಲ್ಲದೆ, ಬತ್ತಿಯಿಲ್ಲದೆ, ಕಾಡಿಗೆಯಿಲ್ಲದೆ, ಕಮರಿಲ್ಲದೆ, ಕರಕು ಇಲ್ಲದೇ ಅತ್ತಿತ್ತ ಹೊಯ್ದಾಡದೇ ಥಳಥಳಬೆಳಗುವ ಜ್ಯೋತಿಯೆಂದರೆ ಜ್ಞಾನಜ್ಯೋತಿಯೊಂದೇ! ಇದನ್ನೇ ಶ್ರೀಮನ್ನಿಜಗುಣಶಿವಯೋಗಿಗಳು –

" ಜ್ಯೋತಿ ಬೆಳಗುತಿದೆ ವಿಮಲ ಪರಂಜ್ಯೋತಿ ಬೆಳಗುತಿದೆ ।
ಮಾತುಮನಂಗಳತ್ತತ್ತ ಮೀರಿದ ।
ಸಾತಿಶಯದ ನಿರುಪಾಧಿಕ ನಿರ್ಮಲ
ಜ್ಯೋತಿಬೆಳಗುತಿದೆ ಪರಂಜ್ಯೋತಿ ಬೆಳಗುತಿದೆ "

ಎಂದು ಹೇಳಿರುವರು. ಶರಣಾಗತನಾದ ಶಿಷ್ಯನನ್ನು ಕರುಣೆಯಿಂದ ನೋಡಿ, ಉಪದೇಶ ಮಾಡಿ ಅಜ್ಞಾನವನ್ನು ಪರಿಹರಿಸಿ ಸುಜ್ಞಾನದೀಪಹೊತ್ತಿಸಿ ಸಕಲಾರ್ಥಸಿದ್ಧಿಗಳನ್ನು ಕೊಡುವವನೇ ಸದ್ಗುರು. ಅಂತೆಯೇ ಶಿವಾಗಮಗಳು ಗುರುವಿನ ಮಹತ್ವವನ್ನು –

" ಅಂತಸ್ತಿಮಿರ ನಿರ್ಭೇದ ಭಾನವೇ ಕಾಮಧೇನವೇ ।
ಸದಂತೇ ವಾಸಿನಾಂಕಲ್ಪತರವೇ ಗುರವೇ ನಮಃ ॥

" ದಿವಾ ಪ್ರಕಾಶಕಃ ಸೂರ್ಯಃ ರಾತ್ರೌ ಚಂದ್ರಃ ಪ್ರಕಾಶಕಃ ।
ಗುರುಃ ಶಿಷ್ಯಸ್ಯ ಸತತಂ ಅಜ್ಞಾನತಿಮಿರಾಪಹಃ ॥

" ಗುಕಾರಸ್ತ್ವಂಧಕಾರಃ ಸ್ಯಾತ್ ರುಕಾರಸ್ತನ್ನಿರೋಧಕಃ ।
ಅಂಧಕಾರನಿರೋಧಿತ್ವಾತ್ ಗುರುರಿತ್ಯಭಿಧೀಯತೇ ॥ "

ಎಂದು ಸಾರಿ ಹೇಳುತ್ತವೆ.

ಶಾಲೆಯಲ್ಲಿ ಮಂದಮತಿ, ಕುಶಲಮತಿಗಳಾದ ವಿದ್ಯಾರ್ಥಿಗಳ ಬುದ್ಧಿಯ ಮಟ್ಟಕ್ಕನು ಸರಿಸಿ ವಿವಿಧ ಶಿಕ್ಷಣಕೊಡುವ ಶಿಕ್ಷಕರು ಇರುವಂತೆ, ಶ್ರೀಗುರುವಾದರೂ ಸಾಧಕರಾದ ಶಿಷ್ಯರಅಧಿಕಾರ ಭೇದದಿಂದ ಬೋಧಕಗುರು, ವೇಧಕಗುರು ಮುಂತಾಗಿ ಅಷ್ಟವಿಧ ಎಂದು ಶ್ರೀಮನ್ನಿಜಗುಣರು ವಿವೇಕಚಿಂತಾಮಣಿಯಲ್ಲಿ ಹೇಳಿರುವರು. ಐಹಿಕ ಆಮುಷ್ಮಿಕ ಕ್ಷಣಿಕ ಸುಖಗಳನ್ನುಕೊಡುವ ಸಾಮಾನ್ಯ ಗುರುಗಳಿಗಿಂತಲೂ ಸಂಶಯ ಭಾವನೆ ಅಸಂಭಾವನೆ, ವಿಪರೀತಭಾವನೆ ಮೊದಲಾದ ಮುಕ್ತಿಪ್ರತಿಬಂಧಕಗಳಾದ ಪ್ರತಿಕೂಲ ಭಾವನೆಗಳನ್ನು ಪರಿಹರಿಸಿ ನಿತ್ಯ ಮುಕ್ತಿಪ್ರದನಾದ ಶ್ರೀಗುರುವೇ ಸರ್ವಶ್ರೇಷ್ಠನು, ಅಂತಹ ಶ್ರೀ ಗುರುವನ್ನೇ –

" ಬೇರೊಂದು ಪದವಿಯನು ಪಡೆವೆನೆಂಬಳಿಯಾಶೆ ।
ದೋರದೆನ್ನೊಳು ಗುರುವಿನೊಲುಮೆದೊರಕೊಳಲು ॥ "

" ಶ್ರೀ ಗುರುವೆ ನೀನೆ ಶರಣಾಗೆನಗೆ ನಿಜಸುಖದ ಸಾಗರವೆ ।
ಸಕಲ ವಿದ್ಯಾಗುಣ ನಿವಾಸ ॥
ಮಲದ ಮಳವೆಯನು ಮಾಯಾ ಮೋಹವನು ಕರ್ಮ ।
ಕುಲದ ಸುಖದುಃಖವನು ವಚನಬಂಧವನು ।
ಸಲೆ ತಿರೋಹತಿಯ ಸಾಹಸವೆಂಬುದನು ಬಿಡಿಸಿ ।
ನಲಿದೆನ್ನ ಬೋಧರೂಪವನೆ ಬೋಧಿಸಿದ "

ಎಂದು ಮುಂತಾಗಿ ಶ್ರೀಮನ್ನಿಜಗುಣಶಿವಯೋಗಿಗಳು ಕೈವಲ್ಯಪದ್ಧತಿಯಲ್ಲಿ ಕೊಂಡಾಡಿದ್ದಾರೆ.

ಶ್ರೀ ರಾಮಚಂದ್ರನು ವಿಷ್ಣುವಿನ ದಶಾವತಾರಗಳಲ್ಲಿ ಒಬ್ಬ ಅವತಾರೀ ಪುರುಷನೆಂದು ವಿಖ್ಯಾತನಾಗಿದ್ದರೂ ಅವನಿಗೆ ಮೋಹ ಆವರಿಸಿದಾಗ ವಶಿಷ್ಟಮಹರ್ಷಿಗಳು ಯೋಗವಾಸಿಷ್ಠದಮೂಲಕ ಆತನಹೃದಯದಲ್ಲಿ ಜ್ಞಾನಜ್ಯೋತಿಯನ್ನು ಹೊತ್ತಿಸಿದ್ದು ಸುಪ್ರಸಿದ್ಧವಿದೆ. ಇದರಂತೆ ವೀರಶಿರೋಮಣಿಯಾದ ಅರ್ಜುನನು ಯುದ್ಧಮಾಡದೇ ಹೇಡಿಯಾಗಿ ಕೈಕಟ್ಟಿಕೊಂಡು ಕುಳಿತಾಗ ಶ್ರೀಕೃಷ್ಣಪರಮಾತ್ಮನು–

" ಕ್ಲೈಬ್ಯಂ ಮಾಸ್ಮ ಗಮಃ ಪಾರ್ಥ "
ಉತ್ತಿಷ್ಠೋತ್ತಿಷ್ಠ ಕೌಂತೇಯ ।

ಎಂದು ಮುಂತಾಗಿ ಸ್ಫೂರ್ತಿದಾಯಕ ವೀರವಾಣಿಯಿಂದ ಅವನಲ್ಲಿರುವ ಸುಪ್ತವಾದ ಮಹಾಶಕ್ತಿಯನ್ನು ಹೊರ ಹೊಮ್ಮಿಸದೇಹೋಗಿದ್ದರೆ ದುಷ್ಟಶಾಸನ, ಶಿಷ್ಟಪೋಷಣದಂತಹ ಮಹತ್ಕಾರ್ಯವೇ ಆಗುತ್ತಿರಲಿಲ್ಲ.

ಬಂಗಾಲದ ಸುಪ್ರಸಿದ್ಧ ಸಂತರಾದ ಚೈತನ್ಯರಿಗೆ, ಈಶ್ವರಪುರಿ ಎಂಬವರು ಮಹಾರಾಷ್ಟ್ರದ ಸಂತತುಕಾರಾಮರಿಗೆ ಗುರುಬಾಬಾಜಿ ಎಂಬ ಮಹಾನುಭಾವರು, ಸಂತ ಜ್ಞಾನೇಶ್ವರರಿಗೆ ನಿವೃತ್ತಿನಾಥರು, ಏಕನಾಥರಿಗೆ ಜನಾರ್ಧನಪಂಥರು, ಸ್ವಾಮಿ

ವಿವೇಕಾನಂದರಿಗೆ ಶ್ರೀ ರಾಮಕೃಷ್ಣ ಪರಮಹಂಸರು, ದಾಸಶ್ರೇಷ್ಠರಾದ ಪುರಂದರ ದಾಸರಿಗೆ ವ್ಯಾಸರಾಯರು ಗುರುಗಳಾಗಿ ಸನ್ಮಾರ್ಗ ತೋರಿಸಿದ್ದು ಅವರವರ ಜೀವನ ಚರಿತ್ರೆಗಳಿಂದ ತಿಳಿದುಬರುತ್ತದೆ. ಹೆತ್ತಮ್ಮನಿಗೆ ಮಕ್ಕಳ ಲಾಲನೆಪಾಲನೆ ಆದ್ಯಕರ್ತವ್ಯವಾದಂತೆ ಗುರುವಿಗೆ ಶಿಷ್ಯೋದ್ಧಾರವೇ ಪ್ರಥಮಕರ್ತವ್ಯವು.

ಕಾಡುನಾಡುಗಳನ್ನು ಅಲೆದು, ಕಲ್ಲುಮುಳ್ಳುಗಳನ್ನು ತುಳಿದು, ಗಿರಿಕಂದರಗಳಲ್ಲಿ ಇಳಿದು, ಹೊಟ್ಟೆತುಂಬ ಮೇಡು ನೀರ್ಗುಡಿದು, ಓಡಿಬಂದು ಕೊಟ್ಟಿಗೆಯಲ್ಲಿರುವ ಕರುವಿಗೆ ಆಕಳು ಹಾಲುಕುಡಿಸುವಂತೆ, ಶ್ರೀಗುರುವು ವಿವಿಧಶಾಸ್ತ್ರಗಳ ಅಧ್ಯಯನಮಾಡಿ ಅದರ ರಹಸ್ಯವನ್ನರಿತು ಆಚರಿಸಿ ಆಧ್ಯಾತ್ಮಸಾಧನೆಗಳಲ್ಲಿ ತಾನುಕಂಡುಂಡ ಅನುಭವವನ್ನು ಶಿಷ್ಯನಿಗೆ ಉಣಿಸುವ ಕರುಣಾಶಾಲಿಯಾಗಿರಬೇಕು.

ಕಸ್ತೂರೀಮೃಗಕ್ಕೆ ಅದರನಾಭಿಯಲ್ಲಿಯೇ ಸುಗಂಧ ಪರಿಮಳವಿದ್ದರೂ ಅದನ್ನರಿಯದೇ ಅದು ಬೇರೆಡೆಯಿಂದ ಬರುವದೆಂದು ಭ್ರಮಿಸಿ ಆ ಸುಗಂಧ ಪ್ರಾಪ್ತಿಗಾಗಿ ಓಡಿ ದಣಿಯುವಂತೆ ಜೀವಾತ್ಮನೂ "ತನ್ನ ಬಿಟ್ಟು ಸುಖವಿಲ್ಲ ಮಣ್ಣು ಬಿಟ್ಟು ಮಡಕೆಯಿಲ್ಲ" ಎಂಬುಕ್ತಿಯಂತೆ ತನ್ನಲ್ಲೇ ಸುಖವಿದ್ದರೂ ಅದನ್ನರಿಯದೇ ಬಾಹ್ಯ ವಿಷಯಗಳಲ್ಲಿಯೇ ಸುಖವಿರುವದೆಂದು ಭಾವಿಸಿ ದುಃಖಿಸುತ್ತಿರುವನು. ಮುಂಜಾನೆಯ ಹೊಬಿಸಿಲಲ್ಲಿ ಅಂಬೆಗಾಲಿಕ್ಕಿ ಅತ್ತಿತ್ತ ಹರಿದಾಡುವ ಚಿಕ್ಕಮಗುವೊಂದು ತಲೆಯ ಪ್ರತಿಬಿಂಬವಾಗಿ ನೆರಳನ್ನು ಹಿಡಿಯಲು ಮುಂದೆ ಅಂಬೆಗಾಲಿಕ್ಕಿ ಹೋಗುತ್ತಿತ್ತು. ಅದು ಮುಂದೆ ಹೋದಂತೆ ಪ್ರತಿಬಿಂಬವಾದ ನೆರಳೂ ಮುಂದೆ ಹೋಗುತ್ತಿತ್ತು, ತಲೆಯ ನೆರಳನ್ನು ಹಿಡಿಯಲು ತವಕವುಳ್ಳ ಆ ಕೂಸಿನ ಕೈಗೆ ನೆರಳು ಸಿಗದಂತಾಗಲು ಆ ಕೂಸು ಅಳಹತ್ತಿತು. ಒಳಗಿದ್ದ ತಾಯಿಯು ಹೊರಬಂದು ನೋಡಿದಾಗ ಮಗು ಅಳುವ ಕಾರಣ ತಿಳಿದು, ಆ ಮಗುವಿನ ತಲೆಯನ್ನು ಹಿಡಿಸಲಾಗಿ ಮಗುವಿಗೆ ನೆರಳು ಹಿಡಿದೆನೆಂಬ ಭಾವವುಂಟಾಗಿ ಸಮಾಧಾನಗೊಂಡಿತು. ಹಾಗೆಯೇ ಶಿಷ್ಯನು ಅಜ್ಞಾನದಿಂದ ಸ್ವಸ್ವರೂಪವನ್ನು ಮರೆತು–

"ಲಾಲಾ ಪಾನಮಿವಾಂಗುಷ್ಠೇ ಬಾಲಾನಾಂಸ್ತನ್ಯವಿಭ್ರಮಃ"

ಮಗುವು ಹೆಬ್ಬೆರಳನ್ನೇ ಮೊಲೆಯೆಂದು ಭ್ರಮಿಸಿ ಸೀಪುವಂತೆ, ಶಬ್ದಸ್ಪರ್ಶದಿಂದ ಪಂಚ ವಿಷಯಗಳಲ್ಲಿಯೇ ಸುಖವಿದೆಯೆಂದು ಭಾವಿಸಿ, ತೊಳಲಿ ಬಳಲುವ ಗುರುವು ಶಿಷ್ಯನ ಈ ಕಿಳಿಗೇಡಿತನವನ್ನು ಅಳಿಸಿ ತ್ರಿಕಾಲದಲ್ಲಿಯೂ ಉಳಿಯುವ ನಿಜದನಿಲವನ್ನು ತಿಳಿಸಿ ಹೇಳುವನು, ಅಂತೆಯೇ ಶಾಸ್ತ್ರಕಾರರು–

ಗೃಣಾತಿ ತತ್ವಾರ್ಥಂ ಉಪದೀಶತೀತಿ, ಗುರುಃ"

ಎಂದು ಗುರುಶಬ್ದದ. ವ್ಯುತ್ಪತ್ತಿ ಮಾಡಿರುವರು.

"ಗುಕಾರಸ್ತ್ವಂಧಕಾರಃ ಸ್ಯಾತ್ ರುಕಾರಸ್ತನ್ನಿರೋಧಕಃ ।
ಅಂಧಕಾರನಿರೋಧಿತ್ವಾತ್ ಗುರುರಿತ್ಯಭಿಧೀಯತೇ ॥"

ಬ್ರಹ್ಮಾಂಡದಲ್ಲಿರುವ ಕತ್ತಲೆಯನ್ನು ಸೂರ್ಯನು ಕಳೆಯುವಂತೆ ಪಿಂಡಾಂಡದಲ್ಲಿರುವ ಅಜ್ಞಾನವೆಂಬ ಕತ್ತಲೆಯನ್ನು ಕಳೆಯುವವನಾದ್ದರಿಂದ ಆ ಮಹಾಪುರುಷನೇ ಗುರು ಎಂದು ಹೇಳಲ್ಪಡುವನು.

ಅನಂತ ಅನರ್ಘ್ಯ ಮುತ್ತುರತ್ನಗಳಿಂದ ತುಂಬಿದ ಕೊಡವನ್ನು ಹೂಳಿಟ್ಟ ನೆಲದ ಮೇಲೆಯೇ ಒಬ್ಬ ದಟ್ಟ ದರಿದ್ರನು ಗುಡಿಸಲಿನಲ್ಲಿ ಮಲಗಿರುತ್ತಿದ್ದನು. ಲೋಕೋದ್ಧಾರಕ್ಕಾದಿ ದೇಶಸಂಚಾರಕ್ಕೆ ಕೊಂಡ ಮಹಾನುಭಾವನೊಬ್ಬನು ಆಕಸ್ಮಿಕವಾಗಿ ಆ ಕಡು ಬಡವನ ಮನೆಗೆ ವಸತಿಗಾಗಿ ಬಂದನು. ಹೊಟ್ಟೆಗೆ ಹಿಟ್ಟಿಲ್ಲದೆ ಮೈಗೆ ಬಟ್ಟೆಯಿಲ್ಲದ ಬಳಲುವ ಆ ದೀನನ ಬವಣೆಯನ್ನು ಕಂಡು ಮಮ್ಮಲಮರುಗಿ ಆ ದರಿದ್ರನು ಯಾವ ಸ್ಥಳದಮೇಲೆ ಹರಕುಚಿಂದಿಯನ್ನು ಹಾಸಿಕೊಂಡು ಮಲಗುತ್ತಿದ್ದನೋ ಅದರ ಕೆಳಗೇನೇ ದ್ರವ್ಯಭಾಂಡಾರವಿದ್ದದನ್ನು ತೋರಿಸಿ ತೆಗೆಯಿಸಿಕೊಟ್ಟು ಆತನ ಬಡತನವನ್ನು ನಿವಾರಿಸಿದನು. ಹಾಗೆಯೇ ಜೀವಾತ್ಮನಾದರೂ "ಅಯಮಾತ್ಮಾ ಬ್ರಹ್ಮ" "ತತ್ತ್ವಮಸಿ" ಎಂಬುಕ್ತಿಯಂತೆ ತಾನೇ ಸಚ್ಚಿದಾನಂದ ಸ್ವರೂಪನಾದರೂ ತನ್ನಲ್ಲೇ ಅಕ್ಷಯ ಸುಖ ಭಾಂಡಾರವಿದ್ದರೂ ಅದನ್ನು ಮರೆತು ಕೊರಗುತ್ತಿರುವನು. ಕರುಣಾಳುವಾದ ಶ್ರೀಗುರುವು ಮಾರ್ಜಾಲ ಕಿಶೋರನ್ಯಾಯದಂತೆ, ಭ್ರಮರ ಕೀಟನ್ಯಾಯದಂತೆ ಸ್ವಯಮೇವ ಶಿಷ್ಯನಲ್ಲಿಗೆ ಬಂದು ನಿಜದನಿಲವನ್ನು ತಿಳಿಸಿ ಉದ್ಧರಿಸುವನು.

ಸಾಧಕರ ಸಿದ್ಧಿ, ಧ್ಯೇಯ, ಸಾಕ್ಷಾತ್ಕಾರ ಇವುಗಳಿಗನುಸಾರವಾಗಿ ಮಾರ್ಗದರ್ಶಕ ಗುರುಗಳಲ್ಲಿಯೂ ವೈವಿಧ್ಯತೆಯು ಅಂದರೆ ದ್ವಿವಿಧ, ಪಂಚವಿಧ, ಅಷ್ಟವಿಧ, ಸಪ್ತವಿಧ ದಶವಿಧ ಮುಂತಾಗಿ ಹೇಳಲ್ಪಟ್ಟಿದೆ. ಈ ಗುರುಗಳಲ್ಲಿ ಶ್ರೋತ್ರೀಯ ಬ್ರಹ್ಮನಿಷ್ಠನಾದ ಸದ್ಗುರುವೇ ಅತ್ಯಧಿಕನು, ಆತ್ಮಸಾಕ್ಷಾತ್ಕಾರದ ಉತ್ಕಟ ಹಂಬಲವುಳ್ಳ ಅಕ್ಕಮಹಾದೇವಿಯು ಇಂತಹ ಸದ್ಗುರುವಿನ ಹಂಬಲದಿಂದ ಮನೆಮಾರುಗಳನ್ನು ತೊರೆದು ವೀರ ವಿರಾಗಿಯಾಗಿ ಹೊರಟಳು.

ಮಹಾರಾಜನ ಕೈವಿಡಿದು ಪಟ್ಟದ ರಾಣಿಯಾಗುವ ಸುಯೋಗವನ್ನು, ಸಕಲಭೋಗ ಭಾಗ್ಯಗಳನ್ನೂ ಧಿಕ್ಕರಿಸಿ ಎಲ್ಲ ಜನರಿಗೂ ಕಲ್ಯಾಣವನ್ನುಂಟುಮಾಡುವ ಕಲ್ಯಾಣಕ್ಕೆ ಧಾವಿಸಿ ಬಂದಬಗೆಯನ್ನು ಶೂನ್ಯಸಂಪಾದನಾಕಾರನು ಹೃದಯಂಗಮವಾಗಿ ವರ್ಣಿಸಿರುವನು.

ವಿಷಯ ಪ್ರಾರಂಭ

ದಕ್ಷಿಣ ಕರ್ನಾಟಕವು ವನರಾಜಿಯಿಂದಲೂ, ಜಲರಾಶಿಯಿಂದಲೂ, ಫಲಪುಷ್ಪಗಳಿಂದಲೂ ಒಪ್ಪುವನಾಡು, ಶಿವಮೊಗ್ಗಾ ಜಿಲ್ಲೆಯ ಶಿಕಾರಿಪುರ ತಾಲೂಕಿನಲ್ಲಿ ಉಡುತಡಿ ಎಂಬುದೊಂದು ಚಿಕ್ಕಗ್ರಾಮ, ಮಹಾದೇವಿಯಕ್ಕ ಇಲ್ಲಿರುವ ನಿರ್ಮಲ ಸುಮತಿಯರೆಂಬ ಶುದ್ಧದಂಪತಿಗಳ ಗರ್ಭದಿಂದ ಜನಿಸಿದಳು. ಈ ದಂಪತಿಗಳು ಊರಲ್ಲಿರುವ ಮಲ್ಲಿಕಾರ್ಜುನ ದೇವಾಲಯಕ್ಕೆ ಪ್ರತಿನಿತ್ಯ ಹೋಗಿ ತ್ರಿಕರಣಶುದ್ಧಿಯಿಂದ ಪೂಜೆಮಾಡುತ್ತಿದ್ದರು. ಚಿಕ್ಕವಳಾದ ಮಹಾದೇವಿಯು ತಾಯಿಯ ಮಾಡುವ ಪೂಜೆಯನ್ನು ನೋಡಿ ಹಿಂಹಿರಿ ಹಿಗ್ಗುವಳಲ್ಲದೆ ತಾನೂ ತಾಯಿಯಂತೆ ಪೂಜೆಮಾಡಹತ್ತಿದಳು. ಒಮ್ಮೆ ಉಡುತಡಿ ಗ್ರಾಮದ ಕೌಶಿಕನೆಂಬ ದೊರೆಯ ಮಹೋತ್ಸವವು ಅದ್ದೂರಿಯಿಂದ ನಡೆಯಿತು. ಸಾವಿರಾರು ಜನರು ಮೊಲುಪ್ಪರಿಗೆಗಳಲ್ಲಿಯೋ, ತಲೆಬಾಗಿಲುಗಳಲ್ಲಿಯೋ, ಅಂಗಳಗಳಲ್ಲಿಯೋ ನಿಂತು ಕುತೂಹಲದಿಂದ ಅದನ್ನು ನೋಡುತ್ತಿದ್ದರು. ಆನೆಯ ಮೇಲೆ ಕುಳಿತ ಕೌಶಿಕ ಮಹಾರಾಜನ ದೃಷ್ಟಿಯು ಆಕಸ್ಮಿಕವಾಗಿ ತಲೆಬಾಗಿಲಲ್ಲಿ ನಿಂತ ಸ್ಫುರದ್ರೂಪಿಯಾದ ಮಹಾದೇವಿಯ ಮೇಲೆ ಬಿದ್ದಿತು. ಮಹಾದೇವಿಯ ದಿವ್ಯರೂಪ ಲಾವಣ್ಯವನ್ನು ಕಂಡು ರಾಜನು ತಬ್ಬಿಬ್ಬಾದನು. ಕೂಡಲೇ ಉತ್ಸವವನ್ನು ಹಿಂದಿರುಗಿಸಿ ಬಂದವನೇ "ಮಹಾದೇವಿಯಂ ಕಂಡೊಡುಳಿವೆನಲ್ಲದೊಡಳಿವೆ" ಎಂದು ಹಾಸಿಗೆ ಹಿಡಿದು ಮಲಗಿಕೊಂಡನು. ರಾಜನು ಮಹಾದೇವಿಯಕ್ಕನನ್ನು ಕರೆಯಲು ರಾಣಿವಾಸದ ಗೆಳತಿಯರನ್ನು ಕಳುಹಲು ಮಹಾದೇವಿಯು "ನರೇಂದ್ರನೇ ಬಂದು ನನ್ನ ಮನದಿಚ್ಛೆಯನ್ನು ಸಲಿಸುವಂತೆ ಶಪಥಮಾಡಲಿ" ಎಂದಳು. ಆಗ ರಾಜನು ಸ್ವತಃ ಬಂದು–

"ತಾಯಿಮಕ್ಕಳ ಬೆಸುಗೆಯನು ಬಿಚ್ಚಿದನ್ನ,
ಮಿತ್ರಂಗೆರಡು ಬಗೆದವನ, ದುರ್ಗತಿಗಳಾಗಲೆನಗೆ"

ಎಂದು ಪ್ರತಿಜ್ಞೆ ಮಾಡಲು ಮಹಾದೇವಿಯು ರಾಜನು ಧರ್ಮಪರನೆಂದು ತಿಳಿದು ಅರಸನು ಕಳುಹಿದ ಅಂದಣವನ್ನೇರಿ ಅರಮನೆಗೆ ಹೋದಳು. ನಿನ್ನ ಮನದಿಚ್ಛೆಯೇನು ಹೇಳೆಂದು ಕೌಶಿಕನು ಕೇಳಲು ಮಹಾದೇವಿಯು–

"ನೀನು ಶಿವಭಕ್ತನಾದೊಡೆ ಕೂಡುವೆನು ನಿನ್ನ"

ಎಂದು ಹೇಳಲು ಸ್ವಧರ್ಮನಿಷ್ಠನಾದ ರಾಜನು ಅದೊಂದನ್ನು ಬಿಟ್ಟು ಬೇರೆ ಏನನ್ನಾದರೂ ಹೇಳು ಎಂದು ಪರಿಪರಿಯಿಂದ ಹೇಳಿದರೂ ಮಹಾದೇವಿಯು ಯಾವ ಆಶೆ ಆಮಿಷಕ್ಕೆ ಒಳಗಾಗದೇ ಅವನ ಮನಸಿಗೆ ಕವಿದಿರ್ದ ಮೋಹದ ಮಬ್ಬು ಹರಿಯುವಂತೆ –

" ಅಹೋಭ್ಯದ ಹಡಿಕೆ, ಮಹತ್ರದ ಕೊಡಿಕೆ,
ಎಲುಂವಿನ ತಡಿಕೆ, ಕೀವಿನ ಹಡಿಕೆ,
ಸುಡಲೀ ದೇಹವ ಒಡಲು ಏಡಿದು ಕೆಡದಿರು
ಚೆನ್ನಮಲ್ಲಿಕಾರ್ಜುನನರಿ ಮರುಳೆ !"

" ಉಟ್ಟಸೀರೆಯ ಸೆಳೆದು. ತೊಟ್ಟ ತೊಡಿಗೆಯ ಹರಿದು ।
ಬಿಟ್ಟೇನೋ ನಾನು ಬಿಡಾ ಮುಡಿಯ ಎಲೆದೇವ ।
ಕೊಟ್ಟೇನೋ ಎನ್ನ ತನುಮನವ "

ಎಂದು ಹಾಡುತ್ತ ಹುಟ್ಟು ಸಾವುಗಳನ್ನು ಸುಟ್ಟು ಜೀವನದ ಗುಟ್ಟನ್ನರಿಯಲು ದಿಟ್ಟತನ ದಿಂದ ಹೊರಬಿದ್ದ, ಮಹಾದೇವಿಯು ಹುಟ್ಟಿದ ಮನೆಗೂ ಹೋಗದೇ ಎತ್ತಲೋ ಹೊರಟಳು. ತಂದೆತಾಯಿಗಳಿಗೆ ಬಂಧು ಬಳಗಕ್ಕೆ ಈ ಸುದ್ದಿ ತಿಳಿಯಲು ದಿಗ್ಭ್ರಾಂತರಾಗಿ ಧಾವಿಸಿ ಬಂದು ಹೆತ್ತ ಹೊಟ್ಟೆಗೆ ಹುಡಿಹೊಯ್ದು ಹೋಗದಿರು ಮರುಳೇ ! ಎಂದು ತಾಯಿ ಕಂಬನಿಗರೆದಳು. ನಿನ್ನ ಹಾಗೆಯೇ ಶರಣಸತಿ ಲಿಂಗಪತಿ ತತ್ತ್ವವನ್ನು ಒಪ್ಪಿ ಅಪ್ಪಿದ ವರನೊಬ್ಬನ ಕೈವಿಡಿದು ನಿನ್ನಿಚ್ಛೆಯಂತೆ ಇರು ಎಂದು ಹಲುಬಿದಳು. ಆದರೆ ಆಕೆನು ಉಕ್ಕಿನಂತಹ ತನ್ನ ದೃಢನಿರ್ಧಾರದಿಂದ ಸ್ವಲ್ಪೂ ಹಿಂದೆ ಸರಿಯದೇ –

" ಒಳಗಿನ ಗಂಡನವ್ವ ಹೊರಗಿನ ಮಿಂಡನವ್ವ,
ಎರಡನು ನಡಿಸಲು ಬಾರದವ್ವ, ಲೌಕಿಕ ಪಾರಮಾರ್ಥಿಕ
ವೆಂಬೆರಡನು ನಡಿಸಲು ಬಾರದವ್ವ. ಚನ್ನಮಲ್ಲಿಕಾರ್ಜುನಯ್ಯ
ನಲ್ಲಿ, ಬಿಲ್ಲು ಬೆಳವಲಕಾಯಿ ಒಂದಾಗಿ ಹಿಡಿಯಲು ಬಾರದವ್ವಾ"

ಎಂದು ಹೇಳಿದಳು. ಅದುವರೆಗೆ ಮೌನವಾಗಿದ್ದ ತಂದೆ ಬಂದು " ನೀನು ಮದುವೆಯಾಗ ದಿದ್ದರೆ ಹೋಗಲಿ. ನಮ್ಮನ್ನು ತೊರೆದು ಹೋಗದಿರು ಮಗಳೇ ನಿನಗೆ ಮನೆಯಲ್ಲಿಯೇ ಏಕಾಂತವಾಸದ ಏಕಾಂತಸಾಧನೆಯ ವ್ಯವಸ್ಥೆ ಮಾಡುವೆ. ಇಲ್ಲಿಯೇ ಸಮಾಧಿಯನ್ನು ಸಾಧಿಸುವೆಯಂತೆ " ಎಂದು ಕೇಳಲು –

" ಉಸುರಿನಾ ಪರಿಮಳವಿರಲು ಕುಸುಮಗಂಧಂಗೇಕಯ್ಯಾ ।
ಶಮ ದಮ ಶಾಂತಿ ಸೈರಣೆಯಿರಲು ಸಮಾಧಿಯ ಹಂಗೇಕಯ್ಯಾ ?
ಲೋಕವೇ ತಾನಾದಬಳಿಕ ಏಕಾಂತದ ಹಂಗೇಕಯ್ಯ ಚನ್ನಮಲ್ಲಿಕಾರ್ಜುನ ?

ಎಂದು ಮಾರ್ಮಿಕವಾಗಿ ಉತ್ತರವಿತ್ತಳು. ಹೇಗಾದರೂ ಇರು, ಎಂತಾದರೂ ಇರು ಮಗಳೇ ನಮ್ಮೊಡನೆಯೇ ಇರು ನಮ್ಮನ್ನಗಲಿಹೋಗದಿರು ನನ್ನಾಣೆಹೋಗದಿರು ! ಎಂಬ ಹೆತ್ತ ಕರುಳಿನ ಕರೆಗೂ ಮಹಾದೇವಿಯ ಹೃದಯ ಕರಗಲಿಲ್ಲ.

" ಮನ ಮನ ತಾರ್ಕಣೆಯಕಂಡು ಅನುಭವಿಸಲು,
ನೆನಹೇ ಘನವದಹುಲ್ಲದೆ ಅದು ಹವಣಲಿ ನಿಲುವದೆ
ಎಲೆ ಅವ್ವಾ, ನೀನು ಮರುಳವ್ವೆ ಎನ್ನದೇವ
ಚನ್ನಮಲ್ಲಿಕಾರ್ಜುನಯ್ಯಗೊಲಿದು ಸಲೆಮಾರು
ವೋದೆನು. ನಿನ್ನ ತಾಯಿತನವನೊಲ್ಲೆ ಹೋಗೆ "

ತಾಯಿತಂದೆಗಳಿಗೆ ಈ ಮಾತುಕೇಳಿ ಸಿಡಿಲುಬಡಿದಂತಾಯಿತು. ಮಗಳೇ ನಿನಗೆ ಹೋಗಲು ಬೇಡೆನ್ನುವದಿಲ್ಲ. ಆದರೆ ದಿಗಂಬರಳಾಗಿ ಮಾತ್ರ ಹೋಗಬೇಡ. ನೀನಿನ್ನೂ

ಯುವತಿ. ಯಾರ ಬೆಂಗಾವಲಿಲ್ಲದೆ ಓರ್ವಳೇ ಹೋಗದಿರು ಎಂದರೂ ಹೊರಟೇ ಬಿಟ್ಟಳು. 'ಹೋಗಿ ಬಾ ಮಗಳೇ ' ಶ್ರೀ ಮಲ್ಲಿಕಾರ್ಜುನನ ಕೃಪಾಕಟಾಕ್ಷ ನಿನಗೆ ರಕ್ಷಾಕವಚವಾಗಲಿ, ಜೋಕೆ, ಮಗಳೆ ಜೋಕೆ ಎಂದು ಅವರೆಲ್ಲ ಹರಸಿದರು.

ತಾಯಿತಂದೆಗಳನ್ನೂ ಮನೆ ಮಾರುಗಳನ್ನೂ ಬಿಟ್ಟು ಕಾಡುನಾಡುಗಳಲ್ಲಿ ಅಲೆದಾಡುತ್ತ ಕಲ್ಯಾಣದತ್ತ ಅಡಿಯಿಟ್ಟ ಮಹಾದೇವಿಗೆ ಕೆಲವರಾದರೂ ಕಾಡದಿರಲಿಲ್ಲ, ಅದಕ್ಕೆಳುಕದೆ –

" ಮುಡಿಬಿಟ್ಟು ಮೊಗಬಾಡಿ ತನುಕರಗಿದವಳ,
ಎನ್ನನೇಕೆ ನುಡಿಸುವಿರಿ ಎಲೆ ಅಣ್ಣಗಳಿರಾ,
ಎನ್ನನೇಕೆ ಕಾಡುವಿರಿ, ಎಲೆ ತಂದೆಗಳಿರಾ,
ಬಲುಹಳಿದು ಭವಗೆಟ್ಟು ಛಲವಳಿದು ಭಕ್ತೆಯಾಗಿ
ಚನ್ನಮಲ್ಲಿಕಾರ್ಜುನನ ಕೂಡಿ ಕುಲವಳಿದವಳ ॥ "

ಎಂದು ಕೇಳಿದಳು. ಅವಳ ಸೌಮ್ಯವಾದ ಬುದ್ಧಿಯ ಮಾತಿಗೆ ಹಲವರು ನಾಚಿಹೋದರು. ಅಷ್ಟಕ್ಕೂ ನಾಚದೇ ಹಲವು ನಿರ್ಲಜ್ಜರು ಛೀಮಾರಿಗಳು ಬೆಂಬತ್ತಿದರು. ಅವರಿಗೆ–

" ನೋಡುವ ಕಂಗಳಿಗೆ ರೂಪಿಂಬಾಗಿರಲು !
ನೀವು ಮನನಾಚದೆ ಬಂದಿರಣ್ಣ,
ಕೇಳಿದ ಕಿವಿಯು ಸೊಗಸಿಗೆ ನೀವು ಮರುಳಾಗಿ ಬಂದಿರಣ್ಣ,
ನಾರಿಯೆಂಬ ರೂಪಿಂಗೆ ನೀವು ಒಲಿದು ಬಂದಿರಣ್ಣ,
ಮೂತ್ರಬಿಂದು ಒಸರುವನಾಳವೆಂದು
ಕಂಗಾಣದೆ ಮುಂದುಗೆಟ್ಟು ಬಂದಿರಣ್ಣ
ಬುದ್ಧಿಗೇಡಿತನದಿಂದ ಪರಮಾರ್ಥದ ಸುಖವ ಹೋಗಲಾಡಿಸಿಕೊಂಡು
ಇದಾವ ಕಾರಣವೆಂದರಿಯದೆ ನೀವು ನರಕಹೇತುವೆಂದರಿದೂ,
ಮನಹೇಸದೆ ಬಂದಿರಣ್ಣ, ಚನ್ನಮಲ್ಲಿಕಾರ್ಜುನನಲ್ಲದೆ
ಮಿಕ್ಕಪುರುಷರೆನಗೆ ಸಹೋದರರು. ಛೀಹೋಗಾಮರುಳೇ !

" ಅಣ್ಣಾ ನಾನು ಹೆಂಗುಸಲ್ಲ, ನಾನು ಸೂಳೆಯಲ್ಲ, ಅಣ್ಣಾ ನನ್ನ ಕಂಡು
ಆರೆಂದು ಬಂದಿರಣ್ಣಾ, ಎಲೆ ಅಣ್ಣಾ ನೀವು ಮರುಳರಲ್ಲಾ "

ಎಂದು ಛೀ ಥೂ ಎಂದು ಕಳುಹಿದಳು.

ಮಹಾದೇವಿಯು ಸ್ವಗ್ರಾಮವಾದ ಉಡುತಡಿಯಿಂದ ಅನುಭವಮಂಟಪದ ಅಧ್ಯಕ್ಷರೂ ಶೂನ್ಯಸಿಂಹಾಸನಾಧೀಶ್ವರರೂ ಆದ ಪ್ರಭುದೇವರು ನೆಲೆಸಿರುವ ಕಲ್ಯಾಣ ಪಟ್ಟಣಕ್ಕೆ ಬಂದು –

" ಕಲ್ಯಾಣವೆಂಬುದನಾರಿಗೆ ಹೊಗಬಾರದು,
ಹೊಗಬಾರದು, ಹೊಗಬಾರದು ಅಸಾಧ್ಯವೆಯ್ಯ !
ಹೊಗಬಾರದು, ಹೊಗಬಾರದು ಅಸಾಧ್ಯವೆಯ್ಯ, ಕಲ್ಯಾಣದತ್ತಲಡಿಯಿಡಬಾರದು
ಆಸೆ ಆಮಿಷ ಅಳಿದವಂಗಲ್ಲದೆ ಕಲ್ಯಾಣದತ್ತಲಡಿಯಿಡಬಾರದು

ಒಳಹೊರಗು ಶುದ್ಧವಾದವರಿಗಲ್ಲದೆ ಕಲ್ಯಾಣವ ಹೊಗಬಾರದು,
ನಾನೆಂಬುದ ಹರಿದವಂಗಲ್ಲದೆ ಕಲ್ಯಾಣವ ಹೊಗಬಾರದು,
ಒಳಗು ತಿಳಿದು ಚೆನ್ನಮಲ್ಲಿಕಾರ್ಜುನನಂಗೊಲಿದು
ಉಭಯ ಲಜ್ಜೆಯಳಿದೆನಾಗಿ ಕಲ್ಯಾಣವ ಕಂಡು,
ನಮೋ ನಮೋ ಎನುತಿರ್ದೆನು ॥

ಎಂದು ಉದ್ಗಾರ ತೆಗೆದಳು.

" ಗುರುವನರಸುವೆನೆಂದು ತಿರ್ರನೆ ।
ತಿರುಗಿದಳು ಗಿರಿಗಹ್ವರಂಗಳ ।
ಗುರುವನರಸುವೆನೆಂದು ತೊಟ್ಟನೆ ತೊಳಲಿದಳು ಧರೆಯ ।
ಗುರುವನರಸುವೆನೆಂದು ಕಾಯವ ।
ಕರಗುತಿರ್ದಳು ಕಾತರಿಸಿ ಸದ್ ।
ಗುರುವನರಸುವ ವೇಧೆಯಲಿ ಮೆರೆದಳು ಮಹಾದೇವಿ ॥"

ಶ್ರೀ ಚೆನ್ನಮಲ್ಲಿಕಾರ್ಜುನನಲ್ಲಿ ಏಕನಿಷ್ಠೆಯುಳ್ಳ ಮಹಾದೇವಿಯು ತನಗೆಬಂದ ಸಂಕಟಗಳನ್ನೆಲ್ಲ ಎದುರಿಸುತ್ತ ಸದ್ಗುರುವನ್ನು ಅರಸುತ್ತಬಂದ ಬಗೆಯನ್ನು ಗೂಳೂರ ಸಿದ್ಧವೀರಣಾಚಾರ್ಯರು –

" ಉಡುತಡಿಯ ಮಹಾದೇಡಿಯಕ್ಕನು ಲಿಂಗಧಾರಣವಾಗಲೊಲ್ಲೆನೆಂಬ ಭವಿಯ ಸ್ತ್ರೀಸಂಗಕ್ಕಂಜಿ ಅಂಗಸಂಗವನಂತೊರೆದು, ಲಿಂಗಸಂಗದೊಳು ಅವಿರಳಸಂಗಿಯಾಗಿ, ತನ್ನ ದಿವ್ಯ ರೂಪಲಾವಣ್ಯವನೆಡೆಗೊಂಡು, ಷೋಡಶ ಪ್ರಾಯದ ಯೌವನದ ಸುಖದಸುಗ್ಗಿ, ಶಿವನೊಳ್ಪರವಶವನೈದಿ, ಸರ್ವಕರಣಂಗಳ ಅರುವಿಂಗಾಹುತಿಯನಿಕ್ಕಿ ದಿಗಂಬರದುಡಿಗೆಯನುಟ್ಟು, ತನ್ನ ಕೇಶವೆಂಬಂಬರವ ಮುಸುಕಿಟ್ಟು, ಕರಸ್ಥಲದೊಳಗಿಪ್ಪ ಇಷ್ಟಲಿಂಗದೊಳು ದೃಷ್ಟಿನಟ್ಟು, ಮನಮುಟ್ಟಿ, ಭಾವಕರಿಗೊಂಡು ಲೌಕಿಕ ಲಜ್ಜಾ ಭಾವಮಂತೊರೆದು, ಭವಸಾಗರವಂ ದಾಂಟಿ ಚೆನ್ನಮಲ್ಲಿಕಾರ್ಜುನನ ವಿಕಳಾವಸ್ಥೆಯೊಳ್ ತನ್ನ ಮರೆದು, ಮಹಾವೈರಾಗ್ಯಮಂಬೀಢುತ್ತ, ಕರುಣರಸಮಂ ಹೀರುತ್ತ ನಿಶ್ಚಲ ಬುದ್ಧಿಯಡೆಗೊಂಡು, ಭಕ್ತಿಯ ಭಾಧ್ಯವೆನಿಪ, ಮುಕ್ತಿಯ ತವರ್ಮನೆಯೆನಿಪ ಶಿವಭಾವಸಂಪನ್ನೆ, ಪ್ರಸಾದದ ಮೇರುವೆ, ತತ್ವದ ಶಿಖಾಮಣಿ, ಪುಣ್ಯದ ಪುಂಜೆ, ನೈಷ್ಠೆಯ ಕಣಿ, ಸತ್ಯದ ಸದನ, ಶಾಂತಿಯ ನಿಧಿ, ಚಿದಂಬರ ಸಂಯುತೆ, ಸ್ವಾನುಭಾವದ ಸ್ವಾಗರ್ಭ, ನಿತ್ಯದ ನಿವಾಸೆ ಎನಿಪ ಮಹಾದೇವಿಯಕ್ಕಗಳು, ಶಿವಸುಖಾಳಾಪಂಗೈವುತ್ತ, ಸಕಲಲೋಕಂಗಳಂ ಪಾವನ ಮಾಡುತ್ತ, ಮುಟ್ಟಿದುದು ಪರುಷ, ಮೆಟ್ಟಿದ ಧರೆ ಪಾವನ, ನೋಡಿತ್ತೆಲ್ಲ ಪವಿತ್ರ, ನುಡಿದುದೆಲ್ಲ

"ಶಿವತತ್ತ್ವ, ನಡೆದುದೆಲ್ಲ ಶಿವಮಾರ್ಗ, ನೆರೆದುದೆಲ್ಲ ದೇವಸಭೆಯಾಗಿ
ಸಕಲಕ್ಷೇತ್ರಂಗಳಂ ಪಾವನವಮಾಡುತ್ತ ತನ್ನಕಂಡು ಕೇಳು
ಕೈಮುಗಿದ ಸಕಲ ಜನಂಗಳೆಲ್ಲರಂ ಕೃತಾರ್ಥರಂ ಮಾಡುತ್ತ" ಎಂದು
ಹೃದಯಂಗಮವಾಗಿ ಹೇಳಿರುವರು.

ಬಸವಣ್ಣನವರಿಗೆ ಹತ್ತಿರದ ಮಿತ್ರನೂ, ಶಿವಾನುಭಾವಿಯೂ ಆದ ಕಿನ್ನರಿ ಬ್ರಹ್ಮಯ್ಯನು ವೀರರಾಗಿಣಿಯಾದ ಅಕ್ಕಮಹಾದೇವಿಯನ್ನು ಕಂಡು –

"ಶರಣು ಶರಣಾರ್ಥಿ ಎಮ್ಮವ್ವ, ಶರಣು ಶರಣಾರ್ಥಿಯಾಮೂರ್ತಳೆ
ಶರಣು ಶರಣಾರ್ಥಿ ಎನ್ನಕ್ಕಮಹಾದೇವಿ. ಮಹಾಲಿಂಗ
ತ್ರಿಪುರಾಂತಕನೊಡ್ಡಿದ ತೊಡಕ ನೀವು ಬಿಡಿಸಿದಿರಾಗಿ ನಿಮ್ಮಿಂದ
ನಾನು ಬದುಕಿದೆನು ಎಲೆ ತಾಯಿ ಶರಣು ಶರಣಾರ್ಥಿ, !

ಎಂದು ಧನ್ಯತೆಯನ್ನು ತೋರಿಸಿದರೂ,

"ಕಾಯದಲ್ಲಿ ಕಳವಳವಿರಲು, ಪ್ರಾಣದಲ್ಲಿ ಮಾಯೆಯಿರಲು
ಇದೇತರಮನ ? ಇದೇತರ ನಿರ್ವಾಣ ? ಮಹಾಲಿಂಗ
ತ್ರಿಪುರಾಂತಕ ನಿನ್ನ ಸಂಸಾರಿ ಎಂಬನಲ್ಲದೆ ಸಜ್ಜನೆ
ಎಂದು ಕೈವಿಡಿವನಲ್ಲ. ಕೇಳಾ ಮರುಳೇ ? "
ಎಂದು ಸಿಪ್ಪುರವಾಗಿ ಮೊದಲಿಸಿ ನುಡಿಯಲು

"ಅಂಗದಭಂಗವ ಲಿಂಗಸುಖದಿಂದ ಗೆಲಿದೆ,
ಮನದಭಂಗವ ಅರಿವಿನಮುಖದಿಂದ ಗೆಲಿದೆ.
ಜೀವದಭಂಗವ ಶಿವಾನುಭವದಿಂದ ಗೆಲಿದೆ.
ಕರಣದಕತ್ತಲೆಯ ಬೆಳಗನುಟ್ಟು ಗೆಲಿದೆ,
ಜವ್ವನದ ಹೊರಮಿಂಚಿನಲ್ಲಿ ನಿಮ್ಮ ಕಣ್ಣಿಗೆ ತೋರುವ
ಕಾಮನಸುಟ್ಟುರುಹಿದ ಭಸ್ಮವನೋಡಯ್ಯ
ಚನ್ನಮಲ್ಲಿಕಾರ್ಜುನ ಕಾಮನಕೊಂದು ಮನಸಿಜ
ನಾಗುಳುಹಿದರೆ ಮನಸಿಜನ ತಲೆಯಬರಹವ ತೊಡೆದೆನು.

"ಎನ್ನಂತೆ ಪುಣ್ಯಗೈದವರುಂಟೇ ?
ಎನ್ನಂತೆ ಭಾಗ್ಯಂಗೈದವರುಂಟೇ ?
ಕಿನ್ನರನಂತಪ್ಪ ಸೋದರನೆನಗೆ.
ಏಳೇಳುಜನ್ಮದಲ್ಲಿ ಶಿವಭಕ್ತರೇ ಬಂಧುಗಳೆನಗೆ,
ಚನ್ನಮಲ್ಲಿಕಾರ್ಜುನನಂತಪ್ಪ ಗಂಡನೋಡಾ ಎನಗೆ,

ಎಂದು ಸಮರ್ಪಕವಾದ ಉತ್ತರವನ್ನಿತ್ತಳು. ಶಿವಾನುಭವ ಮಂಟಪದಲ್ಲಿ ಭಕ್ತಿಭಂಡಾರಿಯಾದ ಶ್ರೀಬಸವಣ್ಣನವರ ದರ್ಶನಭಾಗ್ಯದೊರೆತಾಗಲಂತೂ ಅಕ್ಕಮಹಾದೇವಿಯು,

" ಅರಸಿ ತೊಳಲಿದರಿಲ್ಲ. ಹರಸಿ ಬಳಲಿದರಿಲ್ಲ.
ಬಯಸಿ ಹೊಕ್ಕರಿಲ್ಲ. ತಪಸು ಮಾಡಿದರಿಲ್ಲ.
ಅದುತನ್ನ ಆಹಕಾಲಕ್ಕಲ್ಲದೆ ಸಾಧ್ಯವಾಗದು.
ಶಿವನೊಲಿದಲ್ಲದೆ ಕೈಗೂಡದು. ಚನ್ನಮಲ್ಲಿಕಾರ್ಜುನ
ನೆನಗೊಲಿದನಾಗಿ ನಾನು ಸಂಗನಬಸವಣ್ಣನ ಶ್ರೀಪಾದವ
ಕಂಡು ಬದುಕಿದೆನು. " ಎಂದು ಭಾವಾವಿಷ್ಟಳಾಗಿ ನುಡಿದಳು.

ಬಸವಣ್ಣನವರು ಅಕ್ಕನ ಅನುಭವದ ಔನ್ನತ್ಯವನ್ನು ಕಂಡುಹಿಗ್ಗಿದರು. ಅನುಭವಮಂಟಪದ ಅಧ್ಯಕ್ಷರಾದ ಅಲ್ಲಮಪ್ರಭುದೇವರು ವೀರವಿರಾಗಿಣಿಯಾದ ಅಕ್ಕನನ್ನು ಕುರಿತು—

" ಉದಯದ ಮದಯೌವನವನೊಳಕೊಂಡ ಸತಿನೀನು
ಇತ್ತಲೇತಕ್ಕೆ ಬಂದೆಯವ್ವ !
ಸತಿಯೆಂದರೆ ಮುನಿವರು ಎಮ್ಮ ಶರಣರು.
ನಿನ್ನ ಪತಿಯ ಕುರುಹ ಹೇಳಿದರೆ ಬಂದು ಕುಳ್ಳಿರು !
ಅಲ್ಲದಿರೆ ತೊಲಗು ತಾಯೆ, ನಮ್ಮ ಗುಹೇಶ್ವರನ
ಶರಣರಲ್ಲಿ ಸಂಗಸುಖ ಸನ್ನಿಹಿತವ ಬಯಸುವರೆ
ನಿನ್ನ ಪತಿ ಯಾರೆಂಬುದ ಹೇಳಾ ಎಲೆಅವ್ವಾ !

ಎಂಥೆಂಥ ವಿದ್ವಾಂಸರನ್ನು ಮೂಕರನ್ನಾಗಿ ಮಾಡುವಂತಹ ಕಠಿಣಪ್ರಶ್ನೆ ಮಾಡಿದರೂ ಅದಕ್ಕೆ ಅಕ್ಕಮಹಾದೇವಿಯು —

« ಗುರುವೇ ತೆತ್ತಿಗನಾದ, ಲಿಂಗವೇ ಮದುವಳಿಗನಾದ,
ನಾನು ಮದುವಳಿಗೆಯಾದೆನು, ಈ ಭುವನವೆಲ್ಲರಿಯಲು
ಅಸಂಖ್ಯಾತರೆನಗೆ ತಾಯಿತಂದೆಗಳು, ಕೊಟ್ಟರು ಪ್ರಭುವಿನ
ಮನೆಗೆ ಸಾದೃಶ್ಯವಪ್ಪವರನನೋಡಿ, ಇದು ಕಾರಣ
ಚೆನ್ನಮಲ್ಲಿಕಾರ್ಜುನ ಗಂಡನೆನಗೆ ಮಿಕ್ಕಿನಲೋಕದ
ಗಂಡರೆನಗೆ ಸಂಬಂಧವಿಲ್ಲವಯ್ಯಾ ಪ್ರಭುವೇ ! »

" ಪಚ್ಚೆಯ ನೆಲೆಗಟ್ಟು, ಕನಕದ ತೋರಣ, ವಜ್ರದ ಕುಂಭ,
ಪವಳದ ಚಪ್ಪರವನಿಕ್ಕಿ ಮದುವೆಯ ಮಾಡಿದರು.
ಎಮ್ಮವರೆನ್ನ ಮದುವೆಯ ಮಾಡಿದರು,
ಕಂಕಣ ಕೈದಾರ ಸ್ಥಿರಸೇಸೆಯನಿಕ್ಕಿ ಚನ್ನಮಲ್ಲಿಕಾರ್ಜುನನೆಂಬ
ಗಂಡಗೆನ್ನ ಮದುವೆಯ ಮಾಡಿದರು, "

ಎಂದು ತತ್ತ್ವವಿಚಾರಪೂರಿತವಾದ ಉತ್ತರವಿತ್ತಳು.

" ಬತ್ತಲೆಯ ಬಗೆಗೊಂಡು ಹೆಂಗೂ !
ಸಿತ್ತಲೇತಕೆ ಬಂದೆ ಕಾಮದ

ಕತ್ತಲೆಯು ಕಳೆಯದೆವ್ಯಥಾ ವೈರಾಗ್ಯವೇಷದಲಿ।
ಹತ್ತಿರಿದ್ದರೆ ನಮ್ಮ ಶರಣರು।
ಚಿತ್ತದಲಿ ಕಿರಳುವರು ಕೇಳಿನು।
ತೊತ್ತಿ ನೋಡಿದನಾಕೆಯಂತಸ್ಥವನು ಪ್ರಭುರಾಯ,

ಎಂದು ಪ್ರಭುದೇವರು ಅವಳ ಅಂತರಂಗವನ್ನು ಪರೀಕ್ಷಿಸಲು–

" ಜಗಭರಿತಗೊಲಿದವಳಿಗುಡಿಗೆಯ।
ತೊಗಲದೇತಕೆ ತನುಮನಂಗಳ।
ನಗಲದೀಶಂಗಿತ್ತೆನಗೆ ಸತಿ ಕಾಮವೆಂದೆಂಬ।
ಬಗೆಯದೇತಕೆ ಎನ್ನ ಕಂಡರೆ।
ಭುಗಿಲಿಡಲದೇಕಯ್ಯ ಶರಣರ।
ಮಿಗಿಲು ನುಡಿಗಾನಮ್ಮೆನೆನುತಿರ್ದಳು ಮಹಾದೇವಿ ॥ "

ಎಂದು ಮಾರ್ಮಿಕವಾದ ಉತ್ತರವಿತ್ತಳು. ಆಗ ಪ್ರಭುವು–

" ತನುಸೀರೆಯುನಳಿದು ನಿರ್ವಾಣವಾದಲ್ಲಿ ಮನದ ಭ್ರಾಂತು ನಿಶ್ಚಯವಾಗದು
ಕೇಶವೆಂಬಸೀರೆ ಅಂಗಕ್ಕೆ ಮರೆಯಾಯಿತ್ತು ಭಾವಶುದ್ಧವಾದಲ್ಲಿ।
ಸೀರೆಯುನಳಿದು ಕೂಡಲ ಮರೆಸಲೇತಕ್ಕೆ ?

ಎಂದು ಕೇಳಲು ಅದಕ್ಕೆ ಅಕ್ಕಮಹಾದೇವಿಯು–

" ಫಲ ಒಳಗೆ ಪಕ್ವವಾಗಿಯಲ್ಲದೆ ಹೊರಗಣ ಸಿಪ್ಪೆ ಒಪ್ಪಗೆಡದು,
ಕಾಮನಮುದ್ರೆಯ ಕಂಡು ನಿಮಗೆ ನೋವಾದೀತೆಂದು
ಆಭಾವದಿಂದ ಮುಚ್ಚಿದೆ ಇದಕ್ಕೆ ನೋವೇಕೆ ? ಕಾಡದಿರಣ್ಣಾ,
ಚನ್ನಮಲ್ಲಿಕಾರ್ಜುನ ದೇವನ ಒಳಗಾದವಳ ? " ಎನ್ನುತ್ತಾಳೆ.

ಆಗ ಪ್ರಭುವು –

" ನೀದೇವರೊಳಗೋ ದೇವರು ನಿನ್ನೊಳಗೋ
ಎಂಬ ಭಾವನರಿಯೆ, ಸಿಪ್ಪೆ ಒಪ್ಪಗೆಟ್ಟಾಗ
ಹಣ್ಣಿನರಸ ಕೊಳಕಾಯಿತ್ತು. ಅದು ಗುಹೇಶ್ವರನೊಪ್ಪದ ಮಾತು" ಎನ್ನಲು–

" ಗುಣದೋಷವ ಸಂಪಾದನೆಯ ಮಾಡುವನ್ನಕ್ಕ
ಕಾಮದ ಒಡಲು, ಕ್ರೋಧದ ಗೊತ್ತು, ಲೋಭದ ಇಕ್ಕೆ,
ಮೋಹದ ಮಂದಿರ, ಮದದ ಆವರಣ, ಮತ್ಸರದ
ಹೊದಿಕೆ, ಆ ಭಾವವರತಲ್ಲದೆ ಚನ್ನಮಲ್ಲಿಕಾರ್ಜುನನ
ಕೇಳುವದಕ್ಕಿಂಬಿಲ್ಲ"

" ಕೆಡದ ಶವದಂತೆ, ಸೂತ್ರತಪ್ಪಿದ ಗೊಂಬೆಯಂತೆ,
ಜಲವರತ ತಟಾಕದಂತೆ, ಬೆಂದನುಲಿಯಂತೆ,

ಮತ್ತೆ ಹಿಂದಣಂಗ ಉಂಟೇ ! ಅಣ್ಣಾ ?
ಚನ್ನಮಲ್ಲಿಕಾರ್ಜುನನನನಂಗವೆ ಆಶ್ರಯವಾದವಳಿಗೆ ? "

ಎಂದು ಮಹಾದೇವಿಯು ಉತ್ತರವಿತ್ತಳು.

" ರೂಪಿಂಗೆ ಕೇಡುಂಟು ನಿರೂಪಿಂಗೆ ಕೇಡಿಲ್ಲ,
ರೂಪು ನಿರೂಪುವನೊಡಗೂಡುವ ಪರಿಯೆಂತು ಹೇಳಾ ?
ಅಸಂಬಂಧ ಸಂಬಂಧವಾಗಿ ಇದೆ ದೇಹ ಇಂದ್ರಿಯವೆಂಬ
ಜಾತಿ ಸೂತಕವಿರಲು ಗುಹೇಶ್ವರಲಿಂಗವ ಮುಟ್ಟಬಾರದು ಕೇಳವ್ವ "

ಎಂದಾಗ ಮಹಾದೇವಿಯು –

" ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲಡೆ ಹಾವಿನಸಂಗವೇ
ಲೇಸುಕಂಡಯ್ಯಾ, ಕಾಯದ ಸಂಗವ ವಿವರಿಸಬಲ್ಲರೆ
ಕಾಯದ ಸಂಗವೇ ಲೇಸು ಕಂಡಯ್ಯಾ ।
ತಾಯಿರಕ್ಕಸಿಯಾದಂತೆ ಕಾಯವಿಕಾರವು
ಚನ್ನಮಲ್ಲಿಕಾರ್ಜುನಯ್ಯ ನೀನೊಲಿದವರ ಕಾಯಗೊಂಡಿದ್ದರೆನಬೇಡ. "

ವಿಶ್ವದಲ್ಲಿ ಕಾಯಧರಿಸಿದ ಮಾನವರೆಲ್ಲರೂ ಶಿವಾನುಗ್ರಹಪಡೆಯವೇ ಕಾಯಕರಣೇಂದ್ರಿಯಾದಿಗಳಿಗೆ ಸಂಬಂಧಪಟ್ಟ ಹಸಿವೆ, ತೃಷೆ, ಮೋಹ, ಶೋಕ, ದ್ವೇಷ. ಅಸೂಯೆ ಮೊದಲಾದ ವಿಕಾರಗಳಿಗೊಳಗಾಗಿ ಸಂಸಾರಬಂಧನದಲ್ಲಿ ಸಿಲುಕಿ ಒದ್ದಾಡುವರು, ಶಿವಾನುಗ್ರಹವನ್ನು ಪಡೆದ ಶರಣರು ಮಾತ್ರ ಕಾಯಗೊಂಡಿದ್ದರೂ ನೀರಿಂದ ನೆನೆಯದ ನೀರಜದಂತೆ, ನೇಹಹತ್ತದ ನಾಲಿಗೆಯಂತೆ, ಕಾಡಿಗೆಸೋಂಕದ ಕನೀನಿಕೆಯಂತೆ, ಮಳೆಯಿಂದ ತೊಯ್ಯದ ಆಗಸದಂತೆ, ನಿರ್ಲಿಪ್ತರಾಗಿರುವರು.

ಈ ವಚನದಲ್ಲಿ " ನೀನೊಲಿದವರ ಕಾಯಗೊಂಡಿದ್ದರೆನಬೇಡ " ಎಂಬ ನುಡಿ ಅತಿಮಹತ್ವದ್ದಾಗಿದೆ.

" ಔಪಚಾರಿಕ ದೇಹತ್ವಾಜ್ಜಗದಾತ್ಮತ್ವ ಭಾವನಾತ್ ।
ಮಾಯಾ ಸಂಬಂಧರಾಹಿತ್ಯಾದ ಕಾಯೋಹಿ ಪರಸ್ಮೃತಃ "

ಶಿವಯೋಗಿಗೆ ಅಥವಾ ಶರಣನಿಗೆ ದೇಹಾಭಿಮಾನವಿಲ್ಲದೆ ಜಗದಾತ್ಮತ್ವ ಭಾವನೆಯಿರುವದರಿಂದ " ಸ್ವಶಕ್ತಿ ಪ್ರಚಯೋಽಸ್ಯವಿಶ್ವಂ " ಎಂಬ ಶಿವಸೂತ್ರದಪ್ರಕಾರ ಸಕಲ ಜಗತ್ತನ್ನು ಶಿವಾಭಿನ್ನವಾದ ಚಿತ್ಕ್ರಿಯಾಶಕ್ತಿಮಯವಾದುದೆಂದು ಅರಿದು, ಅದು ಇದು ಎಂಬ ಭೇದ ಬುದ್ಧಿಯನ್ನು ಮಾಡುವ ಮಾಯಾ ಸಂಬಂಧವಿಲ್ಲದಿರುವದರಿಂದ ಇತರರಿಗೆ ಇರುವ ಸರ್ವಸಾಮಾನ್ಯ ದೇಹದಂತೆ ಶರಣನದೇಹವು ಕಾಣಬರುತ್ತಿದ್ದರೂ ಅದು ಇತರರ ತೋರಿಕೆಗೆ ಮಾತ್ರ ಕಾಣುವದೇ ಹೊರತು ಅವನಿಗೆ ದೇಹವೇ ಇರುವದಿಲ್ಲ. ಅದು ಕಾರಣ ಅವನು ಅಕಾಯನೇ ಹೊರತು ಸಕಾಯನಲ್ಲ ಎಂದು ಜಗದ್ಗುರು ರೇಣುಕರು ಅಗಸ್ತ್ಯನನ್ನು ಕುರಿತು ಸಿದ್ಧಾಂತಶಿಖಾಮಣಿಯಲ್ಲಿ ಉಪದೇಶಿಸಿರುವರು.

" ಕೊಡಲಿಲ್ಲದ ಘನವ ಕೂಡುವ ಪರಿಎಂತವ್ವ ?
ಹೇಳಿದರೆ ಆದಕ್ಕದೆ ಕೊರತೆ ! ಗುಹೇಶ್ವರಲಿಂಗವ ಬೇರು ಮಾಡಿ
ಬೆರಸುವ ಪರಿಎಂತು ಹೇಳಾ ?

ಎಂದು ಪ್ರಭು ಕೇಳಲು–

" ಗಟ್ಟಿದುಪ್ಪ ತಿಳಿದುಪ್ಪಕ್ಕೆ ಹಂಗುಂಟೇ ಅಯ್ಯಾ ?
ದೀಪಕ್ಕೆ ದೀಪ್ತಿಗೆ ಭೇದಉಂಟೇ ಅಯ್ಯಾ ?
ಅಂಗಕ್ಕೆ ಆತ್ಮಕ್ಕೆ ಭಿನ್ನಉಂಟೇ ಅಯ್ಯಾ ?
ಎನ್ನಂಗವನು ಶ್ರೀ ಗುರು ಮಂತ್ರವಮಾಡಿ ತೋರಿದನಾಗಿ
ಸಾವಯ, ನಿರವಯಕ್ಕೆ ಭಿನ್ನವಿಲ್ಲವಯ್ಯಾ,
ಚನ್ನಮಲ್ಲಿಕಾರ್ಜುನದೇವರ ಬೆರಸಿ ಮತಿಗೆಟ್ಟವಳ
ಏತಕ್ಕೆ ನುಡಿಸುವಿರಯ್ಯಾ ಪ್ರಭುವೇ "

ಹೀಗೆ ಅಕ್ಕನು ಉತ್ತರವಿತ್ತಳು. ಆಗ ಪ್ರಭುವು –

" ನಾಸತ್ತೆನೆಂದು ಹೆಣ ಕೂಗಿದುದುಂಟೇ ?
ಬೈಚಿಟ್ಟ ಬಯಕೆ ಕರೆದುದುಂಟೇ ?
ಹೆಪ್ಪಿಟ್ಟ ಹಾಲು ಸಿಹಿಯಪ್ಪುದೇ ?
ಈ ಮಾತು ಒಪ್ಪವಲ್ಲ ಗುಹೇಶ್ವರಲಿಂಗಕ್ಕೆ "

ಎಂದು ಒಪ್ಪದೇ ತಲೆಯಲ್ಲಾಡಿಸಲು –

" ಸತ್ತ ಹೆಣ ಕೂಗಿದುದುಂಟು,
ಬೈಚಿಟ್ಟ ಬಯಕೆ ಕರೆದುದುಂಟು,
ಹೆಪ್ಪಿಟ್ಟ ಹಾಲು ಸಿಹಿಯಾದುದುಂಟು,
ಇದ ನಿಶ್ಚೈಸಿನೋಡಿ ಚನ್ನಮಲ್ಲಿಕಾರ್ಜುನದೇವರಲ್ಲಿ ! "

ಆಗ ಪ್ರಭುವು–

" ಇದು ಎನಗೆ ಆಶ್ಚರ್ಯ ಹೇಳವ್ವ ಕಾಯವಿಲ್ಲದ ಸುಖವ
ಜೀವವಿಲ್ಲದ ಭವವ ಆ ಠಾವ ಹೇಳಾ ಗುಹೇಶ್ವರಲಿಂಗಕ್ಕೆ "

ಎಂದು ಕೇಳಲು ಮಹಾದೇವಿಯು –

" ಮರೆದೊರಗಿ ಕನಸುಕಂಡು ಹೇಳುವಲ್ಲಿ
ಸತ್ತ ಹೆಣ ಎದ್ದಿತ್ತು.
ತನ್ನ ಋಣನಿಧಾನ ಎದ್ದು ಕರೆಯಿತ್ತು,
ಹೆಪ್ಪಿಟ್ಟ ಹಾಲು ಗಟ್ಟಿದುಪ್ಪವಾಗಿ ಸಿಹಿಯಾಯಿತ್ತು,
ಇದಕ್ಕೆ ತಪ್ಪುಸಾಧಿಸಲೇಕೆ ? ಚನ್ನಮಲ್ಲಿಕಾರ್ಜುನ
ದೇವರ ದೇವನನ್ನುಗಲಿದಾ ?

ಎಂದು ಸಮರ್ಪಕವಾದ ಉತ್ತರವನ್ನಿತ್ತಳು. ಆಗ ಪ್ರಭುವು ಇದು ಲೇಸಾಯ್ತು ಎಂದು ಒಪ್ಪಿಗೆಯಿತ್ತನು:

" ಕರತಳಾಮಳಕವಾದುದು ತತ್ತ್ವವೀತಂಗೆ ।
ಪರಮಶಿವಯೋಗ ನಿಜವಾದುದೀತಂಗೆ "

ಎಂಬ ಹರಿಹರನ ಉಕ್ತಿಯಂತೆ, ಆವ ಮಹಾಪ್ರಭುವಿಗೆ ತತ್ವಶಾಸ್ತ್ರವು ಕರಗತವಾಗಿದೆಯೊ ಅಂಥ ಅಲ್ಲಮ ಪ್ರಭುವು ಕೇಳುವ ತಾತ್ವಿಕ ಪ್ರಶ್ನೆಗಳಿಗೆ ಸಮಯೋಚಿತ ಸದುತ್ತರವನ್ನೀಯುವ ಮಹಾದೇವಿಯಕ್ಕನ ಬುದ್ಧಿಮತ್ತೆಯನ್ನು ಕಂಡುಕೇಳಿ ಬಸವೇಶ್ವರ, ಚನ್ನಬಸವ, ಸಿದ್ಧರಾಮಯ್ಯ ಮುಂತಾದ ಮಹಾನುಭಾವರು –

" ಅಜಕೋಟಿ ವರುಷದವರೆಲ್ಲರೂ ಹಿರಿಯರೆ ?
ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರೂ ಹಿರಿಯರೇ ?
ಅನುವರಿದು ಘನವ ಬೆರಸಿ ಹಿರಿದು ಕಿರಿದೆಂಬ
ಭೇದವ ಮರೆದು ಕೂಡಲ ಚನ್ನಸಂಗಯ್ಯನಲ್ಲಿ
ಬೆರಸಿ ಬೇರಿಲ್ಲದಿಪ್ಪ ಹಿರಿಯತನ ನಮ್ಮ ಮಹಾ
ದೇವಿಯಕ್ಕಂಗಾಯಿತ್ತು "

ಎಂದು ಮುಂತಾಗಿ ಹಾಡಿ ಹರಸಿದರು. ಆಗ ಮಹಾದೇವಿಯು –

" ಎನಗೇಕಯ್ಯ ! ನಾಪ್ರಪಂಚಿನ ಪುತ್ಥಳಿ...
ಎನ್ನ ಭಕ್ತಿ ಬಸವಣ್ಣನಧರ್ಮ,
ಎನ್ನ ಜ್ಞಾನ ಪ್ರಭುದೇವರ ಧರ್ಮ,
ಎನ್ನ ಪರಿಣಾಮ ಚನ್ನಬಸವಣ್ಣನ ಧರ್ಮ,
ಈ ಮೂವರೂ ಒಂದೊಂದ ಕೊಟ್ಟರೆನಗೆ ಮೂರು
ಭಾವವಾಯಿತ್ತು, ಆ ಮೂರನು ನಿಮ್ಮಲ್ಲಿ ಸಮರ್ಪಿಸಿದ
ಬಳಿಕ ಎನಗಾವ ಜಂಜಡವಿಲ್ಲ, ಚನ್ನಮಲ್ಲಿಕಾರ್ಜುನದೇವರ
ನೆನಹಿನಲ್ಲಿ ನಿಮ್ಮ ಕರುಣದ ಶಿಶುನಾನು "

ಎಂದು ಶಿರಬಾಗಿ ಕೈಮುಗಿದು ಶರಣರ ಚರಣಕ್ಕೆರಗಿದಳು.

ಶ್ರೀ ಬಸವಣ್ಣನವರ ಅರಮನೆಯಲ್ಲಿ ಅಕ್ಕನಾಗಮ್ಮ, ನೀಲಾಂಬಿಕೆ, ಗಂಗಾಂಬಿಕೆಯರ ಸಾನಿಧ್ಯದೊಳಗೆ–

" ಅಷ್ಟವಿಧಾರ್ಚನೆಯ ಮಾಡಿ ಒಲಿಸುವೆನೇಅಯ್ಯಾ !
ನೀನು ಬಹಿರಂಗ ವ್ಯವಹಾರ ದೂರಸ್ಥನು,
ಅಂತರಂಗದಲ್ಲಿ ಧ್ಯಾನವ ಮಾಡಿ ಒಲಿಸುವೆನೇ ಅಯ್ಯಾ !
ನೀನು ವಾಙ್ಮನಾತೀತನು ... ಅಯ್ಯಾ
ನಿನ್ನ ಒಲಿಸಲೆನ್ನಳವಲ್ಲ ನೀನೊಲಿವುದೇ ಸುಖವಯ್ಯ ಚನ್ನಮಲ್ಲಿಕಾರ್ಜುನ"

" ತನು ಕರಗದವರಲ್ಲಿ ಮಜ್ಜನವನೊಲ್ಲೆಯಯ್ಯಾ ನೀನು,
ಮನಕರಗದವರಲ್ಲಿ ಪುಷ್ಪವನೊಲ್ಲೆಯಯ್ಯಾ ನೀನು,
ಎನ್ನಲ್ಲಿ ಏನುಂಟೆಂದು ಕರಸ್ಥಲವ
ನಿಂಬುಗೊಂಡೆ ಹೇಳಾ ಚನ್ನಮಲ್ಲಿಕಾರ್ಜುನ "

" ಸಜ್ಜನಳಾಗಿ ಮಜ್ಜನಕ್ಕೆರೆವೆ, ಶಾಂತಳಾಗಿ ಪೂಜೆಯ ಮಾಡುವೆ,
ಸಮರತಿಯಿಂದ ನಿಮ್ಮ ಹಾಡುವೆ, ಚನ್ನಮಲ್ಲಿಕಾರ್ಜುನಯ್ಯ,
ನಿಮ್ಮನಗಲದೆ ಪೂಜೆ ಅನುವಾಯಿತ್ತೆನಗೆ "

" ನಡೆವೆ ಲಿಂಗದಕೂಡ ನುಡಿವೆ ಲಿಂಗದ ಒಡನೆ ।
ಎಡೆವಿಡದೆ ಬರ್ಪ ವಿಷಯ ಭೋಗಗಳನ್ನು
ಕೊಡುವೆನು ಲಿಂಗ ಮುಖದಿಂದ "

ಎಂದು ಭಾವಾವಿಷ್ಟಳಾಗಿ ಪೂಜೆಮಾಡುತ್ತ-

" ಬಸವಣ್ಣನ ಮನೆಯ ಮಗಳಾಗಿ ಬದುಕಿದೆನಾಗಿ
ತನ್ನ ಕರುಣ ಭಕ್ತಿಪ್ರಸಾದವ ಕೊಟ್ಟನು,
ಚನ್ನಬಸವಣ್ಣನ ತೊತ್ತಿನಮಗಳಾದ ಕಾರಣ
ಒಕ್ಕಪ್ರಸಾದವ ಕೊಟ್ಟನು,
ಪ್ರಭುದೇವರ ತೊತ್ತಿನ ಮಗಳಾದ ಕಾರಣ
ಜ್ಞಾನಪ್ರಸಾದವ ಕೊಟ್ಟನು,
ಸಿದ್ಧರಾಮಯ್ಯನ ಶಿಶುವಿನ ಮಗಳಾದ ಕಾರಣ ಪ್ರಾಣ ಪ್ರಸಾದವ
ಕರುಣಿಸಿಕೊಟ್ಟನು ಮಡಿವಾಳ ಮಾಚಿತಂದೆಯ ಮನೆಯ
ಮಗಳಾದ ಕಾರಣ ನಿರ್ಮಲ ಪ್ರಸಾದವ ನಿಶ್ಚೈಸಿ ಕೊಟ್ಟನು.
ಇಂತೀ ಅಸಂಖ್ಯಾತರೆಲ್ಲರು ತಮ್ಮ ಕರುಣದ ಕಂದನೆಂದು
ತಲೆದಡವಿ ರಕ್ಷಿಸಿದ ಕಾರಣ ಚನ್ನಮಲ್ಲಿಕಾರ್ಜುನನ ಪಾದಕ್ಕೆ
ಯೋಗ್ಯಳಾದೆನು, "

ಎಂದು ಶರಣರ ಸಾನಿಧ್ಯದಲ್ಲಿ ತನಗಾದ ಧನ್ಯತೆಯನ್ನು ಹೇಳಿಕೊಂಡಿದ್ದಾಳೆ.

" ಹಿಂಡನಗಲಿ ಹಿಡಿವಡೆದ ಕುಂಜರ ತನ್ನ ವಿಂಧ್ಯವ ನೆನೆವಂತೆ
ಬಂಧನಕ್ಕೆ ಬಂದ ಗಿಳಿ ತನ್ನ ಬಂಧುವನೆನೆವಂತೆ

ಮಹಾದೇವಿಯಕ್ಕ ತಮ್ಮ ಲಿಂಗೈಕ್ಯದಸ್ಥಾನದ ಕಾಲಸ್ಥಿತಿಯಾವುದೆಂದು ತಿಳಿವ ಹಂಬಲದಿಂದ-

" ಪರಮಸುಖಪರಿಣಾಮ ಮನವೇರೆದಪ್ಪಿ
ನಾನು ನಿಜವನೈದುವಠಾವ ಹೇಳಾ ಚನ್ನಮಲ್ಲಿಕಾರ್ಜುನಯ್ಯ

ಎಂದು ಕೇಳಲು-

« ನಾನೀನೆಂಬುಭಯ ಸಂಗವಳಿದು ತಾನುತಾನಾದ ತ್ರಿಕೂಟವೆಂಬ
ಮಹಾಗಿರಿಯ ತುಟ್ಟತುದಿಯ ಮೆಟ್ಟಿ ನೋಡಲು ಬಟ್ಟಬಯಲು
ಕಾಣಬಹುದು ನೋಡಾ ಆ ಬಯಲ ಬೆರಸುವರೆ ತ್ರಿಕೂಟ
ಗಿರಿಯೊಳಗೊಂದು ಕಾಣಬಾರದ ಕದಳಿಯುಂಟು ನೋಡಾ
ಕದಳಿಯ ತಳದಲ್ಲಿ ಒಳಹೊಕ್ಕುನೋಡಲು ತೊಳಗಿ
ಬೆಳಗುವ ಜ್ಯೋತಿಯುಂಟು ಕೇಳಾ ನಡೆಯಲ್ಲಿಗೆ ತಾಯೆ
ಗುಹೇಶ್ವರ ಲಿಂಗದಲ್ಲಿ ಪರಮ ಪದವಿ ನಿನಗೆ
ಸ್ವಯವಹುದು ನೋಡಾ »

ಹೀಗೆ ಪ್ರಭುವು ನಿಜರೂಪದಲ್ಲಿ ನಿಲುವ ನೆಲೆಯನ್ನು ತಿಳುಹಲು ಅಕ್ಕಮಹಾದೇವಿಯು ಎಲ್ಲ ಶರಣ ಶರಣೆಯರಿಗೆ ಶರಣೆಂದು ಶ್ರೀಶೈಲದತ್ತ ಹೊರಡಲು ಅನುಮತಿಯನ್ನು ಕೇಳಿದಳು. ಶ್ರೀಶೈಲಕ್ಕೆ ಹೊರಡುವ ಮುನ್ನ ಕಳುಹಿಸಿಕೊಡುವ ಎಲ್ಲರ ಕಣ್ಣುಗಳಲ್ಲಿಯೂ, ಹೊರಟ ಅಕ್ಕನ ಕಣ್ಣುಗಳಲ್ಲಿಯೂ ನೀರು ತುಂಬಿದವು.

ಬಸವಣ್ಣ ಮೊದಲಾದ ಶರಣರಿಗೆ ಶರಣಾರ್ಥಿಗಳು. ಪ್ರಭುವಿಂದೆ ಕೃತಕೃತ್ಯಳಾದೆ. ನಾನು ಮರೆಯಲಾಗದೆಂದು ನಾ ನಿಮ್ಮಶಿಶುವೆಂದು ಎನ್ನನು ಚನ್ನಮಲ್ಲಿಕಾರ್ಜುನನ ಬೆರಸೆಂದು ಹರಸಿರಿ ಎಂದು ಬೇಡಿದಳು.

« ಹುಟ್ಟಿದೆ ಶ್ರೀಗುರುವಿನ ಹಸ್ತದಲ್ಲಿ ಬೆಳೆದೆನು ಅಸಂಖ್ಯಾತರ ಕರುಣದಿಂದ
ಭಾವವೆಂಬ ಹಾಲು ಸುಜ್ಞಾನವೆಂಬ ತುಪ್ಪ ಪರಮಾರ್ಥವೆಂಬ ಸಕ್ಕರೆಯನಿಕ್ಕಿದರು
ನೋಡಾ, ಇಂತಪ್ಪತ್ರಿವಿಧಾಮೃತವ ದಣಿಯಲೆರೆದು ಸಲಹಿದರೆನ್ನ
ವಿವಾಹ ಮಾಡಿದಿರಿ ಸಯುವಪ್ಪ ಗಂಡಂಗೆ ಕೊಟ್ಟಿರಿ
ಕೊಟ್ಟ ಮನೆಗೆ ಕಳುಹಲೆಂದು ಅಸಂಖ್ಯಾತರೆಲ್ಲರು ನೆರೆದು ಬಂದಿರಿ
ಬಸವಣ್ಣ ಮೆಚ್ಚಲು ಒಗೆತನವಮಾಡುವೆ ಚನ್ನಮಲ್ಲಿಕಾರ್ಜುನನ ಕೈವಿಡಿದು
ನಿಮ್ಮ ಮಂಡೆಗೆ ಹೂವತಹೆನಲ್ಲದೆ ಹುಲ್ಲತಾರೆನು.
ಅವಧರಿಸಿ ನಿಮ್ಮಡಿಗಳೆಲ್ಲರು ಮರಳಿ ಬಿಜಯಂಗೈವುದು ಶರಣಾರ್ಥಿ »

ಎಂದುಹೇಳಿ ಕಲ್ಯಾಣಪಟ್ಟಣದಿಂದ ಹೊರಡುವಾಗ ಅಸಂಖ್ಯಾತ ಶರಣರ ವಿಯೋಗಮಂ ತಾಳದೇ –

" ಅಯ್ಯಾ ನಿಮ್ಮ ಮಹಂತರ ಕೂಡಿದ ಸುಖವನು
ಏಮಗೆ ತರಬಾರದಯ್ಯಾ ಅಯ್ಯ ನಿಮ್ಮ ಮಹಂತರ
ಕೂಡಿ ಅಗಲುವ ಧಾವತಿಯಿಂದ ಸಾವುದೇ
ಕರಲೇಸಯ್ಯಾ ಚನ್ನಮಲ್ಲಿಕಾರ್ಜುನಯ್ಯಾ ನಿಮ್ಮ
ನಿಜವನರಿದ ಮಹಾಮಹಿಮರನಗಲಿ ನಿಲಲಾರೆನಯ್ಯಾ »

ಎಂದು ಕಂಬನಿಗರೆದಳು.

" ವನವೆಲ್ಲ ನೀವೆ, ವನದೊಳಗಣ ದೇವತರುವೆಲ್ಲನೀವೆ,
ತರುವಿನೊಳಗಾಡುವ ಖಗ ಮೃಗವೆಲ್ಲ ನೀವೆ,
ಚೆನ್ನಮಲ್ಲಿಕಾರ್ಜುನ ಸರ್ವಭರಿತನಾಗಿ ಮುಖದೋರಾ "

" ಮೂಲದ್ವಾರದ ಬೇರ ಮೆಟ್ಟಿ ಭೂಮಂಡಲವನೇರಿದೆ,
ಆಚಾರದ ಬೇರ ಹಿಡಿದು ಐಕ್ಯದ ತುದಿಯನೇರಿದೆ,
ವೈರಾಗ್ಯದ ಸೋಪಾನದಿಂದ ಶ್ರೀಗಿರಿಯನೇರಿದೆ,
ಕೈವಿಡಿದು ಕರೆದುಕೊಳ್ಳಾ ಚೆನ್ನಮಲ್ಲಿಕಾರ್ಜುನಾ "

...ದು ಹಂಬಲಿಸುತ್ತ –

" ಹೊಳೆವ ಕೆಂಜೆಡೆಗಳ, ಮಣಿಮುಕುಟದ, ಒಪ್ಪುವ ಸುಲಿಪಲ್ಲ,
ನಗೆಮೊಗದ ಕಂಗಳಕಾಂತಿಯಿಂ ಈರೇಳು ಭುವನಮಂ ಬೆಳಗುವ
ದಿವ್ಯ ಸ್ವರೂಪನ ಕಂಡೆ ನಾನು.ಕಂಡೆನ್ನ ಕಂಗಳ ಬರಹಿಂಗಿತ್ತುಇಂದು
ಗಂಡ ಗಂಡರನ್ನೆಲ್ಲ ಹೆಂಡ ಹೆಂಡಿರಾಗಿ ಆಳುವ ಗುರುವನ ಕಂಡೆನಾನು
ಜಗದಾದಿ ಶಕ್ತಿಯೊಳು ಬೆರಸಿಯೊಡನಾಡುವ ಪರಮ ಗುರು
ಚೆನ್ನಮಲ್ಲಿಕಾರ್ಜುನನ ನಿಲವಕಂಡು ಬದುಕಿದೆನು.

## ೧೮ನೆಯ ಗತಿ

## ಸಾಧಕಾಂಗ

ಲೌಕಿಕದಲ್ಲಿ ತಾಯಿತಂದೆಗಳು, ಅಣ್ಣತಮ್ಮಂದಿರು, ಅಕ್ಕತಂಗಿಯರು ಕೂಡಿ ಮದ್ದು ಮಗಳನ್ನು ಸಿಂಗರಿಸಿ ಹಿತೋಪದೇಶಮಾಡಿ ಗಂಡನಮನೆಗೆ ಕಳುಹುವಂತೆ, ಅನುಭವ ಮಂಟಪದಲ್ಲಿರುವ ಪ್ರಭುದೇವ, ಬಸವ, ಚನ್ನಬಸವ, ಸಿದ್ಧರಾಮ ಮೊದಲಾದ ಮಹಾನುಭಾವರು ವಿಭೂತಿ ರುದ್ರಾಕ್ಷಿ ಮೊದಲಾದ ಮೈದೊಡಿಗೆಗಳಿಂದ ಒಪ್ಪುವ ಮಹಾದೇವಿಗೆ ನಿರ್ವಯಲ ಸಮಾಧಿಯನ್ನು ಹೊಂದುವ ರಹಸ್ಯವನ್ನರುಹಿ ಆಶೀರ್ವದಿಸಿ ಶ್ರೀಶೈಲದ ಕದಳೀವನಕ್ಕೆ ಬೀಳ್ಕೊಟ್ಟರು.

ಅನಂತರ ಶೂನ್ಯಸಿಂಹಾಸನಾಧಿಪತಿಯಾದ ಪ್ರಭುದೇವರು ಬಸವರಾಜರಿಗೆ ಸಂಕಲ್ಪ ಇಷ್ಟಾರ್ಥಗಳನ್ನು ಪೂರೈಸುವ ಇಷ್ಟಲಿಂಗದ ಪೂಜೆಯನ್ನು ಮನಮುಟ್ಟಿ ಮಾಡಬೇಕು. ತನು ಮನ ಭಾವಂಗಳಲ್ಲಿ ಪಾರಸ್ಪರಿಕ ಸಹಜ ಸಂಬಂಧವುಳ್ಳ ಇಷ್ಟ-ಪ್ರಾಣ-ಭಾವ ಲಿಂಗಗಳನ್ನು ಪೂಜಿಸಬೇಕು, ಧ್ಯಾನಿಸಬೇಕು, ಪರಿಭಾವಿಸಬೇಕು. ತ್ರಿವಿಧಲಿಂಗಗಳ ಅರ್ಚನ ಅನುಸಂಧಾನಗಳನ್ನು ಮಾಡುವದಲ್ಲದೆ ಶಿವಸ್ವರೂಪಿಗಳಾದ ಗುರುಜಂಗಮರ ಸೇವೆಯನ್ನು ತ್ರಿಕರಣ ಶುದ್ಧಿಯಿಂದ ಮಾಡಬೇಕು. ಇದರಿಂದ ಅಂತಃಕರಣವೃತ್ತಿಗಳು ಅಡಗುವದಲ್ಲದೇ ಮಾಯೆಯ ಅಬ್ಬರವೂ ಮಾಯವಾಗಿ ಷಡ್ಭ್ರಮೆಗಳು ಬಯಲಾಗಿ ಹೋಗುವವು. ಭಕ್ತಿಯ ಮಹಿಮೆಯು ಅಗಾಧವಾದುದು. ಧಾರಾಕಾರವಾಗಿ ಹಾಲ್ಗರೆವ ಹಾಲು ಕೆಚ್ಚಲಿನಲ್ಲಿದ್ದರೂ ಉಣ್ಣೆಯು ಹಾಲಿನ ಮಾಧುರ್ಯವರಿಯದಂತೆ, ಶಿವಭಕ್ತಿಯನ್ನು ತೊರೆದು ಅನ್ಯ ಮಾರ್ಗದಲ್ಲಿ ನಡೆವ ಉನ್ನಿಮಾನವರು ಶಿವಸ್ವರೂಪವನ್ನರಿಯಲಾರರು.

“ ಗಿಡವಳುಕೆ ಹೂಪತ್ರಿಗೋಸುಗ ।
ಮಡು ನಡುಗೆಯ್ಗ್ಗವಣೆಗೋಸುಗ ।
ನುಡಿದು ಉಪಹಾರಕ್ಕೆ ಸಕಲೌಷಧಿವನಸ್ಪತಿಯ ॥
ಕೆಡಿಸುತೀಪರಿ ಹೆರರುಗಳ ತ ।
ನ್ನೊಡಲವಂಚಿಸಿ ಬಾಹ್ಯ ಭಕ್ತಿಯ ।
ನಡೆವವರನಾ ಮೆಚ್ಚೆನೈ ಬಸವಣ್ಣ ಕೇಳೆಂದ ॥ ”

ತನುಮನಭಾವಂಗಳು ಶುದ್ಧಿಯಿಲ್ಲದೆ, ಲಿಂಗದ ಅಭಿಷೇಕಕ್ಕೆ ನೀರುತಂದು ಅಭಿಷೇಕಿಸಿ ಲಿಂಗಕ್ಕೆ ಏರಿಸಲು ಗಿಡಗಳನ್ನು ಅಲ್ಲಾಡಿಸಿ ಹೂಪತ್ರಿಗಳನ್ನು ತಂದುಏರಿಸಿ, ಲಿಂಗದ ನೈವೇದ್ಯಕ್ಕೆಂದು ಗಿಡಬಳ್ಳಿಗಳನ್ನು ಕಡಿದು ಕೆಡಿಸಿ ನೈವೇದ್ಯಮಾಡಿ ಪೂಜಿಸಿದರೆ ಆ ಪೂಜೆಯು ವ್ಯರ್ಥ.

ಚಾಮರಸನು ತನ್ನಕಾವ್ಯದಲ್ಲಿ ಪ್ರಭುವಿನ ಪಾತ್ರವನ್ನು ತಾನೇವಹಿಸಿ ಬಸವರಸನಿಗೆ ಉಪದೇಶ ಮಾಡಿದರೆ ಸ್ವಯಂ ಪ್ರಭುದೇವರೇ—

" ಮಜ್ಜನಕ್ಕೆರೆದು ಫಲವ ಬೇಡುವರಯ್ಯಾ !
ತಮಗೆಲ್ಲಿಯದೋ ಆ ಫಲವು ಸೀತಾಳಕ್ಕಲ್ಲದೆ ?
ಪತ್ರಿ ಪುಷ್ಪದಲ್ಲಿ ಪೂಜಿಸಿ ಫಲವ ಬೇಡುವರಯ್ಯಾ !
ತಮಗೆಲ್ಲಿಯದೋ ಆ ಫಲ ಗಿಡಗಳಿಗಲ್ಲದ ?
ಸುಯಿಧಾನವನರ್ಪಿಸಿ ಪ್ರಸಾದದ ಫಲವ ಬೇಡುವರು
ತಮಗೆಲ್ಲಿಯದೋ ಆ ಫಲವು ಹದಿನೆಂಟು ಧಾನ್ಯಕ್ಕಲ್ಲದೆ ?
ಲಿಂಗದೊಡವೆಯ ಲಿಂಗಕ್ಕೆ ಕೊಟ್ಟು ಫಲವ
ಬೇಡುವ ಸರ್ವಅನ್ಯಾಯಿಗಳನೇನೆಂಬೆ ಗುಹೇಶ್ವರಯ್ಯ "

" ಹೊರಗನೇ ಕೊಯ್ದು ಹೊರಗನೇ ಪೂಜಿಸಿದವರ
ಕಂಡು ನಾಚಿದೆನಯ್ಯಾ,
ಒಳಗೊಂದು ಅನಿಮಿಷಲಿಂಗವ ಕಂಡು,
ಎನ್ನಮನೋಪುಷ್ಪದಲ್ಲಿ ಪೂಜೆ ಮಾಡಿದಡೆ,
ನಾಚಿಕೆಮಾದು ನಿಸ್ಸಂದೇಹಿಯಾದೆನು ಗುಹೇಶ್ವರ "

ಕೇವಲ ಬಾಹ್ಯಾಡಂಬರದ ಪೂಜೆಯಿಂದ ಆವಾವ ಪ್ರಯೋಜನವಿಲ್ಲವೆಂದು ಹೇಳಿ ದವರು.

" ಮಜ್ಜನಕ್ಕೆರೆಯ ಹೇಳಿದರೆ ನಾನೇನ ಮಜ್ಜನಕ್ಕೆರೆವೆನು ?
ಒಳಗೊಂದು ಪ್ರಾಣಲಿಂಗವ ಕಂಡೆನಯ್ಯಾ.
ಹೊರಗಣ ಹೂವ ಕೊಯ್ದು ಹೊರಗೆ ಪೂಜಿಸುವರು,
ಉಪಚಾರದ ನೇಮವ ನಾನೊಲ್ಲೆನಯ್ಯಾ,
ಸ್ವಾನುಭವದಸುವನರಿಯದವರು ಏತರಸುಖಿ ?
ಕಪಿಲಸಿದ್ಧಮಲ್ಲಿಕಾರ್ಜುನನಂತವರನೊಲ್ಲನಯ್ಯಾ "

ಎಂದು ಸಿದ್ಧರಾಮನು ಹೇಳಿದ್ದಾನೆ.

ಭಕ್ತಸ್ಥಲ ಮೊದಲ್ಗೊಂಡು ಜ್ಞಾನಶೂನ್ಯಸ್ಥಲದವರೆಗೂ ಇರುವ ನೂರೊಂದು ಸ್ಥಲಗಳಲ್ಲಿ ಅಂದರೆ ೪೪ ಅಂಗಸ್ಥಲ, ೫೭ ಲಿಂಗಸ್ಥಲಗಳಲ್ಲಿ ಭಕ್ತಸ್ಥಲವೇ ಪ್ರಥಮದಲ್ಲಿದೆ.

" ದೈವೀಭಕ್ತಿಃ ಸಮುತ್ಪನ್ನಾ ಯಸ್ಯಾಸೇ ಭಕ್ತಮುಚ್ಯತೇ ।
ತಸ್ಯಾನುಷ್ಠೇಯಧರ್ಮಾಣಿ ಮುಕ್ತಿರ್ಭಕ್ತಸ್ಥಲಂಮತಂ ॥

ಎಂದು ಜಗದ್ಗುರುರೇಣುಕರು ಸಿದ್ಧಾಂತಶಿಖಾಮಣಿಯಲ್ಲಿ ಭಕ್ತ–ಭಕ್ತಸ್ಥಲದ ಲಕ್ಷಣವನ್ನು ಹೇಳಿರುವರು ವೀರಶೈವನಿಗೆ ಜೀವನದಲ್ಲಿ ನೂರೊಂದು ಸ್ಥಲಗಳು ಆಳವಡ ಬೇಕಾದರೆ ಮೊದಲನೇ ಸ್ಥಲವು ಅಂದರೆ ಭಕ್ತಸ್ಥಲವು ಅತೀವ ಮಹತ್ವದ್ದು. ಅಂತೆಯೇ ಅನುಭಾವಿಗಳು "ಸದ್ಭಕ್ತಿಸಧಿಕಂ" ಎಂದು ... ಮಾಧಿಕಃ " "ನಮೇ ಭಕ್ತಃ

ಪ್ರಣಶ್ಯತಿ ” “ ಮದ್ಭಕ್ತಾಯತ್ರತಿಷ್ಟಂತಿ ತತ್ರತಿಷ್ಠಾಮಿ ಪಾರ್ವತಿ ” ಎಂದು ಮೊದಲಾಗಿ ಕೊಂಡಾಡಿರುವರು. ಭಕ್ತಸ್ಥಲದ ಸಾರ್ವಭೌಮರಂತಿದ್ದ ಶ್ರೀಬಸವೇಶ್ವರರು-

“ಜಂಬೂದ್ವೀಪ ನವಖಂಡ ಪೃಥ್ವಿಯೊಳಗೆ ಎರಡಾಳಿನ
ಭಾಷೆಯ ಕೇಳಿರಯ್ಯಾ ! ಕೊಲುವೆನೆಂಬಾ' ಭಾಷೆ ದೇವನದು
ಗೆಲುವೆನೆಂಬಾ ಭಾಷೆ ಭಕ್ತನದು ಸತ್ಯವೆಂಬ
ಕೂರಲಗನೇ ಸೆಳೆದು ನಿಮ್ಮ ಸದ್ಭಕ್ತರೇ ಗೆದ್ದರು
ನೋಡಾ ಕೂಡಲ ಸಂಗಮದೇವಾ ! ”

ದೇವರು ಭಕ್ತನನ್ನು ಕಾಮಾದಿ ಷಡ್ರಿಪುಗಳ ಬಲೆಗೆಸಿಲುಕಿಸಿ ಕೊಲ್ಲುವೆ ಎಂದು ಪಣ ತೊಟ್ಟರೆ ಭಕ್ತನು ಸತ್ಯವೆಂಬ ಕೂರಲಗನೇ ಹಿಡಿದು ಗೆಲ್ಲುವೆ ಎಂದು ಪ್ರತಿಜ್ಞೆ ಮಾಡುವನಂತೆ ! ಕೊಲುವೆ, ಗೆಲುವೆ, ಎಂದುಪಣತೊಟ್ಟಿರುವ ಈ ದೇವಭಕ್ತರ ದ್ವಂದ್ವ ಯುದ್ಧದಲ್ಲಿ ಸರ್ವಶಕ್ತನಾದ ದೇವರೇಸೋತು ದೃಢನಿಷ್ಠೆಯುಳ್ಳ ಭಕ್ತನೇಗೆಲ್ಲುವನಂತೆ!

“ ಭಕ್ತನ ನಡೆ ಶುದ್ಧ, ಭಕ್ತನ ನುಡಿ ಶುದ್ಧ,
ಭಕ್ತನ ತನು ಶುದ್ಧ, ಭಕ್ತನ ಮನ ಶುದ್ಧ,
ಭಕ್ತನ ಭಾವ ಶುದ್ಧ, ಭಕ್ತನ ಸರ್ವಕ್ರಿಯೆಯೆಲ್ಲ ಶುದ್ಧ,
ಅಖಂಡೇಶ್ವರ ನೀ ಒಲಿದ ಸದ್ಭಕ್ತನ ಕಾಯವೇ ಕೈಲಾಸವಯ್ಯಾ,

ಎಂದು ಷಣ್ಮುಖಶಿವಯೋಗಿಗಳು ಭಕ್ತನ ಆಧಿಕ್ಯವನ್ನು ಹೇಳಿರುವರು. ಶಿವಾಗಮಗಳೂ ಭಕ್ತಕಾಯೋ ಮಮಕಾಯಃ ಎಂದು ಉದ್ಘೋಷಿಸುತ್ತವೆ. ಭಕ್ತನು ದೈಹಿಕ, ಬೌದ್ಧಿಕ, ಮಾನಸಿಕ ವಿಕಾರಗಳಿಗೆ ಒಳಗಾಗದೇ ಅವುಗಳಿಂದ ದೂರವಿರಬೇಕು. ಹಸಿವು ಬಾಯಾರಿಕೆಗಳಿಗೆ ಹೆದರಿ ಹಿಂಜರಿಯದಿರಬೇಕು. ದಶೇಂದ್ರಿಯಗಳದಾಳಿಗೆ ಸಿಲುಕದೇ, ವೈಷಯಿಕ ವ್ಯಾಮೋಹದಿಂದ ಮನಸ್ಸು ಕದಲದೇ ಲಿಂಗದಲ್ಲಿ ಲೀನಮನಸ್ಕನಾಗಿರಬೇಕು, ಒಂದೇ ಭಕ್ತಿಯು ಭಕ್ತಾದಿ ಷಟ್‌ಸ್ಥಲಗಳನ್ನು ಹೊಂದಿ ಶ್ರದ್ಧಾ, ನಿಷ್ಠೆ ಮುಂತಾದ ನಾಮಗಳನ್ನು ಪಡೆವುದು. ಕೊನೆಯದಾದ ಐಕ್ಯಸ್ಥಲದಲ್ಲಿದ್ದ ಭಕ್ತನು ಸಮರಸಭಕ್ತಿಯಿಂದ ತನ್ನದೇಹಾತ್ಮಪ್ರಾಣಗಳನ್ನು ಲಿಂಗದಲ್ಲಿ ಲೀನಗೊಳಿಸುವನು, ಅಂದರೆ ಲಿಂಗವ ಪೂಜಿಸಿ ಲಿಂಗವೇ ತಾನಾಗುವನು.

ಲೌಕಿಕರ ದೇಹವು ಮಣ್ಣಿನಿಂದ ಮಾಡಿದ ಗೊಂಬೆಯಂತಿರುವದು. ಅದರ ಮೇಲೆ ಎಷ್ಟೇಪರಿಮಳಪೂರಿತ ಪುಷ್ಪಗಳನ್ನ ಏರಿಸಿದರೂ, ತನ್ನ ಗಂಜಳವನ್ನು ಬಿಡದು. ಇದನ್ನೇ ಶ್ರೀ ಬಸವೇಶ್ವರರು –

“ ಸಗಣಿಯ ಬೆನಕಂಗೆ ಸಂಪಿಗೆಯರಳಲ್ಲಿ ಪೂಜಿಸಿದರೆ
ಅದು ತನ್ನ ಗಂಜಳ ಬಿಡದಣ್ಣಾ ”

ಎಂದು ಹೇಳಿರುವರು. ಆದರೆ ಶಿವಭಕ್ತನ ದೇಹವು ಮಾತ್ರ ಹಾಗಲ್ಲ. ಅದು ಚಂದನ

ಸ್ಟಿಗೆಯಿಂದ ಮಾಡಿದ ಪ್ರತಿಮೆಯಂತೆ ಇರುವದು. ಅದನ್ನು ಎತ್ತೆತ್ತ ನೋಡಿದರೂ ಸುಗಂಧವೇ ಸುಗಂಧ. ಶ್ರೀಗಂಧದ ಗೊಂಬೆಯು ಅಂಗೋಪಾಂಗಗಳಲ್ಲಿ ಸುಗಂಧವೇ ತುಂಬಿತುಳುಕುವಂತೆ ಶಿವಭಕ್ತನ ಅಂಗದಲ್ಲಿ ಲಿಂಗಗುಣಗಳೇ ತುಂಬಿತುಳುಕುವವು.

ಸ್ಫಟಿಕಕುಂಭ ಹಾಗೂ ಮಣ್ಣಿನಕುಂಭ ಈ ಎರಡು ಕುಂಭಗಳಲ್ಲಿ ಸ್ಫಟಿಕಘಟದ ಒಳಗೆ ದೀಪವನ್ನಿಟ್ಟರೆ ಹೊರಗೆ ಬೆಳಗುವದು. ಆದರೆ ಮೃದ್ಘಟದೊಳಗಿಟ್ಟ ದೀಪವು ಹೊರಗೆ ಬೆಳಗದು. ಲೌಕಿಕ ದೇಹವು ಮೃದ್ಘಟದಂತೆ. ಶಿವಭಕ್ತನ ಕಾಯವು ಸ್ಫಟಿಕಘಟದಂತೆ. ಭವಿಯ ದೇಹವು ಪದಾರ್ಥಕಾಯ, ಭೂತಕಾಯ, ಮಾಂಸಪಿಂಡ, ಪ್ರಾಕೃತದೇಹ ಎಂದು ಹೇಳಲ್ಪಟ್ಟರೆ ಭಕ್ತನದೇಹವು ಪ್ರಸಾದಕಾಯ, ಪೂತಕಾಯ, ಮಂತ್ರಪಿಂಡ, ಅಪ್ರಾಕೃತ ದೇಹ ಎಂದು ಹೇಳಲ್ಪಡುವದು.

ಭವಿ ಮತ್ತು ಭಕ್ತರ ನಡುವಿನ ಅಂತರವನ್ನು ವಿವಿಧ ದೃಷ್ಟಾಂತಗಳ ಮುಖಾಂತರ ಶ್ರೀಮಗ್ಗಿಯಮಾಯಿದೇವರು ಶತಕತ್ರಯದಲ್ಲಿ ನಿರೂಪಣೆಮಾಡಿರುವರು.

" ಪಾಶಬದ್ಧೋಭವೇಜೀವಃ ಪಾಶಮುಕ್ತಃಸದಾಶಿವಃ " ಪಂಚಪಾಶಗಳಿಂದ, ಷಡ್ರಿಪುಗಳಿಂದ, ಷಡ್ಭ್ರಮೆಗಳಿಂದ ಬಂಧಿತನಾದ ಜೀವನು ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳ ಆಚರಣೆಯಿಂದ ತನಗುಂಟಾದ ಭವಬಂಧನವನ್ನು ಕಳೆದುಕೊಂಡು ದೇವನೇಆಗುವನು.

ದಿನಾಲು ನಡೆಯುವ ಅಸಂಖ್ಯ ಉಚ್ಛ್ವಾಸ-ನಿಶ್ವಾಸಗಳಲ್ಲಿ ಆತ್ಮಪ್ರಸಾದವಾದ ಹಂಸ ಮಂತ್ರವು ಶಿವಾಜ್ಞೆಯಿಂದ ಪ್ರಾಕೃತ ಪ್ರಾಣಾಯಾಮವಾಗಿ ಚರಿಸುತ್ತಿರುವದು. ಅದನ್ನು ಸಾಧಕನು ಶ್ರುತಿ, ಗುರೂಪದೇಶ, ಸ್ವಾನುಭವಗಳಿಂದ ವೈಕೃತ ಪ್ರಾಣಾಯಾಮವಂ ಮಾಡಿದರೆ ಸೋಹಂ ಎಂದಾಗುವದು. ಸೋಹಂ ಎಂಬಲ್ಲಿಯ ಸಕಾರ ಹಕಾರಗಳನ್ನು ತೆಗೆದುಬಿಟ್ಟರೆ ಸಕಾರೋತ್ತರವರ್ತಿಯಾದ ಓಕಾರವೂ, ಹಕಾರೋತ್ತರವರ್ತಿಯಾದ ಮಕಾರವು ಮಾತ್ರ ಉಳಿದು ಅವೆರಡೂ ಸೇರಿ ಪ್ರಕಾಶ ಓಂಕಾರ ಮಂತ್ರವಾಗುವದು. ಈ ಪ್ರಣವದ ಅನುಸಂಧಾನದಿಂದಲೇ ಶಿವಜೀವೈಕ್ಯಲಕ್ಷಣ, ಲಿಂಗಾಂಗ ಸಾಮರಸ್ಯರೂಪ ಮುಕ್ತಿಯು ದೊರೆಯುವದು.

" ಆದೊಡಾಲಿಸಿ ಕೇಳು ಭಕ್ತಿಯ ।
ಹಾದಿಗೊಂಡೇ ಕೀಲು ದಿಟ ಬೇ ।
ಕಾದುದೀತನು ತನುವಿಡಿದು ಕಾಬುದು ಸಮಸ್ತವನು ।
ಆದರಿಸಿಯೇ ತನುವ ಲಿಂಗೋ ।
ಪಾದಿಯಲಿ ಜೋಗೈಸಿಕೊಳುತಲಿ ।
ಸಾಧಿಸುವದು ಸಮಾಧಿಯನು ಬಸವಣ್ಣ ಕೇಳೆಂದ ॥

ವಿದ್ಯುತ್ತು ಲೋಹದ ತಂತಿಯ ಮೂಲಕವೇ ಕಂಡುಬರುವಂತೆ, ನಿರವಯವ, ನಿರಾಕಾರ, ಆತ್ಮನು ಶರೀರದ ಮೂಲಕವಾಗಿಯೇ ದೃಗ್ಗೋಚರನಾಗುವನು. ಒಡಲುಳ್ಳವಗೆ ಹಸಿವು,

ತೃಷೆ, ವ್ಯಸನ, ರೋಷದ್ವೇಷಾದಿಗಳು ಇರುವವಲ್ಲದೆ ಒಡಲಿಲ್ಲದ ಆತ್ಮನಿಗೆ ಅವಾವೂ ಇರುವದಿಲ್ಲ. ಅಗ್ನಿದೇವತೆಯು ಸಕಲದೇವಾಧಿದೇವತೆಗ್ಗಳಿಂದ ವಂದ್ಯನಾದ್ದರೂ ಕೀಳು ಕಬ್ಬಿಣದ ಸಹವಾಸ ಮಾಡಿದಾಗ ಆ ಅಗ್ನಿಯೇ ಕಮ್ಮಾರನ ಸುತ್ತಿಗೆಯ ಏಟುತಿನ್ನುವಂತೆ ಆತ್ಮನು ಅವಿದ್ಯಾವಶದಿಂದ ಪಂಚವಿಧ ಪಾಶಬಂಧಿತನಾಗಿ ಸಂಸಾರಕೂಪದಲ್ಲಿ ಬಿದ್ದು ಒದ್ದಾಡುವನು. ಅನಿಮಿತ್ತ ಬಾಂಧವರಾದ ಮಹಾನುಭಾವರು ಬದ್ಧನನ್ನು ಉದ್ಧರಿಸುವ ದಕ್ಕಾಗಿ ಪರಿಪರಿಯಿಂದ ವಿಡಂಬನಮಾಡಿ ಹೇಳಲು-

« ಒಡಲುಗೊಂಡವ ಹಸಿವ, ಒಡಲುಗೊಂಡವ ಹುಸಿವ,
ಒಡಲುಗೊಂಡವನೆಂದು ನೀನೆನ್ನ ಜಡಿದೊಮ್ಮೆ ನುಡಿಯದಿರಾ !
ನೀನೆನ್ನಂತೆ ಒಮ್ಮೆ ಒಡಲುಗೊಂಡು ನೋಡಾ ರಾಮನಾಥಾ ।

ಒಡಲುಳ್ಳವಗೆ ಏನೇನು ಆಡ್ಡಿ ಆತಂಕಗಳು ಬರುವವೆಂಬುದು ಒಡಲಿಲ್ಲದ ನಿನಗೇನು ಗೊತ್ತು ? ಅದೆಲ್ಲದರ ಅನುಭವ ಬೇಕಿದ್ದರೆ ನನ್ನಂತೆ ನೀನೂಒಮ್ಮೆ ಒಡಲುಧರಿಸಿ ನೋಡು ಎಂದು ದೇವರ ದಾಸಿಮಯ್ಯನು ದೇವರಿಗೇನೇ ಸವಾಲು ಹಾಕಿರುವನು. ಒಡಲುಳ್ಳವಗೆ ಬಾಧೆಗಳೆಷ್ಟೆಂಬುದನ್ನು ಶ್ರೀಮನ್ನಿಜಗುಣರು-

« ಮಾಯಕರ್ಮದಬಾಧೆ ಕಾಯಕರಣದಬಾಧೆ ।
ವಾಯು ವಿಷಯೇಂದ್ರಿಯದಬಾಧೆ ಶಂಕರ ।
ಹೇಯವಹ ಜನನ ಮರಣದಬಾಧೆ ತಾಪಸಮು ।
ದಾಯದತಿಬಾಧೆ ಎನಗೆ ಶಂಕರ ॥
ಹಸಿವು ತೃಷೆಗಳ ಬಾಧೆ ವ್ಯಸನವೇಳರಬಾಧೆ ।
ದೆಸೆಗೆಡಿಸುವರಿಕುಳದ ಬಾಧೆ ಶಂಕರ ॥
ಕುಸುಮ ಬಾಣನ ಬಾಧೆ ಮದಶೋಕ ಮೋಹರತಿ ।
ವಿಸರದತಿಬಾಧೆ ನೋಡು ಶಂಕರ ॥
...' ನೂರು ಸಾಸಿರಕೋಟಿ ಉಂಟುಶಂಕರ '

ಎಂದು ಎಣಿಸಿ ಗುಣಿಸಿ ಹೇಳಿರುವರು. ಎಣಿಕೆಯಿಲ್ಲದ ಈ ಬಾಧೆಗೊಳಗಾಗಿ ಮಾನವನು ಅಧಃಪತನವನ್ನು ಹೊಂದಲುಬಹುದು. ಇಲ್ಲವೆ ಕೋಹಂ, ಕುತಃ ಆಗತಃ ' ಕ್ವ ಗಂತವ್ಯಂ ', ನಾನಾರು, ನಾಬಂದುದೆಲ್ಲಿಂದ, ' ನನ್ನಜೀವನದ ಗುರಿಯೇನು ? ಎಂದು ವಿಚಾರಿಸಿ ಗುರುಬೋಧೆಪಡೆದು ,ಬಾಧೆಗಳೆಲ್ಲವನೀಗಿ ನಿಜಬೋಧಸ್ವರೂಪನೂ ಆಗಬವದು, ಓರ್ವ ಜೈನಪಂಡಿತನು –

« ಅನೇಕ ಗುಣಯುಕ್ತಸ್ಯ ಕಾಯಸ್ಯೈಕೋ ಮಹಾನ್‌ಗುಣಃ ।
ಯೋಯಥಾವರ್ತಯತ್ಯೇನಂ ತಂತಥೈವಾನುವರ್ತತೇ ॥ »

೮೪ ಲಕ್ಷ ಜೀವರಾಶಿಯಲ್ಲಿ ಮುಕುಟಮಣಿಯಂತಿರುವ ಈ ಮಾನವದೇಹವು ಅನೇಕಾನೇಕ ಅದ್ಭುತಗುಣಗಳಿಂದ ಕೂಡಿರುವದು. ಆ ಗುಣಗಳಲ್ಲಿ ಒಂದುಗುಣವಂತೂ ಅತೀ

ಮಹತ್ವವಿರುವದು.

ಈ ದೇಹವನ್ನು ಯಾರು ಏತಕ್ಕೆ ಉಪಯೋಗ ಮಾಡಿಕೊಳ್ಳುವರೋ ಅದಕ್ಕೇನೇ ಅದು ಹೊಂದಿಕೊಂಡು ಹೋಗುವದು. ಪಾಚಕನ ಕೈವಾಡದಿಂದ ಕಣಕದಲ್ಲಿ ಹೋಳಿಗೆ ವಡಿ, ಪಾಯಸ, ಪುರಿಗಳು ಆಗುವದಿಲ್ಲವೇ ? ಅಕ್ಕಸಾಲಿಗನ ಕೃತಿಕೌಶಲ್ಯದಿಂದ ಚಿನ್ನದ ಪಟ್ಟಿಯಲ್ಲಿ ಬೆರಳಲ್ಲಿಡುವ ಉಂಗುರ, ಕೊರಳಲ್ಲಿ ಧರಿಸುವ ಚೈನು, ಮುಂಗೈಯಲ್ಲಿ ಇಡುವ ಕಡಗ ಮುಂತಾದವುಗಳು ಮಾಡಲ್ಪಡುವದಿಲ್ಲವೇ ? ಪರಮಾರ್ಥ ಪಥದಲ್ಲಿ ಮುನ್ನಡೆವ ಸಾಧಕನ ಮಹಾಸಾಧನೆಯಿಂದ ಈ ದೇಹವು ಪ್ರಸಾದಕಾಯ, ಅವಯವರಹಿತ, ಹೆಜ್ಜೆ ನೆಳಲಿಲ್ಲದ ದೇಹ ವಜ್ರಕಾಯ ಇಲ್ಲವೆ-

" ಹಣವೆಲ್ಲಾ ಹೋದರೂ, ಹೆಣಬೀಳ ಹೊಡೆದರೂ, ।
ಮೊಣಕಾಲ ಗಣಿಕೆ ಮುರಿದರೂ । ಹಾದರದ ।
ಕುಣಿತ ಬಿಡರೆಂದ ಸರ್ವಜ್ಞ ॥ "

ಎಂಬುಕ್ತಿಯಂತೆ ದುರ್ವ್ಯಸನ ದುರಾಚಾರಗಳಿಗೆ ತುತ್ತಾಗಿ ಈ ದೇಹವು ಹಾಳಾಗಿ ಹೋಗ ಬಹುದು. ಮಗ್ಗೆಯ ಮಾಯಿದೇವರು –

" ಅನಿಮಿಷನಸ್ಥಿಮಾತ್ರ ತನುವಾಗಿರನೇ ?- ಬಸವಂ ತ್ವಗಾದಿಸಂ ।
ಜನಿತ ವಪುಷ್ಕನಾಗಿರನೆ ಯಲ್ಲಮನಂಶಕ ವರ್ಜಕಾಯನಾ ।
ಗಿ ನೆಳಲು ಹೆಜ್ಜೆಯಿಲ್ಲದಿರನೇ ಶಿವಯೋಗಸುಖ ಪ್ರಪೂರ್ಣವಾ ।
ಸನೆಯು ಶರೀರವೊಂದೆ ಪರಮಪ್ರಭುವೇ ಮಹದೈಪುರೀಶ್ವರಾ "

ಎಂದು ಈ ದೇಹದ ಬಗ್ಗೆ ಹೇಳಿರುವರು.

" ಆತ್ಮಾನಂ ರಥಿನಂವಿದ್ಧಿ ಶರೀರಂ ರಥಮೇವತು " " ಇದು ಶರೀರಂಕೌಂತೇಯ ಕ್ಷೇತ್ರಮಿತ್ಯಾಭಿಧೀಯತೇ " " ದೇಹೋದೇವಾಲಯಃಪ್ರೋಕ್ತಃ " " ಎನ್ನ ಕಾಯವು ಎನಗೆ ಉನ್ನತಾಲಯವಾಯ್ತು ಇನ್ನೆನಗೆ ಭಯವುಂಟೆ ಎಲೆಲಿಂಗವೇ " " ತನುವೆ ಪುಣ್ಯಕ್ಷೇತ್ರ " " ದೇಹವೆಂಬ ಅರಮನೆಯಲ್ಲಿ ಮಹಾ ಘನಲಿಂಗವೆಂಬ ಅರಸು " " ಕೂಡಲಸಂಗಮದೇವನ ಒಲಿಸಲು ಬಂದ ಪ್ರಸಾದಕಾಯವ ಕೆಡಿಸಲಾಗದು " " ಶ್ರೀಗಿರಿಯು ಸಂಕ್ಷೇತ್ರಕಿಂದು ಹೋಗಿ ಯಾತ್ರೆಯ ಮಾಡಿಬಂದೆ ಶ್ರೀಗಿರಿಯು ಶರೀರ ದೊಳಗುಂಟು " " ಗುಡಿಯ ನೋಡಿರಣ್ಣಾ ದೇಹದ ಗುಡಿಯ ನೋಡಿರಣ್ಣಾ "ಹೀಗೆ ಹಲವಾರು ಮಹಾನುಭಾವರು ತನುವಿನ ಘನತೆಯನ್ನು ಮನವಾರೆ ಹೊಗಳಿದ್ದಾರೆ, ಇನ್ನೂ ಕೆಲವರು –

" ಪಡೆವೆನೀನೆಂದಿಗೆ ಪರಮುಕ್ತಿ ಸುಖವನು ।
ಕೆಡುವ ಕಾಯದ ಮೋಹವನು ಮಾಡುವನು

« ಹಿಗ್ಗುವಿಯೂತಕೋ ಈ ದೇಹಕೆ ಹಿಗ್ಗುವಿಯಾತಕೋ ।
ಪಂಚವಿಂಶತಿ ತತ್ತ್ವ ಸಂಚಯದ ದೇಹವನು ।
ಹಂಚೆಂದು ಕಾಣಲರಿಯದಿರೆ । ಭವವುಂಡೆ
ಗೊಂಚಲಾಗಿಹುದು ಸರ್ವಜ್ಞ । »

« ಎಲುವಿನ ಪಂಜರ ಕರುಳಿನ ಜಾಳಿಗೆ
ಮಲಮೂತ್ರದ ಮಡು ಕೀಳ್ನರಗಳ ಬಲೆ ।
ಕಳಿರಕುತದ ಕುಳಿ .... ದುರ್ಗಂಧದ ತವರೀತನುವು.

ಎಂದು ಈ ತನುವನ್ನು ಹೀಗಳೆದಿರುವರು.

ಬಸವರಾಜನೇ ಈ ದೇಹವನ್ನು ಉಪವಾಸಾದಿಗಳಿಂದ ಕೊರಗಿಸದೇ, ಸೊರಗಿಸದೇ ಮರುಗಿಸದೇ, ಶೋಷಿಸದೇ ಪೌಷ್ಟಿಕಾಹಾರದಿಂದ ಪೋಷಿಸಿ ಅಂಗೈಯೊಳಗಿನ ಲಿಂಗದಂತೆ ಜೋಕೆ ಮಾಡಬೇಕು.

ಲೋಕದಲ್ಲಿ ಓರ್ವ ಸವಾರನು ತಾನೇರುವ ಕುದುರೆಗೆ ಧಾನ್ಯ ತಿನಿಸಿ, ನಡಿಗೆಯು ಕಲಿಸಿ, ಮೇಲೆ ಕುಳಿತು ಪಯಣ ಮಾಡುವಂತೆ, ಆತ್ಮನೆಂಬ ಸವಾರನು ತನ್ನ ವಾಹನವಾದ ಈ ದೇಹವೆಂಬ ಕುದುರೆಯನ್ನು ಉಪವಾಸವಿರಿಸದೇ ಪೌಷ್ಟಿಕಾಹಾರದಿಂದ ಬಲಶಾಲಿಯಾ ಯನ್ನಾಗಿ ಮಾಡಿ ಅದರಮೇಲೆ ಸವಾರಿಮಾಡಿ ಜಾಗರೂಕತೆಯಿಂದ ಮುಕ್ತಿಮಂದಿರದತ್ತ ಪಯಣಮಾಡಬೇಕು.

ಒಂದು ಪಟ್ಟಣದ ಸುತ್ತು ಶತ್ರುಗಳ ಪ್ರವೇಶವಾಗದಂತೆ ಕೋಟೆ ಇಲ್ಲವೆ ವೈರಿಗಳು ಬಿಡುವ ಕೂರಸಿಗಳು ತಾಗದಂತೆ ಮೈಗೆ ಒಂದು ಕವಚವಿರುವಂತೆ ಕಾಮಾದಿ ಷಡ್ರಿಪುಗಳು ಒಳಗೆ ನುಗ್ಗದಿರಲು ಅಥವಾ ಬಿಟ್ಟ ಬಾಣಗಳು ತಾಕದಿರಲು ಅಷ್ಟಾವರಣಗಳು ಕೋಟೆ ಅಥವಾ ಧರಿಸುವ ಕವಚವಿದ್ದಂತೆ.

« ಸರ್ವೇಷು ಗಾತ್ರೇಷು ಶಿರಃ ಪ್ರಧಾನಂ » ಎಂಬಂತೆ « ಸರ್ವೇಂದ್ರಿಯಾಣಾಂ ನಯನಂ ಪ್ರಧಾನಂ » « ಇಂದ್ರಿಯಾಣಾಂ ಮನೋನಾಥಃ » ಎಂಬುಕ್ತಿಯಂತೆ ಎಲ್ಲ ಇಂದ್ರಿಯಗಳಿಗೂ ಮನಸ್ಸೇ ಅಧಿಪತಿಯು. ಸವಾರನು ಕುದುರೆಗೆ ಕಡಿವಾಣಹಾಕಿ ನಡೆಯಿಸುವಂತೆ ವಿವೇಕಿಯಾದ ಮಾನವನು ಮನಸ್ಸೆಂಬ ಕುದುರೆಗೆ ಸಂಯಮವೆಂಬ ಕಡಿವಾಣ ಹಾಕಿ ಜಾಗರೂಕತೆಯಿಂದ ಸಾಗಬೇಕು.

« ಮನವೆಂಬ ಮರ್ಕಟವ ತಡೆಯಲಾರೆನುದೇವ ।
ಎನಿತಿದರ ಚಪಲ ಚೇಷ್ಟೆಗಳ ವರ್ಣಿಸಲಿ »
« ಮನವೆಂಬ ಮರ್ಕಟನು ತನುವೆಂಬ ವೃಕ್ಷವನೇರಿ »
« ಅಂದಣವನೇರಿದ ಸೊಣಗನಂತೆ ಎನ್ನ ಬಾಳುವೆ »
« ಕೋಗಿಲೆ ಚೆಲ್ವ ಕೋಗಿಲೆ ಮುದ್ದು ಕೋಗಿಲೆ ಜಾಣ ಕೋಗಿಲೆ »
« ಮನವೇ ಸರ್ಪ ತನುವೇ ಹೇಳಿಗೆ »

" ಮನವೆಂಬ ಗಿಳಿಯನೊಯ್ಯಾರದೊಳು ಮೆಲ್ಲನೆ ಮುದ್ದು ನುಡಿ
ಗಲಿಸಲೆಮಣಿನಿ ... "

" ರಸಸ್ಯ ಮನಸಶ್ಚೈವ ಚಂಚಲತ್ವಂ ಸ್ವಭಾವತಃ ।
ರಸೋಬದ್ಧೋ ಮನೋಬದ್ಧಂ ಕಿಂನಸಿಧ್ಯತಿ ಭೂತಲೇ ॥ "

ಮನಸ್ಸಿಗೆ ಕಪಿ, ಶುನಕ, ಕೋಗಿಲೆ, ಗಿಳಿ, ಸರ್ಪ, ಹೊಯ್ದಾಡುವಪಾದರಸ ಮುಂತಾ
ದವುಗಳ ದೃಷ್ಟಾಂತವಿದೆ.

ಇಲ್ಲಿ ಚಾಮರಸನು ಮನಸ್ಸೆಂಬ ಹಕ್ಕಿಗೆ ಕಾಲುಗಳಾವವು ? ರೆಕ್ಕೆಗಳಾವವು ? ಅರೆ
ಕ್ಷಣದಲ್ಲಿ ಬ್ರಹ್ಮಾಂಡವನ್ನೇ ಸುತ್ತಿಬರುವ ಈ ಹಕ್ಕಿಯನ್ನು ಒಂದೆಡೆಗೆ ನಿಲ್ಲಿಸುವ ಬಗೆ
ಯಾವುದು ? ಮುಂತಾದುದರ ಸ್ಪಷ್ಟಚಿತ್ರಣವನ್ನು ಮುಮುಕ್ಷುಗಳಮುಂದಿಟ್ಟಿರುವನು.

" ಹೇಳುವೊಡೆ ಮನವೆಂಬ ಹಕ್ಕಿಗೆ ।
ಕಾಲುಗಳೆಲ್ಲೈ ತೊಳಲುತಿಹಕ ।
ಣ್ಣಾಲಿಗಳು ದಿಟವದಕೆ ಪಕ್ಕಗಳೀಡೆ ಪಿಂಗಳದ ।
ಗಾಳಿಯಾಗಿಹುದಂತುಕಾರಣ ।
ಫಾಲಿಯೇ ಸಾಧನಕೆ ಸಾಧನ ।
ಮೂಲವನು ನಿಲಿಸುವನೆ ಭಕ್ತನು ಬಸವಕೇಳೆಂದ ॥ "
ಆಲಿನಿಂದೊಡೆ ಸುಳಿದು ಸೂಸುವ ।
ಗಾಳಿ ನಿಲವ್ರುದು ಗಾಳಿ ನಿಲೆಮನ ।
ಮೇಲೆ ನಿಲವುದು ಮನವು ನಿಂದೊಡೆ ಬಿಂದು ನಿಂದಿಹುದು ॥
ಲೀಲೆಯಿಂದಾ ಬಿಂದು ನಿಂದೊಡೆ ।
ಕಾಲಕರ್ಮವ ಗೆದ್ದು ಮಾಯೆಯ ।
ಹೇಳಹೆಸರಿಲ್ಲೆನಿಸಬಹುದೈ ಬಸವ ಕೇಳೆಂದ ॥ "

ದಶವಿಧ ಇಂದ್ರಿಯಗಳಲ್ಲಿ ಜ್ಞಾನೇಂದ್ರೀಯವೆನಿಸಿದ ಕಣ್ಣೇ ಮಹತ್ವದ್ದು. ಶ್ರವಣಾದಿ
ವಿಷಯಗಳಿಂದ ಮನಸ್ಸಿನ ಮೇಲೆ ವಿವಿಧ ಪರಿಣಾಮಗಳಾಗುತ್ತಿದ್ದರೂ ವೀಕ್ಷಣದಿಂದಾಗುವ
ಪರಿಣಾಮವು ಅತೀಮಹತ್ವದ್ದು. ಅಂತೆಯೇ " ನಯನಂ ಪ್ರಧಾನಂ " ಎಂದು
ಹೇಳಲಾಗಿದೆ. ಒಂದೇ ಕತ್ತಿಯು ವೀರನ ಜಾಣ್ಮೆಯಿಂದ ಶತ್ರು ಹನನಕ್ಕೂ ಮೂರ್ಖನಿಂದ
ಆತ್ಮಹನನಕ್ಕೂ ಕಾರಣವಾದಂತೆ, ಒಂದೇ ಕಣ್ಣು ಸದುಪಯೋಗದಿಂದ ಮುಕ್ಕಣ್ಣನ ಸಾಕ್ಷಾ
ತ್ಕಾರಕ್ಕೂ ದುರುಪಯೋಗದಿಂದ ಮಣ್ಣು ಮುಕ್ಕುವದಕ್ಕೂ ಸಾಧನವಾಗುತ್ತದೆ, ಚಿತ್ತ
ಚಲ್ಲಟ ಮಾಡುವವನಿತಾದಿ ವಿಷಯುಗಳನ್ನುನೋಡಿ ನನ್ನ ಕಣ್ಣುಗಳು ನನ್ನನ್ನು ಅಧೋ
ಮಾರ್ಗಕ್ಕೆ ಒಯ್ಯುತ್ತಿದ್ದರೆ ಆ ಕಣ್ಣುಗಳೇ ನನಗೆಬೇಡ, ನನ್ನನ್ನು ಕುರುಡನನ್ನಾಗಿ ಮಾಡು
ಎಂದು ಶ್ರೀ ಬಸವೇಶ್ವರರು "ಸುತ್ತಿ ಸುಳಿದು ನೋಡದಂತೆ ಅಂಧನ ಮಾಡಯ್ಯ ತಂದೆ"
ಎಂಬವಚನದಿಂದ ಸಂಗಮನಾಥನಲ್ಲಿ ಅಂಗಲಾಚಿ ಪ್ರಾರ್ಥಿಸಿದ್ದಾರೆ. ಕವಿಸಾರ್ವಭೌಮ
ನಾದ ಹರಿಹರಕವಿಯು ತನ್ನ ಪಂಪಾಶತಕದಲ್ಲಿ –

« ನೋಡದ ಕಣ್ಣುಗಳೇಕೆ ? ಸಲೆ ಕೇಳದ ಕರ್ಣವದೇಕೆ
ಭಕ್ತಿಯಿಂ ಪಾಡದ ಬಾಯದೇಕೆ ? »...

ಪಂಪಾಪತಿ ವಿರುಪಾಕ್ಷನನ್ನು ನೋಡದ ಕಣ್ಣುಗಳೇ ಬೇಡ ಎಂದು ಹಾಡಿರುವನು.

ತತ್ತ್ವಶಾಸ್ತ್ರದಲ್ಲಿ ನೋಟಕ್ಕೆ ಬಹಳ ಮಹತ್ವವುಂಟು. ಗುರುವು ಶಿಷ್ಯನಿಗೆ ಕರದಿಷ್ಟ ಲಿಂಗವನ್ನು ಕರುಣಿಸುವಾಗ ವೇಧಾ, ಕ್ರಿಯಾ, ಮಂತ್ರೀ ಎಂದು ಮೂರು ಬಗೆಯದೀಕ್ಷೆ ಮಾಡುವನಷ್ಟೇ ! ಶಿಷ್ಯನ ಭಾವಸ್ಥಲದಿಂದ ಮನಸ್ಥಲಕ್ಕೂ. ಮನಸ್ಥಲದಿಂದ ನೇತ್ರ ಸ್ಥಲಕ್ಕೂ, ನೇತ್ರಸ್ಥಲದಿಂದ ಕರಸ್ಥಲಕ್ಕೂ ತರುವಲ್ಲಿ ನೇತ್ರಕ್ಕೆಮಹತ್ವವಿದೆ. ನನ್ನನ್ನು ಮುತ್ತಿದ ಮಾಯಾ ಮೋಹಾದಿಗಳನ್ನು ಅಗ್ನಿನೇತ್ರ, ಸೂರ್ಯನೇತ್ರ, ಚಂದ್ರನೇತ್ರ ಗಳಿಂದ ನೋಡಿ ನನ್ನನ್ನುಪರಿಶುದ್ಧನನ್ನಾಗಿಮಾಡು ಎಂದು ಶ್ರೀಮನ್ನಿಜಗುಣ ಶಿವಯೋಗಿಗಳು –

« ನೋಡಲಾಗದೇ ದೇವನೋಡಲಾಗದೇ ।
ಕೂಡೆ ನಿನ್ನ ದಿಟ್ಟಿ ಮೂರು ನಾಡೆಲೇಸು ಮಾಡಲೆನ್ನ ॥ »

ಎಂದು ಶಿವನಲ್ಲಿ ಮೊರೆಯಿಟ್ಟಿರುವರು.

« ನಿಮ್ಮನೋಟವನಂತಸುಖ ಕೂಟಪರಮಸುಖ
ಅವುಟುಕೋಟಿರೋಮಂಗಳೂ ಕಂಗಳಾಗಿ ನೋಡುತಿದ್ದೆನು.
ಕೂಡಲಸಂಗಮದೇವಯ್ಯನಿಮ್ಮ ನೋಡಿ ನೋಡಿ, ಮನದಲ್ಲಿ
ರತಿಹುಟ್ಟಿ ನಿಮಿರ್ದುವೆನ್ನಕಳೆಗಳು »

« ಕೂಡಲಸಂಗನ ದರ್ಶನ ಸ್ಪರ್ಶನದಿಂದ ಮನವೊಲಿದು
ನೆರೆವಭರವನೇನ ಹೇಳುವೆನಯ್ಯಾ »

« ಅಂಗೈಯೊಳಗಣ ಲಿಂಗವ ನೋಡುತ್ತ, ಕಂಗಳು ಕಡೆಗೋಡಿ
ವರಿಯುತ್ತ, ಸುರಿಯುತ್ತ ಎಂದಿಪ್ಪೆನೋ, ನೋಟವೇ ಪ್ರಾಣ
ವಾಗಿ ಎಂದಿಪ್ಪೆನೋ ? ಕೂಟವೇ ಪ್ರಾಣವಾಗಿ ಎಂದಿಪ್ಪೆನೋ !
ಎನ್ನಂಗವಿಕಾರದ ಸಂಗವಳಿದು ಕೂಡಲ ಸಂಗಯ್ಯ, ಲಿಂಗಯ್ಯ
ಲಿಂಗ, ಲಿಂಗ, ಲಿಂಗವೆನ್ನುತ್ತ »

ಎಂದು ಮುಂತಾಗಿ ಶ್ರೀಬಸವೇಶ್ವರರು ನೋಟದಮಹತ್ವವನ್ನು ಬಿತ್ತರಿಸಿರುವರು.

ವೀರಶೈವ ಸಿದ್ಧಾಂತದಲ್ಲಿ ಲಿಂಗ ಸಂಸ್ಮರಣ, ನಿರೀಕ್ಷಣ, ಅರ್ಚನ, ಧಾರಣ ಎಂದು ನಾಲ್ಕು ಪ್ರಕಾರದ ವಿಧಾನಗಳಿದ್ದು ಅವುಗಳಲ್ಲಿ ಲಿಂಗನಿರೀಕ್ಷಣೆಗೆ ತ್ರಾಟಕಯೋಗವೆಂದು ಹೇಳುವರು. ಶ್ರೀಮನ್ನಿಜಗುಣಶಿವಯೋಗಿಗಳು–

« ಆಸನಸ್ಥಿರವಾಗಿ ಅಸುಮನವೆರೆದಕ್ಷಿ । ನಾಸಾಗ್ರದಲ್ಲಿ ನಿಂದೊಡೆ ಮುಕ್ತಿ »
ಎಂದು ಹೇಳಿರುವರು.

ಯೋಗಶಾಸ್ತ್ರದಲ್ಲಿ ಪೂರ್ಣಿಮಾದೃಷ್ಟಿ ಅಮವಾಸ್ಯಾದೃಷ್ಟಿ ಅರ್ಧನಿಮೀಲನದೃಷ್ಟಿ, ಭ್ರೂಮಧ್ಯದೃಷ್ಟಿ, ನಾಸಿಕಾಗ್ರದೃಷ್ಟಿ ಮೊದಲಾಗಿ ದೃಷ್ಟಿಯೊಳಗೆ ವೈವಿಧ್ಯತೆಯುಂಟು. ಗುರುವು ಕರದಲ್ಲಿ ಕರುಣಿಸಿಕೊಟ್ಟ ಪರತರ ಶಿವಲಿಂಗವನ್ನು ಅನಿಮಿಷ ದೃಷ್ಟಿಯಿಂದ ಸುದೀರ್ಘಕಾಲ ನಿರೀಕ್ಷಿಸುತ್ತ ಕುಳಿತರೆ ಪ್ರಾಣಾಪಾನವಾಯುಗಳು ತಮ್ಮ ಸುಳಿದಾಟವನ್ನು ನಿಲ್ಲಿಸುವವು. ಗಾಳಿನಿಂದಲ್ಲಿ ವಾಯು ತತ್ತ್ವದಿಂದಾದ ಮನಸ್ಸು ನಿರ್ವಾತದೀಪದಂತೆ, ನಿಸ್ತರಂಗಸಮುದ್ರದಂತೆ ನಿಶ್ಚಲವಾಗುವದು. ಮಲವಿಕ್ಷೇಪಾದಿ ದೋಷಗಳಿಲ್ಲದ ಚಿತ್ತದಲ್ಲಿ ಲಿಂಗಸ್ವರೂಪವು ಸುಸ್ಪಷ್ಟವಾಗಿ ತೋರುವದು. ಲಿಂಗಧ್ಯಾನದಲ್ಲಿ ಮನಸ್ಸು ತಲ್ಲೀನವಾಗಲು ಕಾಲ-ಕರ್ಮ-ಮಾಯೆಗಳು ದಿಕ್ಕೆಟ್ಟುಹೋಗುವವು. ಇದನ್ನೇ ನಿಜಗುಣ ಶಿವಯೋಗಿಗಳು -

" ಕಾಲಕರ್ಮ ಮಾಯೆಯೆಂಬವನು ಗೆಲಲಹುದು ವಿಶಾಲಮತಿಗಳು ಶಿವಭಕ್ತಿಯುತರಾಗಿರೆ" ಎಂದೂ, ವಚನಕಾರರು -

" ಸಕಲೇಂದ್ರಿಯಂಗಳಲ್ಲಿ ವಿಕಾರಿಸುವ ಮನವ
ಸೆಳೆದು ನಿಂದಾತ ಸುಖಿ ಪಂಚೇಂದ್ರಿಯಗಳಿಚ್ಛೆಯಲ್ಲಿ
ಕೀಲುಮನಂಗೊಂಡು ಸುಳಿವಾತ ದುಃಖಿ,
ಮನಸ್ಸು ಬಹಿರ್ಮುಖವಾಗಲು ಮಾಯಾ ಪ್ರಪಂಚಿ
ಮನವಂತರ್ಮುಖವಾದರೆ ಅವಿರಳಜ್ಞಾನಿ
ಮನವು ಮಹದಲ್ಲಿ ನಿಂದಿರಲಾತ ಮುಕ್ತನು
ಮನೋರ್ಲಯವಾದರೆ ಸೌರಾಷ್ಟ್ರಸೋಮೇಶ್ವರ ಲಿಂಗದಲ್ಲಿ ಅಭೇದ್ಯನು

" ಮನವೆಂಬುದು ಬೇರಿಲ್ಲ, ಮಹಾದೇವನ ಮಹಾಅರುಹುನೋಡಾ,
ಸಂಕಲ್ಪ ವಿಕಲ್ಪಗಳಧರಿಸಿದಲ್ಲಿ ಮನವೆನಿಸಿತ್ತು
ಅದು ಅಳಿದಲ್ಲಿ ಮಹಾಜ್ಞಾನವೆನಿಸಿತ್ತು.
ಅಳಿದು ಭಾವತಲೆದೋರಿದಲ್ಲಿ ಕಪಿಲಸಿದ್ಧ ಮಲ್ಲಿಕಾರ್ಜುನನೆನಿಸಿತು

ಎಂಬ ವಚನಗಳಿಂದ ಸ್ಫುಟವಾಗಿ ಉದಾಹರಿಸಿರುವರು.

ಗುರು ಭಕ್ತಿ ಸಂಪನ್ನರಾದ ಮೈಸೂರುಮಹಾರಾಜರು ಒಮ್ಮೆ ಬಾಲಲೀಲಾ ಮಹಾಂತಶಿವಯೋಗಿಗಳನ್ನು ತಮ್ಮ ಅರಮನೆಗೆ ಗೌರವಪುರಸ್ಸರವಾಗಿ ಬರಮಾಡಿಕೊಂಡು ಪಾದಪೂಜೆ ನೆರವೇರಿಸಿದರು. ಅರಮನೆಯೊಳಗಿನ ಮಂಗಲಾಂಗನೆಯರೆಲ್ಲ ನೆರೆದು ಮುತ್ತಿನಾರತಿಪಿಡಿದು ಬೆಳಗುವಾಗ ಅರಿವಿನ ಅರಮನೆ ( ಜ್ಞಾನಮಂಟಪ )ಯಲ್ಲಿದ್ದ ಶಿವಯೋಗಿಗಳು -

" ಜ್ಯೋಕೆ ಕಂಡ್ಯಾ ಆತ್ಮಾ ಜೋಕೆ ।
ಕಾಕುಸ್ತ್ರೀಯರ ಬಳಗ ಅನೇಕ ಬರುತಿಹದಿಲ್ಲಿ ॥
ನೋಡದೇ ನುಡಿಸದೆ ಮಾಡಬಹುದುವಿರತಿ ।
ಮಾಡಸರಯಲು ಬಹುದು ಪ್ರೇಮ ರತಿಯಿರಲಿ "

ಚಿತ್ತಸ್ಥೈರ್ಯವನ್ನು ಧೂಳೀಪಟ ಮಾಡುವ ವನಿತಾದಿವಿಷಯಗಳನ್ನು ನೋಡದೇ ಮಾತಾಡದೇ ಅವುಗಳ ಸನಿಹದಲ್ಲಿರದೇ ವೈರಾಗ್ಯ ಸಾಧಿಸಬಹುದು. ಆದರೆ ಚಿತ್ತಪಲ್ಲಟ ಮಾಡುವ ಪ್ರಬಲ ವನಿತಾದಿವಿಷಯಗಳು ಸನಿಹದಲ್ಲಿದ್ದಾಗ ನಿರ್ವಿಕಾರಿಯಾಗಿ ವೈರಾಗ್ಯ ದಿಂದಿರುವದು ಕಠಿಣ. ಈಗ ಕಣ್ಮುಂದೆ ಮನಮೋಹಕ ವಿಷಯಗಳು ತಾಂಡವನಾಟ್ಯ ಮಾಡುತ್ತಲಿವೆ. ಈಗ ನಿನ್ನದು ಸತ್ವ ಪರೀಕ್ಷಾಕಾಲವಿದೆ. ಜಾಗರೂಕನಾಗಿರು, ಎಚ್ಚರದಿಂದಿರು, ಸಾವಧಾನ, ಸಾವಧಾನ ಎಂದು ತಮ್ಮಷ್ಟಕ್ಕೆ ತಾವೇ ಹೇಳಿಕೊಂಡಿರುವರು.

ವಿಶಾಲ ಗಗನದಲ್ಲಿ ಗರಿಗೆದರಿಹಾರಾಡುವ ಹಕ್ಕಿಯನ್ನು ಹಿಡಿದು ಒತ್ತಟ್ಟಿಗೆ ನಿಲ್ಲಿಸಬೇಕಾದರೆ ಅದರ ಕಾಲುಗಳನ್ನು ಹಿಡಿದು ನಿಲ್ಲಿಸುವದು ಸುಲಭ. ಪಿಂಡಾಂಡವೆಂಬ ಗೂಡಿನಲ್ಲಿದ್ದು ಬ್ರಹ್ಮಾಂಡದ ತುಂಬ ಅರೆನಿಮಿಷದಲ್ಲಿ ಹಾರಾಡಿಬರುವ ಈ ಮನವೆಂಬ ವಿಚಿತ್ರ ಪಕ್ಷಿಯನ್ನು ಒತ್ತಟ್ಟಿಗೆ ನಿಲ್ಲಿಸಲು ಅದರ ಎರಡು ಕಣ್ಣುಗಳನ್ನು ಲಿಂಗದಲ್ಲಿ ನಿಲ್ಲಿಸಬೇಕು. ಇದನ್ನೇ ಚಾಮರಸನು –

" ಆಲಿನಿಂದೊಡೆ ಸುಳಿದು ಸೂಸುವ ಗಾಳಿ ನಿಲುವದು ।
ಗಾಳಿನಿಲೆ ಮನ ಮೇಲೆ ನಿಲುವದು ಮನವು
ನಿಂದೊಡೆ ಬಿಂದು ನಿಂದಿಹುದು

ಎಂದು ಹೇಳಿರುವನು. ಮುಗ್ಗೆಯಮಾಯಿದೇವರೂ ತಮ್ಮ ಶತಕತ್ರಯದಲ್ಲಿ–

" ಲಿಂಗದೊಳಿಟ್ಟ ದೃಷ್ಟಿ ನಿಜದೃಷ್ಟಿಯೊಳಿರ್ದ ಮನಂ ಮನಸ್ಸಿನೊ।
ಳ್ಪಿಂಗದೆ ನಿಂದಭಾವಮದರೊಳ್ನೆಲೆಗೊಂಡ ಶಿವಾತ್ಮಲಿಂಗವಾ ।
ಲಿಂಗದೊಳಿರ್ದು ನಿತ್ಯಸುಖಿಯಾಗಿ ವಿರಾಜಿಸುವಂಗೆ ಬಾಹ್ಯಕ ।
ರ್ಮಂಗಳವೇತಕಯ್ಯ ಪರಮಪ್ರಭುವೇ ಮಹದೈಪುರೀಶ್ವರಾ ॥ "

ಶ್ರೀ ಗುರುವು ಕರುಣಿಸಿದ ಪರಶಿವಲಿಂಗದಲ್ಲಿ ದೃಷ್ಟಿಯನ್ನು ಚಲಿಸದೇ ನಿಲ್ಲಿಸಲಾಗಿ ಆ ದೃಷ್ಟಿಯಲ್ಲಿ ಮನಸ್ಸು ನಿಲ್ಲುವದು. ಕದಲದೇ ನಿಂತ ಸುಮನದಲ್ಲಿ ಸದ್ಭಾವವು ಸ್ಥಿರವಾಗಿ ನಿಲ್ಲುವದು. ಸುಸ್ಥಿರವಾದ ಆ ಸದ್ಭಾವದಲ್ಲಿ ಪರಮಾತ್ಮರೂಪ ಭಾವಲಿಂಗವು ನೆಲೆಗೊಳ್ಳುವದು. ಆ ಲಿಂಗದಲ್ಲಿ ಸಾಮರಸ್ಯವನ್ನು ಪಡೆದು ನಿತ್ಯಸುಖಿಯಾಗುವನು. ಅವನಿಗೆ ಕಾಲ ಕರ್ಮ ಮಾಯೆಗಳ ಕಾಟವಿಲ್ಲ. ಇದನ್ನೇ ಹಾನಗಲ್ಲ ಕುಮಾರಶ್ರೀ ಗಳವರು –

" ಮನವನು ಪರಿಪಾಲಿಸು ನೀ ಜ್ಞಾನಸದಾನ ಮಾಡಿ ಶಿವ ।
ಚಿನುಮಯ ಪ್ರಭುಮಾಯಾರಿ ಮಾರಾರಿಕಾಲಾರಿ ॥ ಪ ॥
ನೇತ್ರದಾಟನಿಲ್ಲಿಸಿ ಸೂತ್ರದಿಯಸುಮತಿಯಗೂಡಿ ।
ಗಾತ್ರತ್ರಯವಳಿಯುತೆ ಚಿತ್ತದ ಚಿದ್ಬಿಂದು ತೋರಿ ॥

ಎಂದು ಪದ್ಯದಿಂದ ಹೇಳಿರುವರು,

ಸ್ವಾಮಿ ವಿವೇಕಾನಂದರು ಸರ್ವಧರ್ಮ ಸಮ್ಮೇಲನಕ್ಕಾಗಿ ವಿದೇಶಕ್ಕೆ ಹೋದಾಗ

ಜಾಗತಿಕ ಸೌಂದರ್ಯ ಸ್ಪರ್ಧೆಯಲ್ಲಿ ಪ್ರಥಮ ಸ್ಥಾನಗಳಿಸಿದ ಓರ್ವ ದಿವ್ಯಸುಂದರಿಯನ್ನು ಕಣ್ಣೆತ್ತಿ ನೋಡದ ಸ್ವಾಮೀಜಿಯವರು ಅಂದು ವಿವೇಕವಿಲ್ಲದೆ ಆ ಸುಂದರಿಯನ್ನು ನೋಡುವದನ್ನು ಕಂಡು ಸುತ್ತು ಮುತ್ತುಕುಳಿತ ಹಲವಾರು ಶಿಷ್ಯರು ಬೆರಗಾದರು. ಗುರುಗಳ ಬಗೆಗೆ ಏನೇನೋ ವಿಪರೀತ ಭಾವನೆಗಳನ್ನು ತಾಳಿದರು; ಅವರೊಳಗೊಬ್ಬ ದಿಟ್ಟ ಶಿಷ್ಯನು ಗಟ್ಟಿಮನಸ್ಸುಮಾಡಿ ಸ್ವಾಮೀಜಿಯವರನ್ನು ಕುರಿತು–ಗುರುಗಳೇ ಪರಸ್ತ್ರೀಯರನ್ನು ಕಣ್ಣೆತ್ತಿ ನೋಡಬಾರದೆಂದು ಉಪದೇಶಿಸುವ ನೀವೇ ಆ ಸುಂದರಿಯನ್ನು ಒಂದೇಸವನೆ ಏಕೆ ದಿಟ್ಟಿಸಿ ನೋಡುವಿರಿ ಎಂದು ಪ್ರಶ್ನಿಸಿದನು. ಆಗ ಸ್ವಾಮೀಜಿಯವರು ಪರಸ್ತ್ರೀಯರನ್ನು ನೋಡಬಾರದೆಂದು ಹೇಳಿದ್ದುನಿಜ. ನಾನೀಗ ನೋಡುತ್ತಿರುವದು ಪರಸ್ತ್ರೀಯ ಅನುಪಮ ಸೌಂದರ್ಯವನಲ್ಲ; ಆ ದೈಹಿಕ ಸೌಂದರ್ಯದಾಚೆ ಬೌದ್ಧಿಕ ಸೌಂದರ್ಯ, ಮಾನಸಿಕಸೌಂದರ್ಯ, ಆತ್ಮಿಕಸೌಂದರ್ಯಗಳುಂಟು. ಈ ದೈಹಿಕ ಸೌಂದರ್ಯವೇ ಕಣ್ಮನಗಳನ್ನು ಸೆಳೆದು ನನ್ನನ್ನು ಪರವಶನನ್ನಾಗಿ ಮಾಡಿವೆ. 'ಸತ್ಯಂ ಶಿವಂ ಸುಂದರಂ' ಎಂದೆನಿಸಿದ ಆ ಮಹಾವಿಭುವಿನ ಸೌಂದರ್ಯ ಸಾಗರದೊಳಗಿನ ಒಂದು ಬಿಂದು ಮಾತ್ರ ಈ ದೈಹಿಕ ಸೌಂದರ್ಯ. ಈ ಸೌಂದರ್ಯ ನಿರ್ಮಾಪಕ, ಕರ್ತಾರನಾದ ಆ ದೇವಾಧಿದೇವನು ಎನಿತು ಸುಂದರನಿರಬಹುದು ! ಯಂತ್ರದೊಳಗಿದ್ದು ಯಂತ್ರ ನಡೆಯಿಸುವ ಯಂತ್ರವಾಹಕನಂತೆ, ಈ ದೇಹದಲ್ಲಿದ್ದು ದೇಹದ ಸಕಲಕ್ರಿಯೆಗಳಿಗೂ ಪ್ರೇರಕನಾದ ಆ ಪರಮಾತ್ಮನು ಎಷ್ಟು ಸುಂದರನಾಗಿರಬಹುದು ? ಈ ದೈಹಿಕ ಸಾಂತ, ಪರಿಮಿತ ಸೌಂದರ್ಯದ ಮುಖದಿಂದ ದೇಹಸ್ಥ ಪರಮಾತ್ಮನ ಅನಂತ ಅಪರಿಮಿತ ಸೌಂದರ್ಯವನ್ನು ನೋಡುತ್ತಿರುವೆನು ಎಂದು ಉತ್ತರಿಸಲು ಜಿಜ್ಞಾಸುಗಳಾದ ಶಿಷ್ಯರೆಲ್ಲರೂ ತಮ್ಮ ತಮ್ಮಪ್ರಶ್ನೆಗೆ ಸಮಂಜಸ ಉತ್ತರ ದೊರೆತದ್ದರಿಂದ ಸಮಾಧಾನಹೊಂದಿದರು. ಮನೋವಿಕಾರವನ್ನುಂಟುಮಾಡುವ ಈ ದೈಹಿಕ ಸೌಂದರ್ಯದ ನಿರೀಕ್ಷಣೆಯಿಂದ ಕಣ್ಣು ಅಧೋಗತಿಗೂ, ಸರ್ವಸೌಂದರ್ಯಗಳಿಗೂ ಮೂಲಕಾರಣನಾದ ಆ ದಿವ್ಯಾತ್ಮನ ಸೌಂದರ್ಯದ ಸಂದರ್ಶನದಿಂದ ಅದೇಕಣ್ಣು ಊರ್ಧ್ವಗತಿಗೂ ಕಾರಣವಾಗುತ್ತದೆ, ಕೆಟ್ಟವಿಷಯಗಳನ್ನು ನೋಡಿ ನಿನ್ನಕಣ್ಣು ನಿನ್ನನ್ನು ನರಕಕೂಪದಲ್ಲಿ ಬೀಳುವಂತೆ ಮಾಡುತ್ತಿದ್ದರೆ ಆ ಕಣ್ಣನ್ನೇ ಕಿತ್ತುಬಿಡು ಎಂದು ಬೈಬಲದಲ್ಲಿ ಒಂದು ಉಕ್ತಿಯುಂಟು.

ಒ೯ನೆಯಗತಿ

## ಗೋರಕ್ಷವೃತ್ತಾಂತ

ಮಾಯಾಕೋಲಾಹಲ ಎಂಬ ಬಿರುದುಪಡೆದು ಪರಸ್ಥಲದಲ್ಲಿದ್ದು ಮಂದ ಮಾರುತವು ಮೆಲ್ಲಮೆಲ್ಲನೆ ಬೀಸಿ ಕಾಸಾರದ ಕಮಲಗಳನ್ನು ಅರಳಿಸುವಂತೆ ಸಲ್ಲೀಲೆಯಿಂದ ಎಲ್ಲೆಡೆಗೆ ಮೆಲ್ಲಡಿಯಿಡುತ್ತ ಬಲ್ಲಿದ ಭಕ್ತರ ಹೃತ್ಕಮಲಗಳನ್ನು ಅರಳಿಸುವ ಅಲ್ಲಮಪ್ರಭುವು ಮಾಡುವ ಮಾಟದಿಂದಲೇ ಶಿವನಲ್ಲಿ ಕೂಡುವ ಮರ್ಮವರಿಯದೇ ಕೋಟಲೆಗೊಳ್ಳುವ ಗೊಗ್ಗಯ್ಯನಿಗೆ —

« ತನುವ ತೋಂಟವ ಮಾಡಿ ಮನವ ಗುದ್ದಲಿಯು ಮಾಡಿ
ಅಗಿದು ಕಳೆದೆನಯ್ಯಾ ಭ್ರಾಂತಿಯ ಬೇರ, ।
ಒಡೆದು ಸಂಸಾರದ ಹೆಂಟೆಯುಬಗಿದು ಬಿತ್ತಿದೆನಯ್ಯಾ ಬ್ರಹ್ಮಬೀಜವ»

ಎಂದು ಮುಂತಾಗಿ ಪಾರಮಾರ್ಥಿಕ ತೋಟಮಾಡುವದನ್ನು ತಿಳಿಸಿ, ಅಣ್ಣನ ಅಗಲುವಿಕೆ ಯಿಂದ ಕಣ್ಣೀರಿಡುವ ಮುಕ್ತಾಯಿಗೆ -

« ಅರಿವರತು ಮರಹುಗೆಟ್ಟು ತನ್ನಲ್ಲಿ ತಾನು
ಸನ್ನಿಹಿತನಾದಂಗೆ ದುಃಖಿಸುವರೇ ಹೇಳಾ ।
ಶೋಕಿಸುವರೇ ಹೇಳಾ !

ಎಂದು ತಾತ್ತ್ವಿಕೋಪದೇಶದಿಂದ ಸಮಾಧಾನಪಡಿಸಿ, ಗುಡಿಗೋಪುರಗಳನ್ನೂ, ಕೆರೆ ಕಾಲುವೆಗಳನ್ನೂ ಕಟ್ಟಿಸುವ ಕರ್ಮಯೋಗಿಸಿದ್ಧರಾಮನಿಗೆ –

« ಹೊರಗನೇ ಕೊಯ್ದು ಹೊರಗನೇ ಪೂಜಿಸಿ
ಹೊರಗಾಗಿ ಹೋಯಿತ್ತು ತ್ರಿಜಗವೆಲ್ಲ ... »

« ದೇಹವೇ ದೇಗುಲವಾಗಿರಲು
ಬೇರೆ ಮತ್ತೆ ದೇಗುಲವೇತಕಯ್ಯಾ »

ಎಂದು ಮಾರ್ಮಿಕವಾಗಿ ತಿಳಿಸಿ ಬಸವಾದಿ ಪ್ರಮಥರಿಗೆ ನಿರಹಂಕಾರದ ಪಾಠಕಲಿಸಿ, ಪ್ರಸಾದ ಕುಂಡದಲ್ಲಿ ಮರುಳಶಂಕರದೇವರಿಗೆ ಘನವ; ಉಡುತಡಿಯಿಂದ ಉಡುಗೆ ತೊರೆದು ಬಂದ ಅಕ್ಕಮಹಾದೇವಿಗೆ ನಿಜನಿವಾಸದಲ್ಲಿ ಬಯಲಾಗುವ ಬಯಲ ಬಿತ್ತರಿಸಿ ದೇಶ ಸಂಚಾರ ಕೈಕೊಂಡು ಸಿದ್ಧರ ಕೇಂದ್ರ ಸ್ಥಳವಾಗಿದ್ದ ಶ್ರೀಶೈಲಕ್ಕೆ ಬಂದನು.

ಅಲ್ಲಿರುವ ಮರಗಳೆಲ್ಲ ಕಲ್ಪವೃಕ್ಷಗಳು; ಲತೆಗಳೆಲ್ಲ ಜ್ಯೋತಿರ್ಲತೆಗಳು; ಶಿಲೆಗಳೆಲ್ಲ ಚಿಂತಾಮಣಿಗಳು; ಸರೋವರಗಳೆಲ್ಲ ಅಮೃತ ಸರೋವರಗಳು. ಏರಿದರೆ ಸತ್ಯಲೋಕ ವನ್ನು ಮುಟ್ಟುವಂತಹ ಗಿರಿಶಿಖರಗಳು. ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಒಂದಾದ ಶ್ರೀಶೈಲಮಲ್ಲಿಕಾರ್ಜುನ ಸಂದರ್ಶನ ಪೂಜೆಗಳಿಂದ ಮುಕ್ತಿಯಾಗುವದೇನೂ ಆಶ್ಚರ್ಯವಿಲ್ಲ. ಅವನು ನೆಲೆಸಿರುವ ಶ್ರೀಶೈಲದ ಶಿಖರವನ್ನು ನೋಡಿದರೂ ಭವಬಂಧನದಿಂದ ಮುಕ್ತಿ

ಾಗುವನು. " ಶ್ರೀಶೈಲ ಶಿಖರಂದೃಷ್ಟ್ವಾಪುನರ್ಜನ್ಮನವಿದ್ಯತೇ ,, ಎಂಬ ಉಕ್ತಿಯನ್ನು ಗಮನಿಸಬೇಕು.

ಭಾರತದ ಪ್ರಧಾನಿಗಳೂ, ದೇಶವಿದೇಶಗಳಿಂದಬರುವ ಅನೇಕ ಮಹಾಪುರುಷರೂ ಶ್ರೀಶೈಲಕ್ಕೆಹೋಗಿ ಶ್ರೀ ಮಲ್ಲಿಕಾರ್ಜುನನ ಸಂದರ್ಶನಪಡೆದು ಕೃತಾರ್ಥರಾಗುತ್ತಿರುವದು ಶ್ರೀಶೈಲದ ಘನತೆಯನ್ನು ಎತ್ತಿ ತೋರಿಸುತ್ತದೆ.

ಅಣಿಮಾದಿಅಷ್ಟಸಿದ್ಧಿಗಳನ್ನು ಪಡೆದವರಿಗೆ ಶ್ರೀಶೈಲವು ಕೇಂದ್ರವಾಗಿತ್ತು. ಅಣಿಮಾ, ಮಹಿಮಾ, ಗರಿಮಾ, ಲಘಿಮಾ ಮೊದಲಾದ ಸಿದ್ಧಿಗಳನ್ನು ಪಡೆಯುವದೇ ಜೀವನದ ಧ್ಯೇಯವೆಂದು ಬಗೆದ ಸಿದ್ಧರ ಸಂಘಕ್ಕೆ ಅಧ್ಯಕ್ಷನಾಗಿ ಮೆರೆಯುತ್ತಿದ್ದ ಗೋರಕ್ಷ ಬಹಳ ಹತಯೋಗಿಯಿದ್ದನು. ವ್ಯೋಮಕಾಯನಾದ ಅಲ್ಲಮಪ್ರಭುವು ಅಲ್ಲಿಗೆ ಹೋಗಿ ಗೋರಕ್ಷನನ್ನು ಕಾಣಲು-

" ಆವಕಡೆಯಿಂಬಿಜಯ ಮಾಡಿದಿ ।
ರಾವಕಾರಣ ಬಂದಬರವೆಮ ।
ಗಾವುದ್ಯೆ ಬೆಸಸೇನು ಹದನ ನಿರೂಪಿಸಾಪ್ರಭುವೇ ॥

ಹಮ್ಮುಬಿಮ್ಮುಗಳ ಹೆಮ್ಮೆಯಿಂದ ಬಿಮ್ಮನೇ ಬಿಗಿದಿದ್ದ ಗೋರಕ್ಷನು ದುರಹಂಕಾರದಿಂದ ಬಾಗಿದತಲೆ ಮುಗಿದ ಕೈಯಿಂದ ನಮಸ್ಕರಿಸದೇ ಬಾಯಿಮಾತಿನಿಂದಲೇ ನಮಸ್ಕಾರ ಎಂದೆಂದು ಪೀಠದಲ್ಲಿ ಕುಳ್ಳಿರಿಸಿ ಪ್ರಭುವೇ ಎತ್ತಲಿಂದಬಂದಿರಿ ? ತಮ್ಮ ಆಗಮನದ ಕಾರಣವೇನು ? ಎಂದು ಕೇಳಲು ಪ್ರಭುವು-

... " ಒಡಲಿನಾಶೆಗೆ ಕುದಿದು ಕೋಟಲೆ ।
ಒಡುವವರ ಕಳವಳವ ಕಳಚಲು ।
ನಡೆದು ಬಂದವರಾವೆಲ್ಯೆ ಗೋರಕ್ಷ ಕೇಳೆಂದ ॥ "

ಗೋರಕ್ಷನೇ ಐಹಿಕ ದೈಹಿಕ ಸುಖಕ್ಕಾಗಿಯೇ ಹಗಲಿರುಳೂ ಹೋರಾಡಿ, ಶಾಶ್ವತ ಸುಖ ಜೀವ ಪರಶಿವನ ಪಾದಗಳನ್ನು ಮರೆತ ಮಂದಮತಿಗಳಿಗೆ ಭಕ್ತಿಯಪಾಠಕಲಿಸಲು ಬಂದಿರುವೆನು ಎಂದು ಹೇಳಿದನು. ಗೋರಕ್ಷನು – ಏನು ಚಮತ್ಕಾರವಿದು ! ಈತನು ನನ್ನನ್ನೆಂದೂ ನೋಡಿಲ್ಲ, ನಾನು ಈತನನ್ನು ನೋಡಿಲ್ಲ. ಆದರೂ ನನ್ನ ಹೆಸರನ್ನು ತಾನೇ ಮೊದಲು ಹೇಳಿಬಿಟ್ಟನು. ಎಲೈ ಮಹಾನುಭಾವನೆ ನೀನು ಹೇಳುವ ಮಾರ್ಗವು ಲೋಕಕ್ಕೆ ಹೊಸತು.

ಜಡವಾದ, ಚೈತನ್ಯವಾದ–ಎಂದು ವಾದವು ಇಬ್ಬಗೆಯಾಗಿದ್ದು ಜಡವಾದಕ್ಕೆ ಭೌತಿಕ ವಾದವೆಂದೂ,ಚೈತನ್ಯವಾದಕ್ಕೆ ಆತ್ಮವಾದವೆಂದೂ ಶ್ರೇಯೋಮಾರ್ಗವೆಂದೂ ಹೇಳುವರು. ಶ್ರೇಯೋಮಾರ್ಗದಲ್ಲಿ ಸಾಗಿದ ಪಥಿಕನು ನಿರತಿಶಯ ನಿಜಾನಂದದಲ್ಲಿ ಓಲಾಡುವನು. ಪ್ರೇಯೋಮಾರ್ಗದಲ್ಲಿ ಸಾಗಿದವನು ಶೋಕಸಾಗರದಲ್ಲಿ ಮುಳುಗುವನು.ವಿಶಾಲ ಪ್ರಪಂಚ ದಲ್ಲಿ ಎಲ್ಲರೂ ಅಲ್ಲಿನ ಹಾದಿ ತುಳಿಯ ತಕ್ಕವರೇ ! ಬಲ್ಲಿದರು ಅಹುದಹುದೆನ್ನುವ, ಮಾರ್ಗ

ಹಿಡಿದವರು ಎಲ್ಲಿಯೋ ಒಬ್ಬಿಬ್ಬರು. ಶ್ರೇಯೋಮಾರ್ಗದಲ್ಲಿ ಸಾಗಿದವರು ಸಿರಿವಂತರು, ಉಳಿದವರು ದರಿದ್ರರು ಎಂಬುದನ್ನು ಪ್ರಭುವು–

"ಭೂಮಿ ನಿನ್ನದಲ್ಲ ಹೇಮ ನಿನ್ನದಲ್ಲ, ಕಾಮಿನಿ ನಿನ್ನವಳಲ್ಲ
ನಿನ್ನೊಡವೆ ಎಂಬುದು ಜ್ಞಾನರತ್ನ ಅಂತಪ್ಪ ಜ್ಞಾನ
ರತ್ನವನಲಂಕರಿಸಿದೆಯಾದೊಡೆ ನಿನ್ನಿಂದ ಅಧಿಕರಿಲ್ಲ ಕಾಣಾ ಎಲೆಮನವೇ!"

ಎಂಬ ವಚನದಲ್ಲಿ ಹೇಳಿರುವರು.

ಶ್ರೀಮನ್ನಿಜಗುಣಶಿವಯೋಗಿಗಳು–

"ಪಡೆವೆ ನೀನೆಂದಿಗೆ ಪರ ಮುಕ್ತಿ ಸುಖವನು ಕೆಡುವ
ಕಾಯದ ಮೋಹವನು ಮಾಣೆ ಮನುಜ"

ಎಂದು ಎಚ್ಚರಿಸಿ, ತನ್ನ ನಿಜವಾದ ನಿಲವು ಯಾವುದೆಂಬುದನ್ನು–

ಭವಮಾಲೆಗೊಳಗಾದೆನೆಂಬುದೇ ಪುಸಿ ನಿನ್ನ।
ವಿವರಿಸಿ ನೋಡು ನೋಡೆಲೆ ಜೀವನೆ"

ಎಂದು ಹೇಳಿರುವರು. ಎಲೈ ಗೋರಕ್ಷನೇ–

"ಎಲು ತೊಗಲು ಮಲ ಮೂತ್ರ ನೆತ್ತರ।
ಕೊಳಚೆಯಾಗಿಹ ಹೇಸಿಗೆಯತನಿ
ಗೊಳಿಯೊಡಲಂ ತಾನೆಂಬ ಮೂರ್ಖನು ತನ್ನನರಿದಪನೇ ॥"

ಎಂದು ಪ್ರಭುದೇವರು ತಿರಸ್ಕರಿಸಿದರು. ಗೋರಕ್ಷನು-ದೇಹದ ಮಹತ್ವವನ್ನು ತಿಳಿಯದವನಿಗೆ ಇದು ಕೊಳಚೆಯ ಮನೆಯಾಗಬಹುದು. ಆದರೆ ದೇಹದ ಮಹತ್ವವನ್ನು ತಿಳಿದವನಿಗೆ ಇದು ಅಮೂಲ್ಯ ರತ್ನವಿದ್ದಂತೆ. ಭೂಮಿ. ಹೇಮ ಕಾಮಿನಿಗಳನ್ನು ತುಚ್ಛೀಕರಿಸಿ ಹಾಸ್ಯ ಮಾಡುವದು ನಿಮ್ಮ ಹುಟ್ಟುಗುಣವಿದ್ದಂತಿದೆ. ನಾವು ವಿವಿಧ ಸಾಧನೆಗಳನ್ನುಮಾಡಿ ಈ ದೇಹದಲ್ಲಿಯೇ ಅತ್ಯದ್ಭುತ ಸಿದ್ಧಿಯನ್ನು ಪಡೆದಿದ್ದೇವೆ. ನಮಗೆ ಕಾಮ ಕಾಲರ ಕಾಟವಿಲ್ಲ. ಸಾವು ನೋವುಗಳ ಭಯವಿಲ್ಲ. ಮಾಯಾ ಮೋಹಗಳ ಜಂಜಾಟವಿಲ್ಲ ಎನ್ನಲು ಪ್ರಭುದೇವರು ಹೇಯವಾದ ಮಾಯೆಯನ್ನು ಗೆಲ್ಲುವದು ಅಸಾಧ್ಯವಾದುದು. ಹರಿಹರ ಬ್ರಹ್ಮಾದಿಗಳೂ ಮಾಯೆಯ ಬಲೆಯೊಳಗೆ ಸಿಲುಕಿ ವಿಲಿವಿಲಿಒದ್ದಾಡುವರು, ಅಪಥ್ಯ ಸೇವನೆಯಿಂದ ರೋಗಿಯ ರೋಗವು ಉಲ್ಬಣಗೊಳ್ಳುವಂತೆ ನಶ್ವರವಾದ ಶರೀರಾಭಿಮಾನದಿಂದ ಮಾಯಾಮೋಹಾದಿಗಳು ಹೆಚ್ಚೆಚ್ಚಾಗಿ ಬೆಳೆವವಲ್ಲದೆ ಅಳಿಯವು.

ಮೃತ್ಯುವನ್ನು ಗೆದ್ದೆನೆಂಬುದು ನಿನ್ನ ಭ್ರಮೆಯು. ಅದನ್ನು ನೀನು ಗೆದ್ದಿಲ್ಲ ಮೃತ್ಯುವೇ ನಿನ್ನನ್ನು ಆ ಎಂದು ಬಾಯ್ದೆರೆದು ನುಂಗುತ್ತಿರುವದು. ಅರ್ಥವಿಲ್ಲದ ನಿನ್ನ ಮಾತು ಕೇಳಿದರೆ ನಗೆ ಬರುತ್ತದೆ. ಹೀಗೆ ಆಡಂಬರದ ಮಾತುಹೇಳಿದರೆ ಸಾವು ಬೆನ್ನು ಬಿಡುವದೇ ? ಎಂದು ಪ್ರಭು ಹೇಳಲು ಗೋರಕ್ಷನು ಪ್ರಭುವೇ ! ಸುಮ್ಮನೇ ಮಾತಾಡಿ ಪ್ರಯೋಜನವಿಲ್ಲ, ಈ ನಿಶಿತವಾದ ಖಡ್ಗವನ್ನು ತೆಗೆದುಕೋ ನಿನಗೆ ಶಕ್ತಿಯೆನಿತೋ

...ಹೊಡೆದು ನೋಡು. ಸ್ವಲ್ಪವೇ ಗಾಯವಾದರೆ ನನಗೆ ಸಿದ್ಧನೆಂದು ಕರೆಯಬೇಡ ...ದು ಖಡ್ಗವನ್ನು ಮುಂದಿರಿಸಿದನು. ಆಗ ಪ್ರಭುದೇವರು ಗೋರಕ್ಷನೇ ನನ್ನನ್ನು ಕೊಂದು ...ಕ್ಷಿಸುವುದೇ ? ಕೊಲ್ಲುವ ಕಾರ್ಯವು ದಾನವರದಲ್ಲದೆ ಮಾನವರದಲ್ಲ ಎನ್ನಲು-ಗೋ ...ನು ಆ ಮಾತು ಬೇಡ ಇಕೋ ಈ ಖಡ್ಗವ ಹಿಡಿದು ಬಲವಾಗಿ ಹೊಡೆ ಎನ್ನಲು ...ವು ಅವನ ಅಭೀಪ್ಸೆಯಂತೆ ಕತ್ತಿಯಿಂದ ಜೋರಾಗಿ ಹೊಡೆಯಲು ಗೋರಕ್ಷನ ...ದು ಕೊದಲೂ ಕೊಂಕಲಿಲ್ಲ. ಗಾಯವೂ ಆಗಲಿಲ್ಲ. ಆಗ ಪ್ರಭುವು ಹಠಯೋಗದಲ್ಲಿ ...ದ ವಿವಿಧ ಸಾಧನಗಳಿಂದ ಈ ದೇಹವನ್ನು ವಜ್ರದಂತೆ ಅಭೇದ್ಯವನ್ನಾಗಿ ...ಡಿಕೊಂಡಿರುವಿ. ಈ ಯೌಗಿಕ ದೈಹಿಕ ಸಿದ್ಧಿಯು ನಿನ್ನನ್ನು ಸಾಂಸಾರಿಕ ವ್ಯಾಮೋಹ ...ಬದ್ಧನನ್ನಾಗಿ ಮಾಡುವುದಲ್ಲದೆ ಪರಿಶುದ್ಧನನ್ನಾಗಿ ಮಾಡಲಾರದು ಎಂದು ಹೀಗಳೆದು ...ದನು. ಆಗ ಗೋರಕ್ಷನು ವಿನೀತನಾಗಿ ಪ್ರಭುವೇ ಸಿಡಿಲು ಬಂದು ಹೊಡೆದರೂ ...ಗದ, ಶೀತೋಷ್ಣ ಬಾಧೆಗೊಳಗಾಗದ ದೇಹವನ್ನು ಪಡೆವುದು ಸಿದ್ಧಿಯಾಗದಿದ್ದರೆ ...ರ ಮತ್ತಾವುದು ಸಿದ್ಧಿ ? ನೀನು ನಿಜವಾದ ಸಿದ್ಧಪುರುಷನಾದರೆ ನಿಜವಾದ ...ದ್ಧಿಯಾವುದು ಹೇಳು ಎಂದು ಬಿನ್ನವಿಸಲು-ಪ್ರಭುವು ಗೋರಕ್ಷನೇ ! ನಾನೀವ ಈ ...ತ್ತಿಯನ್ನು ಹಿಡಿದು ನನ್ನನ್ನು ಹೊಡೆದುನೋಡು. ನನ್ನ ಸಿದ್ಧಿಯನ್ನು ಮಾತಿನ ...ಬಲ್ಯದಿಂದ ಕಾಣದೇ ಕತ್ತಿಯು ಮುಖಾಂತರವೇ ಕಾಣುವಿಯಂತೆ ಎಂದುಹೇಳಲು ...ರಕ್ಷನು ಈತನ ಸತ್ವವನ್ನು ಪರೀಕ್ಷಿಸಿಯೇನೋಡೋಣ ಎಂದು ಕುತೂಹಲದಿಂದ ...ಯ್ಯಲ್ಲಿ ಖಡ್ಗವನ್ನು ತಕ್ಕೊಂಡನು.

...ಭವಬಂಧವದಿಂದ ಪಾರಾಗಿ ನಿತ್ಯ ಮುಕ್ತಿಯನ್ನು ಪಡೆಯುವ ತವಕವುಳ್ಳ ಸಾಧಕನು ...ತ್ರೀಯ ಬ್ರಹ್ಮನಿಷ್ಠನಾದ ಶ್ರೀಗುರುವನ್ನು ಆಯ್ಕೆಮಾಡಿಕೊಳ್ಳಲೇಬೇಕು. ...ಮಾನ್ಯವಾಗಿ ಲೌಕಿಕದಲ್ಲಿ ದೈಹಿಕರೋಗ ನಿವಾರಣೆಯಾಗಬೇಕಾದರೆ ತಜ್ಞನಾದ ...ವೈದ್ಯನನ್ನು ಆಶ್ರಯಿಸಬೇಕಲ್ಲವೇ ? ಇಲ್ಲವಾದರೆ ನಾಡೀ ಜ್ಞಾನವಿಲ್ಲದ ವೈದ್ಯನ ...ಕಿತ್ಸೆಯು ವೈಕುಂಠ ಲೋಕಕ್ಕೆ ಯಾತ್ರೆಯಾಗುವದು. ನದಿಯನ್ನು ದಾಟಬೇಕೆಂಬುವ ...ಯಣಿಗನು ನೀರು ಒಳಸೇರದ ಗಟ್ಟಿಯಾದ ನಾವೆಯಲ್ಲಿ ಕೂಡಬೇಕು. ನಾವಿಡುವ ಹಣ ...ರಕ್ಷಿತವಾಗಿರಬೇಕಾದರೆ ಬ್ಯಾಂಕು ಅಧಿಕೃತವಾಗಿರಬೇಕು. ಯಾವ ಗುರುವಿಗೆ ಸರ್ವವನ್ನು ...ರ್ಪಣ ಭಾವದಿಂದ ಸಮರ್ಪಿಸುವೆವೋ ಆ ಸದ್ಗುರುವು ಸರ್ವಲಕ್ಷಣ ಸಂಪನ್ನನೂ ...ಸಂಪೂರ್ಣನೂ ಆಗಿರಬೇಕು. ' ಶಿವ ಪಥವನರಿವೊಡೆ ಗುರುಪಥವೇ ಮೊದಲು' ...ದು ವಚನಕಾರರು ಹೇಳಿರುವರು.

" ಸಾಣೆಕಲ್ಲೊಳು ಗಂಧ ಮಾಣದಲೆ ಎಸೆವಂತೆ !
ಜಾಣಸದ್ಗುರುವಿನುಪದೇಶದಿಂ ಮುಕ್ತಿ !
ಕಾಣಿಸುತ್ತಿಹುದು ಸರ್ವಜ್ಞ ॥ "

...ಜ್ಞನಾದ ಸದ್ಗುರುವಿನ ಸದುಪದೇಶದಿಂದ ಮುಕ್ತಿದೊರೆಯುವದೆಂದು ಸರ್ವಜ್ಞನು ...ಳಿರುವನು. ರೋಗನಿದಾನವನ್ನರಿಯದ ವೈದ್ಯನಿಂದ ರೋಗಿಗೆ ಹಿತವಾಗುವದಕ್ಕಿಂತ

ಅಹಿತವೇ ಹೆಚ್ಚಾಗಿ ಆಗುವಂತೆ ಸದಾಚಾರವಿಲ್ಲದ ಗುರುವಿನಿಂದ ಶಿಷ್ಯನಿಗೆ ವಿಪರೀತವಾಗಿ ಕೆಡಕೇ ಆಗುವದು.

ಶಿಷ್ಯನಾಗಲಿರುವ ಗೋರಕ್ಷನು ಗುರುವಾಗಲಿರುವ ಪ್ರಭುವಿನ ಪರೀಕ್ಷೆ ಮಾಡ ಲೋಸುಗ ' ನಾನು ನಿನ್ನನ್ನು ಹೊಡೆದಂತೆ ನೀನು ನನ್ನನ್ನು ಹೊಡೆದು ನೋಡು ' ಎಂದು ಪ್ರಭುವು ಕೊಟ್ಟ ಕತ್ತಿಯನ್ನು ಬಲವಾಗಿ ಹಿಡಿದು ಝಳಪಿಸಿ ಎಡಕ್ಕೂ ಬಲಕ್ಕೂ ಸುತ್ತು ಮುತ್ತು ಎತ್ತೆತ್ತ ಹೊಡೆದರೂ ಆ ಕತ್ತಿಯು ಬಯಲಲ್ಲಿ ಬೀಸಿದಂತಾಯಿತಲ್ಲದೆ ಸ್ವಲ್ಪೂ ಸದ್ದಾಗಲಿಲ್ಲ. ವಜ್ರದೇಹಿಯಾದ ಗೋರಕ್ಷನು ಬಯಲುದೇಹಿಯಾದ ಪ್ರಭುವಿನ ದೇಹವನ್ನು ತುಂಡು ತುಂಡಾಗಿ ಕತ್ತರಿಸಬೇಕು ಎಂದು ಎಷ್ಟು ಪ್ರಯತ್ನ ಮಾಡಿದರೂ ಅದೆಲ್ಲವೂ ಗಾಳಿಯನ್ನು ಗುದ್ದಿ ಮೈನೋಯಿಸಿಕೊಂಡಂತಾಯಿತಲ್ಲದೆ ಸಾರ್ಥಕವಾಗಲಿಲ್ಲ,

" ಅಳೆಯುತ್ತಲಳೆಯುತ್ತ ಬಳಲುವರಲ್ಲದೆ
ಕೊಳಗ ಬಳಲುವದೇ ?
ಪಥವ ನಡೆಯುತ್ತ ನಡೆಯುತ್ತ ಬಳಲುವರಲ್ಲದೆ
ಬಟ್ಟೆ ಬಳಲುವದೇ ?
ಶ್ರಮವ ಮಾಡುತ್ತ ಬಳಲುವರಲ್ಲದೆ
ಕೋಲು ಬಳಲುವದೇ ?
ನಿಜವನರಿಯದ ಭಕ್ತ ಬಳಲುವನಲ್ಲದೆ
ಲಿಂಗ ಬಳಲುವದೇ ? ಕೂಡಲಸಂಗಮದೇವ ॥ "

ಎಂಬ ಬಸವಣ್ಣನವರ ವಚನದಂತೆ ನಿಜವನರಿಯದ ಗೋರಕ್ಷನು ಬಳಲಿ ಬೆಂಡಾದನು.

" ಅಶಬ್ದಮಸ್ಪರ್ಶಮರೂಪಮವ್ಯಯಂ,

ಎಂಬ ಉಪನಿಷದ್ವಾಕ್ಯದಂತೆ, ನುಡಿದೂ ನುಡಿಯಿಲ್ಲದ, ನಡೆದೂ ನಡೆಯಿಲ್ಲದ, ಹಿಡಿದೂ ಹಿಡಿಯಲುಬಾರದಂತಹ, ಬಾಯಿಯಿಲ್ಲದೆ ನುಡಿವ, ಕಾಲಿಲ್ಲದೆ ನಡೆವ, ಕೈಯಿಲ್ಲದೆ ಹಿಡಿವ, ಕಿವಿಯಿಲ್ಲದೆ ಕೇಳ್ವ, ಕಣ್ಣಿಲ್ಲದೆ ಕಾಣುವ ಪ್ರಭುವಿನ ಬಗೆಯೇ ಲೋಕಕ್ಕೆ ಹೊಸತು. ಲೋಕವಿಲಕ್ಷಣವಾದುದು. ಮಾತಾಡುವನು, ಮಾಡುವನು, ನೋಡುವನು, ಹಾಡುವನು ಆದರೂ ಕೈಗೆ ಸಿಲುಕನು ಏನಿದಾಶ್ಚರ್ಯ ? ಕೇವಲ ದೇಹವನ್ನೇ ನಂಬಿ ಮಾಯಾ ಮೋಹಾದಿಗಳ ಕಗ್ಗೆಸರಿನಲ್ಲಿ ಆಕಂಠ ಪರ್ಯಂತರ ಮುಳುಗಿದ ಗೋರಕ್ಷನಿಗೆ ಮಾಡಿಯೂ ಮಾಡದಂತಿರುವ, ನೋಡಿಯೂ ನೋಡದಂತಿರುವ, ಕೂಡಿಯೂ ಕೂಡದಂತಿರುವ ಅಲ್ಲಮಪ್ರಭುದೇವರ ಮೋಡಿಯೇ ಗೋರಕ್ಷನಿಗೆ ತಿಳಿಯದೆ ಪ್ರಭುವೇ ನನ್ನನ್ನು ನೀನು ಹೊಡೆದರೆ ಖಟಲ್ ಖಣಿಲ್ ಎಂದು ಕಿವಿ ಗಡಚಿಕ್ಕುವಂತೆ ಸಪ್ಪಳಾಯಿತು. ನಿನ್ನನ್ನು ಕತ್ತಿಯಿಂದ ಬಲವಾಗಿ ಹೊಡೆದರೂ ಏನೇನೂ ಸಪ್ಪಳವಾಗದೆ ಬಯಲಲ್ಲಿ ಕತ್ತಿಯನ್ನು ಬೀಸಿದಂತಾಗುವದು. ಕೈಯೊಳಗಿನ ಕತ್ತಿಯೂ ಜಾರಿಹೋಯಿತು, ಇದಾವ ಮಹಿಮೆಯೋ ತಿಳಿಸಿಹೇಳು ಎಂದು ಬೇಡಿಕೊಂಡನು. ಆಗ ಪ್ರಭುವುಗೋರಕ್ಷನೇ ಪಾತಂಜಲಶಾಸ್ತ್ರೋಕ್ತ ವಿವಿಧಯೋಗ ಸಾಧನೆಗಳಿಂದ ಸಾಧಿಸಿದ ಈ ಕಾಯಸಿದ್ಧಿಯಿಂದ ನಿತ್ಯಮುಕ್ತಿದೊರೆಯದು.

" ಅಗ್ನಿ ಸ್ತಂಭದ ರಕ್ಷೆಯಿದ್ದು ಮನೆ ಬೆಂದಿತ್ತಯ್ಯಾ
ಬಲ ಮುರಿಯ ಶಂಖವಿದ್ದು ಪದ ಹೋಯಿತ್ತಯ್ಯಾ ।
ಏಕ ಮುಖದ ರುದ್ರಾಕ್ಷಿಯಿದ್ದು ವಿಘ್ನವಾಯಿತ್ತಯ್ಯ !
ಇವೆಲ್ಲವ ಸಾಧಿಸಿದರೆ ಇಲ್ಲದಂತಾಯಿತ್ತು ಗುಹೇಶ್ವರ "

" ಕವಿಸಾಧಕರೆಲ್ಲರೂ ಕಳವಳಿಸಿ ಕೆಟ್ಟರು,
ವಿದ್ಯಾ ಸಾಧಕರೆಲ್ಲರೂ ಬುದ್ಧಿ ಹೀನರಾದರು,
ಪವನ ಸಾಧಕರೆಲ್ಲರೂ ಹದ್ದು ಕಾಗೆಗಳಾದರು,
ಜಲ ಸಾಧಕರೆಲ್ಲರೂ ಕಪ್ಪೆ ಮೀನುಗಳಾದರು,
ಅನ್ನ ಸಾಧಕರೆಲ್ಲರೂ ಭೂತ ಪ್ರಾಣಿಗಳಾದರು,
ಬಸವಣ್ಣ ಸದ್ಗುರು ಸಾಧಕನಾಗಿ ಸ್ವಯಲಿಂಗವಾದ ಕಾಣಾ ಗುಹೇಶ್ವರ "

ಅಣಿಮಾದಿ ಅಷ್ಟಸಿದ್ಧಿಗಳು, ಮತ್ತು ಆತ್ಮಸಾಕ್ಷಾತ್ಕಾರ ಇವೆರಡೂ ಪೂರ್ವ ಪಶ್ಚಿಮದಂತೆ ಒಂದಕ್ಕೊಂದು ವಿರುದ್ಧವಾದವುಗಳು. ನೀನು ಈ ಸಿದ್ಧಿಗಳಿಂದ ಸಂಸಾರ ಪಾಶಬದ್ಧನಾಗುವಿ; ಇದು ವ್ಯರ್ಥವಾದುದು. ಷಟ್‌ಸ್ಥಲದ ಆಚರಣೆಯಂತೆ ಆಚರಿಸುತ್ತ ಇಷ್ಟ, ಪ್ರಾಣ, ಭಾವ ಲಿಂಗಗಳ ರಹಸ್ಯವನ್ನು ತಿಳಿದುಕೋ ಎಂದು ಉಪದೇಶಿಸಲು ಗೋರಕ್ಷನು ಆ ಮಾತಿಗೊಪ್ಪಿ ವೀರಶೈವ ದೀಕ್ಷೆಪಡೆದು ಶ್ರೇಷ್ಠಶಿವಾನುಭಾವಿಯೂ, ವಚನಕಾರನೂ ಆಗಿಮೆರೆದನು.

ರವಿಯು ಉದಯವಾದಾಕ್ಷಣ ಬ್ರಹ್ಮಾಂಡದಲ್ಲಿ ಕವಿದ ಕತ್ತಲೆಯು ಚದುರಿ ಹೋಗುವಂತೆ, ಪರುಷ ಮಣಿಯು ಮುಟ್ಟಿದಾಕ್ಷಣ ಕಬ್ಬಿಣ ಸುವರ್ಣವಾಗುವಂತೆ, ಸಿದ್ಧನಾದ ಅಲ್ಲಮ ಪ್ರಭುದೇವರ ಸದುಪದೇಶದಿಂದ ವಜ್ರಕಾಯನಾದ ಗೋರಕ್ಷನು ಪ್ರಸಾದಕಾಯದ, ಮಂತ್ರಕಾಯದ, ಬಯಲುದೇಹದ ಗೋರಕ್ಷನೆಂಬ ಶಿವಭಕ್ತನಾದನು. ಲಿಂಗದಲ್ಲಿ ಅಂಗ ಬೆರೆಯುವದನ್ನು—

" ರಸವಾದಂಗಳಕಲಿತಲ್ಲಿ ಲೋಹಸಿದ್ಧಿಯಲ್ಲದೆ ರಸಸಿದ್ಧಿಯಾದುದಿಲ್ಲ,
ನಾನಾಕಲ್ಪಯೋಗ ಅದೃಶ್ಯ ಕರಣಂಗಳಕಲಿತಲ್ಲಿ
ಕಾಯಸಿದ್ಧಿಯಲ್ಲದೆ ಆತ್ಮಸಿದ್ಧಿಯಾದುದುಂಟೇ ?
ನಾನಾವಾಗ್ವಾದಂಗಳಿಂದ ಹೋರಿ ಮಾತಿನ
ಮಾಲೆಯಾಯಿತ್ತಲ್ಲದೆ ಆತ್ಮಹಿತವಾದುದಿಲ್ಲ.
ನೀ ನಾ ಎಂದಲ್ಲಿ ನೀನು ನಾನಾದೆಯಲ್ಲದೆ
ನಾನು ನೀನಾದುದಿಲ್ಲ. ಗೋರಕ್ಷ ಪಾಲಕ ಮಹಾಪ್ರಭು
ಸಿದ್ಧಸೋಮನಾಥಲಿಂಗ ನೀ ನಾನಾದೆಯಲ್ಲದೆ,
ಲೀಯ್ಯವಾಗಿ ನಾ ಆ ಲಿಂಗವೇ ಆದುದಿಲ್ಲ "

ಎಂಬ ವಚನದಿಂದ ಅರ್ಥಪೂರ್ಣವಾಗಿ ಹೇಳಿರುವನು.

೨೧ನೆಯ ಗತಿ

## ಮುನಿಗಳಿಗೆ ಬೋಧನೆ

ಶ್ರೀ ಗುರುವು ಪರಿಪಕ್ವ ಹೃದಯವುಳ್ಳ ಮುಮುಕ್ಷುಗಳಿಗೆ ಉಪದೇಶಿಸಬೇಕು. ಕಣ್ಣಿದ್ದವನಿಗೆ ಕನ್ನಡಿ ಕೊಟ್ಟರೆ ಅವನು ಕನ್ನಡಿಯಲ್ಲಿ ತನ್ನ ಮುಖದ ಸೌಂದರ್ಯವನ್ನು ನೋಡಿಕೊಳ್ಳುವನಲ್ಲದೆ ಹುಟ್ಟುಗುರುಡನಿಗೆ ಕೊಟ್ಟರೆ ಅವನು ಮುಖ ಸೌಂದರ್ಯವನ್ನು ನೋಡಲಾರನು. ತುಂಬು ಜವ್ವನದ ಮೋಹಿನಿಯೊಡನೆ ರತಿ ಕ್ರೀಡೆಯಾದರೆ ಗರ್ಭಧಾರಣ ವಾದೀತಲ್ಲದೆ ಎಳೆವಯದ ಕನ್ಯೆಗೆ ಗರ್ಭ ನಿಲ್ಲುವದೇ ? ಸ್ಪರ್ಶಮಣಿಯು ಕಬ್ಬಿಣಕ್ಕೆ ಸೋಂಕಿದರೆ ಅದು ಚಿನ್ನವಾದೀತಲ್ಲದೆ ಹಳೇ ಹಂಚಿಗೆ ಮುಟ್ಟಿಸಿದರೆ ಅದು ಸುವರ್ಣ ವಾದೀತೇ ? ಬಲಿತ ಕಾಯಿಯನ್ನು ಹರಿದು ಅಡಿ ಹಾಕಿದರೆ ಹಣ್ಣಾಗುವದಲ್ಲದೆ ಮಿಡಿಗಾಯಿ ಹಣ್ಣಾಗುವದೇ ? ಇದನ್ನೇ ಶ್ರೀ ಬಸವೇಶ್ವರರು –

> " ಸಗಣಿಯ ಬೆನಕಂಗೆ ಸಂಪಿಗೆಯರಳಲ್ಲಿ ಪೂಜಿಸಿದರೆ
> ರಂಜನೆಯಹುದಲ್ಲದೆ ಅದರ ಗಂಜಳ ಬಿಡದಣ್ಣಾ,
> ಮಣ್ಣ ಪುತ್ಥಳಿಯ ಮಜ್ಜನದ ಜಲದಲ್ಲಿ ತೊಳೆದರೆ
> ನಿಚ್ಚ ನಿಚ್ಚ ಕೆಸರಹುದಲ್ಲದೆ ಅದರ ಚುಗ ಬಿಡದಣ್ಣಾ
> ಲೋಕದ ಮಾನವಂಗೆ ಶಿವದೀಕ್ಷೆಯ ಕೊಟ್ಟರೆ
> ಕೆಟ್ಟವನೇಕೆ ಸದ್ಭಕ್ತನಹನು "

ಎಂದು ದೃಷ್ಟಾಂತ ಪೂರ್ವಕ ಹೇಳಿರುವರು. ಸರ್ವಜ್ಞನೂ –

> " ಭಕ್ತಿಯಿಲ್ಲದ ಶಿಷ್ಯಗೆ ತ್ರಿ ಕೊಟ್ಟು ಪದೇಶ !
> ಬತ್ತಿದಾ ಕೆರೆಯ ಬಯಲಲ್ಲಿ ರಾಜಾನ್ನ !
> ಬಿತ್ತಿ ಬೆಳೆದಂತೆ ಸರ್ವಜ್ಞ ॥ "

ಎಂದು ಮೇಲಿನ ಅಭಿಪ್ರಾಯವನ್ನೇ ಸ್ಪಷ್ಟೀಕರಿಸಿರುವನು.

ಕಾರಣ ಗುರುವು ಶಿಷ್ಯನ ಚಿತ್ತಭೂಮಿಯನ್ನು ಪರೀಕ್ಷಿಸಿ ಉಪದೇಶರೂಪಬೀಜ ಬಿತ್ತಬೇಕು.

ಕರುಣಾಳುಗಳಾದ ಪ್ರಭುದೇವರು ಸಾಧಕರಾದ ತಪೋಧನರಿಗೆ ತ್ರಿಕರಣಗಳಿಂದ ಮಾಡುವ ತಪೋವಿಧಾನವನ್ನು ತಿಳಿಸಿ ನಿರಂತರ ನಿಷ್ಠಾಪೂರ್ವಕ ಧ್ಯಾನಯೋಗದಿಂದ ಜ್ಞಾನೋದಯವಾಗುವ ಪರಿಯನ್ನು ಅನುಗ್ರಹಿಸಿ ಮುಂದೆ ಪಯಣ ಮಾಡುವಷ್ಟರಲ್ಲಿ ಕಾಡಿನ ಮಧ್ಯದೊಳಗೆ ನಾಯಿಗಳನ್ನು ಹಿಡಿದುಕೊಂಡು ಬೇಟೆಯಾಡುತ್ತ ಮೊಲ ಚಿಗರೆ ಮೊದಲಾದ ಸಾತ್ವಿಕ ಪ್ರಾಣಿಗಳನ್ನು ಕೊಂದು ಹೊಟ್ಟೆ ಹೊರೆದುಕೊಂಡು ದುರ್ಗತಿಗಿಳಿದ ಬೇಡನನ್ನು ಕಂಡು ಮರುಗಿ ಎಲೈ ಮೂಢನಾದ ಬೇಡನೇ ಕಾಡಿನಲ್ಲಿರುವ ಕ್ರೂರ ಪ್ರಾಣಿ ಗಳನ್ನು ಹೇಗೆ ಬೇಟೆಯಾಡಿ ಕೊಲ್ಲುವಿಯೋ ಹಾಗೆ ಶರೀರವೆಂಬ ಅರಣ್ಯದಲ್ಲಿರುವ ಅಹಂಕಾರ, ಮಮಕಾರ, ರಾಗ, ದ್ವೇಷಗಳೆಂಬ ಕ್ರೂರ ಪ್ರಾಣಿಗಳನ್ನು ಸುಮನ, ಸುಬುದ್ಧಿ

ಸುಚಿತ್ತ, ನಿರಹಂಕಾರ ಎಂಬ ನಾಯಿಗಳನ್ನು ಆಶ್ರಯಿಸಿ ಮನೋನಿಗ್ರಹ ಎಂಬ ಧನುಸ್ಸನ್ನು ಬಿಗಿ ಹಿಡಿದು ಅನನ್ಯ, ಅಹೇತುಕ ಭಗವನ್ನಿಷ್ಠೆ ಎಂಬ ಬಾಣದಿಂದ ಕೊಲ್ಲುವ ವಿಧಾನವನ್ನು ಕಲಿತುಕೋ. ಬ್ರಹ್ಮಾಂಡದಲ್ಲಿ ಬೇಟೆಯಾಡುವದಕ್ಕಿಂತಲೂ ಈ ಪಿಂಡಾಂಡದಲ್ಲಿ ಬೇಟೆಯಾಡುವದೇ ಮಹತ್ವದ್ದು. ಶೌರ್ಯ, ಧೈರ್ಯ, ಸ್ಥೈರ್ಯಗಳಿಂದ ಆಡುವ ಈ ಬೇಟೆಯಿಂದ ನಿನಗೆ ಅತ್ಯಪೂರ್ವ ಆತ್ಮಾನಂದ ದೊರೆಯುವದು. ಇದಕ್ಕೆ ಹೊರತಾದುದೆಲ್ಲವೂ ಬರಿಯ ಭ್ರಾಂತಿ ಎಂದು ಉಪದೇಶಿಸಿದನು.

ಜಗತ್ತಿನಲ್ಲಿ ಯುದ್ಧಗಳು ಪರಸ್ಪರ ಒಪ್ಪಂದದಿಂದಲೋ, ಇಲ್ಲವೆ ಓರ್ವ ಪ್ರಬಲ ರಾಜನ ಬಲಾಢ್ಯ ಸೈನ್ಯಶಕ್ತಿಯ ಪ್ರಾಬಲ್ಯದಿಂದಲೋ ಶಾಂತವಾಗುವವು. ಆದರೆ ಪಿಂಡಾಂಡದೊಳಗೆ ನಡೆದ ಈ ಅಂತರಂಗಯುದ್ಧ ಮಾತ್ರ ಹಗಲಿರುಳೂ ಎಡೆವಿಡದೆ ನಡೆದಿದೆ. ಓರ್ವ ಪೊಲೀಸವರಿಷ್ಠ ಅಧಿಕಾರಿಯು ಬಂದೂಕನ್ನು ಹಿಡಿವ ಮತ್ತು ಗುರಿಗೇನೇ ಗುಂಡು ಹೊಡೆವ ತರಬೇತಿಯನ್ನು ಕೊಡುವಂತೆ ಓರ್ವ ಧನುರ್ವಿದ್ಯಾನಿಪುಣನು ಅನೇಕರಿಗೆ ಧನುರ್ವಿದ್ಯೆಯನ್ನು ಕಲಿಸುವಂತೆ ಉಪನಿಷತ್ಕಾರರು ಪ್ರಗತಿ ಪಥದಲ್ಲಿ ಅಡಿಯಿಟ್ಟ ಪಥಿಕನಾದ ಸಾಧಕನಿಗೆ –

" ಪ್ರಣವೋ ಧನುಃ ಶರೋಹ್ಯಾತ್ಮಾ ಬ್ರಹ್ಮತಲ್ಲಕ್ಷ್ಯಮುಚ್ಯತೇ ।
ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋಭವೇತ್ "

ಮೂಲಮಂತ್ರವೆಂಬ ಬಿಲ್ಲಿನಲ್ಲಿ ಮನಸ್ಸೆಂಬ ಬಾಣಹೂಡಿ, ಅದನ್ನು ತನ್ನ ಲಕ್ಷವೆನಿಸಿದ ಪರಾತ್ಪರ ಪರಬ್ರಹ್ಮವೆಂಬ ಗುರಿಗೆ ಏಕಾಗ್ರಚಿತ್ತದಿಂದ ಹೊಡೆಯಬೇಕು. ಅದೇ ತಾನಾಗಬೇಕು, ತಾನೇ ಅದು ಆಗಬೇಕು. ಅದಿದೆಂಬ ಭೇದವಳಿದು ಸದಮಲಬ್ರಹ್ಮವೇ ಉಳಿಯಬೇಕು ಎಂದು ಉಪದೇಶಿಸಿದ್ದಾರೆ. ಈ ಅಭೇದವಾಗುವ ಪರಿಯನ್ನೇ ಪ್ರಭುದೇವರು–

" ಕರ್ಪೂರದ ಗಿರಿಯನುರಿ ಹಿಡಿದ ಬಳಿಕ ಇದ್ದಿಲುಂಟೇ
ಕೆಂಡದ ಗಿರಿಯ ಅರಗಿನ ಬಾಣದಲೆಚ್ಚಡೆ ಮರಳಿ ಬಾಣವನರಸಲುಂಟೇ

ಎಂಬ ವಚನದಿಂದ ಹೇಳಿರುವರು.

ಕಿರಾತರಲ್ಲಿ ಪುರಾತನ ಕಿರಾತನಾದ ಎಲೈ ಶಂಕರನೇ ಬೇಟೆಯಾಡಿ ಕಾಡು ಮೃಗಗಳನ್ನು ಕೊಲ್ಲುವದಕ್ಕೋಸ್ಕರ ಆ ಕಾಡು ಈ ಕಾಡು ಎಂದು ನಾಡ ತುಂಬ ಅಲೆದಾಡಬೇಡ, ನನ್ನ ಮನಸ್ಸೆಂಬ ದಟ್ಟಡವಿಯ ನಟ್ಟ ನಡುವೆ ಕಾಮ, ಕ್ರೋಧ, ಮದ, ಮಾತ್ಸರ್ಯ ಲೋಭ. ಮೋಹಾದಿಗಳೆಂಬ ಅನಂತ ದುಷ್ಟಮೃಗಗಳು ಸಂಚರಿಸುತ್ತಲಿವೆ. ಆ ದುಷ್ಟ ಮೃಗಗಳನ್ನೆಲ್ಲ ಕೊಂದು ವಿನೋದಪಡಬಾರದೇ ಎಂದು ಆದ್ಯಶಂಕರಾಚಾರ್ಯರು ಮತಿಯುಳ್ಳ ಮಾನವದೇಹದಲ್ಲಿ ಎಚ್ಚರದಪ್ಪಿನಡೆಯುವ ಮಂದಮನುಜರನ್ನು ಕುರಿತು–

" ಕಾಮಃ ಕ್ರೋಧಶ್ಚ ಲೋಭಶ್ಚ ದೇಹೇತಿಷ್ಠಂತಿ ತಸ್ಕರಾಃ ।
ಜ್ಞಾನರತ್ನಾಪಹಾರಾರ್ಥಂ ತಸ್ಮಾ ಜ್ಜಾಗ್ರತ ಜಾಗ್ರತ । "

ಕಾಮ ಕ್ರೋಧಾದಿಗಳೆಂಬ ಅನಿಮಿತ್ತ ವೈರಿಗಳು ನಿಮ್ಮಲ್ಲಿರುವ ಜ್ಞಾನಭಾಂಡಾರವನ್ನು ಕದ್ದೊಯ್ಯುವರು ಎಚ್ಚರ, ಎಚ್ಚರ ಎಂದು ಬಡಿದೆಬ್ಬಿಸುವರು, ಸರ್ಪಭೂಷಣ ಶಿವಯೋಗಿಗಳು –

" ಕಾಯಕಾಂತಾರವ ಹೊಕ್ಕು ಬೇಂಟೆಯನಾಡಿ !
ಮಾಯಾ ಮೋಹದ ಮೃಗಗಳ ಕೊಲ್ಲಿರೋ ।। ಪ ।।

ಕೋಪವೆಂದೆಂಬುವ ಹಿರಿಯ ಹುಲಿಗಳುಂಟು ।
ಪಾಪವೆಂದೆಂಬ ಸೂಕರಗಳುಂಟು ।
ಚಾಪಲ್ಯ ಗುಣಗಳೆಂಬ ಜಿಂಕೆಗಳುಂಟು ।
ಕಾಪಟ್ಯವೆಂದೆಂಬ ನರಿಗಳುಂಟು ॥ ೧ ॥

ಮೆರೆವಷ್ಟಮದಗಳೆಂಬ ಕೋಣಗಳುಂಟು ।
ಬರಿಯ ಡಂಭಗಳೆಂಬ ಕರಡಿಯುಂಟು ।
ಉರಿವ ಮತ್ಸರ ಬುದ್ಧಿಯೆಂಬ ಕೇಸರಿಯುಂಟು ।
ಮರವೆಯೆಂದೆಂಬುವ ಗಜಗಳುಂಟು ॥ ೨ ॥

ಪರಮಸದ್ಭಕ್ತಿಯೆಂದೆಂಬ ಬಿಲ್ಲನೆ ಮಾಡಿ ।
ವಿರತಿ ಎಂದೆಂಬ ಸಿಂಜನಿಯ ಹೂಡಿ ।
ಅರಿವೆಂಬ ಬಾಣದೊಳವನೆಚ್ಚಿ ಕೆಡವುತೆ ।
ಗುರುಸಿದ್ಧನಂಘ್ರಿಗಳ್ಗೆ ಪಹರಿಸಿ ॥ ೩ ॥

ಎಂಬ ಪದ್ಯದಲ್ಲಿ ಅಂತಃಶತೃಗಳ ಬೇಟೆಯಾಡುವ ಬಗೆಯನ್ನು ಸುಂದರವಾಗಿ ಚಿತ್ರಿಸಿರುವರು. ಅಲ್ಲಮಪ್ರಭುಗಳು–

" ಮುನಿಯದಿರಿ ಮುನಿಯದಿರಿ ನಿಮಗೊಂದು ಯುಕ್ತಿಯ ಹೇಳುವೆನು
ಅದೆಂತೆಂದೊಡೆ ನೀವೆನ್ನ ವಂಶೀಭೂತರಾದಕಾರಣ
ನಿಮ್ಮ ಹೆಚ್ಚು ಕುಂದು ಎನ್ನದಾಗಿ, ನಿಮ್ಮ ಆಸ್ತಿ ಪಾಸ್ತಿ ಎನ್ನದಾಗಿ
ನಿಮ್ಮ ಹಾನಿ ವೃದ್ಧಿ ಎನ್ನದಾಗಿ, ಹಾವ ಹಿಡಿವರು ಬೇಲಿಯ
ಹೊಗದೆ ಹೋಹರೇ ಅಯ್ಯಾ ?
ವ್ಯಾಧನು ಸೂಸಲ ಚೆಲ್ಲಿ, ಜಂತ್ರವಹಣ್ಣ ಅಡಿಗಲ್ಲನೊಡ್ಡಿ
ಹೋದ ಬಳಿಕ ಸೂಸಲ ಕಂಪಿಂಗೆ ಹೆಗ್ಗಣ ಬಂದು ಬಿದ್ದಂತೆ
ಬಿದ್ದರಲ್ಲ ಮಾಯದ ಬಲೆಯಲ್ಲಿ ! ಕೋಪವೆಂಬರಾಡನೊಡ್ಡಿ,
ತಾಪವೆಂಬ ಅಡಿಗಲ್ಲನಿರಿಸಿ, ಹುಸಿ ಎಂಬ ಮೀಟುಗಣೆಯ
ಜಂತ್ರಿಸಿ, ಹೊನ್ನು ಹೆಣ್ಣು ಮಣ್ಣೆಂಬ ಸೂಸಲ ಚೆಲ್ಲಿ
ಕೆಡಹುದನಲ್ಲಾ ನಿಃಕರುಣಿ ಮುಕ್ಕಣ್ಣ ವ್ಯಾಧನು !
ಹೊನ್ನು ಹೆಣ್ಣು ಮಣ್ಣಿನಾಶೆಯಂ ಬಿಟ್ಟು, ಕ್ರೋಧತಾಪವಂ ಬಿಟ್ಟು
ಭ್ರಾಂತಿ ಭ್ರಮೆಯಂ ಬಿಟ್ಟು ಜಂಗಮವಾಗಬೇಕು ಕೇಳಿರೋ

ಮುಕ್ತುಳಿಗಳಿರಾ ! ಇಂತೀ ಕಡು ಲೋಭದ ರುಚಿಯ
ಹಿಂಗಿ ಜಂಗಮವಾದಲ್ಲದೆ ಭವಹಿಂಗದು ಕಾಣಾ ಗುಹೇಶ್ವರಾ "
ಎಂದು ಉಪದೇಶಿಸುತ್ತ ಮುನ್ನಡೆದರು.

" ಕಾಮಿನಿಯರಿಗೆ ಸೋತು ಕಾಮನ,
ಸೀಮೆಯ್ಗಲಿ ಸಲೆಸತ್ತು ಹುಟ್ಟುವ ।
ಕಾಮಿಗಳಿಗಾ ಕುಂಡಲೀ ಶಕ್ತಿಯು ಮಹಾರತಿಯು ।
ನೇಮಿಸಿಯೆ ನಿರ್ಮಾಯದಲಿ ನಿ ।
ಸ್ಸೀಮ ನಿತ್ಯಾನಂದ ಸುಖ ದು ।
ದ್ಧಾಮತೆಯನೊಲಿದಿತ್ತನಾ ಪ್ರಭುಲಿಂಗ ಕಲಬುರಗೆ ॥ "

ವೈಷಯಿಕ ಸುಖಕ್ಕೆ ರತಿಸುಖ ಅಥವಾ ಕೂಟಸುಖವೆಂದು ಕರೆದರೆ, ಜೀವನು ದೇವನಲ್ಲಿ ಬೆರೆಯುವ ಅಥವಾ ಅಂಗನು ಲಿಂಗದಲ್ಲಿ ಸಮರಸವಾಗುವ ನಿತ್ಯಾನಂದಕ್ಕೆ ಮಹಾರತಿ ಅಥವಾ ಮಹಾಕೂಟವೆಂದು ಕರೆಯುವರು. ವೀರಶೈವ ಸಿದ್ಧಾಂತದಲ್ಲಿ ಹೇಳುವ ಇಷ್ಟ, ಪ್ರಾಣ, ಭಾವಲಿಂಗಗಳಲ್ಲಿ ಭಾವಲಿಂಗಕ್ಕೆ ತೃಪ್ತಿಲಿಂಗವೆಂದು ಹೇಳುವರು. ಭಾವಲಿಂಗವನ್ನು ಅಭೇದದೃಷ್ಟಿಯಿಂದ ಪರಿಭಾವಿಸಬೇಕೆಂದೂ, ಬಾಹ್ಯಪ್ರಪಂಚಪ್ರಜ್ಞಾವಿಹೀನನಾಗಿ, ಭಾವಲಿಂಗದಲ್ಲಿ ತಲ್ಲೀನನಾದಾಗ ಆಗುವ ಶಿವಾನಂದಕ್ಕೆ ಸಾಟಿಯಾದ ಆನಂದವು ಮತ್ತೊಂದಿಲ್ಲ.

ವಿಜಾಪುರ ಜಿಲ್ಲೆಯ ಬಾದಾಮಿ ತಾಲೂಕಿನ ಪಟ್ಟದಕಲ್ಲಹತ್ತಿರ ಚಾಲುಕ್ಯರಾಜರ ಕುಲದೇವತೆಯಾದ ಶ್ರೀ ಮಹಾಕೂಟೇಶ್ವರ ದೇವಾಲಯವು ಇಂದಿಗೂ ಮೆರೆಯುತ್ತದೆ. ಮಹಾಕೂಟೇಶ್ವರನೆಂದರೆ ನಿತ್ಯಾನಂದ ಸಾಗರದಲ್ಲಿ ತಾನಿದ್ದು ತನಗೆ ಶರಣು ಹೊಕ್ಕವರಿಗೂ ಅದನ್ನು ಕರುಣಿಸಿ ಪೊರೆಯುವವನೆಂದರ್ಥ.

ಉಪನಿಷತ್ಕಾರರು ಬ್ರಹ್ಮಾನಂದಮೀಮಾಂಸೆ ಮಾಡುವಾಗ ಜಿಜ್ಞಾಸುವಾದ ಮುಮುಕ್ಷುವಿಗೆ–

" ತದ್ಯಥಾ ಪ್ರಿಯಯಾಸಹ ಸಂಪರಿಷ್ವಕ್ತಃ ।
ನಬಾಹ್ಯಂ ಕಿಂಚನವೇದ ಏವಮೇವಾಯಂ
ಪುರುಷಃ ಪ್ರಾಜ್ಞೇನಾತ್ಮನಾಸಂಪರಿಷ್ವಕ್ತಃ ನಬಾಹ್ಯಂಕಿಂಚನವೇದ ॥ "

ಎಂದರೆ ಅನುಭೂಯಮಾನವಾದ ನಲ್ಲಳ ಸುಖದಕಲ್ಪನೆ ಕೊಟ್ಟು ಅನನುಭೂಯ ಮಾನವಾದ ಬ್ರಹ್ಮಾನಂದದ ಕಲ್ಪನೆ ಮಾಡಿಕೊಟ್ಟಿರುವರು. ಇಲ್ಲಿ ಪ್ರೇಯಸೀಸುಖವು ಕೂಟ ಸುಖವು. ಶಿವಜೀವೈಕ್ಯವು ಮಹಾಕೂಟಸುಖವು.

ಹೆಣ್ಣಿನ ರೂಪವ ಕಣ್ಣಲ್ಲಿ ಕಂಡು ಸಣ್ಣಾಗುವ ಕುನ್ನಿಮನುಜರನ್ನು ಕುರಿತು ನಾಭಿ ಚಕ್ರವನ್ನು ಸುತ್ತಿರುವ ಸರ್ಪವನ್ನು ಸಹಸ್ರಾರಕಮಲದ ಮುಖದಿಂದ ಮೇಲು ಮುಖವಾಗಿಸಿ ಅಲ್ಲಿ ಧಾರಾರೂಪವಾಗಿ ಸುರಿವ ಅಮೃತವನ್ನು ಸವಿದುಣ್ಣುವ ಯೋಗ

ವಿಧಿಯನ್ನು ತಿಳಿಸುವದಲ್ಲದೆ ಶಿವಯೋಗದ ನಿಸ್ಸೀಮ ಉದ್ದಾಮ ನಿತ್ಯಾನಂದವನ್ನು ಅನುಗ್ರಹಿಸಿದರು. ಕುಂಡಲೀ ಶಕ್ತಿಯನ್ನು ಜಾಗೃತಗೊಳಿಸಿ ಅಖಂಡಾನಂದ ಸಾಗರದಲ್ಲಿ ಈಜುವ ಯೋಗಿಗಳು ಹೆಂಡಿರು ಮಕ್ಕಳಿಂದ ದೊರೆವ ಅಲ್ಪ ಸುಖದ ಕಡೆಗೆ ಕೈಚಾಚರು ಎಂಬುದನ್ನು ಸರ್ವಜ್ಞನು,

" ಕುಂಡಲಿಯ ಕಂಡಾತ ಹೇಡತಿಗೆ ಒಲಿಯುವನೆ, ।
ಖಂಡಸಕ್ಕರೆಯ ಮೆಲುವಾತ । ಮುಗ್ಗಿದಾ ।
ಹಿಂಡಿಗೆರಗುವನೆ ಸರ್ವಜ್ಞ ॥

ಎಂದು ಹೇಳಿರುವನು.

ದಟ್ಟಪಾಧ ನಟ್ಟಡವಿಯಲ್ಲಿ ಶಿಷ್ಟರಾದ ಶಿವಯೋಗಿಗಳು, ಹೋಗುವಾಗ ಹಲವಾರು ಮುನಿಗಳು, ಸ್ವರ್ಗಕಾಮೇಷ್ಟಿ, ಪುತ್ರಕಾಮೇಷ್ಟಿ ಮೊದಲಾದ ಯಜ್ಞಗಳನ್ನು ಮಾಡುವ ದಕ್ಕೋಸ್ಕರ ಹೋಮಕುಂಡವನ್ನು ವಿರಚಿಸಿ ಬಳಿಯಲ್ಲಿ ಹೋತನ್ನು ಕಟ್ಟಿ " ಅಗ್ನಿ ಮುಖಾವೈದೇವಾಃ " ಎಂಬುಕ್ತಿಯಂತೆ ಅಗ್ನಿ ಪ್ರತಿಷ್ಠಾಪನೆ ಮಾಡಿ ಸಮಿತ್ತುಗಳನ್ನು ಅಂದರೆ ಅರಳೆ ಅತ್ತಿ ಮೊದಲಾದ ಮರಗಳ ತುಂಡುಗಳನ್ನು ಮತ್ತು ಹಾಲು, ತುಪ್ಪ, ದಧಿ, ಧಾನ್ಯ ಮೊದಲಾದ ಹವಿದ್ರ್ರವ್ಯಗಳನ್ನು ಇಟ್ಟುಕೊಂಡು ವೇದಮಂತ್ರ ಘೋಷ ದೊಡನೆ ಸಮರ್ಪಿಸುತ್ತ ಯಜ್ಞಮಾಡುತ್ತಿದ್ದರು.

ಕರ್ಮಭೂಮಿಯೆನಿಸಿದ ಈ ಭೂಮಿಯಲ್ಲಿ ವಿವಿಧ ಮಣಹಗಳನ್ನು ಮಾಡಿ ಪುಣ್ಯ ರೂಪಧನಸಂಗ್ರಹಿಸಿ ಅದು ಮುಗಿವನಕ ಭೋಗಿಸಿ ಅದು ತೀರಿದಬಳಿಕ ಮರಳಿ ಮರ್ತ್ಯಕ್ಕೆ ಬರಬೇಕು.

" ತೇತಂಭುಕ್ತ್ವಾ ಸ್ವರ್ಗಲೋಕಂ ವಿಶಾಲಂ ।
ಕ್ಷೀಣೇಪುಣ್ಯೇ ಮರ್ತ್ಯಲೋಕಂ ವಿಶಂತಿ "

ಎಂಬ ಪ್ರಮಾಣವು ಈ ಮಾತನ್ನೇ ಸಮರ್ಥಿಸುತ್ತದೆ. ಕಾಮನೆಯಿಂದ ಮಾಡಿದ ಜ್ಯೋತಿಷ್ಟೋಮಾದಿಯಜ್ಞಗಳು ದುಃಖಕ್ಕೆ ಮೂಲವಾದವು.

ಹಿಂದಕ್ಕೆ ನೂರು ಯಜ್ಞಗಳನ್ನು ಮಾಡಿದ ನಹುಷನೆಂಬ ಮಹಾರಾಜನು ದೇವೇಂದ್ರ ಪದವಿಯನ್ನು ಪಡೆದು ಸಪ್ತರ್ಷಿಗಳು ಹೊತ್ತ ಪಲ್ಲಕ್ಕಿಯಲ್ಲಿ ಕುಳಿತು ಶಚಿಯ ಅಂತಃ ಪುರಕ್ಕೆ ಹೋಗುವಾಗ ಭೋಗಾಭಿಲಾಷೆಯ ಆತುರತೆಯಿಂದ ಸರ್ಪ ಸರ್ಪ ಅಂದರೆ ಬೇಗ ನಡೆಯಿರಿ ಎಂದಾಗ ಅಗಸ್ತ್ಯರು ಕ್ರುದ್ಧರಾಗಿ " ತ್ವಂ ಸರ್ಪೋಭವ " ಎಂದು ಶಾಪ ವಿತ್ತರಂತೆ. ! ದೇವೇಂದ್ರನಾಗಿ ಪಲ್ಲಕ್ಕಿಯಲ್ಲಿ ಕುಳಿತ ನಹುಷನು ಸರ್ಪವಾಗಿ ಭೂಮಿಗೆ ಬಿದ್ದನಂತೆ,

ಭಗವದ್ಗೀತೆಯು ದಶಮಾಧ್ಯಾಯದ ವಿಭೂತಿ ಯೋಗದಲ್ಲಿ ಶ್ರೀ ಕೃಷ್ಣನು " ಪರ್ವತಾನಾಂ ಹಿಮಾಲಯಃ " " ಸ್ರೋತಸಾಮಸ್ಮಿ ಜಾಹ್ನವೀ " ಪರ್ವತಗಳಲ್ಲಿ ಹಿಮಾಲಯು, ನದಿಗಳಲ್ಲಿ ಗಂಗಾನದಿಯು ಶ್ರೇಷ್ಠವಿದ್ದಂತೆ, ಪೂರ್ವಮೀಮಾಂಸಾದರ್ಶನ

ಕಾರನಾದ ಜೈಮಿನಿಯು ಹೇಳಿದ ವಿವಿಧಯಜ್ಞಗಳಲ್ಲಿ ಆವುದಾದರೊಂದು ಯಜ್ಞವೇ ಶ್ರೇಷ್ಠವೆಂದು ಹೇಳದೇ " ಯಜ್ಞಾನಾಂ ಜಪಯಜ್ಞೋಽಸ್ಮಿ " ಭಗವತ್ ಸಾಕ್ಷಾತ್ಕಾರಕ್ಕ ಸಾಧನೀಭೂತಗಳಾದ ತ್ರಿವಿಧ ತಪಸ್ಸುಗಳಲ್ಲೊಂದಾದ ವಾಙ್ಮಯ ತಪಸ್ಸೇ ಅಂದರೆ ಜಪಯಜ್ಞವೇ ಎಲ್ಲ ಯಜ್ಞಗಳಲ್ಲಿ ಮೇಲಾದುದು ಎಂದು ಹೇಳಿರುವನು.

ಮೋಕ್ಷಶಾಸ್ತ್ರದಲ್ಲಿ ಭಗವತ್ ಸಾಕ್ಷಾತ್ಕಾರಕ್ಕಾಗಿ ವಿವಿಧ ಸಾಧನಗಳು ಹೇಳಲ್ಪಟ್ಟಿವೆ. ಬಹಿರಂಗದಲ್ಲಿ ಆಚರಿಸುವ ಜಪ, ತಪ, ಸ್ನಾನ, ಉಪವಾಸ, ಜಾಗರಣ, ಏಕಾದಶೀ, ಚತುರ್ದಶೀ ಮೊದಲಾದ ಪದಗಳನ್ನು ಆಧ್ಯಾತ್ಮ ಪರವಾಗಿಯೇ ಅರ್ಥೈಸುವರು.

ಐತಿಹಾಸಿಕ ಸತ್ಯಸಂಗತಿಗಳೆನಿಸಿದ ಮಹಾಭಾರತ, ರಾಮಾಯಣದಂತಹ ಯುದ್ಧ ದಲ್ಲಿರುವ ಪಾತ್ರಗಳಿಗೂ ವಿಶಿಷ್ಟಾರ್ಥವನ್ನು ಅಂದರೆ ದೇಹವೇ ಅಯೋಧ್ಯಾನಗರ, ಆತ್ಮ ರಾಮನೇ ಈ ಶ್ರೀರಾಮ, ಕಾಮಕ್ರೋಧಾದಿಗಳೇ ರಾವಣಾದಿ ರಕ್ಕಸರು, ಶಾಂತಿಯೇ ಸೀತೆ ದೇಹವೇ ಕುರುಕ್ಷೇತ್ರ, ಹೃದಯಸ್ಥ ಪರಮಾತ್ಮನೇ ಶ್ರೀಕೃಷ್ಣ, ಜೀವಾತ್ಮನೇ ಅರ್ಜುನ, ಕಾಮಕ್ರೋಧಾಧಿಗಳೇ ದುಷ್ಟರಾದಕೌರವರು, " ಶಿಷ್ಯಸ್ತೇಹಂ ಶಾಧಿ ಮಾಂತ್ವಾಂಪ್ರಪನ್ನಂ" ಎಂದು ಅರ್ಜುನನು ಶ್ರೀಕೃಷ್ಣನಿಗೆ ಮೊರೆಹೊಕ್ಕಂತೆ ಜೀವಾತ್ಮನೂ ಸದ್ಗುರುವಿಗೆ ಶರಣಾಗತನಾಗಬೇಕು ಎಂದು ಹೇಳಿರುವರು.

" ಅಹಂವೈಶ್ವಾನರೋ ಭೂತ್ವಾ ಪ್ರಾಣಿನಾಂದೇಹಮಾಶ್ರಿತಃ ।
ಪ್ರಾಣಾಪಾನ ಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಂ । "

ಪುರೋಹಿತರು ಹೋಮಕುಂಡ ವಿರಚಿಸಿ ಅಲ್ಲಿ ಮಂತ್ರಪುರಸ್ಸರವಾಗಿ ಹವಿರ್ದ್ರವ್ಯ ಗಳನ್ನು ಸಮರ್ಪಿಸಿ ದೇವತಾ ಸಂತೃಪ್ತಿಯಾಗುವದೆಂದು ಭಾವಿಸುವರು. ಇಲ್ಲಿ ದೇಹವೇ ಒಂದು ಹೋಮಕುಂಡ ಲೇಹ್ಯ, ಚೋಷ್ಯ, ಭಕ್ಷ್ಯ, ಭೋಜ್ಯಗಳೆಂಬ ಚತುರ್ವಿಧ ಆಹಾರ ವನ್ನು ಬೇಯಿಸಿ ರಸರಕ್ತಾದಿ ಪೋಷಕಾಂಶಗಳನ್ನಿತ್ತು ದೇಹವನ್ನು ರಕ್ಷಿಸುವ ಜಠರಾಗ್ನಿಯೇ ಅಗ್ನಿಯು. ವಿವಿಧ ಖಾದ್ಯಪೇಯ ಪದಾರ್ಥಗಳೇ ಹವಿಸ್ಸುಗಳು, ಬ್ರಹ್ಮಾಂಡದಲ್ಲಿ ಮಾಡುವ ಯಜ್ಞಕ್ಕಿಂತಲೂ ಪಿಂಡಾಂಡದಲ್ಲಿ [illegible] ಸರ್ವೋತ್ಕೃಷ್ಟವಾದದ್ದು. ಮಹಾಮೇಧಾವಿಗಳು ತತ್ತ್ವವೇತ್ತರೂ ಆದ ಶ್ರೀ ಸ್ವಾಮಿ ರಾಮತೀರ್ಥರು ಈ ವೈಚಾರಿಕ ವೈಜ್ಞಾನಿಕ ದೃಷ್ಟಿ ಕೋನವನ್ನಿಟ್ಟುಕೊಂಡೇ " ಯಜ್ಞ ರಹಸ್ಯ " ಎಂಬ ವ್ಯಾಖ್ಯಾನದಲ್ಲಿ ಈ ವಿಷಯದ ವಿಶ್ಲೇಷಣೆ ಮಾಡಿರುವರು.

" ಯಜ್ಞ ಶಿಷ್ಟಾಶಿನಃ ಸಂತಃ ಮುಚ್ಯಂತೇ ಸರ್ವಕಿಲ್ಬಿಷೈಃ
ಭುಂಜತೇ ತೇತ್ವಘಂಪಾಪಾಯೇ ಪಚಂತ್ಯಾತ್ಮಕಾರಣಾತ್ ।। "

" ಯಜ್ಞೋವೈವಿಷ್ಣುಃ " ಎಂಬ ಪ್ರಮಾಣದಿಂದ ಯಜ್ಞ ಈ ಪದಕ್ಕೆ ವಿಷ್ಣು ಎಂದರ್ಥ. ವಿಷ್ಣು ಅಂದರೆ ಲಕ್ಷ್ಮೀವಲ್ಲಭನೆಂದರ್ಥವಿರದೆ ಜಗದ್ಭರಿತನಾದ ಪರಮೇಶ್ವರ ಎಂದರ್ಥ. ಆ ಪರಶಿವನೇ ಗುರು ಲಿಂಗ ಜಂಗಮ ಮೂದೆರನಾಗಿ ಮೆರೆಯುವನೆಂದು ಶಿವಾದ್ವೈತ ಸಿದ್ಧಾಂತವು ಸಾರುತ್ತದೆ. ಯಜ್ಞ ಶಿಷ್ಟವೆಂದರೆ ಗುರು ಲಿಂಗ ಜಂಗಮರ ಶೇಷಪ್ರಸಾದ,

ಯಜ್ಞ ಶಿಷ್ಟಾಶಿನಃ ಅಂದರೆ ಜಂಗಮ ದಾಸೋಹಗಳು. ಯಾರು ಶಿವಸ್ವರೂಪಿಗಳಾದ ಗುರುಲಿಂಗ ಜಂಗಮರಿಗೆ ಪದಾರ್ಥವನ್ನು ಸಲ್ಲಿಸಿ ಶೇಷಪ್ರಸಾದವನ್ನು ಸ್ವೀಕರಿಸುವರೋ ಅವರು ಭವಪ್ರಪಂಚವನ್ನು ದಾಟಿ ಶಿವಪ್ರಪಂಚದಲ್ಲಿದ್ದು ಶಿವಾನಂದದಲ್ಲಿ ಲೋಲಾಡುವರು ಶ್ರೌತ ಅಥವಾ ಸ್ಮಾರ್ತ ಯಜ್ಞಗಳು, ದೇವಯಜ್ಞ, ಪಿತೃಯಜ್ಞ. ಮೊದಲಾಗಿ ಐದು ಪ್ರಕಾರವೆಂದು ಹೇಳಲ್ಪಡುವಂತೆ ಶಿವ ಯಜ್ಞವೂ ಸಹ-

" ತಪಃ ಕರ್ಮ ಜಪೋ ಧ್ಯಾನಂ ಜ್ಞಾನಂ ಚೇತ್ಯನುಪೂರ್ವಕಂ ।
ಶಿವಾರ್ಥೇ ದೇಹ ಸಂಶೋಷಃ ತಪಃ ಕೃಚ್ಛ್ರಾದಿನೋತ್ತಮಂ ।
ಶಿವಾರ್ಚಾಕರ್ಮವಿಜ್ಞೇಯಂ ಬಾಹ್ಯಂಯಾಗಾದಿನೋಚ್ಯತೇ ॥
ಜಪಃ ಪಂಚಾಕ್ಷರಾಭ್ಯಾಸಃ ಪ್ರಣವಾಭ್ಯಾಸ ಏವವಾ ।
ರುದ್ರಾಧ್ಯಾಯಾದಿಕಾಭ್ಯಾಸೋ ನವೇದಾಧ್ಯಯನಾದಿಕಂ ॥
ಧ್ಯಾನಂ ಶಿವಸ್ವರೂಪಾದಿಚಿಂತಾ ನಾತ್ಮಾದಿ ಚಿಂತನಂ ॥
ಶಿವಾಗಮಾರ್ಥವಿಜ್ಞಾನಂ ಜ್ಞಾನಂ ನಾನ್ಯಾರ್ಥವೇದನಂ ।
ಇತಿ ಪಂಚಪ್ರಕಾರೋಽಯಂ ಶಿವಯಜ್ಞಃ ಪ್ರಕೀರ್ತಿತಃ ॥ "

ಪಂಚವಿಧವೆಂದು ಜಗದ್ಗುರು ರೇಣುಕರು ಸಿದ್ಧಾಂತಶಿಖಾಮಣಿಯಲ್ಲಿ ಪ್ರತಿಪಾದಿಸಿರುವರು ಈ ಪ್ರಮಾಣ ಶ್ಲೋಕದಲ್ಲಿ ಬರುವ, ತಪ, ಕರ್ಮ, ಜಪ, ಧ್ಯಾನ ಎಂಬ ಪದಗಳಿಗೆ ವಿಶಿಷ್ಟಾರ್ಥವು ಮಾಡಲ್ಪಟ್ಟಿದೆ.

ಶಿವಪೂಜೆಯ ಉಪಕರಣಗಳನ್ನು ಸಿದ್ಧಪಡಿಸುವದಕ್ಕೋಸುಗ ದೇಹದಂಡನೆ ಮಾಡುವದೇ ತಪಸ್ಸಲ್ಲದೆ ಕೃಚ್ಛ್ರ ಚಾಂದ್ರಾಯಣಾದಿ ಕಠಿಣ ವ್ರತಗಳಿಂದ ದೇಹವನ್ನು ಸೊರಗಿಸುವದು ತಪವಲ್ಲ. ಅಂಗೈಯೊಳಗಣ ಲಿಂಗವ ನೋಡುತ್ತ ಕಂಗಳ ಕೊನೆಯಲ್ಲಿ ಆನಂದಾಶ್ರು ಸುರಿವಹಾಗೆ, ಕಂಠಗದ್ಗದಿತವಾಗಿ, ತನು ರೋಮಾಂಚನ ಏಳುವಂತೆ ಲಿಂಗ ಪೂಜಾಸಂಭ್ರಮದಲ್ಲಿ ಲೋಲಾಡುವದೇ ಯಜ್ಞವಲ್ಲದೆ ಬಹುವಿತ್ತ, ಬಹುಶ್ರಮ, ಸಾಧ್ಯವಾದ ಯಜ್ಞವು ಯಜ್ಞವೇ ಅಲ್ಲ. ಶಿವ ಪಂಚಾಕ್ಷರ ಮಹಾಮಂತ್ರದ ಜಪಾನುಷ್ಠಾನವೇ ಜಪವಲ್ಲದೆ, ಸಾಂಗವೇದಾಧ್ಯಯನವು ಜಪವಲ್ಲ. ಸಚ್ಚಿದಾನಂದ ಸ್ವರೂಪವಾದ ಶಿವಲಿಂಗಮೂರ್ತಿಯ ಧ್ಯಾನವೇ ಧ್ಯಾನವಲ್ಲದೆ, ಪರಿಚ್ಛಿನ್ನದೇಹೇಂದ್ರಿಯಾದಿ ಉಪಾಧಿಗಳಿಂದ ಕೂಡಿದ ತಾನೇ " ಅಹಂಬ್ರಹ್ಮಾಸ್ಮಿ " ' ಸೋಹಂ ' ಎಂದು ಧ್ಯಾನಿಸುವದು ಧ್ಯಾನವಲ್ಲ. ಶಿವಾದ್ವೈತ ಸಿದ್ಧಾಂತ ಪ್ರತಿಪಾದಕಗಳಾದ ಶಿವಾಗಮಗಳ ಅರ್ಥವನ್ನು ಯತಾರ್ಥವಾಗಿ ತಿಳಿದುಕೊಳ್ಳುವದೇ ಜ್ಞಾನವಲ್ಲದೆ ಇತರ ಶಾಸ್ತ್ರಗಳ ಜ್ಞಾನವನ್ನು ಮಾಡಿಕೊಳ್ಳುವದು ನಿಜವಾದ ಜ್ಞಾನವಲ್ಲ.

ಪೂರ್ವಮೀಮಾಂಸಕರು ತಪಃ ಕರ್ಮ, ಮುಂತಾದ ಪಂಚಪದಗಳಿಗೆ ಹೇಳುವ ರೂಢಿಯ ಅರ್ಥವನ್ನು ಬದಿಗಿಟ್ಟು ಸುದೀರ್ಘ ಮೀಮಾಂಸೆಮಾಡಿ ಆ ಪಂಚಪದಗಳಿಗೆ ಬೇರೊಂದು ಗೂಢಾರ್ಥವನ್ನೇ ಮಾಡಿರುವರು.

ಬಾಹ್ಯಾಡಂಬರದಿಂದ ಕೂಡಿದ ಕರ್ಮಠರ ಯಜ್ಞವನ್ನು ನೋಡಿ –

" ಹೊರಗನೇ ಕೊಯ್ದು, ಹೊರಗನೇ ಪೂಜಿಸಿ, ಹೊರಗಾಗಿ
ಹೋಯಿತ್ತು ತ್ರಿಜಗವೆಲ್ಲ, " ರೂಪವನೇ ಕಂಡರು, ನಿರೂಪವನೇ
ಕಾಣರು, ಅನುವನೇ ಕಂಡರು, ಘನವನೇ ಕಾಣರು, ' ಆಚಾರವನೇ
ಕಂಡರು ವಿಚಾರವನೇ ಕಾಣರು ಗುಹೇಶ್ವರ ನಿಮ್ಮ ಕುರುಹನೇ
ಕಂಡರು ಕೂಡಲರಿಯದೇ ಕೆಟ್ಟರು "

" ಸತ್ತು ಹುಟ್ಟಿ ಕೆಟ್ಟವರೆಲ್ಲರೂ ದೇವಲೋಕಕ್ಕೆ ಹೋದರೆಂಬ
ಬಾಲಭಾಷೆಯ ಕೇಳಲಾಗದು. ಸಾಯದ ಮುನ್ನ ಸ್ವಯವನರಿ
ದೊಡೆ ದೇವನೊಲಿವ ಗುಹೇಶ್ವರ "

" ಸುತ್ತಿ ಸುತ್ತಿ ಬಂದಡಿಲ್ಲ ! ಲಕ್ಷಗಂಗೆಯ ಮಿಂದಡಿಲ್ಲ !
ತುತ್ತ ತುದಿಯ ಮೇರುಗಿರಿಯ ಮೆಟ್ಟಿ ಕೂಗಿದಡಿಲ್ಲ,
ನಿತ್ಯನೇಮದಿಂದ ತನುವ ಮುಟ್ಟಿಕೊಂಡೊಡಿಲ್ಲ,
ನಿಚ್ಚಕ್ಕೆ ನಿಚ್ಚನೆನೆವ ಮನವ ಚಿತ್ತದಲ್ಲಿ
ನಿಲ್ಲಿಸಬಲ್ಲಡೆ ಬಚ್ಚಬರಿಯಬೆಳಗು ಗುಹೇಶ್ವರಾ "

ಎಂದು ಮನದಲ್ಲಿ ಮರುಗಿ ಬಹಿರಂಗದಲ್ಲಿ ಮಾಡುವ ಈ ಯಜ್ಞಕ್ಕಿಂತಲೂ ಕೋಟಿ ಪಾಲು ಮಿಗಿಲೆನಿಸಿದ ಆತ್ಮಯಜ್ಞದ ರಹಸ್ಯವನ್ನು ತಿಳಿಸಿದರು.

" ಲೇಪಿಸಿದಹಂಕಾರವೇ ಪಶು ।
ಯೂಪಕಂಭವೆ ಮನಸು ಪವನ ।
ಸ್ಥಾಪಿತವೆ ಬಂಧಿಸುವ ಪಾಶ ವಿವೇಕವೇ ಶಸ್ತ್ರ ॥
ವ್ಯಾಪಿಸಿದಸುಜ್ಞಾನವಗ್ನಿ ಸ ।
ದಾ ಪುನೀತ ಪಯಾತ್ಮನಧ್ವರಿ ।
ಯಾಪರಿಯನರುಹಿಸಿದನಾ ಪ್ರಭು ಪರಮಮುನಿಗಳಿಗೆ ॥ "

ಅಹಂಕಾರವೇ ಒಂದುಪಶು, ಶುದ್ಧಾಂತಃಕರಣಯೂ ವಿವೇಕಸಂಪನ್ನನೂ ಆದ ಸಾಧಕನೇ ಅಧ್ವರ್ಯು, ನಕ್ಷತ್ರಮಂಡಲದಲ್ಲಿಯ ಚಂದ್ರಬಿಂಬದಂತೆ ರಾರಾಜಿಸುವ ಮತಿಯುಳ್ಳ ಮಾನವ ದೇಹವೇ ಧೂಮವಿಲ್ಲದ ಹೋಮಕುಂಡ, ಸದಮಲ ಚಿದಾನಂದ ಪರಿಪೂರ್ಣ ಪರಬ್ರಹ್ಮಜ್ಞಾನವೇ ಹೋಮಾಗ್ನಿ, ಪಾತಂಜಲ ಶಾಸ್ತ್ರೋಕ್ತ ಪ್ರಾಣಾಯಾಮ ತಾರಕಗಳಿಂದ ಮನಸ್ಸು ನಿರ್ಮಲವಾಗುವದು. ಈ ವಾಯುಬಂಧವೇ ಪಶುವನ್ನು ಕಟ್ಟುವ ಪಾಶ, ವಿಶ್ವದ ಆಗುಹೋಗುಗಳಿಗೆಲ್ಲ ಮನಸ್ಸೇ ಮೂಲವಾದದ್ದು. ಈ ಮನಸ್ಸೇ ಒಂದು ಯೂಪಸ್ತಂಭ, " ಹೇಯೋಪಾದೇಯ ವಿಚಾರೋ ವಿವೇಕಃ " ಮನನ ಸಾಮಗ್ರಿಯೇ ಸುವಿವೇಕ ಎನಿಸುವದು. ಕಲಬೆರಕೆಯಾದ ಕ್ಷೀರದಲ್ಲಿರುವನೀರನ್ನು ಬಿಟ್ಟು ಮಧುರವಾದ ಕ್ಷೀರವನ್ನೇ ಕುಡಿಯುವ ಹಂಸಪಕ್ಷಿಯಂತೆ, ಸಾಧನ ಚತುಷ್ಟಯ

ಸಂಪನ್ನನಾದ ಸಾಧಕನು 'ಬ್ರಹ್ಮಸತ್ಯಂ ಜಗನ್ಮಿಥ್ಯಾ' ಎಂಬುದನ್ನರಿತು, ದೃಕ್-ದೃಶ್ಯ, ಜ್ಞಾತೃ-ಜ್ಞೇಯ, ಮಾತೃ-ಮೇಯ, ಚೇತನ-ಜಡ ಇವುಗಳ ಪೃಥಕ್ಕರಣ ಮಾಡಿ ದಿಟವಾದುದನ್ನು ಗ್ರಹಿಸಬೇಕು. ಈ ಆತ್ಮಾನಾತ್ಮವಿಚಾರವೇ ಒಂದು ನಿಶಿತವಾದ ಆಯುಧ. "ಮಾಯಾಮಾತ್ರಮಿದಂದ್ವೈತಂ ಅದ್ವೈತಂ ಪರಮಾರ್ಥತಃ" ನಿತ್ಯವಾದುದು ಸತ್ಯವಾದುದು. ಪರಬ್ರಹ್ಮವೊಂದೇ. ಉಳಿದ ಸುಳ್ಳೆಲ್ಲವೂ ಹೋಮಾಗ್ನಿಗೆ ಹಾಕುವ ಆಹುತಿಯು. ನೇತಿನೇತಿ ಎಂದು ಕಳೆದುಳಿದ ಸತ್ಯವೇ ಶೇಷಪ್ರಸಾದವು. ನಿತ್ಯಾನಂದವೇ ಪರಮಸಂತೃಪ್ತಿ. ಶ್ರುತಿ, ಗುರು, ಸಖರ ಸದುಪದೇಶದಿಂದ ತಾನು ಜನನ ಮರಣಾದಿರಹಿತನು, ಅದ್ವಯನು ಅನಘನು , ನಿತ್ಯಮುಕ್ತನು, ಮಾಯಾವಿರಹಿತನು, ಸಚ್ಚಿದಾನಂದ ಸ್ವರೂಪನು ಎಂದು ತಿಳಿವುದೇ ಫಲವು. ಹೀಗೆ ಕರುಣಾಳುಗಳಾದ ಪ್ರಭುದೇವರು ವಿವಿಧಕಾಮನೆಗಳನ್ನು ಮನದಲ್ಲಿಟ್ಟುಕೊಂಡು ಹೋಮದ ನೇಮವಕೈಕೊಂಡು ವಾಮಮಾರ್ಗದಲ್ಲಿ ನಡೆವ ಮುನಿಗಳನ್ನು ಕುರಿತು ಆತ್ಮಯಜ್ಞದ ಅತ್ಯಪೂರ್ವ ವಿಧಿಯನ್ನು ತಿಳಿಸಿಹೇಳಿದರು.

ಜ್ಞಾನಯಜ್ಞವೇ ಸರ್ವಶ್ರೇಷ್ಠವೆಂದು ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಹೇಳಿರುವನು. ಅಂತೆಯೇ ಶ್ರುತಿಯು-

"ನಹಿಜ್ಞಾನೇನ ಸದೃಶಂ ಪವಿತ್ರಮಿಹವಿದ್ಯತೇ"

"ಜ್ಞಾನಾದೇವತು ಕೈವಲ್ಯಂ, ತತ್ತ್ವಜ್ಞಾನೇನ ಮುಕ್ತಿಸ್ಯಾತ್"

ಎಂದು ಸಾರುತ್ತದೆ.

ಲೋಕೋದ್ಧಾರಕ್ಕಾಗಿಯೇ ದೇಶಸಂಚಾರ ಕೈಕೊಂಡ ತೋಟಿಗನಾದ ಗೊಗ್ಗಯ್ಯನನ್ನು ಕಂಡು ಅವನಿಗೆ ಆವುದಾದರೊಂದು ಸಿದ್ಧಾಂತವನ್ನು ಹೇಳದೇ ತೋಟಗಾರಿಕೆಯ ಕೆಲಸಮಾಡುವಲ್ಲಿ ಜಾಣನಾದ ಅವನಿಗೆ ಈ ತನುವನ್ನೇ ತೋಟಮಾಡಿ ಅದರಲ್ಲಿರುವ ಭ್ರಾಂತಿಯೆಂಬ ಕರಿಕೆಯನ್ನು ಸುಮನವೆಂಬ ಗುದ್ದಲಿಯಿಂದ ಅಗಿದು ತೆಗೆದು ಲಿಂಗವೆಂಬ ಬೀಜವನ್ನು ಬಿತ್ತಿ ಪರಮಾನಂದವೆಂಬ ಬೆಳೆಯನುಣಬೇಕು ಎಂಬಮಾತನ್ನು-

"ತನುವ ತೋಂಟವಮಾಡಿ, ಮನವ ಗುದ್ದಲಿಯಮಾಡಿ
ಅಗಿದು ಕಳೆದೆನಯ್ಯಾ ಭ್ರಾಂತಿಯಬೇರ. ಒಡೆದು ಸಂಸಾರ
ಹೆಂಟೆಯ, ಬಗಿದು ಬಿತ್ತಿದೆನಯ್ಯ ಬ್ರಹ್ಮಬೀಜವ ....."

ಎಂಬ ವಚನದಿಂದ ಹೇಳಿರುವರು. ಇದರಂತೆ ಕೆರೆಕಾಲುವೆಗಳನ್ನು ಕಟ್ಟುವ ಶ್ರೀ ಸಿದ್ಧರಾಮೇಶ್ವರರು ಭೇಟಿಯಾಗಲು ಹೊರಗಿನಕೆರೆ,ಹೊರಗಿನ ದೇಗುಲಗಳನ್ನು ಕಟ್ಟುವದಕ್ಕಿಂತಲೂ ನಿಜವಾದದೇಗುಲ ಕೆರೆಗಳನ್ನುಕಟ್ಟುವ ವಿಲಕ್ಷಣವಿಧಾನವನ್ನು-

"ದೇಹವೇ ದೇಗುಲವಾಗಿರಲು ಬೇರೆಮತ್ತೆ ದೇಗುಲವೇತಕಯ್ಯಾ?
ಪ್ರಾಣವೇ ಲಿಂಗವಾಗಿರಲು ಬೇರೆ ಮತ್ತೆ ಲಿಂಗವೇತಕಯ್ಯಾ......"

"ತನುವೆಂಬ ಏರಿಗೆ ಮನವೆಂಬಕಟ್ಟೆ,
ಆನಂದವೆಂಬ ಕೋಡಿ ಹರಿದು, ಪರಮಾನಂದವೆಂಬ ಜಲವತುಂಬಿ,

ಕೆರೆಯು ಕಟ್ಟಬಲ್ಲವರನಾರನೂ ಕಾಣೆ !
ನಾ ಕಟ್ಟಿದ ಕೆರೆ ಸ್ಥಿರವಾಯಿತ್ತು ಗುಹೇಶ್ವರಾ ನಿಮ್ಮಾಣೆ

ಎಂಬ ತಾತ್ವಿಕ ವಚನಗಳಿಂದ ಉಪದೇಶಿಸಿದರು. ಇದರಂತೆ ಪಂಚಪಕ್ವಾನ್ನವನ್ನು ಸವಿದ ಸವಿಗಾರರನ್ನು ಕುರಿತು–

" ಅನುಭವದಡಿಗೆಯ ಮಾಡಿ ಆದ ಕನುಭವಿಗಳು
ಬಂದು ನೀವೆಲ್ಲ ಕೂಡಿ ಉಣ್ಣಿರೋ ಎಂದೂ,

ಮೈತುಂಬ ವಸ್ತ್ರ ಒಡವೆಗಳನ್ನಿಟ್ಟುಕೊಂಡು ಸಡಗರದಿಂದ ಮೆರೆವ ಅಲಂಕಾರ ಪ್ರಿಯನನ್ನು ಕುರಿತು–

" ಗುಣಗಳೇ ಭೂಷಣವಲ್ಲದೆ ಸರ್ವಕ್ಕು ।
ಮಣಿ ಹೇಮಾದಿಗಳು ಭೂಷಣವಲ್ಲವು " ಎಂದೂ

ಬೇಟೆಯಾಡುವ ಬೇಟೆಗಾರರನ್ನು ಕುರಿತು–

'' ಕಾಯ ಕಾಂತಾರವ ಹೊಕ್ಕು ಬೇಟೆಯನಾಡಿ ।
ಮಾಯಾ ಮೋಹದ ಮೃಗಗಳ ಕೊಲ್ಲಿರೊ " ಎಂದೂ,

ಗರಡೀಮನೆಯಲ್ಲಿ ಕಸರತ್ತು ಮಾಡುವ ಪೈಲವಾನರನ್ನು ಕುರಿತು–

'' ತನುವೆಂಬ ಗರಡಿಯೊಳನುಭವಧೀರರು ।
ಘನಯೋಗಸಾಧನೆಯ ಮಾಡಿರೋ ಎಂದೂ,

ಬೆಳಗಿನೊಳಗೆದ್ದು ಮೊಸರ ಕಡೆವ ಮಾನಿನಿಗೆ –

'' ಕಡೆದು ಸಾರವತೆಗೆದು ಸವಿವುದೀಪರಿ ತಂಗಿ ।
ಜಡಕೃತ್ಯದಿಂದ ಫಲವೇನು ಲಲಿತಾಂಗಿ'' ಎಂದೂ,

ಅವರವರು ನಿಂತ ಭೂಮಿಕೆಯಲ್ಲಿಯೇ ಅವರವರ ಮನಮೆಚ್ಚುವಂತೆ ತತ್ವವನ್ನು ತಿಳಿಸಿದರು. ಅಂತರಂಗಿಕ, ಪಾರಮಾರ್ಥಿಕ, ತಾತ್ವಿಕ ಅಂತಸ್ಸತ್ವವಿಲದ ಯಜ್ಞಯಾಗಾದಿ ಕ್ರಿಯೆಗಳಾಗಲಿ, ಲೌಕಿಕ–ಪಾರಮಾರ್ಥಿಕ ಕ್ರಿಯೆಗಳಾಗಲಿ ವ್ಯರ್ಥವಾದವುಗಳು.

ಬಹ್ಮಾಂಡದಲ್ಲಿ ಬಹಿರಂಗದೊಳಗೆ ನಡೆವ ಪ್ರವೃತ್ತಿಪರ ನಿವೃತ್ತಿಪರ ಕರ್ಮಗಳಿಗಿಂತಲೂ ಪಿಂಡಾಂಡದೊಳಗೆ ಸುಚಿತ್ತ, ಸುಬುದ್ಧಿ, ಸುಮನ, ಸುಜ್ಞಾನಗಳ ಸಾಮ್ರಾಜ್ಯದಲ್ಲಿ ನಡೆವ ಕ್ರಿಯೆಗಳು ಮೇಲೆಂಬುದು ಶ್ರೀ ಪ್ರಭುದೇವರ ಮತ್ತು ಉಳಿದ ಮಹಾನುಭಾವರ ಅಭಿಪ್ರಾಯವಾಗಿದೆ.

---

೨೧ನೆಯ ಗತಿ

## ಶ್ರೀಬಸವೇಶ್ವರರು ಶೂನ್ಯಸಿಂಹಾಸನವನ್ನು ರಚಿಸಿದುದು

ಶೂನ್ಯಸಿಂಹಾಸನ ಎಂಬುದು ಸಮಸ್ತಪದವಾಗಿದೆ. ಪಾತಂಜಲಯೋಗ ಶಾಸ್ತ್ರದಲ್ಲಿ ಪ್ರಾಮುಖ್ಯವಾಗಿ ೮೪ ಆಸನಗಳಿದ್ದು ಅವುಗಳಲ್ಲಿ ಸಿಂಹಾಸನ ಎಂಬುದೊಂದು ಆಸನವಿದೆ. ಸಿಂಹದಂತೆ ಬಾಯ್ದೆರೆದು ನಾಲಿಗೆ ಚಾಚಿ ವೀರಾಸನದಲ್ಲಿ ಕೂಡುವ ಒಂದು ದೈಹಿಕ ವಿನ್ಯಾಸಕ್ಕೆ ಸಿಂಹಾಸನ ಎಂದು ಕರೆಯುವರು. ಕುಳಿತುಕೊಳ್ಳುವ ಆಸನಗಳಲ್ಲಿಯೂ ದರ್ಭಾಸನ, ಕಂಬಲಾಸನ,ಚಿತ್ರಾಸನ, ಚರ್ಮಾಸನ ಮುಂತಾದ ವೈವಿಧ್ಯತೆಯುಂಟು. ರಾಜ ಮಹಾರಾಜರೂ, ಗುರುಗಳೂ ಕುಳಿತುಕೊಳ್ಳುವ ಸಿಂಹದ ಚಿಹ್ನವನ್ನೊಳಗೊಂಡ ಪೀಠಕ್ಕೆ ಸಿಂಹಾಸನ ಎಂದು ಕರೆಯುವರು. ತಮ್ಮ ಯುವರಾಜನಿಗೆ ಪಟ್ಟಾಭಿಷೇಕ ಮಾಡುವ ಮಹೋತ್ಸವದಲ್ಲಿ ಕುಳಿತುಕೊಳ್ಳುವ ಆಸನವು ರತ್ನಸಿಂಹಾಸನ ಮಣಿ ಖಚಿತ ಸಿಂಹಾಸನ ಎಂದು ಹೇಳಲ್ಪಡುವದು, ಬ್ರಹ್ಮಾಂಡವನ್ನು ಆಳುವ ಅಥವಾ ಲೌಕಿಕ ಸಾಮ್ರಾಜ್ಯವನ್ನು ಆಳುವ ಮಹಾರಾಜರು ಅಲಂಕರಿಸುವ ಪೀಠಕ್ಕೆ ಸುವರ್ಣಸಿಂಹಾಸನ ಎಂದು ಕರೆದರೆ, ಪಿಂಡಾಂಡವನ್ನು ಅಥವಾ ಅಂತಸ್ಸಾಮ್ರಾಜ್ಯವನ್ನು ಆಳುವ ಸದ್ಗುರುಗಳು ಮುಹೂರ್ತ ಮಾಡುವ ಸಿಂಹಾಸನಕ್ಕೆ ವೈರಾಗ್ಯಸಿಂಹಾಸನ, ಸದ್ಧರ್ಮಸಿಂಹಾಸನ, ಸೂರ್ಯಸಿಂಹಾಸನ ಎಂದು ಕರೆಯುವರು.

"ಬಯಲು ಬಯಲನೆ ಬಿತ್ತಿ, ಬಯಲು ಬಯಲನೆ ಬೆಳೆದು,
ಬಯಲು ಬಯಲಾಗಿ ಬಯಲಾಯಿತ್ತಯ್ಯ !
ಬಯಲ ಜೀವನ, ಬಯಲಭಾವನೆ,
ಬಯಲು ಬಯಲಾದೆ ಗುಹೇಶ್ವರ"

ಸಾಧಕನು ಏರಬಹುದಾದ ಕೊನೆಯ ನಿಲುವನ್ನುಮುಟ್ಟಿದ ಬಗೆಯು ಈ ವಚನದಲ್ಲಿ ಸುಸ್ಪಷ್ಟವಾಗಿದೆ. ಇಂತಹ ಉನ್ನತೋನ್ನತವಾದ ಮೇಲ್ಮಟ್ಟವನ್ನು ಮುಟ್ಟಿಬಯಲಿಗನಾದ ಪ್ರಭುವಿಗೆ ಮುಹೂರ್ತಮಾಡಲು ಅಂತಹ ಪೀಠವೇಬೇಕಲ್ಲವೇ ?

"ನತತ್ರ ಚಕ್ಷುರ್ಗಚ್ಛತಿ, ನವಾಕ್ ನೋಮನಃ
"ಈ ಒಡಲಿಲ್ಲದ ಬಯಲೊಳಗಡಗಿಪ್ಪ ಭೇದವ
ಈ ಲೋಕದ ಜಡರೆತ್ತಬಲ್ಲರೈ ರಾಮನಾಥ"

ಇಂತಹ ಬಯಲನ್ನು ಅಂದರೆ ಪರಸ್ಪರ ಪರವಸ್ತುವನ್ನು ನೆನೆನೆನೆದು ಬಯಲಿಗವಾದ, ವ್ಯೋಮಕಾಯ ಶೂನ್ಯಮೂರ್ತಿಗೆ ಕುಳಿತುಕೊಳ್ಳಲು ಶೂನ್ಯಪೀಠವೇ ಬೇಕಾಗಿತ್ತು.

ಶಬ್ದಾನುಶಾಸನದಲ್ಲಿ ಶೂನ್ಯ ಎಂಬ ಪದಕ್ಕೆ ಸೊನ್ನೆ ಅಂದರೆ ಏನೂ ಇಲ್ಲ. ಪಂಚ ಭೂತಗಳಲ್ಲೊಂದಾದ ಆಕಾಶ, ನಿರ್ಜನವಾದ ಪ್ರದೇಶ ಹೀಗೆ ಅರ್ಥಗಳಿದ್ದರೆ ಅಧ್ಯಾತ್ಮ ಶಾಸ್ತ್ರದ ಪ್ರಕ್ರಿಯೆಯಲ್ಲಿ ಈ ಪದಕ್ಕೆ ಬೇರೊಂದು ಪಾರಿಭಾಷಿಕಾರ್ಥವಿದೆ.

" ಓಂ ಪೂರ್ಣಮದಃ ಪೂರ್ಣಮಿದಂ
ಪೂರ್ಣಾತ್ ಪೂರ್ಣಮುದಚ್ಯತೇ ।
ಪೂರ್ಣಸ್ಯ ಪೂರ್ಣಮಾದಾಯ
ಪೂರ್ಣಮೇವಾವಶಿಷ್ಯತೇ ॥ "

ಉಪನಿಷತ್ತುಗಳು ಯಾವ ವಸ್ತುವನ್ನು ಅತ್ಯತಿಷ್ಠದ್ದಶಾಂಗುಲನೆಂದೂ, ಪೂರ್ಣನೆಂದೂ ಪ್ರತಿಪಾದಿಸುತ್ತವೆಯೋ ಆವಾಙ್ಮನಸಕ್ಕಗೋಚರವಾದ ಪರಾತ್ಪರ ಪರವಸ್ತುವನ್ನೇ ಶರಣರು, ಸಂತರು; ಬಯಲು, ನಿರ್ಬಯಲು,ನಿಶ್ಶೂನ್ಯ, ನಿರಂಜನ ಎಂದು ಕರೆಯುವರು. ಶೂನ್ಯವೆಂದರೆ ಏನೂ ಇಲ್ಲದ ಬರಿದಾದ ಶೂನ್ಯವಲ್ಲ. ಎಲ್ಲವನ್ನೂ ತನ್ನೊಳಗೆ ಗರ್ಭೀಕರಿಸಿ ಕೊಂಡು ಏನೊಂದೂ ದೃಗ್ಗೋಚರವಾಗದ ಪೂರ್ವಸ್ಥಿತಿಯೇ ಶೂನ್ಯವೆಂದು ಹೇಳಲ್ಪಡುವದು. ಬೀಜದಲ್ಲಿವೃಕ್ಷವು, ಅತಿಸೂಕ್ಷ್ಮವಾಗಿ ಅಡಗಿಕೊಂಡಂತೆ, ಆ ಶೂನ್ಯದಲ್ಲಿ ವಿಶ್ವದ ಸಮಸ್ತಅಂಶಗಳೂ ತೋರದಂತೆ ಅಡಗಿಕೊಂಡಿವೆ,
ಈ ವಿಷಯವನ್ನೇ—

" ಮರೀಚಿಯೊಳಗಣ ಬಿಸಿಲಿನಂತೆ ಇದ್ದಿತ್ತು,
ಕ್ಷೀರದೊಳಗಣ ತುಪ್ಪದಂತೆ ಇದ್ದಿತ್ತು,
ಚಿತ್ರಕನೊಳಗಡಗಿದ ಚಿತ್ರದಂತೆ ಇದ್ದಿತ್ತು,
ಅಲಿಯೊಳಗಣ ತೇಜದಂತೆ ಇದ್ದಿತ್ತು,
ನುಡಿಯೊಳಗಡಗಿದ ಅರ್ಥದಂತಿದ್ದಿತ್ತು,
ಕೂಡಲಚನ್ನಸಂಗಯ್ಯಾ ನಿಮ್ಮನಿಲವು. "

ಎಂದು ಚನ್ನಬಸವಣ್ಣನವರು ಹೇಳಿರುವರು. ಆ ಶೂನ್ಯವನ್ನೇ —

" ಆದಿ ಅನಾದಿ ಇಲ್ಲದಂದು, ಹಮ್ಮುಬಿಮ್ಮುಗಳಿಲ್ಲದಂದು,
ಸುರಾಳ ನಿರಾಳವಿಲ್ಲದಂದು, ಶೂನ್ಯನಿಶ್ಶೂನ್ಯವಿಲ್ಲದಂದು,
ಸಚರಾಚರವೆಲ್ಲ ರಚನೆಗೆ ಬಾರದಂದು,
ಗುಹೇಶ್ವರನೊಬ್ಬನೇ ಇದ್ದೆಯಲ್ಲ ಇಲ್ಲದಂತೆ "

ಇದ್ದೂ ಇಲ್ಲದಂತಿರುವ, ಸರ್ವಶೂನ್ಯ, ಎಂದು ಪ್ರಭುದೇವರು ಹೇಳಿರುವರು. ಆ ನಿರ್ಗುಣ ನಿರಾಕಾರ, ನಿರಂಜನ ಶೂನ್ಯದಿಂದ ಸಾಕಾರ, ಸಾವಯವ ಸೃಷ್ಟಿಯ ರಚನೆಯು ಹೇಗಾಯಿ ತೆಂಬುದನ್ನು ಹಾವಿನಹಾಳ ಕಲ್ಲಯ್ಯನು—

" ಬಯಲು ಮೊಳಗಿ ಮಳೆ ಸೃಜಿಸಿ ಆ ಬಯಲು
ಮಳೆಯನೊಡಗೂಡಿ ದೃಷ್ಟವಾಗಿಪ್ಪ ವಾರಿಕಲ್ಲಾಗಿ
ತೋರ್ಪಂತೆ ನಿಮ್ಮ ನೆನಹೇ ನಿಮಗೆ ಶಕ್ತಿಯಾಯಿತಲ್ಲಾ "

ಎಂಬ ವಚನದಲ್ಲಿ ದೃಷ್ಟಾಂತಪೂರ್ವಕ ಹೇಳಿರುವನು. ಪಿಂಡಾಂಡವು ಸೂಕ್ಷ್ಮವಾದಿ

ವ್ಯಷ್ಟಿಯಾಗಿ ಒಳಗಣ್ಣಿಗೆ ಮಾತ್ರ ತೋರುವದು. ಅಂದರೆ ಬ್ರಹ್ಮಾಂಡವು ಸ್ಥೂಲವಾಗಿ ಸಮಷ್ಟಿಯಾಗಿ ಪೃಥಿವ್ಯಾದಿ ಅಷ್ಟತನುಗಳಿಂದ ಕೂಡಿಕೊಂಡು ಹೊರಗಣ್ಣಿಗೆ ತೋರುವದು. ಬೀಜದಲ್ಲಿ ವೃಕ್ಷವು ಸೂಕ್ಷ್ಮವಾಗಿ ಅಡಗಿಕೊಂಡಿರುವಂತೆ ಬ್ರಹ್ಮಾಂಡವೆಲ್ಲವೂ ಪಿಂಡಾಂಡದಲ್ಲಿ ಅಡಕವಾಗಿದೆ. ಪಿಂಡಾಂಡ ಬ್ರಹ್ಮಾಂಡಗಳು ಬೀಜವೃಕ್ಷ ನ್ಯಾಯದಂತೆ ಅಂದರೆ ಬೀಜದಲ್ಲಿ ವೃಕ್ಷ, ವೃಕ್ಷದಲ್ಲಿ ಬೀಜವಿದ್ದಂತೆ ಪಾರಸ್ಪರಿಕ ಸಂಬಂಧವುಳ್ಳವುಗಳು.

" ಈಡೆ ಪಿಂಗಳ ವರ ಸುಷುಮ್ನಾ ।
ನಾಡಿಗಳು ಬಲಿದೆಂಟು ದಿಕ್ಕಿನ ।
ಕೋಡ ಕೈಯಲಿ ಮದಗಂಜಗಳು ಮೇಲು ನೆಲೆಯೊಳಗೆ ।
ಕೂಡೆ ಬೆಳಗುವ ಸೋಮಸೂರಿಯ ।
ರಾಡುತಿಹ ವೀದಿಗಳು ಭುವನದ ।
ಬೀಡಿದೆನಲಾ ಬಸವನೊಡ್ಡಿದನಂಬರಾಸನವ ॥
ಅಂಡ ಪಿಂಡ ನ್ಯಾಯವೊಂದೇ ।
ಕಂಡಿರೇ ಎಂದೆಂಬುದನು ಭೂ ।
ಮಂಡಲದೊಳಾ ಶೂನ್ಯಸಿಂಹಾಸನದಲರಿದಂತೆ ।
ದಂಡಿಯಾಗಿರೆ ನಿರ್ಮಿಸಿದ ನದ ।
ಕಂಡವರು ಬೆರಗಾಗೆ ಬಸವನು ।
ದಂಡನಾಯಕನಲ್ಲಮನ ಬರವಿಂಗೆ ಭರದಿಂದ ॥ "

ಮಸ್ತಕದ ಹಿಂಭಾಗದ ಪಶ್ಚಿಮ ಚಕ್ರದಲ್ಲಿ ಚಿತ್ಪ್ರಭೆಯಿಂದ ಬೆಳಗುವ ಶೂನ್ಯಪೀಠ, ಆಧಾರಾದಿ ಷಟ್‌ಚಕ್ರಗಳಲ್ಲಿರುವ ಆಚಾರಾದಿ ಆರುಲಿಂಗಗಳು, ಭಕ್ತ್ಯಾದಿ ಐಕ್ಯಾಂತ ಷಟ್‌ಸ್ಥಲಗಳು, ಷಟ್‌ಕಲೆಗಳು, ಷಡ್ಭಕ್ತಿಗಳು, ಷಟ್‌ಶಕ್ತಿಗಳು, ಸರ್ವಮಂತ್ರಗಳಿಗೂ ಮೂಲವೆನಿಸಿದ " ತಸ್ಯವಾಚಕಃ ಪ್ರಣವಃ " ಎಂಬ ಪಾತಂಜಲ ಯೋಗಸೂತ್ರದಂತೆ ಪರಬ್ರಹ್ಮವಾಚಕವಾದ ಮೂಲಮಂತ್ರ ಮುಂತಾದ ಪಿಂಡಾಂಡದ ಆಂತರಂಗಿಕ ತಾತ್ವಿಕ ಸಾಮಗ್ರಿಗಳಿಗೆ ಬಾಹ್ಯರೂಪವನ್ನು ಕೊಟ್ಟಂತಿರುವ ಚಂದ್ರಕಾಂತಶಿಲೆಗಳು, ಷಡ್ವಿಧ ಸೋಪಾನಗಳು, ಶೂನ್ಯಮೂರ್ತಿಯು ಮುಹೂರ್ತಮಾಡಲು ಸಿದ್ಧಪಡಿಸಿದ ರತ್ನ ಖಚಿತವಾದ ಮಣಿಪೀಠ, ಆ ಶೂನ್ಯ ಪೀಠದ ಸುತ್ತುಮುತ್ತು ಛತ್ರಚಾಮರಗಳನ್ನು ಹಿಡಿದುಕೊಂಡು ಬೀಸುವ ಸುಮಂಗಲೆಯರು, ಮಾಯಾ ಕೋಲಾಹಲ ಪ್ರಭುವಿಗೆ ಜಯವಾಗಲಿ ! ಜಯವಾಗಲಿ !! ಎಂದುಉುಗ್ಘಡಿಸುವ ಸ್ತುತಿಪಾತಕರು ಇತ್ಯಾದಿ ಬಾಹ್ಯ ಮೌಲಿಕವಸ್ತುಗಳಿಂದಲೂ ಸಲಕರಣೆಗಳಿಂದಲೂ ಶೂನ್ಯಸಿಂಹಾಸನವು ನಿರ್ಮಾಣ ವಾಯಿತು.

೩೨ನೆಯ ಗತಿ

# ಪ್ರಭುದೇವರು ಶೂನ್ಯಸಿಂಹಾಸನ ಏರಿದುದು

" ಶರಣ ಸತಿ ಲಿಂಗಪತಿ " ಎಂಬ ಷಟ್‌ಸ್ಥಲ ಸಿದ್ಧಾಂತದಂತೆ ಸತಿಯಾದ ಶರಣ ಪುಂಗವ ಶ್ರೀಬಸವೇಶ್ವರರು " ಸತಿಪತಿಗಳಿವರ ಸಮರತಿಸುಖದ ಬಾಳುವೆಗೆ ಪ್ರತಿಯುಂಟೆ ಲೋಕದೊಳು ನೋಡೆ ಲಲಿತಾಂಗಿ " ಎಂಬ ನಿಜಗುಣ ಶಿವಯೋಗಿಗಳ ಉಕ್ತಿಯಂತೆ, ಅಚ್ಚಳಿಯದ ವಿಷಯೇಂದ್ರಿಯ ಸನ್ನಿಕರ್ಷಣದಿಂದಾಗದ ನಿತ್ಯ ನಿರಂತರ ಸುಖಾಪೇಕ್ಷೆಯಿಂದ ನಿರಾಭಾರಿನಿರಂಜನ ಜಂಗಮವರೇಣ್ಯ ಶ್ರೀಪ್ರಭುದೇವರ ಆಗ ಮನದ ನಿರೀಕ್ಷಣೆ ಮಾಡುತ್ತಿದ್ದರು.

" ನತತ್ರ ಚಕ್ಷುರ್ಗಚ್ಛತಿ, ನವಾಗ್ಗಚ್ಛತಿ, ನೋಮನಃ "

ದೃಶ್ಯಪದಾರ್ಥಗಳಂತೆ ಇಂದ್ರಿಯ ಗೋಚರವಲ್ಲದ ದಿಕ್ಕಾಲಾದ್ಯನವಚ್ಛಿನ್ನ ಆಪರವಸ್ತುವಿನ ಸಾಕ್ಷಾತ್ಕಾರದಲ್ಲಿ ಮುಮುಕ್ಷುವಿಗೆ ಸದ್ಗುರುವಿನ ಅತ್ಯಗತ್ಯವಿದೆ. ಅಂತೆಯೇ ಶ್ರುತಿ-

" ಗುರುಬ್ರಹ್ಮಾಃ, ಗುರುರ್ವಿಷ್ಣುಃ ಗುರುರ್ದೇವೋ ಮಹೇಶ್ವರಃ ।
ಗುರುಸ್ಸಾಕ್ಷಾತ್ ಪರಬ್ರಹ್ಮ " ಎಂದು ಸಾರುತ್ತದೆ. ಗುರುಹರರಲ್ಲಿ

ಭೇದವಿಲ್ಲ. ಗುರುವೇ ಹರನು, ಹರನೇ ಗುರುವು. ಗುರುಮಹಿಮೆಯನ್ನು ಹೇಳುವ ಪ್ರಸಂಗದಲ್ಲಿ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ "ಹರ ಮುನಿದರೆ ಗುರು ಕಾಯುವ, ಗುರು ಮುನಿದರೆ ಹರಕಾಯನು" ಎಂಬ ನಾಣ್ಣುಡಿಯನ್ನು ಹೇಳುವರು. " ಶಿವಪಥವ ನರಿವೊಡೆ ಗುರುಪಥವೇ ಮೊದಲು " ಎಂದು ಮುಂತಾಗಿ ಶ್ರೀ ಬಸವೇಶ್ವರರೂ, ಶ್ರೀ ಗುರುವಿನ ಮಹಿಮೆಯನ್ನು ಹೇಳಿರುವರು.

" ಸಮುದ್ರದೊಳಗಿನ ಸಿಂಪಿನಂತೆ ಬಾಯಿ ಬಿಡುತ್ತಲಿದ್ದೆನಯ್ಯಾ "

" ಅಯ್ಯಾ ಅಯ್ಯಾ ಎಂದು ಕರೆಯುತ್ತಲಿದ್ದೇನೆ,
ಅಯ್ಯಾ ಅಯ್ಯಾ ಎಂದು ಒರಲುತ್ತಲಿದ್ದೇನೆ,
ಓ ಎನ್ನಲಾಗದೇ ಅಯ್ಯಾ ಆವಾಗಲೂ ನಿಮ್ಮ ಕರೆಯುತ್ತಲಿದ್ದೇನೆ
ಮೌನವೇ ಕೂಡಲಸಂಗಮದೇವ "

ಸುದೀರ್ಘಕಾಲ ಹೋಗಿ ಮರಳಿಬಾರದ್ದಕ್ಕೆ ಹಂಬಲಿಸಿ ಹಲುಬುವ ನುಡಿಗಳಿವು. ಭಕ್ತನ ಉತ್ಕಟ ಆರ್ತಧ್ವನಿಗೆ ಅಥವಾ ದೃಢ ಸಂಕಲ್ಪಕ್ಕೆ ಓಗೊಟ್ಟು ಜಗದ್ಭರಿತನಾದ ದೇವರು ಗುರುರೂಪವ ತಾಳ್ದು ಬರುವನು. ಹಾಗೆ ಚರಕುಲಸಾರ್ವಭೌಮನೆನಿಸಿದ ನಿರಂಜನ ನಿರಾಭಾರಿ ಪ್ರಭುದೇವರು ಬರಲು ಶ್ರೀಭಕ್ತಿಭಾಂಡಾರಿ ಬಸವೇಶ್ವರ, ಕರ್ಮಯೋಗಿ ಸಿದ್ಧರಾಮ ಮೊದಲಾದ ಮಹಾನುಭಾವರು ಮತ್ತು ಅಕ್ಕನಾಗಮ್ಮ, ಅಕ್ಕಮಹಾದೇವಿ ಕಲ್ಯಾಣಮ್ಮ, ಲಿಂಗಮ್ಮ ಮೊದಲಾದ ಸುಮಂಗಲೆಯರು, ಕಳಸಕನ್ನಡಿ ಹಿಡಿದು, ವಾದ್ಯ ವೈಭವದೊಡನೆ ಸಡಗರದಿಂದ " ಮಾಯಾಕೋಲಾಹಲ ಪ್ರಭುವಿಗೆ ಜಯವಾಗಲಿ ಎಂದು ಉದ್ಘೋಷಿಸುತ್ತ, ಚರಕುಲದೊರೆಯೇ ! ನಿನಗಾರು ಸರಿಯೇ ! ಸರಿಸರಿ ಎಂದವರ

ಹಲ್ಲು ಮುರಿಯೇ » ಎಂದು ಪರಾಕು ಹೇಳುತ್ತ ಎದುರ್ಗೊಂಡು ಬರಮಾಡಿಕೊಂಡರು. ಚಿತ್ಪ್ರಭಾಪುಂಜದಂತಿರುವ ವಿರಾಗವಿಭು ಪ್ರಭುದೇವರು ಬಸವಣ್ಣನವರ ಭಕ್ತಿಪರೀಕ್ಷೆ ಮಾಡಲೋಸುಗ ಶಿವಯೋಗಿಗಳಂತೆ ದಂಡ ಕಮಂಡಲುಗಳನ್ನು ಹಿಡಿದು ರುದ್ರಾಕ್ಷಿಮಾಲೆ, ವಿಭೂತಿ ಧರಿಸದೆ ವಿಕೃತ ವೇಷವ ತಳೆದು ಬಂದರೂ ಕಲ್ಯಾಣ ಪಟ್ಟಣದ ಓಣಿ ಓಣಿಗಳಲ್ಲಿ ಬೀದಿ ಬೀದಿಗಳಲ್ಲಿ, ಮನೆ ಮನೆಗಳಲ್ಲಿ ಪ್ರಭುವು ಬಹುರೂಪ ತಾಳಿ ತೋರಿದನು.

" ಕೇರಿಕೇರಿಯೊಳಾಡುತಿಹ ಸುಕು ।
ಮಾರಕರ ಕಂಡಾಡುವನು ಪರಿ ।
ವಾರದೊಳು ದಿಟದಂತೆ ಪಾಯಕತನವ ಪಸರಿಸುವ ॥
ಆರು ಕಂಡರೆಯವರವರವೊಲು ಸಾ ।
ಸಾಕಾರನಾಗಿಹನಲ್ಲದೊಂದು ಶ ।
ರೀರನೆತಾನಲ್ಲೆಂಬುದನು ತೋರಿದನು ಪ್ರಭುರಾಯ ॥ "

" ಉಟ್ಟು ತೊಟ್ಟು ಪೂಜ್ಯನಾಗಿ ಬಂದ ಜಂಗಮವೇ ವಿಶೇಷವೆಂದು
ಕಂಥೆ ಬೊಂತೆಯ ಜಂಗಮ ಬಂದಡೆ ಹೀನವೆಂದು
ಕಂಡೆನಾದೊಡೆ ಪಂಚಮಹಾಪಾತಕ, ಇದು ಕಾರಣ
ಅನ್ನವಸ್ತ್ರ ಧನ ಮಾಟದಲ್ಲಿ ಎರಡಾಗಿ ಕಂಡೆನಾದೊಡೆ
ನರಕದಲ್ಲಿಕ್ಕುವ ಕೂಡಲಸಂಗಮದೇವ "

ವಿಕೃತ ವೇಷವನ್ನುಟ್ಟು ವಿಕೃತರೂಪವತಳೆದ ಶ್ರೀ ಪ್ರಭುದೇವರ ನಿಜವಾದ ನಿಲವು ಪರಿಶುದ್ಧಾಂತಃಕರಣವುಳ್ಳ ಬಸವದಂಡಾಧೀಶನಿಗೆ ತಿಳಿಯದಿರಲಿಲ್ಲ. "ಗುಡಿ ತೋರಣವ ಕಟ್ಟಿ ಷಡುಸಮ್ಮಾರ್ಜನೆ ಮಾಡಿ ಉಘೇ ಚಾಂಗುಭಲಾ ಎಂಬೆ.''– " ಇಂದೆನ್ನ ಮನೆಗೆ ಪ್ರಮಥರು ಬಂದಿಹರೆಂದು ಆನಂದದಿಂದ ಕುಣಿದಾಡುವೆನು "ಎಂದು ಬಸವ, ಚನ್ನಬಸವ, ಸಿದ್ಧರಾಮ ಮುಂತಾದವರು ಭಕ್ತಿಪರವಶರಾಗಿ ಏಕಕಂಠದಿಂದ ಶೂನ್ಯ ಮೂರ್ತಿಯನ್ನು ಬಣ್ಣಿಸುತ್ತ–

" ದಳವಿಲ್ಲದ ಕುಸುಮದ ಗದ್ದುಗೆಯಲ್ಲಿ,
ಒಡಲಿಲ್ಲದ ಘನವು ಮೂರ್ತಿಗೊಂಡಿರೆ
ವಿಚಿತ್ರವಾಯಿತ್ತು ಜಗವೆಲ್ಲ.
ಕೂಡಲಸಂಗಮದೇವರ ಶರಣಪ್ರಭುದೇವರ
ಶ್ರೀಪಾದಕ್ಕೆ ನಮೋನಮೋ ಎಂಬೆನು. "

ಎಂದು ಸಾಷ್ಟಾಂಗವೆರಗುತ್ತ ಶೂನ್ಯಸಿಂಹಾಸನದಲ್ಲಿ ಕುಳ್ಳಿರಿಸಿ ಷೋಡಶೋಪಚಾರಗಳಿಂದ ಪೂಜೆಮಾಡಿದರು.

---

೨೩ನೆಯ ಗತಿ

## ಪ್ರಭುದೇವರು ಆರೋಗಣೆ ಮಾಡಿದುದು

ಕರ್ತಾರನ ಕಮ್ಮಟವೆನಿಸಿದ ಈ ಕರ್ಮಲೋಕದಲ್ಲಿ ನಾವೆಲ್ಲರೂ ಶಾರೀರಿಕ, ಬೌದ್ಧಿಕ, ಮಾನಸಿಕ, ಆತ್ಮಿಕ ಸಂಪತ್ತನ್ನುಪಡೆದುಕೊಂಡು ಸುದೀರ್ಘಕಾಲ ಅಂದರೆ ನೂರಾರು ವರ್ಷ ಹರ್ಷಪಡೋಣ ಎಂದುಮಂತ್ರ ದೃಷ್ಟಾರರಾದ ಋಷಿಗಳು ಹೇಳಿದ್ದಾರೆ.

ಪಾರಮಾರ್ಥಿಕ ಜೀವನ್ನ ಸಾಗಿಸುವ ಮುಮುಕ್ಷುವಿಗೆ ಶಮದಮಾದಿ ಸಂಪತ್ತಿಯು ಅತ್ಯವಶ್ಯಬೇಕಾದಂತೆ, ಐಹಿಕಜೀವನವು ಸೊಗಸಿನ ಸುಗ್ಗಿಯಾಗಬೇಕಾದರೆ ಅನ್ನ ವಸ್ತ್ರಾದಿಗಳು ಅತ್ಯವಶ್ಯಬೇಕು. ಜಗದಲ್ಲಿ ತೋರುವ ಬಗೆಬಗೆಯ ಪ್ರಾಣಿಕೋಟಿಯ ಉಗಮವೆಲ್ಲವೂ ಅನ್ನದಿಂದಲೆ.

'ಅನ್ನಂ ಬ್ರಹ್ಮ' ಎಂಬುದೊಂದು ಅನುಭಾವಿಗಳ ಮಹಾವಾಕ್ಯವಿದೆ. ಕಣ್ಣಿಗೆ ಕಾಣದ ಸಂಕಲ್ಪ ವಿಕಲ್ಪ ಆತ್ಮದ ಮನಸ್ಸಿಗೆಹೊಳೆಯದ, ನಿಶ್ಚಯಾತ್ಮಕ ಬುದ್ಧಿಗೆ ತಿಳಿಯದೇ ಇರುವ ಬ್ರಹ್ಮಕ್ಕಿಂತಲೂ ಚಕ್ಷುಷಾದಿ ಇಂದ್ರಿಯಗಳಿಗೆ ಕಾಣುವ ಸಕಲ ಜೀವರಾಸಿಯ ಬದುಕಿಗೆ ಆಧಾರವಾದ ಅನ್ನವೆಂಬ ಬ್ರಹ್ಮವು ಮೇಲಿನದು. ಮಾನವನಲ್ಲಿರುವ ಪ್ರಾಣಮಯಾದಿ ಪಂಚಕೋಶಗಳಲ್ಲಿ ಪ್ರಥಮಸ್ಥಾನವು ಅನ್ನಮಯ ಕೋಶಕ್ಕೇನೇ ಇರುವದು.

"ಅನ್ನ ದೇವರ ಮುಂದೆ ಇನ್ನು ದೇವರು ಉಂಟೆ ।
ಅನ್ನವಿರುವನಕ ಪ್ರಾಣವೀ ಜಗದೊಳಗೆ ।
ಅನ್ನವೇದೇವ ಸರ್ವಜ್ಞ ॥

ಎಂಬ ತ್ರಿಪದಿಯು ಮೇಲ್ಕಾಣಿಸಿದ ಅಭಿಪ್ರಾಯವನ್ನೇ ಸಮರ್ಥಿಸುತ್ತದೆ. "ಎಲ್ಲರೂ ಮಾಡುವದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ" ಎಂಬ ದಾಸರಹಾಡಿನಲ್ಲಿ ಹೊಟ್ಟೆಯ ವಿಚಾರಕ್ಕೇ ಬಹಳಮಹತ್ವ ಕೊಡಲಾಗಿದೆ. ತುತ್ತು ಹೆತ್ತವರನ್ನೂ ಮರೆಸಿತ್ತು, ಹೊಟ್ಟೆ ಹೊಲಗೇರಿ ಹೊಗಿಸಿತು ಮುಂತಾದ ಹಳ್ಳಿಗರ ಸೂಕ್ತಿಗಳು ಅನ್ನದ ಮಹತ್ವವನ್ನು ಉದ್ಘೋಷಿಸುತ್ತವೆ. ನೂತನ ವಧುವರರಿಗೆ 'ಅಕ್ಷತಾರೋಪಣ' 'ದೀಕ್ಷಾದಿ ಧಾರ್ಮಿಕ ವಿಧಾನ' ೯ಥೋತ್ಸವ, ಪ್ರಚಂಡ ದುಃಖದ ಸನ್ನಿವೇಶ ಇತ್ಯಾದಿ ಪ್ರಸಂಗಗಳಲ್ಲಿ ಭೋಜನ ಸಮಾರಂಭಕ್ಕೆ ಅಗ್ರ ಸ್ಥಾನವಿದೆ. ಮಾತೃದೇವೋಭವ, ಪಿತೃದೇವೋಭವ, ಆಚಾರ್ಯ ದೇವೋಭವ. ನವಮಾಸ ಹೊತ್ತು ಹೆತ್ತು ಸಾಕಿಸಲಹಿದ ತಾಯ್ತಂದೆಗಳನ್ನು ಮತ್ತು ಪರಮಾರ್ಥವನ್ನು ತೋರಿಸಿಮುಕ್ತನನ್ನಾಗಿ ಮಾಡುವ ಗುರುದೇವರನ್ನೂ ದೇವರೆಂದು ತಿಳಿ ಎಂದು ಹೇಳುವಾಗ ಅತಿಥಿ ದೇವೋಭವ ಎಂದು ವೇದವು ಹೇಳುತ್ತದೆ. ಅತಿಥಿ ಎಂದರೆ ಅಕಸ್ಮಾತ್ತಾಗಿ ಊಟದ ವೇಳೆಗೆ ಬಂದ ವ್ಯಕ್ತಿ ಎಂದು ಅರ್ಥವಾಗುತ್ತಿದ್ದರೂ ವೀರಶೈವ ಸಿದ್ಧಾಂತದಲ್ಲಿ ಅತಿಥಿ ಎಂದರೆ ಅಷ್ಟಾವರಣಾಂತರ್ಗತ ಜಂಗಮ ಎಂದು ಅರ್ಥವಿದೆ.

" ಸರ್ವಲೋಕೋಪಕಾರಾಯ ಯೋದೇವಃ ಪರಮೇಶ್ವರಃ ।
ಚರತ್ಯತಿಥಿರೂಪೇಣ ನಮಸ್ತೇ ಜಂಗಮಾತ್ಮನೇ ॥ "

ಎಂಬ ಶಿವಾಗಮ ಶ್ಲೋಕದಿಂದ ತಿಳಿದುಬರುವದು.

ಅಗ್ನಿಯ ಮುಖಾಂತರವೇ ದೇವಾಧಿದೇವತೆಗಳು ಆಜ್ಯ ಭೋಜ್ಯಗಳನ್ನು ಸ್ವೀಕರಿಸಿ ಸಂತೋಷಪಡುವಂತೆ ಉದರಾಗ್ನಿಯ ಮುಖಾಂತರವೇ ಶರೀರದಲ್ಲಿರುವ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೂ ಅಂತಃಕರಣ ಚತುಷ್ಟಯವೂ ಚೈತನ್ಯಹೊಂದಿ ತಮ್ಮತಮ್ಮ ಕೆಲಸಮಾಡುತ್ತವೆ. ಸಮಾಜದಲ್ಲಿ ಲಕ್ಷೋಪಲಕ್ಷ ದೀನರು, ದಲಿತರು, ಅನಾಥರು ಹೊಟ್ಟೆಗೆ ಹಿಡಿ ಹಿಟ್ಟಿಲ್ಲದೆ ಮೈಗೆ ಗೇಣುಬಟ್ಟೆಯಿಲ್ಲದೆ ದಿಕ್ಕೆಟ್ಟು ದುಃಖದಿಂದ ಕಣ್ಣೀರು ಸುರಿಸುವಾಗ ಕಾಣದ ಸ್ವರ್ಗಕ್ಕಾಗಿ ಮತ್ತಾವುದೋ ಒಂದು ಪರೋಕ್ಷಪದವಿಗಾಗಿ ಆಶೆ ಮಾಡಿ ಬೆಂಕಿಯಲ್ಲಿ ಆಜ್ಯಭೋಜ್ಯಗಳನ್ನ ಸುರಿಸಿ ಯಜ್ಞಮಾಡುವದು ವಿವೇಕಿಗಳೊಪ್ಪದ ವಿಷಯು.

" ಕಿಚ್ಚುದೈವವೆಂದು ಹವಿಯನಿಕ್ಕುವಹಾರುವರು ಕಿಚ್ಚೆದ್ದು ಮನೆಯ ಸುಡುವಾಗ
ಬಚ್ಚಲ ನೀರ ಬೀದಿಯ ಧೂಳವ ಹೊಯ್ದು ಬೊಬ್ಬಿಟ್ಟು ಎಲ್ಲರ ಕರೆವರಯ್ಯಾ ।
ವಂದನೆಯ ಮರೆದು ನಿಂದಿಸುತಲಿರ್ದರಯ್ಯಾ ಕೂಡಲಸಂಗಮದೇವಾ "

ಎಂದು ಬಸವಣ್ಣನವರು ಯಜ್ಞವನ್ನು ತಿರಸ್ಕರಿಸಿರುವರು. ಸುಪ್ರಸಿದ್ಧಸಂತರಾದ ಶ್ರೀಸ್ವಾಮಿರಾಮತೀರ್ಥರು ಯಜ್ಞರಹಸ್ಯ ಎಂಬ ತಮ್ಮ ವ್ಯಾಖ್ಯಾನದಲ್ಲಿ ಎಲ್ಲ ಯಜ್ಞಗಳಿಗಿಂತಲೂ ಈ ಯಜ್ಞವೇ ಅತೀವ ಶ್ರೇಷ್ಠವಾದುದು ಎಂದು ಹೇಳಿರುವರು.

ಬಡವರ ಹಸಿವು ತೃಷೆಗಳನ್ನು ಹಿಂಗಿಸುವದಕ್ಕಾಗಿ ಮಹಾಜನಗಳು ಅನ್ನಛತ್ರ ಅರವಟ್ಟಿಗೆಗಳನ್ನು ಇಡುವದು ಜಗತ್ಪ್ರಸಿದ್ಧವಿದೆ. ಧರ್ಮದ ಕೇಂದ್ರ ಬಿಂದುವೆನಿಸಿರುವ ಧರ್ಮಕ್ಷೇತ್ರಗಳೆನಿಸಿದ ಧರ್ಮಪೀಠಗಳಲ್ಲಿ ಇಂದಿಗೂ ನಿರಂತರ ಜಂಗಮದಾಸೋಹ ನಡೆಯಿಸುವ ಸತ್ ಸಂಪ್ರದಾಯವಿದೆ. ಲಿಂಗಧಾರಣ, ದೀಕ್ಷಾವಿಧಾನ, ಮೊದಲಾದ ಸಂಸ್ಕಾರ ಮಾಡುವ ಮಠಗಳು ಗುರುಸ್ಥಲ ಮಠಗಳೆಂದೂ ಮತ್ತು ಹಳ್ಳಿಗೇಕರಾತ್ರಿ ಪಟ್ಟಣಕ್ಕೆ ಪಂಚರಾತ್ರಿಯಂತಿದ್ದು ಶಿವಯೋಗಾನುಷ್ಠಾನ ಮಾಡುವಮಠಗಳು ವಿರಕ್ತಮಠಗಳೆಂದೂ ಹೇಳಲ್ಪಡುವಂತೆ ಅನ್ನದಾಸೋಹ ನಡೆಯಿಸುವ ಮಠಗಳು ದಾಸೋಹ ಮಠಗಳೆಂಡೇ ಪ್ರಸಿದ್ಧಿ ಪಡೆದಿರುತ್ತವೆ.

" ಕಲ್ಲನಾಗರ ಕಂಡರೆ ಹಾಲನೆರೆ ಎಂಬರಯ್ಯ ದಿಟನಾಗರ ಕಂಡರೆ
ಕೊಲ್ಲೆಂಬರಯ್ಯ, ಉಂಬುವ ಜಂಗಮ ಬಂದರೆ ನಡೆ ಎಂಬರಯ್ಯ,
ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯ ಕೂಡಲ ಸಂಗಮದೇವ "

ಎಂಬ ವಚನ ರಚಿಸಿರುವರು.

" ಎರೆದರೆ ನೆನೆಯದು, ಮರೆದರೆ ಬಾಡದು, ಹುರುಳಿಲ್ಲ ಹುರುಳಿಲ್ಲ ಲಿಂಗಾರ್ಚನೆ,
ಕೂಡಲಸಂಗಮದೇವಯ್ಯ ಜಂಗಮಕ್ಕೆರೆದರೆ ಸ್ಥಾವರ ನೆನೆಯಿತ್ತು "

" ಆಡುತ್ತ ಹಾಡುತ್ತ ಮಾಡಬಹುದು ಭಕ್ತಿಯ ಲಿಂಗಕ್ಕೆ "
ಅದು ಬೇಡದು ಬೆಸಗೊಳ್ಳದು, ತಂದೊಮ್ಮೆ ನೀಡಬಹುದು,

ಕಾಡುವ ಬೇಡುವ ಜಂಗಮ ಬಂದರೆ ನೀಡಲು ಬಾರದು
ಕೂಡಲ ಸಂಗಮದೇವಾ "

ಮುಂತಾದವಚನಗಳು ಲಿಂಗಕ್ಕಿಂತಲೂ ಜಂಗಮವೇಮೇಲು ಎಂಬುದನ್ನು ಸಮರ್ಥಿಸುತ್ತವೆ. ಲಿಂಗ ಮತ್ತು ಜಂಗಮರ ಸಂಬಂಧ ಬೇರೆಬೇರೆಯಾಗಿ ಬಹಿರಂಗದ ದೃಷ್ಟಿಗೆ ಕಂಡರೂ ಅವರೀರ್ವರ ಪಾರಸ್ಪರಿಕ ಸಂಬಂಧ ಅತೀವನಿಕಟವರ್ತಿಯಾಗಿದೆ.

" ಸ್ಥಾವರಕ್ಕೆ ಬಾಯಿ ಜಂಗಮ " " ಜಂಗಮಕ್ಕೆರೆದರೆ ಸ್ಥಾವರ ನೆನೆಯಿತ್ತು "
" ಭಕ್ತಿಯೆಂಬ ಭಾಂಡಕ್ಕೆ ಜಂಗಮವೇ ಸುಂಕಿಗ "

ಚೈತನ್ಯ ಮೂರ್ತಿಗಳೆನಿಸಿದ ಜಂಗಮ ಪುಂಗವರನ್ನು ಅನಾಥರಾದ ದೀನದಲಿತರನು ಬಿಟ್ಟು ಕಾಡದ, ಬೇಡದ, ನೋಡದ,ಉಣ್ಣದ, ತಿನ್ನದ, ಜಡವಾದ ಪ್ರತಿಮೆಗಳಿಗೆ ಉಣಿಸಿ ತಣಿಸುವ ಭ್ರಮೆಯುಳ್ಳ ಜಡಮತಿಗಳನ್ನು ಕರುಣಾಳುಬಸವೇಶ್ವರರು ತಿರಸ್ಕರಿಸಿರುವರು.

ಅಂಗದಲ್ಲಿ ಲಿಂಗವರತು, ಲಿಂಗದಲ್ಲಿ ಅಂಗವರತು ಒಡಲುಪಾಧಿ ಇಲ್ಲದ, ನಿಂದಡೆ ನೆಳಲಿಲ್ಲದ, ಸುಳಿದಡೆ ಹೆಜ್ಜೆಯಿಲ್ಲದ, ಮಾತೆಯಿಲ್ಲದಜಾತನ, ಗಮನವಿಲ್ಲದಗಮ್ಯನ, ಅಪರಿಮಿತ ಘನಮಹಿಮನಾದ ಪ್ರಭುವು–

" ಬಿರುಗಾಳಿ ಬೀಸಿ ಮರ ಮುರಿವಂತೆ ಸುಳುಹ ಸುಳಿಯದೆ
ತಂಗಾಳಿ ಪರಿಮಳದೊಡಗೂಡಿ ಸುಳಿವಂತೆ ಸುಳಿಯಬೇಕು ಜಂಗಮ "

ಎಂಬುಕ್ತಿಯಂತೆ ಸದ್ಭಕ್ತರ ಮನದ ಮೊಗ್ಗುಗಳನ್ನು ಅರಳಿಸುತ್ತ–

" ಆಡಿ ಕೆಲರಿಗೆ ಕರುಣದಲಿ ಮಾತಾಡಿ ಕೆಲರಿಗೆ, ನುಡಿಸಿ ಕೆಲರಿಗೆ,
ನೋಡಿ ಕೆಲರಿಗೆ, ಜರಿದು ಕೆಲರಿಗೆ, ಜಡಿದು ಕೆಲಬರಿಗೆ,
ಹಾಡಿಕೆಲರಿಗೆ, ಹರಸಿ ಕೆಲರಿಗೆ, "

ಎಂಬಂತೆ, ಪರಿಪಕ್ವಾಂತಃಕರಣವುಳ್ಳ ಅಧಿಕಾರಿಗಳ ಚಿತ್ತಭೂಮಿಯಲ್ಲಿ ಉಪದೇಶವೆಂಬ ಬೀಜಬಿತ್ತುತ್ತ, ಸದು ಹೃದಯದ ಸದ್ಭಕ್ತರನ್ನು ಅನುಗ್ರಹಿಸುತ್ತ, ದುರಹಂಕಾರಿಗಳಾದ ಪಾಖಂಡಿಗಳನ್ನು ಖಂಡಿಸುತ್ತ, ನಾಡತುಂಬ ಸುತ್ತುತ್ತ ಕಲ್ಯಾಣಕ್ಕ ಬರಲು ಶ್ರೀಬಸವಣ್ಣ ಚನ್ನಬಸವ, ಸಿದ್ಧರಾಮ,ನೀಲಾಂಬಿಕೆ,ಗಂಗಾಂಬಿಕೆ ಮೊದಲಾದ ಶರಣ ಶರಣೆಯರೊಡನೆ–

" ಇಂದೆನ್ನ ಮನೆಗೆ ಪ್ರಮಥರು ಬಂದಿಹರೆಂದು ಗುಡಿತೋರಣವ ಕಟ್ಟಿ ಪಡು
ಸಮ್ಮಾರ್ಜನೆ ಮಾಡಿ ಆನಂದದಿಂದ ಕುಣಿದಾಡುವೆ, ನಲಿದಾಡುವೆ "

ಎಂಮ ಆನಂದಪರವಶರಾಗಿ ಎದುರ್ಗೊಂಡು–

" ದಳವಿಲ್ಲದ ಕುಸುಮದ ಗದ್ದುಗೆಯಲ್ಲಿ ಒಡಲಿಲ್ಲದ ಘನವು ಮೂರ್ತಿ
ಗೊಂಡಿರೆ ವಿಚಿತ್ರವಾಯಿತ್ತು ಜಗವೆಲ್ಲ ಕೂಡಲಸಂಗಮದೇವರ
ಶರಣ ಶ್ರೀ ಪ್ರಭುದೇವರ ಶ್ರೀಪಾದಕ್ಕೆ ನಮೋನಮೋ ಎಂಬೆನು,

ಎಂದುಮಣಿಮಣಿದು ಆ ಶೂನ್ಯಮೂರ್ತಿಯನ್ನು ಶೂನ್ಯಸಿಂಹಾಸನದಲ್ಲಿ ಕುಳ್ಳಿರಿಸಿ

ಅಷ್ಟವಿಧಾರ್ಚನೆ, ಷೋಡಶೋಪಚಾರಗಳಿಂದ ಪೂಜಿಸಿದರು. ಕಾಣಬಾರದ ವಸ್ತು ಕೈ ಸೇರಿತ್ತು. ಆನಂದದಿಂದ ಆಡುವೆ ಹಾಡುವೆ, ಎನ್ನ ಕಣ್ತುಂಬ ನೋಡುವೆ, ಎನ್ನ ಮನ ಒಲಿದು ಭಕ್ತಿಯಮಾಡುವೆ ಎಂದುಮುಂತಾಗಿ ಎಲ್ಲರೂ ಆನಂದಪರವಶರಾಗಿ ಕುಣಿದಾಡಿದರು.

ಶೂನ್ಯ ಸಿಂಹಾಸನವನ್ನೇರಿ ಮುಹೂರ್ತಮಾಡಿದ ಶೂನ್ಯಮೂರ್ತಿ ಪ್ರಭುವಿನ ಸಮ್ಮುಖದಲ್ಲಿ ಜಂಗಮ ಪ್ರಾಣಿಯಾದ ಶ್ರೀ ಬಸವೇಶ್ವರರು—

" ಜಲವತಪ್ಪಿದ ಮತ್ಸ್ಯ ಬದುಕುವದೇ ಸೋಜಿಗ ಗಣತಿಂಥಿಣಿ
ಯೊಳಿಗಿರಿಸೆನ್ನ ಲಿಂಗವೇ ! ಶಿವಶಿವ ಕೂಡಲ ಸಂಗಮದೇವಾ
ಸೆರಗೊಡ್ಡಿ ಬೇಡುವೆನು " " ತನುವ ಬೇಡಿದಡೀವೆ, ಮನವ
ಬೇಡಿದಡೀವೆ, ಧನವ ಬೇಡಿದಡೀವೆ ನಿಮ್ಮ ಶರಣರಿಗೆ
ಎನಗೆಬೇಕೆಂಬ ಭಾವ ಮನದಲ್ಲಿ ಹೊಳೆದರೆ ಘನಮಹಿಮ ನಿಮ್ಮ ಪಾದದಾಣೆ"

ಎಂದು ನುಡಿಯಲು ಪ್ರಭುದೇವರು ಭಕ್ತರ ಭಾಗ್ಯನಿಧಿಯೆನಿಸಿದ ಸಂಗನಬಸವೇಶ್ವರನ ಮನದಲ್ಲಿ ಸೂಕ್ಷ್ಮಾತಿ ಸೂಕ್ಷ್ಮವಾಗಿ ಅಹಂಕಾರದ ಅಂಕುರ ಮೊಳೆತುದನ್ನು ತಿಳಿದು ಅದನ್ನು ನಿರ್ಮೂಲನ ಮಾಡುವದಕ್ಕಾಗಿ ಸಂಗನಬಸವಣ್ಣನನ್ನು ಕುರಿತು ಬಸವರಾಜಾ—

" ಕಡೆಯಿಲ್ಲದ ದೇಶವ ತಿರುಗಿದೆನು, ಹವಣಿಲ್ಲದ ಕಂಥೆಯ ತೊಟ್ಟೆನು ।
ಹಸಿವಿಲ್ಲದ ಕಪ್ಪರವ ಹಿಡಿದು ಭಕ್ತಿಭಿಕ್ಷವ ಬೇಡಬಂದೆನು ।
ಗುಹೇಶ್ವರ ಹಸಿದನು ಉಣಲಿಕ್ಕೆ ಕೇಳಾ ಸಂಗನಬಸವಣ್ಣ "

ಎಂದು ಲಿಂಗಾರ್ಪಿತವಮಾಡಿ ಸಂತೃಪ್ತಿಪಡೆವ ಸದಿಚ್ಛೆಯನ್ನು ವ್ಯಕ್ತಮಾಡಿದನು. ಯಾವ ಮುಖದಲ್ಲಿ ಬಂದು ಬೇಡಿದರೂ ಬೇಡಿದಾತನಿಗೆ ಕೊಡುವೆ ಎಂಬ ಸೂಕ್ಷ್ಮವಾದ ಅಹಮಹಮಿಕೆಯನ್ನು ತಾಳ್ದ ಶ್ರೀ ಬಸವೇಶ್ವರರು ಅಸಂಖ್ಯ ಶಿವಗಣಂಗಳ ಸಂತೃಪ್ತಿಗೆ ಮಾಡಿದ ಅಪರಿಮಿತ ಭಕ್ಷ್ಯಭೋಜ್ಯಗಳನ್ನು ತಂದು ಎಡೆಮಾಡಿದನು. ಏನು ಮಾಡಿದರೂ ಪ್ರಭುವಿನ ಹಸಿವು ಹಿಂಗಲಿಲ್ಲ. ಶ್ರೀ ಸಂಗನಬಸವೇಶ್ವರನ ಅಹಂಕಾರ ಹೆಚ್ಚಾದಂತೆ ಪ್ರಭುವಿನ ಹಸಿವೂ ಹೆಚ್ಚಾಯಿತು. ಆಕಾಶವೇ ಬಾಯ್ದೆರೆದು ಕುಳಿತಂತೆ ಕುಳಿತಿರುವ ಶ್ರೀ ಪ್ರಭುವಿನ ಈ ಅತ್ಯದ್ಭುತ ಆರೋಗಣೆಯ ಚಮತ್ಕಾರವನ್ನು ಕಂಡು ತಮ್ಮೊಳಗೆ ತಾವೇ ವಿಚಾರಿಸಿ ಮೂಕವಿಸ್ಮಿತರಾಗಿ ಬಸವಣ್ಣನವರು—

" ಕೈಯಲ್ಲಿ ಮುಟ್ಟಿದ ಪದಾರ್ಥ ಕೈಯಲ್ಲಿ ಐಕ್ಯ. ಕಂಗಳ ತಾಗಿದ
ಪದಾರ್ಥ ಕಂಗಳೊಳಗೆ ಐಕ್ಯ. ನಾಲಿಗೆ ತಾಗಿದಪದಾರ್ಥ ನಾಲಗೆ
ಯೊಳಗೈಕ್ಯ. ನೀಡುವ ಪರಿಚಾರಕರು ಬೇಸತ್ತರಲ್ಲದೆ ಆರೋಗಣೆಯ
ಮಾಡುವ ದೇವ ಎತ್ತಲೇನೆಂದರಿಯನು. ಬ್ರಹ್ಮಾಂಡವನೊಡಲೊಳ
ಗಿರಿಸಿಕೊಂಡು ಬಂದದೇವಂಗೆ ಆರೋಗಣೆಯ ಮಾಡಿಸಿಹೆನೆಂಬ
ಅಹಂಕಾರದಲ್ಲಿ ಇದ್ದೆನಾಗಿ ನಾನು ಕೆಟ್ಟಕೇಡನೇನೆಂಬೆನಯ್ಯ ಕೂಡಲಸಂಗಮದೇವ"

ಎಂದು ಪಶ್ಚಾತ್ತಾಪದಿಂದ ನುಡಿದರು. ಆಗ ಮಡಿವಾಳ ಮಾಚಿತಂದೆಗಳು–

" ಮರುಳಗೊಂಡೆಯಲ್ಲ ಬಸವಣ್ಣ, ಪಿತ್ತ ತಲೆಗೇರಿತ್ತೆ ನಿನಗೆ, ನೆರೆಯರಿ
ದವರು ಮರುಳಹರೆಂಬ ನಾಣ್ಣುಡಿ ದಿಟವಾಯಿತ್ತು, ಜಗದಗಲ
ಮಿಗೆ ಅಗಲದೇವಂಗೆ ಕುರುಹಿನ ಪದಾರ್ಥಗಳು ನಿಲುಕಲಾಪವೆ "

ಎಂದು ತಿಳಿಸಿ ಹೇಳಿದರು. ಷಟ್‌ಸ್ಥಲಚಕ್ರವರ್ತಿ ಶ್ರೀಚನ್ನಬಸವೇಶ್ವರರೂ–

" ಹೊನ್ನಿಂಗೆ ಬಂದಾತನಲ್ಲ, ಹೆಣ್ಣಿಂಗೆ ಬಂದಾತನಲ್ಲ, ಮಣ್ಣಿಂಗೆ ಬಂದಾತನಲ್ಲ
ಅಶನಕ್ಕೆ ಬಂದಾತನಲ್ಲ, ವ್ಯಸನಕ್ಕೆ ಬಂದಾತನಲ್ಲ, ಕೂಡಲಚನ್ನಸಂಗಯ್ಯನಲ್ಲಿ
ಭಕ್ತಿ ಪಥವ ತೋರ ಬಂದನಯ್ಯಾ ಪ್ರಭುದೇವರು "

ಎಂದು ಉಪದೇಶಿಸಿದರು. ಸ್ವತಃ ಪ್ರಭುವೇ–

" ಹಸಿದು ಬಂದವನಲ್ಲವರ್ಥದ ।
ದೆಸೆಗೆ ಬಂದವನಲ್ಲ ಕಾಮದ ।
ಮುಸೆಗೆ ಮನದಲಿ ನೊಂದುಬೆಂದವನಲ್ಲ ನಾ ನಿನ್ನ ।
ಪಸರಿಸಿದ ದಾಸೋಹತನವನು ।
ಪಸಿನೆನೋಡಲು ಬಂದೆನಲ್ಲದೆ ।
ವ್ಯಸನದಾಸೆಗಳೆನ್ನಲುಂಟೇ ಬಸವ ಕೇಳೆಂದ । "

ಎಂದು ತಾವು ಷಡ್ರಿಪುಗಳಿಗೆ, ಷಡ್ಭಾವವಿಕಾರಗಳಿಗೆ, ಷಡೂರ್ಮಿಗಳಿಗೆ, ಸಪ್ತವ್ಯಸನಗಳಿಗೆ ವಶವಾಗದೇ ಲೋಕದಲ್ಲಿ ಇದ್ದೂ ಇಲ್ಲದಂತಿರುವ ಬಗೆಯನ್ನು ತಿಳಿಸುವದಲ್ಲದೆ ಆ ಎತ್ತರ ಮಟ್ಟಕ್ಕೆ ಏರುವ ರೀತಿಯನ್ನೂ ಬಸವರಾಜರಿಗೆ ಬಿತ್ತರಿಸಿರುವರು.

ದ್ವಿತೀಯ ಶಂಭು ಎಂಬ ಬಿರುದು ಪಡೆದು, ಸದ್ಭಕ್ತಶಿರೋಮಣಿಎನಿಸಿ ಲೋಕಕ್ಕೆ ಮಾರ್ಗದರ್ಶಕನಾದ ನೀನು ವಾಮಮಾರ್ಗ ತುಳಿದದ್ದು ನೋಡಿಮನಸ್ಸಿಗೆ ಬಹಳೇ ನೋವಾಗಿದೆ ಎಂದು ಪ್ರಭು ಚುಚ್ಚಿ ನುಡಿದರು.

ಅಧರಕ್ಕೆ ಕಹಿ, ಉದರಕ್ಕೆ ಸಿಹಿ ಎಂಬಂತಿರುವ ಪ್ರಭುವಿನ ಪ್ರಸಾದವಾಣಿಯು ಕಟುವಾದರೂ ಅದು ನೂರಕ್ಕೆನೂರರಷ್ಟು ದಿಟವಿದ್ದು ಅದರಿಂದ ಬಸವಣ್ಣನವರ ಹೃದಯ ಭೂಮಿಯಲ್ಲಿ ಮೊಳೆತ ಅಹಂಕಾರದ ಅಂಕುರವು ಅಳಿಯುವದಲ್ಲದೆ ನಿರಹಂಭಾವದ, ನಿರೀಹಂಭಾವದ, ದಾಸೋಹಂಭಾವದ ಅಮೃತಸಸಿಯು ಅಂಕುರಿಸಿತು. ಅಹಂಕಾರ ಮಮಕಾರಗಳೆಂಬ ಕಾಳಿಕೆಯಿಂದ ಆವೃತರಾದ ಬಸವಣ್ಣನವರು ಕಾಸಿಸೋಸಿ ಪುಟಕ್ಕಿಕ್ಕಿದ ಚೊಕ್ಕಚಿನ್ನದಂತಾದರು, ಪ್ರಭುವಾಣಿಯಿಂದ ತಪೋಜೀವನವು ಚದುರಿ ಹೋಗಿ ತೇಜೋಜೀವನದ ಅರುಣೋದಯವಾಯಿತು.



" ಎಡದ ಪಾದದಲೊದ್ದ[illegible] ಬಲದ ಪಾದವ ಹಿಡಿವೆ ।

" ಬಲದ ಪಾದದಲೊದ್ದರೆ ಎಡದ ಪಾದವ ಹಿಡಿವೆ ।
ತ್ರಾಹಿ ತ್ರಾಹಿ ತಪ್ಪೆನ್ನದು, ಕ್ಷಮೆ ನಿನ್ನದು,
ಕೂಡಲಸಂಗಮದೇವ ನಿಮ್ಮ ಕರುಣದ ಕಂದನಾನು । "

ಎಂದು ಬಸವಣ್ಣನವರು ತಮ್ಮ ತಪ್ಪನ್ನು ಒಪ್ಪಿಕೊಂಡು ಅನನ್ಯಭಕ್ತಿಯಿಂದ ಶರಣಾಗತ ರಾಗಲು ಪ್ರಭುದೇವರು ಅವರನ್ನು ಅಪ್ಪಿಕೋಡು ಉದ್ಧರಿಸಿದರು. ನಿಜನಿವಾಸದಲ್ಲಿ ಇರುವ ಬಗೆಯನ್ನು ತಿಳಿಸಿದರು.

ಲಕ್ಷದಮೇಲೆತೊಂಬತ್ತಾರುಸಾವಿರ ಮಹಾಗಣಂಗಳಿಗೆ ಸಿದ್ಧಪಡಿಸಿದ ಮಹಾ ಪ್ರಸಾದದಿಂದಲೂ, ಧಾನ್ಯಾಗಾರದಲ್ಲಿ ಒಟ್ಟಿದ ಪಡಿಪದಾರ್ಥಗಳಿಂದಲೂ ಸಂತೃಪ್ತನಾಗದೇ ಇನ್ನೂ ಬೇಕುಬೇಕೆಂದೇ ಹಂಬಲಿಸುವಪ್ರಭುದೇವರು ಆತ್ಮನಿವೇದನ ಅಥವಾ ಆತ್ಮಾರ್ಪಣ ಭಕ್ತಿಯಿಂದ ಸಂತೃಪ್ತರಾದರು.

ಬಸವರಾಜನೇ ನಾಡತುಂಬ ಪಸರಿಸಿದ ನಿನ್ನ ಧವಳ ಕೀರ್ತಿವಾರ್ತೆಯನ್ನು ಕೇಳಿ ಬಹುದೂರದಿಂದ ಬಂದು ನಿನ್ನ ಭಕ್ತಿ ಸೇವೆಯನ್ನು ಕೈಕೊಂಡು ನಮಗೆ ಪರಮಾನಂದ ವಾಯಿತು. ನಿನ್ನ ಜಂಗಮದಾಸೋಹ ಘನತರವಾದುದು. ದಿನದಿನದಲ್ಲಿಯೂ ಜಂಗಮ ದಾಸೋಹಮಾಡಿ ತಪ್ಪದೇ ಪಾದೋದಕ-ಪ್ರಸಾದ ಸ್ವೀಕರಿಸುವನೀನು ಅಚ್ಚ ಪ್ರಸಾದಿಯು. ನಿಚ್ಚನಿಚ್ಚ ಮಹಾಪ್ರಸಾದಕ್ಕೆ ಆಗಮಿಸಿದ ಮಹಾಗಣಂಗಳು ಹಸಿದಿರಬಹುದು. ಅವಸರದಿಂದ ಹೋಗಿ ಅವರೆಲ್ಲರನ್ನು ಸಂತೃಪ್ತಿಪಡಿಸು ಎಂದು ಹೇಳಲು ಶ್ರೀಬಸವೇಶ್ವರರು ಕೂಡಲೇಹೋಗಿ ಬಿನ್ನಹಮಾಡಿ ಮಹಾಪ್ರಸಾದಕ್ಕೆ ಏಳಬೇಕೆನ್ನಲು-

" ಎಂದಿನಾರೋಗಣೆಯು ಮಾಡಿದ ।
ಚೆಂದದಿಂ ಮಿಗಿಲಾಗಿ ಪರಮಾ ।
ನಂದವಾಗಿದೆ ತೇಗಿದರೆ ಷಡುರುಚಿ ರಸಾಯನದ ॥
ಸಂದವಾಸನೆ ಸೂಸುತಿದೆ ಡ ।
ಕ್ಕಿಂದುದಿದೆಕೋ ಎನುತ ಮಹಿಮರು ।
ಮುಂದೆ ಬಸವನು ಕಾಣಲಿಕೆ ದಣಿದಿರ್ದರೊಲವಿನಲಿ ॥ "

ಆಕಂಠಪರ್ಯಂತರ ಭೋಜನಮಾಡಿದ ಪಂಚಪಕ್ವಾನ್ನಗಳ ಸವಿಯೂಟದ ಆ ಸುವಾಸನೆಯು ಹೊರಹೊಮ್ಮಬಂತು.

" ನಿನ್ನ ಗುರುವಿನ ಮಹಿಮೆಯೋ ಮೇಣ್ ।
ನಿನ್ನ ಮಹಿಮೆಯೋ ಜಂಗಮಕೆ ದಿಟ ।
ನಿನ್ನ ಗುರುವಾರೋಗಿಸಲು ತಣಿವಾಯಿತೆಮಗೆಲ್ಲ ।
ನಿನ್ನ ಗುರು ಸಚರಾಚರದ ಚೈ ।
ತನ್ಯ ಮೂರ್ತಿಯೊ ಎನುತಲಾ ಬಸ ।
ದಣ್ಣನಿದಿರಲಿ ನುಡಿವುತಿರ್ದುದು ಜಂಗಮಸ್ತೋಮ ॥ "

ಜಂಗಮರಾದ ನಾವೆಲ್ಲರೂ ಸಂತೃಪ್ತರಾಗಿದ್ದೇವೆ. ನಿನ್ನ ಗುರು ಸಚರಾಚರಗಳಿಗೆ ಚೈತನ್ಯ ಮೂರ್ತಿಯಾಗಿರುವನು ಎಂದು ಜಂಗಮ ಪುಂಗವರೆಲ್ಲ ಕೂಡಿಕೊಂಡು ಜಂಗಮಪ್ರಾಣಿ ಯಾದ ಬಸವಣ್ಣನವರ ಮುಂದೆ ನಿವೇದಿಸಿದರು.

" ಬಸುರ ಹೆಂಡತಿಯೂಟ ಹೊಟ್ಟೆಯ ।
ಶಿಶುವ ದಣಿಸುವವೊಲು ಜಗಂಗಳ ।
ಬಸುರಲಡಗಿಸಿಕೊಂಡು ನೀದಣಿಯುಣಲು ಜಂಗಮಕೆ ।
ಹಸಿವದೆಲ್ಲಿಯದೆಲ್ಲರಿಗೆ ಸಂ ।
ತಸವು ಸಂತುಷ್ಟತೆಯಲಿದ್ದರು
ಹೊಸತಿದಾದುದು ಲೋಕದೊಳು ಗುರುರಾಯ ಕೇಳೆಂದ ॥ "

ಅವರುಂಡರೆ ಇವರ ಹೊಟ್ಟೆ ತುಂಬುವದೇ ? ಇವರುಂಡರೆ ಅವರಹೊಟ್ಟೆ ತುಂಬುವದೇ ? ಇದು ಎಂದಿಗೂ ಸಾಧ್ಯವಿಲ್ಲ, ಇದು ವಿರೋಧ ಸಂಗತಿಯು ಎಂದು ಆಕ್ಷೇಪ ಮಾಡುವ ಟೀಕಾಕಾರರಿಗೆ ಪ್ರಭುಲಿಂಗ ಲೀಲೆಯ ಕರ್ತೃವಾದಚಾಮರಸನು-

" ಬಸುರ ಹೆಂಡತಿಯೂಟ ಹೊಟ್ಟೆಯ ಶಿಶುವ ತಣಿಸುವವೊಲು "

ಎಂದು ಒಂದೇ ಒಂದು ಉದಾಹರಣೆಯ ಮೂಲಕ ಸಮರ್ಪಕಉತ್ತರ ಹೇಳಿದರೆ ಶೂನ್ಯಸಂಪಾದನಾಕಾರರು ಮೇಲ್ಕಾಣಿಸಿದ ದೃಷ್ಟಾಂತದೊಡನೆ-

" ತೊರೆಯುದಕವ ಕರೆಯುಂಡು ತೃಪ್ತನಾಗಲು "

ಎಂದು ಬೇರೊಂದು ಉದಾಹರಣೆಯ ಮೂಲಕ ಸಮಾಧಾನಕಾರಕ ಉತ್ತರವಿತ್ತಿದ್ದಾರೆ. ನವಮಾಸ ತುಂಬಿದ ಗರ್ಭಿಣಿಯಲ್ಲಿದ್ದ ಮಗುವೇ ಬೇರೆ. ಮಗುವನ್ನು ಗರ್ಭದಲ್ಲಿಟ್ಟು ಕೊಂಡಿದ್ದ ತಾಯಿಯೇ ಬೇರೆ. ಮಗು ತಾಯಾಗದು, ತಾಯಿ ಮಗುವಾಗದು. ಹೀಗಿದ್ದರೂ ತಾಯಿಯ ಊಟ ಬೇರೆ, ಮಗುವಿನ ಊಟ ಬೇರೆ ಇದೆಯೇ ? ಇಲ್ಲಿಲ್ಲ, ತಾಯಿಯ ಊಟವಾದರೆ ಮಗುವಿನ ಊಟ ಆಗಿಯೇ ಹೋಗುವದು.

ಎರಡೂಢಡ ತುಂಬಿತುಳುಕುವಂತೆ ನೀರುಬಂದು ಭೋರ್ಗರೆದು ಹರಿವ ಹೊಳೆಯ ಅಕ್ಕಪಕ್ಕದಲ್ಲಿ, ಎಡಬಲ ಭಾಗಗಳಲ್ಲಿ ಇರುವ ಕೆರೆ, ಭಾವಿ, ಕೊಳ್ಳಗಳು ತಮ್ಮಿಷ್ಟಕ್ಕೆ ತಾವೇ ನೀರಿನಿಂದ ತುಂಬುವವಲ್ಲವೇ ? ಬೇರೆ ಯಾರಾದರೂ ಬಂದು ನೀರು ಹಣಿಸಿ ಅವನ್ನು ತುಂಬುವರೇ ? ಸಚರಾಚರಂಗಳನು ಒಡಲೊಳಗಿರಿಸಿಕೊಂಡ ಶಿವಯೋಗಿಯು ಸಂತೃಪ್ತನಾದರೆ ಜಗವೇ ಸಂತೃಪ್ತಿ ಹೊಂದುವದು.

---

೨೪ನೆಯ ಗತಿ

# ಮನೋಲಯ

"ಪದ್ಯದಲರ್ಥ ಪಲ್ಲವಿಯಲ್ಲಿ; ಗ್ರಂಥದಸಾರ ಮುನ್ನುಡಿಯಲ್ಲಿ " ಎಂಬ ಉಕ್ತಿಯಂತೆ ಈ ಗತಿಯ ತಲೆಬರಹವೇ ಇದರ ಸಾರವನ್ನು ತಿಳಿಸುತ್ತದೆ. ಈ ಪದದ ವ್ಯುತ್ಪತ್ತಿಯು ಮನಸಃ ಲಯಃ ಮನೋಲಯಃ ಎಂದಾಗುವದು. ಮನಸ್ಸು ಅಂದರೆ ಶ್ರೋತ್ರಾದಿ ಪಂಚ ಜ್ಞಾನೇಂದ್ರಿಯಗಳ ಮುಖಾಂತರ ಶಬ್ದಾದಿ ಪಂಚವಿಷಯಗಳನ್ನು ಗ್ರಹಿಸಿ ಸುಖ ದುಃಖಗಳನ್ನು ಅನುಭವಿಸುವ ಒಂದು ಪ್ರಾಕೃತಿಕಸಾಧನ. ಲೌಕಿಕ ವಿಷಯಗಳ ಗ್ರಹಣಕ್ಕಾಗಲಿ ಪಾರಮಾರ್ಥಿಕ ಜೀವನ ನಿರ್ವಹಣಕ್ಕಾಗಲಿ ಕಾಯ, ವಾಕ್, ಮನ ಎಂಬ ತ್ರಿಕರಣಗಳು ಅವಶ್ಯಬೇಕು. ಈ ತ್ರಿಕರಣಗಳಲ್ಲಿ ಕಾಯಕ್ಕಿಂತ ವಾಕ್ಕು ಸೂಕ್ಷ್ಮ. ವಾಕ್ಕಿಗಿಂತಲೂ ಮನಸ್ಸು ಸೂಕ್ಷ್ಮವಾದದ್ದು. ಈ ಕಾಯ, ವಾಕ್ಕು, ಮನಸ್ಸುಗಳಲ್ಲಿ ಮನಸ್ಸೇಮುಖ್ಯವಾದದ್ದು. " ಮನೋ ಮೂಲಮಿದಂ ಜಗತ್ " ಎಂಬ ಆರ್ಯೋಕ್ತಿಯು ಸುಪ್ರಸಿದ್ಧವಿರುತ್ತದೆ. ದೈಹಿಕ ಗಮನಾಗಮನಾದಿ ಕ್ರಿಯೆಗಳು ಕಣ್ಣಿಗೆ ಕಾಣುವಂತೆ, ದ್ವಿತೀಯ ಕರಣವೆನಿಸಿದ ವಾಣಿಯ ಪಠನ ಪಾಠನಾದಿಗಳು ಕಿವಿಗೆ ಕೇಳಿಸುವವು. ಆದರೆ ಅಂತಃಕರಣವೆನಿಸಿದ ಮನಸ್ಸಿನ ಸಂಕಲ್ಪ ವಿಕಲ್ಪಾದಿಗಳು ಸ್ಮರಣ ಚಿಂತನಗಳು ಬಹಿರಿಂದ್ರಿಯಗಳಿಗೆ ಗೋಚರವಾಗವು. ಅದು ಪಂಚೇಂದ್ರಿಯಗಳಿಂದ ಆಗುವ ಅನುಭವವನ್ನು ತನ್ನಲ್ಲಿ ಸೂಕ್ಷ್ಮವಾಗಿ ಇಟ್ಟುಕೊಳ್ಳುತ್ತದೆ. " ಜ್ಞಾನೇಂದ್ರಿಯಾಣಾಂ ನಯನಂ ಪ್ರಧಾನಂ " ಜ್ಞಾನೇಂದ್ರಿಯಗಳಲ್ಲಿ ಪ್ರಧಾನ ಇಂದ್ರಿಯವೆನಿಸಿದ ಕಣ್ಣು ಸಣ್ಣದಾದರೂ ಅಖಿಲ ಬ್ರಹ್ಮಾಂಡದೊಳಗಿರುವ ದೃಶ್ಯ ವಸ್ತುಗಳ ವೈವಿಧ್ಯಮಯ ಚಿತ್ರಗಳನ್ನೆಲ್ಲನೋಡುವಂತೆ " ಇಂದ್ರಿಯಾಣಾಂ ಮನೋನಾಥಃ " ದಶವಿಧ ಇಂದ್ರಿಯಗಳಿಗೆ ಅರಸನಂತಿರುವ ಈ ಮನಸ್ಸೇ ವಿಶ್ವದಲ್ಲಿರುವ ಸ್ಥೂಲ ಸೂಕ್ಷ್ಮ ವಿಷಯಗಳನ್ನೆಲ್ಲ ತನ್ನೊಳಗೆ ಇಟ್ಟುಕೊಳ್ಳುವದು. ಇದಕ್ಕೆ ಎಷ್ಟು ವಿಷಯಗಳನ್ನು ಕೊಟ್ಟರೂ ಬೇಕೆಂಬುದು ಗೊತ್ತಿದೆಯಲ್ಲದೆ ಸಾಕು ಎಂಬುದು ಗೊತ್ತೇಇಲ್ಲ.

ಮನಸ್ಸು ಅತೀವ ಚಂಚಲವಾದದ್ದು. ಕಣ್ಣಿಗೆ ಕಾಣದ, ಕೈಗೆ ಸಿಗದ ಗಾಳಿಯನ್ನು ಒತ್ತಟ್ಟಿಗೆ ಕಟ್ಟಿಡುವದು ಹೇಗೆ ದುಸ್ಸಾಧ್ಯವೋಹಾಗೆ ಈಮನಸ್ಸನ್ನು ಒತ್ತಟ್ಟಿಗೆ ನಿಲ್ಲಿಸುವದು ದುಸ್ಸಾಧ್ಯ. ಭಿಕ್ಷಾಟನೆ ಲೀಲೆಯಲ್ಲಿದ್ದ ಶಿವನೊಮ್ಮೆ ಭಿಕ್ಷೆಬೇಡುತ್ತ ಆದ್ಯ ಶಂಕರಾಚಾರ್ಯರ ಆಶ್ರಮಕ್ಕೆ ಬರಲು ಆಚಾರ್ಯರು ಪರಶಿವನೇ ನನ್ನ ಬಳಿ ತಮಗೆ ಭಿಕ್ಷೆ ನೀಡಲು ಮುತ್ತು ರತ್ನಾದಿಗಳೇನೂ ಇಲ್ಲ. ಹೆರವರ ಮನೆಯ ಮುಂದೆ ನಿಂತು ಭಿಕ್ಷೆಬೇಡುವಾಗ ಅವರಅಂಗಳದಲ್ಲಿ ಆಟವಾಡಿಸಲಿಕ್ಕೆ ಮನವೆಂಬ ಕಪಿಯನ್ನು ಕೊಡುವೆ. ಇದು ಮೋಹವೆಂಬ ಅರಣ್ಯದಲ್ಲಿ ಸಂಚರಿಸುತ್ತ ಧನ,ಕನಕ, ವನಿತಾದಿ ಆಶೆಗಳೆಂಬ ಟೊಂಗೆಯಿಂದ ಟೊಂಗೆಗೆ ಜಿಗಿಯುತ್ತ ಅಲೆದಾಡುವದು. ಇದನ್ನು ನಿಮ್ಮ ಭಕ್ತಿಯೆಂಬ ಹಗ್ಗದಿಂದ ಬಿಗಿದು ಕಟ್ಟಿ ತೆಗೆದುಕೋ ಎಂದು ಹೇಳಿದರಂತೆ. "ಮನವೆಂಬ ಮರ್ಕಟನು ತನುವೆಂಬ ವೃಕ್ಷವನೇರಿ ಇಂದ್ರಿಯಗಳೆಂಬ ಶಾಖೋಪಶಾಖೆಗಳಿಗೆ ಹಾರಿ ವಿಷಯಂಗಳೆಂಬ ಹಣ್ಣು ಫಲಗಳಗ್ರಹಿಸಿ

ಭವದತ್ತಮುಖವಾಗಿ ಹೋಗುತ್ತದೆ. ಈ ಮನವೆಂಬ ಮರ್ಕಟನ ನಿಮ್ಮ ನೆನಹೆಂಬ ಪಾಶದಲ್ಲಿ ಬಿಗಿದಿರಿಸು. "

" ತಡೆವುದಾಗದು ತನಗಗಣಿತ ವಿಷಯದೊಳಿಡೆಯಾಡುವತಿ ಚಪಲತೆಯ ಚಿತ್ತವನು "

ಎಂದು ಮುಂತಾಗಿ ಅನುಭಾವಿಗಳು ತಮ್ಮ ಹಾಡುಗಬ್ಬಗಳಲ್ಲಿ, ವಚನಗಳಲ್ಲಿ ವಿವಿಧ ದೃಷ್ಟಾಂತಗಳನ್ನು ಕೊಟ್ಟು ಹೇಳಿರುವರು. ಮನದ ಕಿಡಿಗೇಡಿತನಕ್ಕೆ, ಸ್ವೈರವೃತ್ತಿಗೆ ಅಸತ್ತು ಬೇಸತ್ತು ಹಲವಾರು ಸಾಧಕರು ಮನಃ ಎಂಬ ಶಬ್ದವನ್ನು ತಿರುವುಮುರುವು ಮಾಡಿ ನಮಃ ಅಂದರೆ ಎಲೈ ಮನಸ್ಸೇ ನಿನಗೆ ನಮಸ್ಕಾರ ಎಂದು ಹೇಳಿರುವರು. ಮಹಾರಾಷ್ಟ್ರದ ಸುಪ್ರಸಿದ್ಧ ಸಂತರಾದ ರಾಮದಾಸರು ಮನಾಚೆಶ್ಲೋಕ ಎಂಬ ಚಿಕ್ಕ ಗ್ರಂಥ ಬರೆದು ಅದರಲ್ಲಿ ಮನೋನಿಗ್ರಹದ ಬಗ್ಗೆ ಹಲವಾರು ಸಾಧನಗಳನ್ನು ಹೇಳಿರುವರು. ಷಡ್ದರ್ಶನಗಳಲ್ಲೊಂದಾದ ಪಾತಂಜಲ ಯೋಗದರ್ಶನವು —

" ಯೋಗಶ್ಚಿತ್ತವೃತ್ತಿ ನಿರೋಧಃ " ಎಂದು ಸೂತ್ರಾರಂಭ ಮಾಡಿ ಸಮಗ್ರ ದರ್ಶನ ಶಾಸ್ತ್ರವು ಮನೋ ನಿಗ್ರಹವನ್ನೇ ಗುರಿಯನ್ನಾಗಿಟ್ಟುಕೊಂಡು ತದಂಗಭೂತವಾದ ಅಷ್ಟಾಂಗ ಮೊದಲಾದುದನ್ನು ಚಿತ್ತರಿಸುತ್ತ, ನಿರ್ವಿಕಲ್ಪ, ನಿರ್ವಿಚಾರ, ನಿರ್ವಿತರ್ಕ, ನಿರ್ಬೀಜ ಸಮಾಧಿ ಮುಟ್ಟುವತನಕ ವಿವಿಧಸ್ತರಗಳನ್ನು ಹೇಳುತ್ತದೆ.

" ರಸಸ್ಯ ಮನಸಶ್ಚೈವ ಚಂಚಲತ್ವಂ ಸ್ವಭಾವತಃ ।
ರಸೋಬದ್ಧೋ ಮನೋಬದ್ಧಂ ಕಿನ್ನಸಿದ್ಧತಿ ಭೂತಲೇ ॥ "

ಪಾದರಸವು ಅತೀವ ಚಂಚಲವಾದದ್ದು. ಯಾವಾಗಲೂ ಅತ್ತಿತ್ತ ಚಲಿಸುವಂತಹದು. ಅದನ್ನು ವನಸ್ಪತಿಗಳಿಂದಲೋ, ಮಂತ್ರಗಳಿಂದಲೋ ಒತ್ತಟ್ಟಿಗೆ ನಿಲ್ಲುವಂತೆ ಮಾಡಿದರೆ ಬೇಕಾದಂತಹ ಸಿದ್ಧಿಗಳನ್ನು ಪಡೆಯಬಹುದು.ಹಾಗೆಯೇ ವಿವಿಧ ವೈಷಯಿಕ ವಾಸನೆಯಿಂದ ಚಂಚಲವಾದ ಮನಸ್ಸನ್ನು ತತ್ವಶಾಸ್ತ್ರೋಕ್ತ ಶ್ರವಣ, ಮನನ, ನಿದಿಧ್ಯಾಸ ಸಾಮಗ್ರಿಯಿಂದ ಧ್ಯೇಯ ವಸ್ತುವಿನಲ್ಲಿ ತದಾಕಾರವೃತ್ತಿಯಿಂದ ನಿಲ್ಲುವಂತೆ ಮಾಡಿದರೆ–

" ಚಿತ್ತೇಚಲತಿ ಸಂಸಾರಃ ನಿಶ್ಚಲೇ ಮುಕ್ತಿಃ "

" ಮನಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ ।
ವಿಷಯಾಸಕ್ತಂ ಮುಕ್ತ್ಯೈ ನಿರ್ವಿಷಯಂಸ್ಮೃತಂ "

ಎಂಬುಕ್ತಿಯಂತೆ ಸಕಲ ದುಃಖನಿವೃತ್ತಿ, ನಿತ್ಯಾನಂದ ಪದಪ್ರಾಪ್ತಿರೂಪ ಮೋಕ್ಷ ದೊರಕುವದು.

ಗಾಳಿಯು ಒಂದೇ ಇದ್ದರೂ ದುರ್ಗಂಧ ಪದಾರ್ಥಗಳ ಸಂಸರ್ಗದಿಂದ ಹಾಗೂ ಪರಿಸರ ಮಾಲಿನ್ಯದಿಂದ ದುರ್ಗಂಧವಾಯುವೆಂದೂ, ಸುಗಂಧ ಪದಾರ್ಥಗಳ ಸೌರಭ ಸ್ಪರ್ಶದಿಂದ ಸುಗಂಧವಾಯುವೆಂದೂ ಎರಡು ಬಗೆಯಾಗಿ ಹೇಳಲ್ಪಡುವಂತೆ ಮನಸ್ಸು ಹುಸಿ, ಕಳವು, ಅನಾಚಾರ, ಕಾಮ, ಲೋಭ ಮೊದಲಾದ ದುರ್ಗುಣಗಳಿಂದ ಕೂಡಿದಾಗ ಅಶುದ್ಧ ಮನಸ್ಸೆಂದೂ ಹೇಳಲ್ಪಡುವುದು.

' ಸತ್ಯಂ ವದ, ' ' ಧರ್ಮಂಚರ, ' ' ಮಾತೃದೇವೋಭವ, ' ' ಪಿತೃದೇವೋಭವ ಎಂದು ವಿಧಿವಾಕ್ಯಗಳಿಂದ ಉಪದೇಶಿಸುವಂತೆ ಶ್ರೀ ಬಸವೇಶ್ವರರು–

ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ ಎಂಬ ಸೂತ್ರದಂತಹ ಸಪ್ತಮಹಾವಾಕ್ಯಗಳನ್ನು ಹೇಳಿ ಮನ ಶುದ್ಧಿಯೇ ಮೋಕ್ಷಕ್ಕೆ ಮೂಲ ಎಂದು ಹೇಳಿರುವರು. ಮನ, ಬುದ್ಧಿ, ಚಿತ್ತ, ಅಹಂಕಾರ ಎಂಬ ಅಂತಃಕರಣ ಚತುಷ್ಟಯವು ಸುಮನ, ಸುಬುದ್ಧಿ, ಸುಚಿತ್ತ, ನಿರಹಂಕಾರಗಳಾಗಿ ಮಾರ್ಪಾಡಾಗಬೇಕು.

ಈ ಮನದ ಹಿಡಿತದಲ್ಲಿ ಸಿಕ್ಕವರು ಅಜ್ಞಾನಿಗಳು ಮತ್ತು ಮನವನ್ನೇ ಹಿಡಿತದಲ್ಲಿಟ್ಟುಕೊಂಡವರು ಸುಜ್ಞಾನಿಗಳು ಎಂಬುದನ್ನು ಚಾಮರಸನು–

" ಮನವ ಬಹಿರಂಗದಲ್ಲಿ ಚಲಿಸುವ
ಮನುಜನವನಜ್ಞಾನಿ ಮತ್ತಾ ।
ಮನವನಂತರ್ಮುಖದಲಾಚರಿಸಿದೊಡೆ ಸರ್ವಜ್ಞ ।
ಮನವು ಮನದಲಿನಿಂದು ನಿರ್ವಾ ।
ಸನೆಯಲಿರೆ ಸುಜ್ಞಾನಿಯಂತಾ ।
ಮನವನಳಿದರೆ ನಿತ್ಯನೈ ಬಸವಣ್ಣ ಕೇಳೆಂದ ॥ "

ಎಂಬ ಪದ್ಯದಿಂದ ಸುಂದರವಾಗಿ ಹೇಳಿರುವನು.

" ಸಕಲೇಂದ್ರಿಯಂಗಳಲ್ಲಿ ವಿಕಾರಿಸುವ ಮನವ ಸೆಳೆದು ನಿಂದಾತ ಸುಖಿ,
ಪಂಚೇಂದ್ರಿಯಗಳಿಚ್ಛೆಯಲ್ಲಿ ಕೀಲುಮನಗೊಂಡು ಸುಳಿವಾತ ದುಃಖಿ,
ಮನಸ್ಸು ಬಹಿರ್ಮುಖವಾಗಲು ಮಾಯಾಪ್ರಪಂಚಿ,
ಮನವಂತರ್ಮುಖವಾದರೆ ಅವಿರಳ ಜ್ಞಾನಿ,
ಮನೋಲಯವಾದರೆ ಸೌರಾಷ್ಟ್ರಸೋಮೇಶ್ವರ ಲಿಂಗದಲ್ಲಿ ಅಭೇದ್ಯನು ॥ "

" ಸುತ್ತಿ ಸುತ್ತಿ ಬಂದಡಿಲ್ಲ, ಲಕ್ಷ ಗಂಗೆಯ ಮಿಂದಡಿಲ್ಲ ।
ತುಟ್ಟ ತುದಿಯ ಮೇರುಗಿರಿಯ ಮೆಟ್ಟಿ ಕೂಗಿದಡಿಲ್ಲ ।
ನಿತ್ಯನೇಮದಿಂದ ತನುವ ಮುಟ್ಟಿಕೊಂಡಡಿಲ್ಲ ।
ನಿಚ್ಚಕ್ಕೆ ಮನವನಂದಂದಿಗೆ ಅತ್ತಿತ್ತ ಹರಿಯಲೀಯದೆ ।
ಚಿತ್ತದಲ್ಲಿ ಧರಿಸಬಲ್ಲಡೆ ಬಚ್ಚಬರಿಯ ಬೆಳಗು ಗುಹೇಶ್ವರಲಿಂಗವು "

" ತನು ಬತ್ತಲೆ ಇದ್ದರೇನಯ್ಯಾ ಮನಶುಚಿಯಾಗದನ್ನಕ್ಕರ ।
ಇಂತು ಆಶೆಯ ವೇಷದ ಭಾಷೆಗೆ ಗುಹೇಶ್ವರ ಸಾಕ್ಷಿಯಾಗಿ ।
ಛೀ ಎಂಬೆನು ಕಾಣಾ ಸಂಗನಬಸವಣ್ಣ ॥ "

ಹರಿದಾಡುವ ಮನವನ್ನು ಹರನಿಗರ್ಪಿಸದಿದ್ದರೆ ನರಕಯಾತನೆಯೆಂಬುದು ಮೋಗಣ ಅನುಭಾವಿಗಳ ಅಮೃತೋಕ್ತಿಯಿಂದ ಸ್ಪಷ್ಟವಾಗಿ ಕಂಡುಬರುವುದು.

" ಆಶೆಯೆಂಬುದು ತಾನೆ ಮಾಯಾ ।
ಪಾಶವದು ಮುಸುಕಿದರೆ ತಾನೇ ।
ಕ್ಲೇಶವಿಂತಿವು ಬಗೆಗೆ ಬಲಿಯಲುತಾನೆ ಭವಬಂಧ ।
ದೋಷದುರಿತದ ಪುಂಜವದು ಕೇ ।
ನಾಶ ಕೊಡ್ಡಿದ ಹರಕೆ ಗುರಿಯಾ ।
ಯಾಶೆವೊಂದಳಿದವನೆ ನಿತ್ಯನು ಬಸವಕೇಳೆಂದ ॥ "

" ಆಶೆಯೆಂಬ ಶೂಲದ ಮೇಲೆ ವೇಷವೆಂಬ ಹೆಣನ ಕುಳ್ಳಿರಿಸಿದಡೆ ।
ಮೇಲುಳ್ಳ ಹಿರಿಯರು ಹೀಗೆ ಸವೆದರು ನೋಡಾ ।
ಆಶೆಯ ಮುಂದಿಟ್ಟುಕೊಂಡು ಸುಳಿವ ಹಿರಿಯರ ಕಂಡು ।
ಗುಹೇಶ್ವರ ಲಿಂಗಕ್ಕೆ ಹೇಸಿಕೆಯಾಯಿತ್ತು । "

" ಆಶೆ ಎಂಬಸ್ತ್ರೀಗೆ ಮನಸೋತವರೆಲ್ಲಾ ಕೆಟ್ಟ ಕೇಡನೇನೆಂಬೆನಯ್ಯಾ ।
ಯತಿಗಳಾಗಲಿ ವೇದಾಧ್ಯಾಯಿಗಳಾಗಲಿ ವ್ರತಿಗಳಾಗಲಿ ।
ಸರ್ವವಿದ್ಯಾಕಲಾವಂತರಾಗಲಿ ನರರೊಳಗಾಗಲಿ ಸುರರೊಳಗಾಗಲಿ ।
ಇವರೆಲ್ಲರು ಧನವುಳ್ಳವರ ಬಾಗಿಲಕಾಯಿಸಿದಳು ನೋಡಾ ।
ಇವಳಿಗಾರೂ ಮರುಳಾಗರು ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರ ।
ಶರಣರಲ್ಲದವರ ಕಿವಿಯ ಹಿಡಿದು ಕುಣಿಸುವಳು ನೋಡಾ ॥ "

" ಆಶೆಯುಳ್ಳಾತ ಒಬ್ಬರಾಧೀನದಲ್ಲಿಪ್ಪನು ।
ಆಶೆಯ ಮನದ ಕೊನೆಯನರಿದಾತ,
ಕೈಲಾಸದಾಚೆಯಲ್ಲಿಪ್ಪಾತನೆಂದಾತ , ನಮ್ಮ ಅಂಬಿಗರ ಚೌಡಯ್ಯ ॥"

" ಆಶೆಯುಳ್ಳನ್ನಕ್ಕ ಒಬ್ಬರ ಆಶ್ರಯಿಸುವದು, ಆಶ್ರಯದಾಸೆ ಕಷ್ಟ ಕಾಣಿರಯ್ಯ ।
ಆಶೆಯೇ ದಾಸತ್ವ ನಿರಾಶೆಯೇ ಈಶತ್ವ; ದಾಸತ್ವಗ ಈಶತ್ವಗ ಅನುನಿವಾರಿಸಿ
ನಿರಾಶೆಯಾಗಿಪ್ಪುವೇ ಈಶಪದವಯ್ಯಾ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರ ॥ "

ಲೋಕದಲ್ಲಿ ಎದೆಗೆ ಕೈ ಹಚ್ಚಿಕೊಂಡು ಮೆರೆವ ನಾ-ನಾ ಎನ್ನುವ ಬಂಟರನ್ನೆಲ್ಲ ಸುಂಟರ ಗಾಳಿಗೆ ಹೊಟ್ಟು ತೂರಿದಂತೆ ತೂರಿ ಮಣ್ಣುಮುಕ್ಕಿಸುವ ಆಶೆಯನ್ನು ಓರ್ವ ಸಂಸ್ಕೃತ ಸುಭಾಷಿತಕಾರನು ಒಂದು ಸರಪಳಿಗೆ ಹೋಲಿಸಿರುವನು. ಯಾರು ಈ ಆಶೆಯೆಂಬ ಸರಪಳಿ ಯಿಂದ ಬಿಗಿಯಾಗಿ ಕಟ್ಟಲ್ಪಡುವರೋ ಅವರು ವಾಯುವೇಗದಿಂದ ಓಡುವರು. ಯಾರು ಸರಪಳಿಯಿಂದ ಕಟ್ಟಲ್ಪಟ್ಟಿಲ್ಲವೋ ಅವರು ಒತ್ತಟ್ಟಿಗೆ ಸುಮ್ಮನೇ ಕೂತುಕೊಳ್ಳುವರು.

ಪ್ರಾತಸ್ಸಮಯ ಬ್ರಾಹ್ಮೀ ಮುಹೂರ್ತದಲ್ಲಿ ಎದ್ದು ಆತ್ಮಾನುಸಂಧಾನ ಮಾಡಿದ ಶ್ರೀಸದ್ಗುರುವು ಬಿಲ್ವವೃಕ್ಷದಡಿ ದರ್ಭಾಸನದಮೇಲೆ ಮುಹೂರ್ತಮಾಡಿದ್ದಾನೆ; ಮನದಲ್ಲಿ ಮೂಡಿದ ಸಂಶಯ ಭಾವನೆ ವಿಪರೀತ ಭಾವನೆ ಮೊದಲಾದವುಗಳನ್ನು ನಿವಾರಣೆ

ಮಾಡಿಕೊಂಡು ನಿಚ್ಚಳ ಜ್ಞಾನ ಪಡೆವ ಲವಲವಿಕೆಯುಳ್ಳ ಶ್ರೋತೃಗಳು ಕೈಮುಗಿದು ಕುಳಿತಿದ್ದಾರೆ. ಶ್ರೀ ಗುರುವು ಶಿಷ್ಯರಿಗೊಂದು ಪ್ರಶ್ನೆಕೇಳಿದ. ಜಗತ್ತಿನಲ್ಲಿ ಅತ್ಯಂತ ದೊಡ್ಡದು.ಅಳತೆ ಮಾಡಲಿಕ್ಕೆ ಬಾರದಂತಹದು ಯಾವುದು? ಓರ್ವ ಶಿಷ್ಯನು ಎದ್ದು ನಿಂತು ಹಿಮಾಲಯ ಪರ್ವತವು ದೊಡ್ಡದು ಎಂದು ಹೇಳಿದನು. ಶಿಷ್ಯನ ಉತ್ತರದಿಂದ ಸಮಾಧಾನ ಹೊಂದದೇ ಶ್ರೀ ಗುರುವು ಬೇರೊಬ್ಬ ಶಿಷ್ಯನನ್ನು ಕುರಿತು ಉತ್ತರಿಸಲು ಕೇಳಿದಾಗ ಬೇರೊಬ್ಬ ಶಿಷ್ಯನು ಪರ್ವತಕ್ಕಿಂತಲೂ ಸಮುದ್ರವು ದೊಡ್ಡದು. ಅಳತೆಗೆ ನಿಲುಕದಂಥಹದು ಎಂದು ಹೇಳಿದನು. ಈ ಉತ್ತರವೂ ಗುರುವಿಗೆ ಸಮರ್ಪಕವೆನಿಸಲಿಲ್ಲ. ಉತ್ತರ ಸರಿಯಿಲ್ಲ ವೆಂದು ಗುರುಹೇಳಲು ಮತ್ತೊಬ್ಬ ಶಿಷ್ಯನು ಸಮುದ್ರಕ್ಕಿಂತಲೂ ಆಕಾಶ ವಿಶಾಲವಾದದ್ದು ಎಂದನು. ಅದೂ ಸದುತ್ತರವಲ್ಲ ಎನ್ನಲು ಆವ ಬ್ರಹ್ಮವಸ್ತುವಿನಿಂದ ಪಂಚಭೂತಗಳು ಹುಟ್ಟುತ್ತವೆಯೋ ಮತ್ತು ಎಲ್ಲಿ ಲಯವಾಗುತ್ತವೆಯೋ ಆ ವಸ್ತುವೇ ಮಹತ್ತಾದುದು ಎನ್ನಲು ಗುರುವು ಅದಕ್ಕೂ ತಲೆದೂಗದಿರಲು ಕೊನೆಗೊಬ್ಬ ಶಿಷ್ಯನು "ತತೋಪ್ಯಾಶಾ ಗರೀಯಸೀ" ಮೇಲೆ ಹೇಳಿದ ಪರ್ವತ ಸಾಗರ ಆಕಾಶ ಬ್ರಹ್ಮ ಈ ಎಲ್ಲ ವಸ್ತುಗಳಿ ಗಿಂತಲೂ ಆಶೆಯು ಬಹಳೇ ದೊಡ್ಡದು. ಅದಕ್ಕೆ ಸಾಕೆಂಬುದೇ ಗೊತ್ತಿಲ್ಲ. ಅದಕ್ಕೆ ಇತಿ ಮಿತಿಗಳೇ ಇರುವದಿಲ್ಲ.

ಬೆಂಕಿಯನ್ನು ಆರಿಸಬೇಕೆಂದು ತುಪ್ಪವನ್ನು ಸುರುವಿದರೆ ಅದು ಆರದೇ ಹೇಗೆ ಹೆಚ್ಚಿಚ್ಚು ಹಬ್ಬುತ್ತ ಹೋಗುವದೋ ಹಾಗೆ ಆಶೆಯು ಹೆಚ್ಚುತ್ತ ಹೋಗುವದು. ತನ್ನ ಹತ್ತಿರ ಒಂದು ಒಡಕು ಕಾಸೂ ಇಲ್ಲದ ಓರ್ವ ದರಿದ್ರನಿಗೆ ಒಂದು ನೂರು ರೂಪಾಯಿ ಆಕಸ್ಮಿಕವಾಗಿ ದೊರೆತರೆ ಅವನು ಅದರಿಂದ ತೃಪ್ತನಾಗದೇ ಸಾವಿರ ಬೇಕೆನ್ನುವನು. ಸಾವಿರ ಸಿಕ್ಕರೆ ಲಕ್ಷಕ್ಕೆ ಆಶೆ ಮಾಡುವನು. ಅದೂ ಸಿಕ್ಕರೆ ಒಂದು ಚಿಕ್ಕ ಸಾಮ್ರಾಜ್ಯಕ್ಕೆ ಆಶೆಮಾಡುವನು. ಆದು ಸಿಕ್ಕರೆ ಏಕಛತ್ರಾಧಿಪತಿ, ಅದೂ ಸಿಕ್ಕರೆ ಇಂದ್ರ ಪದವಿ, ಬ್ರಹ್ಮಪದವಿ, ವಿಷ್ಣುಪದವಿ ಅದೂ ಸಾಕಾಗದೇ ಶಿವನ ಪದವಿಯನ್ನೇ ಬೇಡುವನು.

ವಿಷಯೇಂದ್ರಿಯಸನ್ನಿಕರ್ಷದಿಂದ ಕಾಮವು ಹುಟ್ಟುವ ಬಗೆ ಮತ್ತು ಅರಿಷಡ್ವರ್ಗ ಗಳಲ್ಲಿ ಪ್ರಧಾನ ಹಾಗೂ ಪ್ರಥಮ ಅನಿಮಿತ್ತ ವೈರಿಯಾದ ಕಾಮನಿಂದ ಕ್ರೋಧಾದಿಗಳು ಹುಟ್ಟುವ ಬಗೆ ಮತ್ತು ಕಟ್ಟಕಡೆಗೆ ಅರಿಷಡ್ವರ್ಗವಶನಾಗಿ ಮುಮುಕ್ಷುವು ಅಧಃಪತನ ಹೊಂದುವ ಚಿಂತಾಜನಕ ಸ್ಥಿತಿಯು ಶ್ರೀ ಕೃಷ್ಣನಿಂದ ಅರ್ಜುನನಿಗೆ ಭಗವದ್ಗೀತೆಯಲ್ಲಿ ಕೆಳಗೆ ಕಾಣಿಸಿದ –

"ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ ।
ಸಂಗಾತ್ ಸಂಜಾಯತೇ ಕಾಮಃ ಕಾಮಾತ್ಕ್ರೋಧೋಽಭಿಜಾಯತೇ।
ಕ್ರೋಧಾದ್ಭವತಿ ಸಮ್ಮೋಹಃ ಸಮ್ಮೋಹಾತ್ ಸ್ಮೃತಿ ವಿಭ್ರಮಃ ।
ಸ್ಮೃತಿ ಭ್ರಂಶಾತ್ ಬುದ್ಧಿ ನಾಶಃ ಬುದ್ಧಿ ನಾಶಾತ್ಪ್ರಣಶ್ಯತಿ ॥"



ಎಂಬ ಶ್ಲೋಕಗಳಿಂದ ಉಪದೇಶಿಸಲ್ಪಟ್ಟಿದೆ.

ಶೂನ್ಯಸಿಂಹಾಸನಾರೋಹಣ ಮಾಡಿದ ಶೂನ್ಯಮೂರ್ತಿಯಾದ ವಿರಾಗವಿಭು ಪ್ರಭುದೇವರು ದುರಭಿಮಾನ, ದುರಹಂಕಾರ ದುರಾಶೆ ದುರ್ವ್ಯಸನಗಳಿಗೆ ಒಳಗಾಗಿ ನಡೆನುಡಿಗಳಲ್ಲಿ ಸಾಮರಸ್ಯವಿಲ್ಲದ, ನಡೆಯೊಂದುಪರಿ ನುಡಿಯೊಂದುಪರಿಯಾಗೆ ನಡೆಯುವ ಜಂಗಮರನ್ನು ಕುರಿತು—

" ಮುನಿಯದಿರಿ ಮುನಿಯದಿರಿ ನಿಮಗೊಂದು ಯುಕ್ತಿಯ ಪೇಳುವೆನು ।
ಅದೆಂತೆಂದೊಡೆ ನೀವೆನ್ನ ವಂಶೀಭೂತರಾದ ಕಾರಣ ನಿಮ್ಮ ಹೆಚ್ಚು ಕುಂದು
ಎನ್ನದಾಗಿ, ನಿಮ್ಮ ಆಸ್ತಿಪಾಸ್ತಿ ಎನ್ನದಾಗಿ, ನಿಮ್ಮ ಹಾನಿವೃದ್ಧಿ ಎನ್ನದಾಗಿ ॥
ಹಾವ ಹಿಡಿವರು ಬೇಲಿಯ ಹೊಗದೆ ಹೋಹರೇ ಅಯ್ಯಾ ।
ವ್ಯಾಧನು ಸೂಸಲ ಚೆಲ್ಲಿ, ಜಂತ್ರವಹಣ್ಣಿ ಅಡಿಗಲ್ಲನೊಡ್ಡಿ ಹೋದ ಬಳಿಕ ।
ಸೂಸಲ ಕಂಪಿಂಗೆ ಹೆಗ್ಗಣ ಬಂದು ಬಿದ್ದಂತೆ ಬಿದ್ದಿರಲ್ಲಾ ಮಾಯದ ಬಲೆಯಲ್ಲಿ ।
ಕೋಪವೆಂಬ ರಾಡನೊಡ್ಡಿ, ತಾಪವೆಂಬ ಅಡಿಗಲ್ಲನಿರಿಸಿ ಹುಸಿಎಂಬ
ಮೀಟುಗಣೆಯ ಜಂತ್ರಿಸಿ, ಹೊನ್ನು ಹೆಣ್ಣು ಮಣ್ಣೆಂಬ ಸೂಸಲ ಚೆಲ್ಲಿ
ಕೆಡಹಿದನಲ್ಲಾ ನಿಃಕರುಣೆ ಮುಕ್ಕಣ್ಣ ವ್ಯಾಧನು, ಹೊನ್ನು ಹೆಣ್ಣು ಮಣ್ಣಿ
ನಾಶೆಯುಂ ಬಿಟ್ಟು, ಕೋಪ ತಾಪವಂ ಬಿಟ್ಟು ಭ್ರಾಂತಿ ಭ್ರಮೆಯುಂ ಬಿಟ್ಟು
ಜಂಗಮವಾಗಬೇಕು ಕೇಳಿರೋ ಮರುಳಗಳಿರಾ ಇಂತೀ ಕಡುಲೋಭದ
ರುಚಿಯುಹಿಂಗಿ ಜಂಗಮವಾದಲ್ಲದೆ ಭವ ಹಿಂಗದು ಕುಹಾಗುಹೇಶ್ವರಾ "

ಎಂದು ನಿರ್ದಾಕ್ಷಿಣ್ಯವಾಗಿ ಛೀ ಹಾಕಿಯವರು.

" ಬೇಕು ಬೇಡೆಂಬುದೊಂದವಿ ।
ವೇಕವುಳ್ಳನ್ನಬರ ನಾನಾ ।
ಶೋಕಮೋಹಾದಿಗಳು ಮುಂಗುಡಿವರಿದು ಮುಸುಕುವವು ।
ಲೋಕರಂಜನೆಗೆಗಿದವರೀ ।
ಕಾಕುತನದಲಿ ಕೆಟ್ಟು ಹೋಹರು ।
ಬೇಕು ಬೇಡೆಂಬೆರಡನಳಿದರೆ ನಿತ್ಯರಹರೆಂದ ॥ "

ಬೇಕೆಂಬುದು ಎಷ್ಟು ಭವ ಬಂಧನಕ್ಕೆ ಕಾರಣವೋ ಅಷ್ಟೇ ಬೇಡೆಂಬುದೂ ಭವಬಂಧನಕ್ಕೆ ಬೀಜವಾಗಿರುವದು. ಬೇಡಿ ಬಂದದ್ದು ಅಂಗಾರ್ಪಿತ, ಬೇಡದೇ ಬಂದದ್ದು ಲಿಂಗಾರ್ಪಿತ. ಇದು ಶರಣ ಸಂಸ್ಕೃತಿಯ ಮೂಲ ಮಂತ್ರವಾಗಿರುತ್ತದೆ.

" ಬೇಕೆನ್ನಲಾಗದು ಶರಣಂಗೆ । ಬೇಡೆನ್ನಲಾಗದು ಶರಣಂಗೆ ।
ಬಂದ ಸುಖವನತಿಗಳೆಯಲಾಗದು ಶರಣಂಗೆ ।
ಇದು ಕಾರಣ ಕೂಡಲ ಚನ್ನಸಂಗಯ್ಯ ನಿಮ್ಮ ಶರಣರು ।
ಉಂಡುಉಪವಾಸಿಗಳು ಬಳಸಿಬ್ರಹ್ಮಚಾರಿಗಳು ॥ "

ಎಂದು ಷಟ್‌ಸ್ಥಲಚಕ್ರವರ್ತಿ ಚನ್ನಬಸವಣ್ಣನವರು ಹೇಳಿರುವರು.

೨೫ನೆಯ ಗತಿ

# ಪರಮೇಶ್ವರನು ಗಿರಿಜೆಗೆ ಬೋಧಿಸಿದುದು

ಈಗ ಪ್ರಚಲಿತವಿರುವ ಗೂಳೂರಸಿದ್ಧವೀರಣಾಚಾರ್ಯನ ಸಂಪಾದನೆಯು "ಗುರು ಕರುಣ" ಎಂಬ ಪ್ರಥಮೋಪದೇಶದಿಂದ ಪ್ರಾರಂಭವಾಗಿ "ಎಲ್ಲ ಗಣಂಗಳ ನಿರ್ವಯಲ ಸಮಾಧಿ" ಎಂಬ ಇಪ್ಪತ್ತೊಂದನೆಯ ಉಪದೇಶಕ್ಕೆ ಮುಕ್ತಾಯವಾಗುವದು. ಸಂಪಾದನೆಯ ಶಿರೋಲೇಖವಲ್ಲಿ "ಮುಕ್ತಾಯಕ್ಕಗಳ ಸಂಪಾದನೆ" "ಸಿದ್ಧರಾಮದೇವರ ಸಂಪಾದನೆ" ಎಂದು ಕಾಣಿಸಿ ಕೆಳಗೆ ಪ್ರಥಮೋಪದೇಶ, ದ್ವಿತೀಯೋಪದೇಶ ಎಂದು ಹೇಳುತ್ತ ಕೊನೆಯ ಏಕವಿಂಶತ್ಯುಪದೇಶಕ್ಕೆ ಗ್ರಂಥಮುಕ್ತಾಯವಾಗುವದು. ಚಾಮರಸನು ಷಟ್‌ಸ್ಥಲ ಸಿದ್ಧಾಂತದ ತತ್ತ್ವಸಂಚಯಕ್ಕೆ ರತ್ನಕೋಶಾಗಾರದಂತಿದ್ದು ಶೂನ್ಯಸಂಪಾದನೆಯನ್ನೇ ಆಧಾರವಾಗಿಟ್ಟುಕೊಂಡು ಪ್ರಭುಲಿಂಗಲೀಲೆಯನ್ನು ವಿರಚಿಸಿದಂತೆ ಅನುಮಾನವಾಗುತ್ತದೆ. ಶೂನ್ಯಸಂಪಾದನೆಯನ್ನು ವಿರಚಿಸುವಾಗ ಬಳಸಿದ ವಿಷಯಾನುಕ್ರಮಣಿಕೆ ಮತ್ತು ಪ್ರಭುಲಿಂಗಲೀಲೆಯನ್ನು ವಿರಚಿಸುವಾಗ ಬಳಸಿದ ವಿಷಯಾನುಕ್ರಮಣಿಕೆಗಳನ್ನು ನೋಡಿದಾಗ ಈ ಊಹೆಗೆ ಬಾಲನದೊರೆಯುತ್ತದೆ. ಶೂನ್ಯಸಂಪಾದನೆಯು ೨೧ನೆಯ ಉಪದೇಶಕ್ಕೆ ಮುಗಿದರೆ ಪ್ರಭುಲಿಂಗಲೀಲೆಯು "ಪರಮೇಶ್ವರನು ಗಿರಿಜೆಗೆ ಬೋಧಿಸಿದುದು" ಎಂಬ ೨೫ನೆಯಗತಿಗೆ ಸಮಾಪ್ತಿಯಾಗುವದು.

'ಶರಣರವಸಾನಪರಾಮರಿಕೆ' "ಎಲ್ಲ ಗಣಂಗಳ ನಿರ್ವಯಲಸಮಾಧಿ" ಮತ್ತು ಶಿವನು ಪಾರ್ವತಿಯನ್ನುಕುರಿತು-ಗಿರಿಜೆಯೇ ನಿನ್ನಸಾತ್ವಿಕಾಂಶದ ಮಹಾದೇವಿ, ನನ್ನ ಸಾತ್ವಿಕಾಂಶದ ಚನ್ನಬಸವೇಶ್ವರ, ಸಿದ್ಧರಾಮರ ಹಾಗೂ ಶೂನ್ಯಸಿಂಹಾಸನಾಧೀಶ್ವರನಾದ ಅಲ್ಲಮಪ್ರಭುದೇವರ ಉಪದೇಶಾನುಗ್ರಹದಿಂದ ನಾಮ ರೂಪ ಕ್ರಿಯಾ ಕಳಾಪಗಳನ್ನು ಕಳೆಚಿ ನಿತ್ಯರಾದರು. ಶಿವನ ಸಭೆಯಲ್ಲಿ ಪಾರ್ವತಿಯ ಸಾತ್ವಿಕಾಂಶ ಎನಿಸಿದ ಮಹಾದೇವಿಯಾಗಲಿ ಅಥವಾ ಪ್ರತಿಜ್ಞಾವಿಧಿಪೂರ್ವಕ ಪ್ರಮಾಣಮಾಡಿ ಹೇಳಿದ ಏಳುನೂರಾ ಎಪ್ಪತ್ತು ಅಮರಗಣಾಧೀಶ್ವರರಾಗಲಿ, ರುದ್ರಗಣರಾಗಲಿ, ಪ್ರಮಥಗಣರಾಗಲಿ ಕರ್ತಾರನ ಕಮ್ಮಟವೆನಿಸಿದ ಕರ್ಮಭೂಮಿ ಮರ್ತ್ಯಕ್ಕಿಳಿದು ತಮ್ಮ ತಮ್ಮ ಮಣಿಹಗಳನ್ನು ಪ್ರಮಾಣಮಾಡಿ ಹೇಳಿದಂತೆ ಚಾಚೂ ತಪ್ಪದೆ ಏಕನಿಷ್ಠೆಯಿಂದ ಮಾಡಿ ಶಿವಸಾಮರಸ್ಯ ಪಡೆದರು. ಮಾನವನು ಎಲ್ಲಿಂದ ಹೊರಟು ಬಂದಿರುವನೋ ಮರಳಿ ಅಲ್ಲಿಗೆಹೋಗಿ ಮುಟ್ಟಿದಾಗಲೇ ಮನಶ್ಶಾಂತಿದೊರಕುವದು.

ಭಾರತದ ಪ್ರಧಾನಿಯಾಗಲಿ, ರಾಷ್ಟ್ರಪತಿಯಾಗಲಿ, ಪರರಾಷ್ಟ್ರಕ್ಕೆ ವಿದೇಶೀಯರ ಭೇಟಿಗಾಗಿಯೋ ಅಥವಾ ಯಾವುದಾದರೊಂದು ಮಹತ್ವದ ಕೆಲಸಕ್ಕಾಗಿಯೋ ಹೋದರೆ ಅಲ್ಲಿ ಸ್ವಲ್ಪದಿನ ನಿಂತು ಮರಳಿ ಸ್ವದೇಶಕ್ಕೆ ಬಂದಾಗಲೇ ಅವರಿಗೆ ತುಷ್ಟಿಪುಷ್ಟಿಗಳು ದೊರೆಯುವವು. ಕೊಟ್ಟ ಮನೆಗೆ ಹೋಗಿದ್ದ ಹೆಣ್ಣುಮಗಳಿಗೆ ಹುಟ್ಟಿದ ಮನೆಗೆ ಬಂದಾಗ

ಆಗುವ ಆನಂದ ಅಷ್ಟಿಷ್ಟಲ್ಲ. ಸಮುದ್ರದ ನೀರೇ ಸೂರ್ಯನ ಪ್ರಖರವಾದಬಿಸಿಲಿಗೆ ಕಾದು ಉಗಿಯಾಗಿ ಮೇಘವಾಗಿ ಆಕಾಶದಲ್ಲಿ ತೇಲುತ್ತಹೋಗಿ ನೀರು ಸುರಿಸಿದಾಗ ಆ ನೀರೇ ಕೃಷ್ಣೆ, ಕಾವೇರಿ, ಗೋದಾವರಿ ಎಂಬ ಬೇರೆ ಬೇರೆ ನಾಮಗಳಿಂದ ಕಾಡಿನಲ್ಲಿಯೋ, ನಾಡಿನಲ್ಲಿಯೋ ಗಿರಿಕಂದರಗಳಲ್ಲಿಯೋ ಹರಿದು ಬೇರೆಬೇರೆ ನಾಮರೂಪಗಳಿಂದ ನದಿಗಳಾಗಿ ಮೆರೆದು ಕಟ್ಟಕಡೆಗೆ–

" ಯಥಾನದ್ಯಂಃಸ್ಯಂದಮಾನಾಃ ನಾಮರೂಪೇ ವಿಹಾಯಸಮುದ್ರೇ
ಅಸ್ತಂಗಚ್ಛಂತಿ "

ಎಂಬ ಉಕ್ತಿಯಂತೆ ಸಾಗರವನ್ನು ಸೇರಿದಾಗಲೇ ಆ ನದಿಗಳಿಗೆ ಅನುಪಮ ವಿಶ್ರಾಂತಿ ಯಲ್ಲವೇ ?

" ಅಮೃತಸ್ಯ ಪುತ್ರಾಃ " " ಮಮೈವಾಂಶೋ ಜೀವಲೋಕೇ
ಜೀವಭೂತಃ ಸನಾತನಃ "

"ನಾವೆಲ್ಲರೂ ಶಿವಾಂಶೀಭೂತರು, ಶಿವನಅಂಶೀಭೂತರು, ಆದರೂ ಅಜ್ಞಾನಂ ಬಂಧಃ" ಎಂಬಂತೆ ಷಡ್ರಿಪು, ಷಡ್ಭ್ರಮೆ, ಷಡ್ವಿಕಾರ, ಪಂಚಪಾಶಗಳಿಂದ ಬಂಧಿತರಾಗಿ ಸ್ವಸ್ವರೂಪ ವಿಸ್ಮೃತಿ ಹೊಂದಿ ವಂಚಿತರಾಗಿ "ಪಾಶಬದ್ಧೋಭವೇಜ್ಜೀವಃ" ಮರೆದೊಡೆ ಮಾನವರಾಗಿ ಬಳಲುತ್ತಿದ್ದೇವೆ. ಪಾಶ ಮುಕ್ತರಾದರೆ ನಮ್ಮ ಮೂಲ ಸ್ವರೂಪವನ್ನು ತಿಳಿದುಕೊಂಡರೆ ಅರಿದೊಡೆ ಶರಣ ಪಾಶಮುಕ್ತಃ ಸದಾಶಿವಃ ಎಂಬುಕ್ತಿಯಂತೆ ನಾವು ನಿಜಕ್ಕೂ ಶರಣರೇ ಸದಾಶಿವರೇ ಆಗುತ್ತೇವೆ.

'' ದೇವಿಕೇಳ್ ನಿನ್ನಂಶದಾಮುಹ ।
ದೇವಿನನ್ನಂಶದಗಣಂಗಳು ।
ದೇವಕನ್ಯೆಯರೆಲ್ಲರಲ್ಲಮನಿಂದ ಜಗವನರಿಯೆ ।
ತೀವಿತಮ್ಮಯನಾಮರೂಪು
ಕ್ರೀವಿಳಾಸವನಿಳುಹಿನಿತ್ಯನಿ ।
ರಾವಲಂಬದ ಸುಖಿಗಳಾದರು ಗಿರಿಜೆಕೇಳೆಂದ ॥ "

ನಟ್ಟನಡುವೆ ಉಪಾಧಿವಶದಿಂದ ಏನೇಆದರೂ ಕಟ್ಟಕಡೆಗೆ ಮೊಟ್ಟಮೊದಲು ಏನಿದ್ದನೋ ಅದು ಆಗುವತನಕ ಜೀವನಿಗೆ ಗತ್ಯಂತರವೇ ಇಲ್ಲವೆಂಬುದಕ್ಕೆ ಷಣ್ಮುಖಸ್ವಾಮಿಗಳು –"

'' ಆಕಾಶದಲ್ಲಿತೋರಿದ ಇಂದ್ರಧನುಅಡಗುವುದಕ್ಕೆ ।
ಆಕಾಶವೇ ಆಶ್ರಯವಲ್ಲದೆ ಬೇರೆ ಆಶ್ರಯವುಂಟೇ ಅಯ್ಯಾ ।
ಗಾಳಿಯಲ್ಲಿತೋರಿದ ಸುಳಿಗಾಳಿಅಡಗುವುದಕ್ಕೆ
ಆ ಗಾಳಿಯೇ ಆಶ್ರಯವಲ್ಲದೆ ಬೇರೆ ಆಶ್ರಯವುಂಟೇಅಯ್ಯಾ ।
ಅಗ್ನಿಯಿಂದ ತೋರಿದಕಿಡಿಗಳು ಅಡಗುವುದಕ್ಕೆ
ಅಗ್ನಿಯೇ ಆಶ್ರಯವಲ್ಲದೆ ಬೇರೆ ಆಶ್ರಯವುಂಟೇಅಯ್ಯಾ ।
ಸಮುದ್ರದಲ್ಲಿತೋರಿದ ನೊರೆತೊರೆ ತುಂತುರ್ವನಿ ಅಡಗುವುದಕ್ಕೆ ।
ಸಮುದ್ರವೇ ಆಶ್ರಯವಲ್ಲದೆ ಬೇರೆ ಆಶ್ರಯವುಂಟೇಅಯ್ಯಾ ॥ "

ಆದಿಅನಾದಿಯಿಂದತ್ತತ್ತಲಾದ ಮಹಾಘನವಸ್ತುವಿನಲ್ಲಿ ರೂಪಿಸಿ ತೋರಿದ ನಿಜೈಕ್ಯನಡಗುವುದಕ್ಕೆ ಆಪರವಸ್ತುವೇ ಆಶ್ರಯವಲ್ಲದೆ ಬೇರೆ ಆಶ್ರಯವುಂಟೇಅಯ್ಯಾ ಅಖಂಡೇಶ್ವರ॥ ಎಂಬ ವಚನದಲ್ಲಿ ವಿವಿಧ ದೃಷ್ಟಾಂತಗಳನ್ನು ಕೊಟ್ಟು ಉದಾಹರಿಸಿರುವರು.
ಶೂನ್ಯ ಸಂಪಾದನಾಕಾರರು –

" ಗಾಳಿಯೊಳು ಸುಳಿಗಾಳಿ ಬೆರೆದಂತೆ, ನಭದೊಳಿಸೆವತಟಿಲ್ಲತೆ
ನಭದೊಳು ಹೊಡೆದಗಿದಂತೆ, ಉದಕದಿಂದಾದವಾಶಿರಿಲೆ ಉದಕದೊಳ
ಡಗಿದಂತೆ, ಕುಸುಮ ಪರಿಮಳದಂತೆ, ಪಾಲೋಳ್ಪಾಲು ಬೆರಸಿದಂತೆ
ಚಂದ್ರನೊಳ್ಕಳೆಯುದಯಿಸಿ ಮರಳಿ ಚಂದ್ರನೊಳ್ಬೆರಸಿದಂತೆ ... "

ಎಂಬ ವಚನದಿಂದ ಮೇಗಣ ಅಭಿಪ್ರಾಯವನ್ನೇ ಪುಷ್ಟೀಕರಿಸುವರು.

ಮಾಯಾಕೋಲಾಹಲ ಮಾಯಾಮದಗಜಸಿಂಹ ಎಂಬ ಬಿರುದಾಂಕಿತರಾದ ಅಲ್ಲಮ ಪ್ರಭುದೇವರ " ಪರಮಾನಂದ ಲೀಲಾಮೃತ " ವೆಂಬುದು ಜ್ಞಾನಿಗಳೆಂಬ ರಾಜ ಹಂಸಗಳು ಈಜುವ ಮಾನಸ ಸರೋವರ. ಈ ಅಲೌಕಿಕ ಸರೋವರವನ್ನು ಕಟ್ಟಲು ಉಪಯೋಗಿಸಿದ ಪರುಷ ಶಿಲೆಗಳೆಂದರೆ ೧೧೭೧ ಭಾಮಿನೀಷಟ್ಪದಿಪದ್ಯಗಳು. ಈ ಅಲೌಕಿಕ ಸರೋವರವನ್ನು ಏರಲಿಕ್ಕೆ ಕಟ್ಟಿದ ಸೋಪಾನಗಳೆಂದರೆ ೨೫ ಗತಿಗಳು. " ಪರಮಾನಂದ ಲೀಲಾಮೃತ " ವೆಂಬ ಜ್ಞಾನ ಮಾನಸ ಸರೋವರದಲ್ಲಿಯ ಜ್ಞಾನಾಮೃತವನ್ನು ಗುರು ಗುಹೇಶ್ವರನು–

" ಹಿರಿಯರಿಗೆ ಕಿರಿಯರಿಗೆ ಸದಮಲ ।
ಚರಿತರಿಗೆ ಚದುರರಿಗೆ ಸಜ್ಜನ ।
ಶರಣರಿಗೆ ಮುಗ್ಧರಿಗೆ ಸಕಲ ಕಲಾವಿದಗ್ಧರಿಗೆ ।
ಗರುವರಿಗೆ ಹಿತವರಿಗೆ ಸಚರಾ ।
ಚರರಿಗನುದಿನ ಕರುಣದಿಂದಲಿ ।
ವರದನಾಗಲಿ ಗುರುಗುಹೇಶ್ವರ ಲಿಂಗಲೀಲೆಯಲಿ ॥ "

ಸಚರಾಚರರಿಗೆಲ್ಲ ಕರುಣಿಸಲಿ ಎಂದು ಹಾರೈಸಿ ಪ್ರಭುಲಿಂಗಲೀಲಾಪ್ರವಚನವನ್ನು ಮಂಗಲ ಮಾಡುವೆನು.



| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೨ | ೫ | ಸಾಗರಃ ಸಾಗರೋಪಮಂ | ಸಾಗರಃ ಸಾಗರೋಪಮಃ |
| ೫ | ೧೩ | ಕಶ್ವಿನ್ಮಾಮ್ವೇಶಿ ತತ್ವತಃ | ಕಶ್ಚಿನ್ಮಾಂ ವೇತ್ತಿ ತತ್ವತಃ |
| ೫ | ೨೧ | ಎಂಬರ್ಥದಲ್ಲಿಯ | ಎಂಬರ್ಥದಲ್ಲಿಯೂ |
| ೫ | ಕೊನೆ ಸಾಲು | ಮುಟ್ಟದ ನಿಷ್ಠೆಯ | ಮುಟ್ಟುವ ನಿಷ್ಠೆಯ |
| ೬ | ೨೧ | ಲಿಂಗಯಿವ | ಲಿಂಗಮಿವ |
| ೬ | ೨೮ | ರತ್ನ ಕೀಟಾಲಂಕೃತ | ರತ್ನ ಕಿರೀಟಾಲಂಕೃತ |
| ೧೪ | ೨ | ಆತ್ಮಾ ಮೀಮಾಂಸೆ | ಆತ್ಮ ಮೀಮಾಂಸೆ |
| ೧೪ | ೩ | ನಿಧಿಧ್ಯಾಸತವ್ಯಃ | ನಿಧಿಧಾಸಿತವ್ಯಃ |
| ೨೩ | ೪ | ಮುಕ್ತಿ, ಮುಮುಕ್ಷು, ಬ್ರಹ್ಮ | ಮುಕ್ತ, ಮುಮುಕ್ಷು, ಬದ್ಧ |
| ೨೫ | ೨೪ | ಲಿಘುರ್ಹರಿಂ | ಲಘುರ್ಹರಿಂ |
| ೨೮ | ೩೨ | ಚರಿತ್ರೆಯಲಿದು | ಚರಿತ್ರೆಯಲ್ತಿದು |
| ೨೯ | ೧೯ | ಜನರೇ | ಜತರೇ |
| ೩೨ | ೧೮ | ದ್ಗುರು | ಜಗದ್ಗುರು |
| ೩೨ | ೨೩ | ವ್ಯಪದೇಶಸ್ಯ | ವ್ಯಪದೇಶಸ್ಯ |
| ೩೩ | ೧೫ | ಕೃತ್ಯುಕ್ತಿ | ಶ್ರುತ್ಯುಕ್ತಿ |
| ೩೫ | ೧೨ | ಬೀಜಕೋಟಿ | ಜೀವಕೋಟಿ |
| ೩೬ | ೨೮ | ಮಾದ್ದಿ | ಮಾಡಿ |
| ೩೭ | ೧೭ | ವಿಶೀಪ್ಟಾ | ವಿಶಿಷ್ಟಾ |
| ೪೨ | ೧೧ | ಸ್ಥಿತೋऽಸ್ಮಾಗಂತ | ಸ್ಥಿತೋऽಸ್ಮಿ ಗತ |
| ೪೩ | ೪ | ಸತ್ತ್ರಿಯೆ | ಸತ್ಕ್ರಿಯೆ |
| ೪೩ | ೧೬ | ಹುತ್ತಿನ | ಹುಟ್ಟಿನ |
| ೪೩ | ೩೧ | ಋಗ್ವಾದಿ | ಋಗ್ವೇದಾದಿ |
| ೪೪ | ೭ | ಮಹಾಸಭೆ | ಮಹಾಸಭೆಯಲ್ಲಿ |
| ೪೯ | ೧೩ | ಯದತ್ತಂ | ಯದ್ದತ್ತಂ |
| ೫೩ | ೪ | ಮಹಾದ್ಭುತೀಃ | ಮಹಾದ್ಭುತಾಃ |
| ೫೫ | ೮ | ಶುಕ್ರಮುನಿ | ಶುಕಮುನಿ |
| ೫೭ | ೧೨ | ಮಮೇತಿ | ನಿರ್ಮಮೇತಿ |
| ೬೧ | ೪ | ವಿಧಾನವುಳ್ಳ | ಅಭಿಧಾನವುಳ್ಳ |
| ೬೩ | ೧೦ | ಪಿತೃನ್ಮಾತ್ರಾ | ಪಿತೃನ್ಮಾತ್ರಾ |
| ೬೬ | ೨೭ | ಪಃ ಸ್ವರಾಟ್ | ಸಃ ಸ್ವರಾಟ್ |
| ೬೮ | ೨೮ | ಮಾಯೆಯ | ಮಾಯೆಯು |
| ೬೯ | ೩ | ಬರಹದಲ್ಲಿ | ವಿರಹದಲ್ಲಿ |

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೭೪ | ೧೩ | ಕೋಳಿಯ | ಕೋಳಿಯು |
| ೭೮ | ೨೮ | ಮುತ್ತೈದೆಯು | ಮುತ್ತಜ್ಜಿಯು |
| ೯೪ | ೨೬ | ಬಟ್ಟಲ | ಬಚ್ಚಲ |
| ೧೦೨ | ೩೦ | ನಮೋಕಾ | ನಮೋಕೌ |
| ೧೦೭ | ೨೩ | ಕ್ಷಂತವೋ | ಕ್ಷಂತವ್ಯೋ |
| ೧೦೭ | ೨೪ | ಶಿವಪರಾಧ | ಶಿವಾಪರಾಧ |
| ೧೦೭ | ೨೬ | ಕಡೂಲ | ಕೂಡಲ |
| ೧೦೮ | ೧ | ನಖಂಡ | ನವಖಂಡ |
| ೧೦೯ | ೭ | ಬುಧವಡೆ | ಬಂಧವಡೆ |
| ೧೧೫ | ೨೬ | ಲಿಂಗತ್ರಯಗಳಲ್ಲಿರುವ | ಅಂಗತ್ರಯಗಳಲ್ಲಿರುವ |
| ೧೧೬ | ೨೫ | ಸಸಯುಕ್ತಿ | ಸಯುಕ್ತಿ |
| ೧೧೭ | ೧೬ | ಸ್ರಾಧ್ವಿ | ಸಾಧ್ವೀ |
| ೧೨೨ | ೩೧ | ಸ್ಮರತಿಃ | ಸ್ಮೃತಿಃ |
| ೧೨೩ | ೬ | ಲಿಂಗಧಾರಿಗಳಾದ | ಲಿಂಗಧಾರಿಯಾಗದ |
| ೧೨೫ | ೧೦ | ವೃಣೇಧ್ವಂ | ವೃಣೀಧ್ವಂ |
| ೧೨೫ | ೨೬ | ಗರ್ಭದಾನ | ಗರ್ಭಾದಾನ |
| ೧೩೩ | ೧೪ | ಸಾನುಭಾವಿ | ಸ್ವಾನುಭಾವಿ |
| ೧೩೫ | ೧೭ | ವರವಾಗ | ಎರವಾಗ |
| ೧೩೬ | ೧೭ | ದೋಷಗಳ | ದೋಷಗಳು |
| ೧೪೨ | ೧೪ | ಕರ್ತಾಸ್ಯ | ಕರ್ತಾಸಮ |
| ೧೪೨ | ೨೬ | ನಿರ್ಗುಣಸ್ವ | ನಿರ್ಗುಣಶ್ಚ |
| ೧೫೮ | ೪ | ನಡೆವ, ನುಡಿವ | ನಡೆವೆ, ನುಡಿವೆ |
| ೧೬೪ | ೨೩ | ಜನರೇ | ಜಠರೇ |
| ೧೬೭ | ೫ | ಬೀಳು | ಬಾಳು |
| ೧೭೨ | ೧೮ | ವಿದದ್ಧ | ವಿದಗ್ಧ |
| ೧[illegible]೬ | ೨ | ಶ್ರೋತ್ರೀಯಂ | ಶ್ರೋತ್ರಿಯ |
| ೧೯೩ | ೧೮ | ಚಿತ್ರ | ಚಿತ್ತ |
| ೨೦೪ | ೩೨ | ವಿದ್ಯಾಃ | ವಿದ್ಯಾನಾಂ |
| ೭೦೪ | ೩೨ | ವಿಷಯೈಷಿಣಃ | ವಿಷಯೈಷಿಣಾಂ |
| ೨೦೫ | ೧ | ತನುತ್ಯಜ | ತನುತ್ಯಜಃ |
| ೨೦೫ | ೧ | ಮುನಿವೃತ್ತಯಃ | ಮುನಿವೃತ್ತೀನಾಂ |
| ೨೦೬ | ೨೩ | ಬಾಹ್ಯನೋಪಕರಣಿ | ನೋಪಕರಣೇ |
| ೨೦೮ | ೨೭ | ಕ್ರೌರ್ಯ | ಶೌರ್ಯ |

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೨೧೩ | ೨೩ | ಅದ್ವೈತ ಪರಮಂ ಸುಖಂ | ಅದ್ವೈತಂ |
| ೨೩೧ | ೧೨ | ಬಹ್ಧಾಃ | ಬದ್ಧಾಃ |
| ೨೪೦ | ೪ | ಚ್ಚು | ಕೆಚ್ಚು |
| ೨೪೦ | ೯ | ಕರ್ತಾರ | ಕರ್ತಾ |
| ೨೫೪ | ೮ | ರಾಗಾದಿಗಳನ್ನೂ | ರಾಗಾದಿಗಳು |
| ೨೫೭ | ೧೭ | ವ್ಯತೃಣಲ್ | ವ್ಯತೃಣತ್ |
| ೨೫೭ | ೧೯ | ಮ್ಯೆಕ್ಷಲ್ | ಮ್ಯೆಕ್ಷತ್ |
| ೨೫೮ | ೨೨ | ದೇಹವೇ | ದೇಹೋ |
| ೨೬೧ | ೧ | ಬ್ರಹ್ಮರಂಧ್ರದಲ್ಲಿಪ್ಪ | ಬ್ರಹ್ಮರಂಧ್ರದಲ್ಲಿ ಅನಾದಿ ಚೈತನ್ಯವಪ್ಪ |
| ೨೬೯ | ೧೦ | ಲಿಂಗವು | ಅಂಗವು |
| ೨೭೦ | ೨ | ಗುರೋಃ ಪದಂ | ಗುರೋಃ ಪರಂ |
| ೨೭೩ | ೧೬ | ಸೂಪ | ಸೂದ |
| ೨೯೦ | ೨೯ | ಷಡಾನನಾ | ಷಡಾನನಾ |
| ೩೫೬ | ೨೩ | ರಾಹಿತ್ಯದ | ರಾಹಿತ್ಯಾತ್ |
| ೩೬೭ | ೧೯ | ಕ್ಷೇತ್ರಮಿತ್ಯಾ | ಕ್ಷೇತ್ರಮತ್ಯಭಿಧೀಯತೇ |
| ೩೭೬ | ೧೫ | ಹೇಸಿಗೆಯತನಿ | ಹೇಸಿಗೆಯ ತನು |
| ೩೯೦ | ೨೪ | ಪರಸ್ಪರ | ಪರಾತ್ಪರ |
| ೩೯೩ | ೧೦ | ಗುರುಬ್ರಹ್ಮಾಃ | ಗುರುರ್ಬ್ರಹ್ಮಾಃ |
| ೪೦೩ | ೨೪ | ವಿಷಯಾಕ್ತಂ | ಬಂಧಾಯ ವಿಷಯಾಸಕ್ತಂ |

## ಈ ಗ್ರಂಥ ಪ್ರಕಟನೆಗೆ ನೆರವು ನೀಡಿದ ದಾನಿಗಳು.

೧ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು, ಮೂರುಸಾವಿರ ಮಠ ಹುಬ್ಬಳ್ಳಿ

೨ ಶ್ರೀಮನ್ನಿರಂಜನ ಜಗದ್ಗುರು ಪಂಚಮ ಶಿವಲಿಂಗೇಶ್ವರ ಮಹಾಸ್ವಾಮಿಗಳು ಸಿದ್ಧಸಂಸ್ಥಾನಮಠ ನಿಡಸೋಸಿ

೩ ಶ್ರೀ, ಮ. ನಿ. ಪ್ರ. ಸಿದ್ಧರಾಮ ಮಹಾಸ್ವಾಮಿಗಳು ರುದ್ರಾಕ್ಷಿಮಠ ನಾಗನೂರ, ಬೆಳಗಾವಿ.

೪ ಶ್ರೀ. ಮ. ನಿ. ಪ್ರ. ಶಿವಲಿಂಗಮಹಾಸ್ವಾಮಿಗಳು ಹುಕ್ಕೇರಿಮಠ ಹಾವೇರಿ ಮತ್ತು ಶಿವಲಿಂಗೇಶ್ವರ ಮಠ ಮಾದನಹಿಪ್ಪರಗಿ

೫ ಶ್ರೀ. ಮ. ನಿ. ಪ್ರ. ವಿಜಯಮಹಾಂತ ಮಹಾಸ್ವಾಮಿಗಳು ಚಿತ್ತರಗಿ ಸಂಸ್ಥಾನಮಠ ಇಲಕಲ್ಲ

೬ ಶ್ರೀ. ಮ. ನಿ. ಪ್ರ. ಶಿವಯೋಗಿ ಮಹಾಸ್ವಾಮಿಗಳು ಮುರಘಾಮಠ ಧಾರವಾಡ

೭ ಶ್ರೀ, ಸಿದ್ಧರಾಮಪ್ಪ ಬಿಜ್ಜರಗಿ, ವಿಜಾಪುರ

೮ ,, ಶಂಕರಪ್ಪ ಬಿಜ್ಜರಗಿ. ವಿಜಾಪುರ

೯ ,, ಮಲ್ಲಿಕಾರ್ಜುನ ಬಿಜ್ಜರಗಿ ವಿಜಾಪುರ

೧೦ ,, ಶಿವಲಿಂಗಪ್ಪ ಮಂಗಳವೇಢೆ ವಿಜಾಪುರ

೧೧ ,, ಶಿವಪ್ಪ ಮಂಗಳವೇಢೆ ವಿಜಾಪುರ

೧೨ ,, ಎಲ್. ಆರ್, ಸಜ್ಜನ ವಿಜಾಪುರ

೧೩ ,, ಎಸ್. ಬಿ. ಪಟ್ಟಣಶೆಟ್ಟಿ ವಿಜಾಪುರ

೧೪ ,, ಪ್ರಭು. ಗುರುಬಸಪ್ಪ ಸಿಂದಗಿ ತೆಲಸಂಗ

೧೫ ,, ಮುರಿಗೆಪ್ಪ ಸಿದ್ಧರಾಮಪ್ಪ ಮಮದಾಪೂರ. ಅಥಣಿ

೧೬ ,, ಜಿ. ಸಿ. ಕಾವೇರಿ ಅಥಣಿ

೧೭ ,, ಎಸ್. ಎಂ. ಪಾರಶೆಟ್ಟಿ ಸಾರವಾಡ

೧೮ ,, ಬಿ. ಬಿ. ಪಾಟೀಲ ಕಟಗೇರಿ,

೧೯ ,, ಮುದಕಪ್ಪ ಅರವಟಗಿ. ಬನ್ನೂರ

# ಭುವನೇಶ್ವರಿ ಪ್ರಕಾಶನದ ಪ್ರಕಟಣೆಗಳು

## ಡಾ. ಎಂ. ಎಸ್. ಸಾಲಿ ಅವರ ಕೃತಿಗಳು.

೧. ಶುಭೋದಯ (ಕವನ ಸಂಕಲನ) ವರ್ಷ ೧೯೮೦
೨. ಮಹಾನುಭಾವಿ ಶ್ರೀ ಮರಿಮಹಾರಾಜರು (ಚರಿತ್ರೆ) „ ೧೯೮೧
೩. ಮುತ್ತಿನ ತೆನೆ (ಕಥಾ ಸಂಕಲನ) „ ೧೯೫೧
೪. ಮಹಾನುಭಾವಿ ಶ್ರೀ ಮರಿಮಹಾರಾಜರು „ ೧೯೮೨
(ಮರಾಠಿ ಆವೃತ್ತಿ)
೫. ಸಿರಿಗನ್ನಡ ಒಡಪುಗಳು (ಸಂಪಾದಿತ) ವರ್ಷ ೧೯೮೫
ದ್ವಿತೀಯ ಮುದ್ರಣ ೧೯೯೨
೬. ಜಾನಪದ ಒಗಟುಗಳು (ಸಂಪಾದಿತ) ವರ್ಷ ೧೯೮೬
ದ್ವಿತೀಯ ಮುದ್ರಣ ೧೯೯೨
೭. ಶರಣಸ್ಮೃತಿ (ಸಂಪಾದಿತ ಗೀಗೀ ಹಾಡುಗಳು) ವರ್ಷ ೧೯೮೮
೮. ನಾಟ್ಯಾನಂದ ನೀಳು ಮಾಸ್ತರರು (ಚರಿತ್ರೆ) „ ೧೯೮೮
೯. ಸಿಂಪಿಲಿಂಗಣ್ಣನವರ ಜೀವನ ಹಾಗೂ ಸಾಹಿತ್ಯ „ ೧೯೯೦
(ಪಿ.ಎಚ್.ಡಿ. ಮಹಾಪ್ರಬಂಧ)
೧೦. ನನ್ನ ಭೂಮಿ (ಸಂಪಾದಿತ ಸಾಮಾಜಿಕ ನಾಟಕ) „ ೧೯೯೧
೧೧. ಶಿವಶರಣ ಮೇದಾರ ಕೇತಯ್ಯ (ಕೋಲಾಷದ) „ ೧೯೯೩
೧೨. ಜಾನಪದ ಜೀವಾಳ ವರ್ಷ ೧೯೯೩
೧೩. ಶರಣ ಕಿರಣ „ ೧೯೯೪

## ಬೇರೆ ಲೇಖಕರ ಕೃತಿಗಳು

೧. ದೇಹವೆಂಬ ವಿಶ್ವ ಡಾ. ವಸಂತ ಕುಲಕರ್ಣಿ ವರ್ಷ ೧೯೯೨
೨. ವೈದ್ಯ ತಜ್ಞನ ಹೃದಯ ಬಿಚ್ಚಿದಾಗ „ ೧೯೯೩
ಡಾ. ಎಸ್. ಬಿ. ಪಾಟೀಲ (ಸತ್ತಿ)
೩. ಕಾವ್ಯ ಸೌರಭ ಡಾ. ಆರ್. ಸಿ. ಮುದ್ದೇಬಿಹಾಳ „ ೧೯೯೪
೪. ಮುದ್ರೆ (ಕವನ ಸಂಕಲನ) ವರ್ಷ ೧೯೯೫
ಪ್ರೊ. ಮಲ್ಲಿಕಾರ್ಜುನ ಮೇತ್ರಿ
೫. ಚಿರಂಜೀವಿ ಈ ನರತಂತು ಡಾ. ವಸಂತ ಕುಲಕರ್ಣಿ „ ೧೯೯೫
೬. ಗುಡ್ಡಾಪುರ ದಾನಮ್ಮದೇವೀ ಪುರಾಣ „ ೧೯೯೫
ಸಂ. ಶ್ರೀ ಬಸವಲಿಂಗ ಪಟ್ಟಾಧ್ಯಕ್ಷರು ಹಿರೇಮಠ ತೆಲಸಂಗ
೭. ಬೆಳ್ಳಿ ಚುಕ್ಕಿ (ಕವನ ಸಂಕಲನ) ಶ್ರೀ ಶಿವಣ್ಣ ಕನ್ನೂರ „ ೧೯೯೫

## ಡಾ. ಎಂ. ಎನ್. ವಾಲಿ ಅವರ ಇತರ ಕೃತಿಗಳು

೧. ಷಡಕ್ಷರದೇವ ಕವಿಯ ರಾಜಶೇಖರ ವಿಳಾಸ ವರ್ಷ ೧೯೭೪
(ಕವಿ ಕಾವ್ಯ ಪರಿಚಯ) ಕ. ವಿ. ವಿ. ಉಪನ್ಯಾಸ ಗ್ರಂಥ

೨. ಜನಪದ ಸಾಹಿತ್ಯದಲ್ಲಿ ನೀತಿ " " ೧೯೭೮

೩. ಡಂಗುರ ಪದಗಳು (ಸಂಪಾದಿತ) " " ೧೯೮೨
ವೀರಶೈವ ಅಧ್ಯಯನ ಸಂಸ್ಥೆ ಗದಗ ಅವರಿಂದ ಪ್ರಕಟಿತ

೪. ಜನಪದ ಜೀವನ ತರಂಗಗಳು (ತ್ರಿಪದಿಗಳ ಸಂಗ್ರಹ) " ೧೯೮೨
ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟನೆ

೫. ಶರಣ ಅಜಗಣ್ಣ (ಮಕ್ಕಳಿಗಾಗಿ ಚರಿತ್ರೆ) " ೧೯೮೪
ಹುಬ್ಬಳ್ಳಿಯ ಮೂರುಸಾವಿರಮಠ ಗ್ರಂಥಮಾಲೆ

೬. ಹಬ್ಬಗಳ ಜನಪದ ಹಾಡುಗಳು (ಜಾನಪದ) " ೧೯೮೬
ಕ. ವಿ. ವಿ. ಉಪನ್ಯಾಸ ಗ್ರಂಥ

೭. ಅಥಣಿ ತಾಲ್ಲೂಕು ದರ್ಶನ " ೧೯೮೭
ಐಬಿಎಚ್ ಪ್ರಕಾಶನ ಬೆಂಗಳೂರು

೮. ತೆಲಸಂಗದ ಶ್ರೀಗಂಧ (ಸಂಪಾದನೆ) " ೧೯೮೯
ಬಸವಪುರಾಣ ಸಮಿತಿ ತೆಲಸಂಗ

೯. ಡಾ. ಸಿಂಪಿ ಲಿಂಗಣ್ಣ-ಜೀವನ ಸಾಧನೆ " ೧೯೯೪
ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು

೧೦. ದುಂಡಮಲ್ಲಿಗಿ ಹೂವ ಬುಟ್ಟಿಲಿ ಬಂದಾವ " ೧೯೯೫
ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು

೧೧ ನಮ್ಮ ಒಕ್ಕಲಿಗರ ನಂಬಿಕೆಗಳು
ಕ. ವಿ. ವಿ. ಉಪನ್ಯಾಸಗ್ರಂಥ " ೧೯೯೫

## ಲೇಖಕರ ಕುರಿತು

ಬೆಳಗಾವಿ ಜಿಲ್ಲೆಯ ತೆಲಸಂಗ ಹಿರೇಮಠದ ಪರಮಪೂಜ್ಯ ಷ. ಬ್ರ. ಶ್ರೀ ಬಸವಲಿಂಗ ಪಟ್ಟಾಧ್ಯಕ್ಷ[illegible] ಉನ್ನತ ಶಿವಾನುಭವಿಗಳು, ಶಿಕ್ಷಣ ಪ್ರೇಮಿಗಳು ಹಾಗೂ ಬಸವಾದಿ [illegible]ಮಥರ ದಾರಿಯಲ್ಲಿ ನಡೆದವರು. ಸಂಸ್ಕೃತ-ಕನ್ನಡ ಉಭಯ ಭಾ[illegible]ಪಂಡಿತರಾದ [illegible]ಶ್ರೀಗಳು [illegible] ಖ್ಯಾತ ಪ್ರವಚನಕಾರರು. ಅವರದು ಸರಳ [illegible]ಜೀವನ, ಪ್ರಚಾರದಿಂ[illegible] ದೂರ, ಬಹುದೂರ.

ಶಿವಯೋಗ ಮಂದಿರದಲ್ಲಿ ಅಧ್ಯಯನ ಮಾಡಿದ [illegible]ಲಸಂಗ ಶ್ರೀಗಳು, ವೀರಶೈವ ಸಮಾಜಕ್ಕೆ ಕೊಟ್ಟ ಲಿಂ. ಹಾನಗಲ್ಲ ಕುಮಾರ ಮಹಾಸ್ವಾಮಿಗಳವರ ಅಮೌಲ್ಯ ಕಾಣಿಕೆ. ೮೮ ವರುಷಗಳ ಪಕ್ವ ಜೀವನದ ಪೂಜ್ಯರು ನಮ್ಮ ನಾಡಿನ ನಂದಾದೀಪ !

'ಪುರಾಣ ಪ್ರವಚನ ಶಿರೋಮಣಿ', 'ಅನುಭವ ವಿಶಾರದ', 'ಪ್ರವಚನ ಪ್ರವೀಣ' ಮೊದಲಾದ ಬಿರುದುಗಳನ್ನಿತ್ತು ಅರ್ಪಿಸಿದ ಸನ್ಮಾನ ಪತ್ರಗಳೇ ಇವರ ವಿದ್ವತ್ತಿಗೆ ಸಾಕ್ಷಿ.

ಪ್ರಭುಲಿಂಗಲೀಲೆಯನ್ನು ಕುರಿತು ಗದಗಿನ ಜಗದ್ಗುರು ತೋಂಟದಾರ್ಯ ಮಠದಲ್ಲಿ ಪೂಜ್ಯರು ಮಾಡಿದ ಪ್ರವಚನದ ಸಾರವೇ ಈ ಕೃತಿ. ಇದು ವೀರಶೈವರಿಗೆ ಆಕರ ಗ್ರಂಥದಂತಿದೆ. ಇಂಥದೊಂದು ಬೃಹತ್ ಗ್ರಂಥವನ್ನು ಕನ್ನಡಮ್ಮನ ಕಣಜಕ್ಕಿತ್ತ ಶ್ರೀಗಳು ನಿಜಕ್ಕೂ ಅಭಿನಂದನಾರ್ಹರು. .....

ಡಾ. ಎಂ. ಎನ್. ವಾಲಿ
ಪ್ರಕಾಶಕರು
ಭುವನೇಶ್ವರಿ ಪ್ರಕಾಶನ, ವಿಜಾಪುರ – ೩